-ನಂದ ಕರ್ಣಾಟಕ ಗ್ರಂಥರತ್ನಮಾಲೆ. ನಂ. ೧

ಶ್ರೀಃ

ವಾಲ್ಮೀಕಿಮಹರ್ಷಿಪ್ರಣೀತ

# ಶ್ರೀಮದ್ರಾಮಾಯಣವು

## (ಸುಂದರಕಾಂಡವು)

ಕರ್ಣಾಟಕ ವಚನವು

Vol. 6

ಶ್ರೀಮದ್ಯದುಶೈಲನಿವಾಸಂಸಿಕ
ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯ ವಿರಚಿತವು.

---

ಪ್ರಕಾಶಕರು:
. ವೆಂಕಟೇಶ್ವರ ಅಂಡ್ ಕಂಪೆನಿ,
ಭೀಮಸೇನಾಗಾರ್ಡನ್ಸ್, ಮೈಲಾಪುರ, ಮದರಾಸು-೪
೧೩೫, ಆನಂದ ಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿ
ಪ್ರಕಟಿಸಲ್ಪಟ್ಟಿದೆ.

---

1965.



Rs. 4-50.

[Price Rs. 4/-]

# DEDICATED
# TO
# SRI RAGHAVENDRA SWAMI
# OF
# MANTRALAYA

## ಸುಂದರಕಾಂಡದ ವಿಷಯಾನುಕ್ರಮಣಿಕೆ

ವಿಚಾರಿಸಿದುದು. ಸೀತೆಯು ತನ್ನ ಪೂರ್ವವೃತ್ತಾಂತವನ್ನು ಹನು
ಮಂತನಲ್ಲಿ ಹೇಳಿಕೊಂಡುದು. ೧೬೫

೩೪. ಹನುಮಂತನು ಸೀತೆಗೆ ರಾಮಲಕ್ಷ್ಮಣರ ಕ್ಷೇಮವನ್ನು ಹೇಳಿ,
ಅವಳನ್ನು ಸಂತೋಷಪಡಿಸಲು, ಆಕೆಗೂ ಇವನಲ್ಲಿ ನಂಬಿಕೆ
ಹುಟ್ಟಿ, ಸಮೀಪಕ್ಕೆ ಕರೆಸಿಕೊಂಡುದು. ತಿರುಗಿ ಅವನನ್ನು
ರಾವಣನೆಂದು ಭ್ರಮಿಸಿ, ಆ ಶಂಕೆಯನ್ನು ಪರಿಹರಿಸಿ
ಕೊಳ್ಳುವುದಕ್ಕಾಗಿ, ರಾಮನಲ್ಲಿರುವ ಅಸಾಧಾರಣಗುಣ
ಗಳನ್ನು ಹೇಳೆಂದು ಕೇಳಲು, ಹನುಮಂತನು ರಾಮಗುಣಗ
ಳನ್ನು ವರ್ಣಿಸಿದುದು. ೧೬೯

೩೫. ಸೀತೆಯು ತನಗೆ ನಂಬಿಕೆ ಹುಟ್ಟುವುದಕ್ಕಾಗಿ ಹನುಮಂತನನ್ನು
ಕುರಿತು ರಾಮನ ಗುಣಲಕ್ಷಣಾದಿಗಳನ್ನು ಕೇಳಿದುದು. ಹನು
ಮಂತನು ಅವೆಲ್ಲವನ್ನೂ ತಿಳಿಸಿ ಸೀತೆಯನ್ನು ಸಮಾಧಾನ
ಪಡಿಸಿದುದು. ೧೭೩

೩೬. ಹನುಮಂತನು ಸೀತೆಗೆ ರಾಮನ ಉಂಗುರವನ್ನು ಕೊಟ್ಟುದು,
ಸೀತೆಯು ತನ್ನನ್ನು ರಾಮನು ಇದುವರೆಗೂ ಬಿಡಿಸಿಕೊಂಡು
ಹೋಗದುದಕ್ಕೆ ಕಾರಣವೇನೆಂದು ಕೇಳಲು, ಹನುಮಂತನು
ಅದಕ್ಕೆ ತಕ್ಕ ಕಾರಣವನ್ನು ಹೇಳಿದುದು. ೧೮೯

೩೭. ಸೀತೆಯು ತನಗೆ ರಾವಣನು ಹೇಳಿರುವ ಎರಡು ತಿಂಗಳ ಗಡುವನ್ನು
ಹನುಮಂತನಿಗೆ ತಿಳಿಸಿದುದು. ಹನುಮಂತನು ತನ್ನ ಭುಜದ
ಮೇಲೇರಿ ರಾಮನ ಬಳಿಗೆ ಬರುವಂತೆ ಸೀತೆಯನ್ನು ಕೇಳಲು,
ಸೀತೆಯು ರಾಮನೇ ಇಲ್ಲಿಗೆ ಬಂದು ರಾವಣನನ್ನು ಕೊಂದು,
ತನ್ನನ್ನು ಕರೆದುಕೊಂಡು ಹೋಗುವುದುಚಿತವೆಂದು ಹೇಳಿದುದು. ೧೯೩

೩೮. ರಾಮನ ನಂಬಿಕೆಗಾಗಿ ಒಂದು ಗುರುತನ್ನು ಕೊಡಬೇಕೆಂದು ಹನು
ಮಂತನು ಸೀತೆಯನ್ನು ಕೇಳಿದುದು. ಸೀತೆಯು ಕಾಕಾಸುರ
ವೃತ್ತಾಂತವನ್ನು ಹೇಳಿ, ಚೂಡಾಮಣಿಯನ್ನು ಕೊಟ್ಟುದು. ೨೦೫

೩೯. ರಾಮಲಕ್ಷ್ಮಣರಾಗಲಿ, ಇತರ ವಾನರರಾಗಲಿ ಈ ಮಹಾಸಮುದ್ರ
ವನ್ನು ಹೇಗೆ ದಾಟಿ ಬರಬಲ್ಲರೆಂದು ಸೀತೆಯು ಆಂಜನೇಯನನ್ನು

## ಸುಂದರಕಾಂಡದ ಪಟಗಳ ಪಟ್ಟಿ.

—·:·—

ಶ್ರೀರಸ್ತು.

ಶ್ರೀ ಸೀತಾಲಕ್ಷ್ಮಣಸಮೇತ ಶ್ರೀರಾಮಚಂದ್ರಪರಬ್ರಹ್ಮಣೇ ನಮಃ

## ಅವತಾರಿಕೆ

ರಾಮಾಯಣದ ಇತರಕಾಂಡಗಳೆಲ್ಲವೂ ಆಯಾಕಥಾಸಂದರ್ಭಗಳನ್ನನುಸರಿಸಿ ಅನ್ವರ್ಥನಾಮದಿಂದಿರುವಾಗ, ಈ ಸುಂದರಕಾಂಡಕ್ಕೆಮಾತ್ರ ಈ ಹೆಸರು ಬರುವುದಕ್ಕೆ ಕಾರಣವೇನೆಂಬ ಶಂಕೆಯುಂಟಾಗಬಹುದು. ಕೆಲವರು ಸುಂದರಶಬ್ದವು ಕಪಿವಾಚಕವೆಂದೂ, ಇಲ್ಲಿ ಆಂಜನೇಯನ ಚರಿತ್ರೆಯೇ ಪ್ರಧಾನವಾದುದರಿಂದ ಇದಕ್ಕೆ ಸುಂದರಕಾಂಡವೆಂಬ ಹೆಸರು ಬಂದುದಾಗಿಯೂ ಹೇಳುವರು. ಮತ್ತೆ ಕೆಲವರು ಈ ಕಾಂಡದಲ್ಲಿ ಅಲ್ಲಲ್ಲಿ ಆಂಜನೇಯನು, 'ರಾಮಃ ಕಮಲಪತ್ರಾಕ್ಷಃ, ತ್ರಿಸ್ಥಿರಸ್ತ್ರಿಪ್ರಲಂಬಶ್ಚ' ಇತ್ಯಾದಿ ವಾಕ್ಯಗಳಿಂದ ಶ್ರೀರಾಮಸೌಂದರ್ಯವನ್ನೂ, "ದುಷ್ಕರಂ ಕುರುತೇ ರಾಮೋ ಹೀನೋ ಯದನಯಾಪ್ರಭುಃ" ಇತ್ಯಾದಿ ವಾಕ್ಯಗಳಿಂದ ಸೀತಾಸೌಂದರ್ಯವನ್ನೂ ವಿಶೇಷವಾಗಿ ವರ್ಣಿಸಿರುವುದರಿಂದ, ಸೌಂದರ್ಯವರ್ಣನಪ್ರಧಾನವಾದ ಈ ಕಾಂಡಕ್ಕೆ ಸುಂದರಕಾಂಡವೆಂಬ ಹೆಸರೆಂದು ಹೇಳುವರು. ಇದುವರೆಗೆ ವಿಯೋಗದುಃಖದಲ್ಲಿದ್ದ ಸೀತಾರಾಮರಿಬ್ಬರೂ ಅನ್ಯೋನ್ಯಕ್ಷೇಮಲಾಭಗಳನ್ನು ತಿಳಿದು ಸಂತುಷ್ಟರಾದುದರಿಂದ ಇದಕ್ಕೆ ಈ ಹೆಸರು ಬಂದುದಾಗಿ ಬೇರೆ ಕೆಲವರ ಅಭಿಪ್ರಾಯವು. ಹೇಗಿದ್ದರೂ ಶಬ್ದಾರ್ಥರಚನೆಗಳಲ್ಲಿಯೂ, ವರ್ಣನಾಭಾಗಗಳಲ್ಲಿಯೂ, ಕಥಾಭಾಗದಲ್ಲಿಯೂ ಲೋಕರಂಜಕವಾಗಿ, ನಿತ್ಯಪಾರಾಯಣಕ್ಕೆ ಯೋಗ್ಯವಾಗಿ, ಸರ್ವಾರ್ಥಸಿದ್ಧಿಪ್ರದವಾಗಿರುವುದರಿಂದ, ಇದಕ್ಕೆ ಸುಂದರಕಾಂಡವೆಂಬ ಹೆಸರು ಸರ್ವತೋಮುಖವಾಗಿ ಅನ್ವರ್ಥವಾಗಿರುವುದರಲ್ಲಿ ಸಂದೇಹವಿಲ್ಲ. ಈ ಕಾಂಡದೊಳಗಣ ಸಾರಾಂಶವೇನೆಂದರೆ :—

ಇದುವರೆಗೆ ಶ್ರೀರಾಮನಲ್ಲಿ ಪರತ್ವಾಸಾಧಾರಣವಾದ ಸಮಸ್ತಕಲ್ಯಾಣಗುಣಾಕರತ್ವವು ನಿರೂಪಿಸಲ್ಪಟ್ಟಿತು. ಈ ಸುಂದರಕಾಂಡದಲ್ಲಿ "ಬ್ರಹ್ಮಾಸ್ವಯಂ ಭೂಶ್ಚತುರಾನನೋವಾ......ತ್ರಾತುಂ ನಶಕ್ತಾಯುಧಿರಾಮವಧ್ಯಮ್" ಇತ್ಯಾದಿ ಶ್ಲೋಕಾರ್ಥಗಳಿಂದ ಸರ್ವಸಂಹಾರಶಕ್ತತ್ವವು ಪ್ರತಿಪಾದಿಸಲ್ಪಡುವುದು. ಹಾಗೆಯೇ

ಹಿಂದೆ ಮಿತ್ರರಕ್ಷಣವು ಅವಶ್ಯಕರ್ತವ್ಯವೆಂಬ ನೀತಿಯು ಬೋಧಿಸಲ್ಪಟ್ಟಿರುವುದು. ಈ ಕಾಂಡದಲ್ಲಿ ದೂತಲಕ್ಷಣವೂ, ಪತಿವ್ರತೆಯರ ನಡತೆಯೂ ಬೋಧಿಸಲ್ಪಡುವುವು. ಸುಗ್ರೀವನು ಸೀತಾನ್ವೇಷಣಕ್ಕಾಗಿ ಕೋಟ್ಯನುಕೋಟಿ ವಾನರರನ್ನು ನಾನಾದಿಕ್ಕುಗಳಿಗೆ ಕಳುಹಿಸುವಾಗ, "ತದ್ಯಥಾಲಭ್ಯತೇ ಸೀತಾ ತತ್ತ್ವಮೇವೋಪಪಾದಯ" ಎಂದು ಸೀತೆಯನ್ನು ಕಂಡುಹಿಡಿಯಬೇಕಾದ ಕಾರ್ಯಭಾರವೆಲ್ಲವನ್ನೂ ಹನುಮಂತನ ಮೇಲೆಯೇ ಹೊರಿಸಿ, "ತ್ವಯ್ಯೇವ ಹನುಮನ್ನಸ್ತಿ ಬಲಂ ಬುದ್ಧಿಃ ಪರಾಕ್ರಮಃ। ದೇಶಕಾಲಾನುವೃತ್ತಿಶ್ಚ ನಯಶ್ಚನಯಪಂಡಿತ" ಎಂದು ಅವನಲ್ಲಿ ಕಾರ್ಯಸಾಧನೆಗೆ ಬೇಕಾದ ಬುದ್ಧಿ ಸಾಹಸಾದಿಸಮಸ್ತಗುಣಗಳನ್ನೂ ಎತ್ತಿ ತೋರಿಸಿರುವನಲ್ಲದೆ, ಶ್ರೀರಾಮನೂ ಆತನ ಕೈಯಲ್ಲಿಯೇ ತನ್ನ ಉಂಗುರವನ್ನು ಕೊಟ್ಟು ಕಳುಹಿಸಿದನಷ್ಟೆ? ಇದನ್ನನುಸರಿಸಿ ಹನುಮಂತನೂ ಸುರಸೆಯನ್ನು ನಿಗ್ರಹಿಸಿದುದು, ಸಿಂಹಿಕೆಯನ್ನು ಸೀಳಿದುದು, ಲಂಕಿಣಿಯನ್ನಡಗಿಸಿದುದು, ಇವೇ ಮೊದಲಾದ ಸಾಹಸಗಳಿಂದ ತನ್ನ ಅಸಾಧಾರಣಬಲವನ್ನೂ, ಲಂಕೆಯಲ್ಲಿ ತಾನು ಏಕಾಕಿಯಾಗಿ ನಿಂತು ಅನೇಕ ಘೋರರಾಕ್ಷಸರನ್ನು ಕೊಂದುದರಿಂದ ತನ್ನ ವೀರ್ಯವನ್ನೂ ತೋರ್ಪಡಿಸಿದನು. ಮತ್ತು ಇಂದ್ರಜಿತ್ತಿನ ಬ್ರಹ್ಮಾಸ್ತ್ರವು ತನ್ನನ್ನು ಬಿಟ್ಟುಹೋದರೂ ಹಗ್ಗಗಳಲ್ಲಿ ಕಟ್ಟುಬಿದ್ದವನಂತೆ ನಟಿಸುತ್ತ, ಆ ರಾಕ್ಷಸರ ಸಹಾಯದಿಂದಲೇ ರಾವಣನ ಸಭಾಸ್ಥಾನಕ್ಕೆ ಪ್ರವೇಶಿಸಿ ಅವನೊಡನೆ ಸಂಭಾಷಿಸಿ ಬಂದುದೂ, ರಾಕ್ಷಸರು ತನ್ನ ಬಾಲಕ್ಕೆ ಬೆಂಕಿಯಿಟ್ಟು ಹತ್ತಿಸಿರುವಾಗಲೂ, ಲಂಕೆಯ ದುರ್ಗರಹಸ್ಯಾದಿಗಳನ್ನು ನೋಡಿ ಬರಬೇಕೆಂಬ ಕೋರಿಕೆಯಿಂದ, ಮಾನಾವಮಾನಗಳನ್ನೂ ಲಕ್ಷೀಕರಿಸದೆ ಬಾಲದ ಬೆಂಕಿಯೊಡನೆ ಲಂಕೆಯ ಬೀದಿಬೀದಿಗಳಲ್ಲಿ ಮೆರವಣಿಗೆ ಬಂದುದೂ, ತನ್ನ ಬಾಲವನ್ನು ಸುಡುವುದಕ್ಕಾಗಿ ಹತ್ತಿಸಿದ ಬೆಂಕಿಯಿಂದಲೇ ಲಂಕೆಯನ್ನು ಸುಟ್ಟುದೂ, ಇವೆಲ್ಲವೂ ಅವನ ಕಾಲೋಚಿತಪ್ರತಿಭೆಯನ್ನೂ, ಅವನ ದೇಶಕಾಲಾನುವರ್ತನವನ್ನೂ ವ್ಯಕ್ತಪಡಿಸುವುವು. ಮತ್ತು ಇವನು, "ಭೂತಾಶ್ಚಾರ್ಥಾ ವಿಪದ್ಯಂತೇ ದೇಶಕಾಲವಿರೋಧಿತಾಃ। ವಿಕ್ಲಬಂ ದೂತಮಾಸಾದ್ಯ" ಎಂದು ಹೀನದೂತರಲ್ಲಿರತಕ್ಕ ದೋಷಗಳಿಗೂ, "ಕಾರ್ಯೇ ಕರ್ಮಣಿ ನಿರ್ದಿಷ್ಟೇ ಯೋ ಬಹೂನ್ಯಪಿ ಸಾಧಯೇತ್। ಪೂರ್ವಕಾಲಾವಿರೋಧೇನ ಸ ಕಾರ್ಯಂ ಕರ್ತುಮರ್ಹತಿ॥" ಎಂದು ಉತ್ತಮದೂತರ ಗುಣಗಳಿಗೂ ತಾರತಮ್ಯವನ್ನು ವಿಮರ್ಶಿಸಿರುವುದರಿಂದ, ಆತನ ಮಂತ್ರಪ್ರೌಢಿಮೆಯು ವ್ಯಕ್ತವಾಗುವುದು. ಸೀತೆಯನ್ನು ಮಾತಾಡಿಸಿ ಬಂದಮೇಲೆ ರಾವಣನನ್ನು ನೋಡಿಬರಬೇಕೆಂಬ ಕಾರ್ಯಶೇಷವನ್ನು ಕುರಿತು ವಿಚಾರಿಸುವಾಗ 'ತ್ರೀನುಪಾಯಾನತಿಕ್ರಮ್ಯ ಚತುರ್ಥ ಇಹ ಲಕ್ಷ್ಯತೇ। ನ ಸಾಮ ರಕ್ಷಸ್ಸು ಗುಣಾಯ

ಕಲ್ಪತೇ'' ಇತ್ಯಾದಿ ವಾಕ್ಯಗಳಿಂದ ಶತ್ರುಸಾಧನೋಪಾಯವನ್ನು ಚಿಂತಿಸಿರುವುದರಿಂದ ಅವನ ರಾಜನೀತಿನೈಪುಣ್ಯವು ಸ್ಫುಟವಾಗುವುದು. ಅನೇಕ ಘೋರರಾಕ್ಷಸರ ನಡುವೆ ಸಿಕ್ಕಿಬಿದ್ದಿರುವಾಗಲೂ ಸ್ವಲ್ಪವಾದರೂ ಎದೆಗುಂದದೆ ಅವರಮುಂದೆ ನಿಂತು, 'ಜಯತ್ಯತಿಬಲೋ ರಾಮೋ''. ಎಂದಾರಂಭಿಸಿ, ''ದಾಸೋಹಂ ಕೋಸಲೇಂದ್ರಸ್ಯ ರಾಮಸ್ಯಾಕ್ಲಿಷ್ಟಕರ್ಮಣಃ । ಹನುಮಾನ್ ಶತ್ರುಸೈನ್ಯಾನಾಂ ನಿಹಂತಾ ಮಾರುತಾತ್ಮಜಃ' ಎಂದು ಶತ್ರುತಿರಸ್ಕಾರಪೂರ್ವಕವಾಗಿ, ತನ್ನ ನಾಮವಿಕ್ರಮಾದಿಗಳನ್ನು ಘೋಷಿಸಿ ಧೈರ್ಯಗುಣವನ್ನು ಕಾಣಿಸಿರುವನು. ಇವುಗಳಿಂದ ದೂತರಿಗಿರಬೇಕಾದ ಬುದ್ಧಿಸಾಹಸಾದಿಗುಣಗಳು ಬೋಧಿತವಾಗುವುವು.

ಇದರಂತೆಯೇ ಇಲ್ಲಿ ಸೀತೆಯ ಶೀಲಸ್ವಭಾವಾದಿಗಳೂ ಸ್ತ್ರೀಯರಿಗೆ ಪಾತಿವ್ರತ್ಯಾದಿಗಳನ್ನು ಬೋಧಿಸುವುವು. ರಾಕ್ಷಸಚಕ್ರವರ್ತಿಯಾದ ರಾವಣನೇ ತನ್ನಿದಿರಾಗಿಬಂದು ತಲೆಬಗ್ಗಿ ನಮಸ್ಕರಿಸಿ, ತನ್ನ ಸರ್ವೈಶ್ವರ್ಯವನ್ನೂ ಕೊಡುವುದಾಗಿ ಆಸೆತೋರಿಸಿದರೂ, ಸೀತೆಯು ಆತನನ್ನು ಕಣ್ಣೆತ್ತಿಯೂ ನೋಡದೆ ''ತೃಣಮಂತರತಃ ಕೃತ್ವಾ'' ಎಂಬಂತೆ ನಡುವೆ ಹುಲ್ಲನ್ನು ಹಾಕಿ, ಆ ರಾವಣನನ್ನು ತೃಣಕ್ಕಿಂತಲೂ ಕಡೆಯಾಗಿ ಭಾವಿಸಿ ತಿರಸ್ಕರಿಸಿದುದರಿಂದ ಪಾತಿವ್ರತ್ಯವನ್ನು ತೋರಿಸಿರುವಳು. ತನ್ನಲ್ಲಿ ಮಹಾಪರಾಧಿಯಾದ ಆ ರಾವಣನಲ್ಲಿಯೂ ಮರುಕಗೊಂಡು ಅವನನ್ನುದ್ಧರಿಸುವುದಕ್ಕಾಗಿ ''ತೇನ ಮೈತ್ರೀ ಭವತು ತೇ ಯದಿ ಜೀವಿತುಮಿಚ್ಛಸಿ'' ಇತ್ಯಾದಿವಾಕ್ಯಗಳಿಂದ ಹಿತೋಪದೇಶವನ್ನು ಮಾಡಿ ದಯಾಸ್ವಭಾವವನ್ನು ತೋರಿಸಿರುವಳು! ಆ ರಾಕ್ಷಸನು ಕ್ರೂರವಾಕ್ಯಗಳಿಂದ ಹೆದರಿಸುವಾಗಲೂ, ಅವನನ್ನು ''ರಾಕ್ಷಸಾಧಮ'' ಎಂದು ಹೀನವಾಕ್ಯಗಳಿಂದ ತಿರಸ್ಕರಿಸಿ ಧೈರ್ಯಗುಣವನ್ನು ತೋರಿಸಿರುವಳು. ತನ್ನ ಕಷ್ಟದಶೆಯನ್ನು ನೋಡಿ ಆಂಜನೇಯನೇ ತನ್ನನ್ನು ರಾಮಲಕ್ಷ್ಮಣರ ಬಳಿಗೆ ಸೇರಿಸುವುದಾಗಿ ಪ್ರಾರ್ಥಿಸಿದಾಗಲೂ, ತಾನು ಪರಪುರುಷಸಂಸ್ಪರ್ಶಕ್ಕೆ ಇಷ್ಟಪಡದುದರಿಂದ, ವೀರಪತ್ನಿಯರ ಧರ್ಮವನ್ನೂ, ಪರಪುರುಷವಿರಕ್ತಿಯನ್ನೂ ತೋರಿಸಿರುವಳು. ಮತ್ತು ರಾವಣನು ತನ್ನನ್ನು ಪ್ರಾರ್ಥಿಸುವಾಗ ''ಮಾಂ ಹಿ ಧರ್ಮಾತ್ಮನಃ ಪತ್ನೀಂ'' ಇತ್ಯಾದಿ ವಾಕ್ಯಗಳಿಂದ, ತನಗೆ ಪತಿಯಲ್ಲಿರುವ ಎಣೆಯಿಲ್ಲದ ಭಕ್ತಿಗೌರವಗಳನ್ನೂ ಸೂಚಿಸಿರುವಳು. ಇವೆಲ್ಲವೂ ಲೋಕದಲ್ಲಿ ಸ್ತ್ರೀಯರಿಗಿರಬೇಕಾದ ಪಾತಿವ್ರತ್ಯಕ್ಕೆ ಪ್ರಧಾನನಿದರ್ಶನಗಳು.

ಇದಲ್ಲದೆ ಇದಕ್ಕೆ ಮೊದಲು ಕಿಷ್ಕಿಂಧಾಕಾಂಡದಲ್ಲಿ, ಸರ್ವರಕ್ಷಣಪ್ರವೃತ್ತನಾದ ವಿಷ್ಣುವಿಗೆ ಆಚಾರ್ಯರೂಪವಾದ ಪುರುಷಕಾರಲಾಭವು ಹೇಳಲ್ಪಟ್ಟಿತು.

ಈ ಕಾಂಡದಲ್ಲಿ ಆಚಾರ್ಯಕೃತ್ಯವು ಹೇಳಲ್ಪಡುವುದು. ಅದಕ್ಕಾಗಿಯೇ

" ತತೋ ರಾವಣನೀತಾಯಾಃ ಸೀತಾಯಾಶ್ಶತ್ರುಕರ್ಶನಃ ।
ಇಯೇಷ ಪದಮನ್ವೇಷ್ಟುಂ ಚಾರಣಾಚರಿತೇ ಪಥಿ ॥

ಎಂಬೀ ಪ್ರಥಮಶ್ಲೋಕದಲ್ಲಿ, ಸದಾಚಾರ್ಯನು ಮಾಡತಕ್ಕ ಶಿಷ್ಯಾನ್ವೇಷಣವು ಉಪಪಾದಿಸಲ್ಪಡುವುದು. ಹೇಗೆಂದರೆ, (ತತಃ) ಭಗವದನುಜ್ಞೆಯನ್ನು ಪಡೆದಮೇಲೆ (ಶತ್ರುಕರ್ಶನಃ) " ಗುಶಬ್ದಸ್ತ್ವಂಧಕಾರಸ್ಯಾತ್ ರುಶಬ್ದಸ್ತನ್ನಿರೋಧಕಃ। ಅಂಧಕಾರನಿರೋಧಿತ್ವಾದ್ಗುರುರಿತ್ಯಭಿಧೀಯತೇ " ಎಂಬಂತೆ ಅಜ್ಞಾನನಿವರ್ತನ ಶೀಲನಾದ ಗುರುವು, (ಚಾರಣಾಚರಿತೇಪಥಿ) ಪೂರ್ವಾಚಾರ್ಯರು ನಡೆದ ದಾರಿಯಲ್ಲಿ, ಎಂದರೆ ಸದಾಚಾರದಲ್ಲಿದ್ದವನಾಗಿ (ರಾವಣನೀತಾಯಾಃ) ಅಸತ್ಪ್ರಲಾಪಗಳನ್ನುಂಟು ಮಾಡತಕ್ಕ ಅವಿವೇಕಗಳಿಗೆಡೆಯಾದ (ಸೀತಾಯಾಃ) 'ಸ್ತ್ರೀಪ್ರಾಯಮಿತರತ್ಸರ್ವಂ' ಎಂಬಂತೆ ಭಗವತ್ಪರತಂತ್ರನಾದ ಚೇತನನ (ಪದಂ) ಜ್ಞಾನವನ್ನು (ಅನ್ವೇಷ್ಟುಂ) ಹುಡುಕುವುದಕ್ಕಾಗಿ (ಇಯೇಷ) ಅಪೇಕ್ಷಿಸಿದನು. ಎಂದರೆ, ಅಜ್ಞಾನನಿವರ್ತಕ ನಾದ ಗುರುವು, ಭಗವಂತನಿಂದ ಪ್ರೇರಿತನಾಗಿ ಪೂರ್ವಾಚಾರ್ಯರ ಮಾರ್ಗವನ್ನು ಹಿಡಿದು, ಅಜ್ಞಾನವಶನಾದ ಚೇತನನನ್ನು ಉದ್ಧರಿಸುವುದಕ್ಕಾಗಿ, ತಾನೇ ಹೊರಡುವುದಾಗಿ ತಾತ್ಪರ್ಯವು.



ಶ್ರೀಃ.

ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ.

# ಶ್ರೀಮದ್ರಾಮಾಯಣವು

## ( ಸುಂದರಕಾಂಡವು )

### —(:) ಸಮುದ್ರಲಂಘನವು. (:)—

ಅನಂತರದಲ್ಲಿ ಶತ್ರುಸೂದನನಾದ ಹನುಮಂತನು, [1] ರಾವಣನು ಸೀತೆಯನ್ನು ಕದ್ದಿಟ್ಟಿರುವ ಸ್ಥಾನವನ್ನು ಹುಡುಕುವುದಕ್ಕಾಗಿ, ಚಾರಣಸಂಚಾರಕ್ಕೆ ಯೋಗ್ಯವಾದ ಅಂತರಿಕ್ಷದ ದಾರಿಯಲ್ಲಿಯೇ ಹೋಗಬೇಕೆಂದುದ್ದೇಶಿಸಿದನು. ಬೇರೊಬ್ಬರಿಗೆ ಸಾಧ್ಯವಲ್ಲದ ಈ ಸಾಹಸಕಾರ್ಯವನ್ನು ತಾನು ತಡೆಯಿಲ್ಲದೆ ನಡೆಸಬೇಕೆಂದೂ ನಿಶ್ಚಯಿಸಿಕೊಂಡು, ಉಬ್ಬಿದ ಕೊರಳುಳ್ಳವನಾಗಿ ತಲೆಯೆತ್ತಿ ಮೇಲೆ ನೋಡುತ್ತ ನಿಂತಿದ್ದಾಗ, ಆ ಕಪಿವೀರನು, ಮದದಿಂದ ಕೊಬ್ಬಿ ನಿಂತಿರುವ ಒಂದು ಮಹಾವೃಷಭದಂತೆ ಕಾಣಿಸುತಿದ್ದನು. ಆಮೇಲೆ ಮಹಾಬಲಾಢ್ಯನಾದ ಮತ್ತು ಧೀರನಾದ ಆ ಆಂಜನೇಯನು, ವೈಡೂರ್ಯದ ಬಣ್ಣವುಳ್ಳವುಗಳಾಗಿ, ನೀರಿನಂತೆ ಸ್ವಚ್ಛವಾದ ಅಲ್ಲಿನ ಹಸುರುಹುಲ್ಲಿನ ನೆಲಗಳಲ್ಲಿ ಉತ್ಸಾಹದಿಂದ

1. ಈ ಮೊದಲನೆಯ ಶ್ಲೋಕದಲ್ಲಿ “ರಾವಣನೀತಾಯಾಃ” ಎಂದು ಮೂಲದಲ್ಲಿರುವ “ವ” ಎಂಬಕ್ಷರವು ಗಾಯತ್ರಿಯ ಹನ್ನೆರಡನೇ ಅಕ್ಷರವಾದುದರಿಂದ, ಇದುವರೆಗೆ ರಾಮಾಯಣದಲ್ಲಿ ಹನ್ನೊಂದು ಸಾವಿರಗ್ರಂಥಗಳು ಮುಗಿದುವು. ಇಲ್ಲಿ ಹನ್ನೆರಡನೆಯ ಸಹಸ್ರವು ಆರಂಭಿಸುವುದಾಗಿ ಗ್ರಾಹ್ಯವು.

ಈ ಕಾಂಡದಲ್ಲಿ ಆಚಾರ್ಯಕೃತ್ಯವು ಹೇಳಲ್ಪಡುವುದು. ಅದಕ್ಕಾಗಿಯೇ

"ತತೋ ರಾವಣನೀತಾಯಾಃ ಸೀತಾಯಾಶ್ಶತ್ರುಕರ್ಶನಃ ।
ಇಯೇಷ ಪದಮನ್ವೇಷ್ಟುಂ ಚಾರಣಾಚರಿತೇ ಪಥಿ ॥

ಎಂಬೀ ಪ್ರಥಮಶ್ಲೋಕದಲ್ಲಿ, ಸದಾಚಾರ್ಯನು ಮಾಡತಕ್ಕ ಶಿಷ್ಯಾನ್ವೇಷಣವು ಉಪಪಾದಿಸಲ್ಪಡುವುದು. ಹೇಗೆಂದರೆ, (ತತಃ) ಭಗವದನುಜ್ಞೆಯನ್ನು ಪಡೆದಮೇಲೆ (ಶತ್ರುಕರ್ಶನಃ) "ಗುಶಬ್ದಸ್ತ್ವಂಧಕಾರಸ್ಸ್ಯಾತ್ ರುಶಬ್ದಸ್ತನ್ನಿರೋಧಕಃ । ಅಂಧಕಾರನಿರೋಧಿತ್ವಾದ್ಗುರುರಿತ್ಯಭಿಧೀಯತೇ" ಎಂಬಂತೆ ಅಜ್ಞಾನನಿವರ್ತನಶೀಲನಾದ ಗುರುವು, (ಚಾರಣಾಚರಿತೇಪಥಿ) ಪೂರ್ವಾಚಾರ್ಯರು ನಡೆದ ದಾರಿಯಲ್ಲಿ, ಎಂದರೆ ಸದಾಚಾರದಲ್ಲಿದ್ದವನಾಗಿ (ರಾವಣನೀತಾಯಾಃ) ಅಸತ್ಪ್ರಲಾಪಗಳನ್ನುಂಟು ಮಾಡತಕ್ಕ ಅವಿವೇಕಗಳಿಗೆಡೆಯಾದ (ಸೀತಾಯಾಃ) 'ಸ್ತ್ರೀಪ್ರಾಯಮಿತರತ್ಸರ್ವಂ' ಎಂಬಂತೆ ಭಗವತ್ಪರತಂತ್ರನಾದ ಚೇತನನ (ಪದಂ) ಸ್ಥಾನವನ್ನು (ಅನ್ವೇಷ್ಟುಂ) ಹುಡುಕುವುದಕ್ಕಾಗಿ (ಇಯೇಷ) ಅಪೇಕ್ಷಿಸಿದನು. ಎಂದರೆ, ಅಜ್ಞಾನನಿವರ್ತಕನಾದ ಗುರುವು, ಭಗವಂತನಿಂದ ಪ್ರೇರಿತನಾಗಿ ಪೂರ್ವಾಚಾರ್ಯರ ಮಾರ್ಗವನ್ನು ಹಿಡಿದು, ಅಜ್ಞಾನವಶನಾದ ಚೇತನನನ್ನು ಉದ್ಧರಿಸುವುದಕ್ಕಾಗಿ, ತಾನೇ ಹೊರಡುವುದಾಗಿ ತತ್ವಾರ್ಥವು.

---



ಶ್ರೀಃ.

ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ.

# ಶ್ರೀ ಮದ್ರಾಮಾಯಣವು

## ( ಸುಂದರಕಾಂಡವು )

### —(:) ಸಮುದ್ರಲಂಘನವು. (:)—

ಅನಂತರದಲ್ಲಿ ಶತ್ರುಸೂದನನಾದ ಹನುಮಂತನು, [1] ರಾವಣನು ಸೀತೆಯನ್ನು ಕದ್ದಿಟ್ಟಿರುವ ಸ್ಥಾನವನ್ನು ಹುಡುಕುವುದಕ್ಕಾಗಿ, ಚಾರಣಸಂಚಾರಕ್ಕೆ ಯೋಗ್ಯವಾದ ಅಂತರಿಕ್ಷದ ದಾರಿಯಲ್ಲಿಯೇ ಹೋಗಬೇಕೆಂದುದ್ದೇಶಿಸಿದನು. ಬೇರೊಬ್ಬರಿಗೆ ಸಾಧ್ಯವಲ್ಲದ ಈ ಸಾಹಸಕಾರ್ಯವನ್ನು ತಾನು ತಡೆಯಿಲ್ಲದೆ ನಡೆಸಬೇಕೆಂದೂ ನಿಶ್ಚಯಿಸಿಕೊಂಡು, ಉಬ್ಬಿದ ಕೊರಲುಳ್ಳವನಾಗಿ ತಲೆಯೆತ್ತಿ ಮೇಲೆ ನೋಡುತ್ತ ನಿಂತಿದ್ದಾಗ, ಆ ಕಪಿವೀರನು, ಮದದಿಂದ ಕೊಬ್ಬಿ ನಿಂತಿರುವ ಒಂದು ಮಹಾವೃಷಭದಂತೆ ಕಾಣಿಸುತಿದ್ದನು. ಆಮೇಲೆ ಮಹಾಬಲಾಢ್ಯನಾದ ಮತ್ತು ಧೀರನಾದ ಆ ಆಂಜನೇಯನು; ವೈಡೂರ್ಯದ ಬಣ್ಣವುಳ್ಳವುಗಳಾಗಿ, ನೀರಿನಂತೆ ಸ್ವಚ್ಛವಾದ ಅಲ್ಲಿನ ಹಸುರುಹುಲ್ಲಿನ ನೆಲಗಳಲ್ಲಿ ಉತ್ಸಾಹದಿಂದ

---

1. ಈ ಮೊದಲನೆಯ ಶ್ಲೋಕದಲ್ಲಿ “ರಾವಣನೀತಾಯಾಃ” ಎಂದು ಮೂಲದಲ್ಲಿರುವ “ವ” ಎಂಬಕ್ಷರವು ಗಾಯತ್ರಿಯ ಹನ್ನೆರಡನೇ ಅಕ್ಷರವಾದುದರಿಂದ, ಇದುವರೆಗೆ ರಾಮಾಯಣದಲ್ಲಿ ಹನ್ನೊಂದು ಸಾವಿರಗ್ರಂಥಗಳು ಮುಗಿದು. ಇಲ್ಲಿ ಹನ್ನೆರಡನೆಯ ಸಹಸ್ರವು ಆರಂಭಿಸುವುದಾಗಿ ಗ್ರಾಹ್ಯವು.

ಅತ್ತಿತ್ತ ತಿರುಗುತ್ತ, ಅಲ್ಲಲ್ಲಿ ಹಾರಾಡುತಿದ್ದ ಹಕ್ಕಿಗಳನ್ನು ಹೆದರಿಸಿ ಓಡಿಸಿದನು. ಅಡ್ಡಲಾಗಿಬೆಳೆದಿದ್ದ ಮರಗಳನ್ನು ಎದೆಯಿಂದ ತಟ್ಟಿ ಮುರಿದು ಕೆಡಹಿದನು. ಇದಿರಿಗೆ ಕಂಡ ಅನೇಕ ಮೃಗಗಳನ್ನೂ ಕೊಬ್ಬಿದ ಸಿಂಹದಂತೆ ಕೊಂದು ಹಾಕುತ್ತಬಂದನು. ಆ ಹನುಮಂತನು ನಿಂತಿದ್ದ ಪರ್ವತಪ್ರದೇಶನಾದರೋ ಅಲ್ಲಲ್ಲಿ ಸ್ವಭಾವಜನ್ಯಗಳಾಗಿ, ಚಿತ್ರವಿಚಿತ್ರಗಳಾದ ನೀಲಿ, ಕೆಂಪು, ಹಳದಿ, ಹಸುರು, ಬಿಳುಪು, ಕಪ್ಪು ಮೊದಲಾದ ಬಣ್ಣಗಳುಳ್ಳ ಅನೇಕ ಧಾತುಗಳಿಂದ ಶೋಭಿತವಾಗಿರುವುದು. ಕಾಮರೂಪಿಗಳಾಗಿಯೂ, ಸರ್ವಾಲಂಕಾರಭೂಷಿತರಾಗಿಯೂ ಇರುವ ಯಕ್ಷರೂ, ಕಿನ್ನರರೂ, ದೇವಸಮಾನರಾದ ಪನ್ನಗರೂ ಅಗಾಗ ಅಲ್ಲಿಗೆ ಬಂದು ವಿನೋದಿಸುತ್ತಿರುವರು. ಮತ್ತು ಅದು ಅತಿಮನೋಹರವಾಗಿಯೂ, ಅನೇಕಮದದಾನೆಗಳಿಗೆ ನಿತ್ಯಾಶ್ರಯವಾಗಿಯೂ ಇರುವುದು. ಇಂತಹ ಪರ್ವತದ ತಪ್ಪಲಿನಲ್ಲಿ ನಿಂತು ನೋಡುತಿದ್ದ ಆ ಹನುಮಂತನು ದೊಡ್ಡ ನುಡುವಿನಲ್ಲಿ ನಿಂತ ಮದದಾನೆಯಂತೆಯೇ ಕಾಣಿಸುತ್ತಿದ್ದನು. ಹೀಗೆ ಸಿದ್ಧನಾಗಿ ನಿಂತು ಆಂಜನೇಯನು ಮೊದಲು ಸೂರ್ಯನಿಗೂ, ಇಂದ್ರನಿಗೂ, ವಾಯುದೇವನಿಗೂ, ಬ್ರಹ್ಮನಿಗೂ, ದೇವಯೋನಿಗಳಾದ ಇತರ ಭೂತಗಳಿಗೂ ಕೈಮುಗಿದು ನಮಸ್ಕರಿಸಿ, ಹಾರುವುದಕ್ಕೆ ನಿಶ್ಚಯಿಸಿಕೊಂಡನು. ಆಮೇಲೆ ತಿರುಗಿ ಪೂರ್ವಾಭಿಮುಖನಾಗಿ ನಿಂತು, ಮತ್ತೊಮ್ಮೆ ತನ್ನ ಜನಕನಾದ ವಾಯುವನ್ನು ಕೈಮುಗಿದು ಧ್ಯಾನಿಸಿ, ಆ ಸಮುದ್ರದ ದಕ್ಷಿಣಕ್ಕೆ ನೂರು ಯೋಜನಗಳನ್ನು ಹಾರುವುದಕ್ಕೆ ತಕ್ಕಂತೆ ತನ್ನ ಮೈಯನ್ನು ಬೆಳೆಸಿಕೊಂಡನು. ಹೀಗೆ ಹಾರುವುದಕ್ಕೆ ಸಿದ್ಧನಾಗಿ ನಿಂತಿದ್ದ ಹನುಮಂತನನ್ನು ಅಲ್ಲಿದ್ದ ವಾನರಶ್ರೇಷ್ಠರೆಲ್ಲರೂ ಕುತೂಹಲದಿಂದ ನೋಡುತಿದ್ದರು. ಪರ್ವಕಾಲದ ಸಮುದ್ರದಂತೆ ರಾಮಾಭ್ಯುದಯಕ್ಕಾಗಿ ಈ ಆಂಜನೇಯನೂ ಮೇಲೆಮೇಲೆ ವೃದ್ಧಿಹೊಂದುತಿದ್ದನು. ಹೀಗೆ ತನ್ನ ಮೈಯನ್ನು ಇಷ್ಟಿಷ್ಟೆಂದು ನಿರ್ಣಯಿಸಲಾರದಷ್ಟು ಪ್ರಮಾಣಕ್ಕೆ ಹೆಚ್ಚಿಸಿಕೊಂಡು, ಅಲ್ಲಿಂದಲೇ ಹಾರಿ ಸಮುದ್ರವನ್ನು ದಾಟಬೇಕೆಂದುದ್ದೇಶಿಸಿ, ಆ ಪರ್ವತದ ಬಲವನ್ನು ಪರೀಕ್ಷಿಸುವುದಕ್ಕಾಗಿ ಅದನ್ನು ತನ್ನ ತೋಳುಗಳಿಂದಲೂ, ಕಾಲುಗಳಿಂದಲೂ ಒಮ್ಮೆ ಬಲವಾಗಿ ಗುದ್ದಿನೋಡಿದನು. ಆ ಪರ್ವತವು ಅಚಲವೆನ್ನಿಸಿಕೊಂಡಿದ್ದರೂ ಅವನ ಗುದ್ದಿಗೆ ತಡೆಯಲಾರದೆ ಒಂದು ಮುಹೂರ್ತಕಾಲದವರೆಗೆ ಚಲಿಸಿಹೋಯಿತು. ಪುಷ್ಪಿಸಿದ ಕೊನೆಗಳುಳ್ಳ ಅಲ್ಲಿನ ಗಿಡಗಳಲ್ಲಿದ್ದ ಹೂಗಳೆಲ್ಲವೂ ನಿಶ್ಶೇಷವಾಗಿ ಉದಿರಿಬಿದ್ದುವು. ಹೀಗೆ ಮರಗಳಿಂದುದಿರಿಬಿದ್ದ ಸುಗಂಧಪುಷ್ಪಗಳ ಸಮೂಹದಿಂದ, ಆ ಬೆಟ್ಟದ ಸಮಸ್ತಪ್ರದೇಶವೂ ಮುಚ್ಚಿಹೋಗಲು, ಅದು ಕೇವಲ ಪುಷ್ಪ

ಮಯವಾದ ಬೆಟ್ಟದಂತೆಯೇ ಕಾಣಿಸುತಿತ್ತು. ಮಹಾವೀರ್ಯವುಳ್ಳ ಈ ಹನುಮಂತನ ತುಳಿತದಿಂದ ಆ ಪರ್ವತದ ನಾಲ್ಕುಕಡೆಗಳಿಂದಲೂ, ಮದದಾನೆಗಳಿಂದ ಸುರಿಯುವ ಮದಜಲದಂತೆ ಒಳಗಿನ ದ್ರವಜಲವು ಮೇಲೆ ಜಿನುಗಿ ಪ್ರವಾಹವಾಗಿ ಹೊರಡಲಾರಂಭಿಸಿತು. ಮಹಾಬಲಾಢ್ಯನಾದ ಹನುಮಂತನ ಗುದ್ದಿಗೆ ತಡೆಯಲಾರದೆ ಆ ಮಹೇಂದ್ರಪರ್ವತವು ತನ್ನೊಳಗೆ ಹುದುಗಿದ್ದ ಚಿನ್ನ, ಬೆಳ್ಳಿ ಅಂಜನಶಿಲೆ ಮೊದಲಾದ ಖನಿಜರೇಣುಗಳನ್ನು ಹೊರಕ್ಕೆ ಕಕ್ಕುತಿತ್ತು. ಮತ್ತು 1 ಬೆಂಕಿಯು ತನ್ನ ಮಧ್ಯಜ್ವಾಲೆಯಿಂದ ಹೊಗೆಯನ್ನು ಕಕ್ಕುವಂತೆ ಆಗ ಆ ಮಹೇಂದ್ರಪರ್ವತವು ಮಣಿಶಿಲೆಯೆಂಬ ಧಾತುಗಳಿಂದ ಕೂಡಿದ ದೊಡ್ಡದೊಡ್ಡ ಕಲ್ಲುಬಂಡೆಗಳನ್ನು ಹೊರಕ್ಕೆಸೆಯುತಿತ್ತು. ಬಲಾಢ್ಯನಾದ ಹನುಮಂತನು ಆ ಪರ್ವತವನ್ನು ತಟ್ಟಿನೋಡಿದಾಗ, ಅದರ ಸುತ್ತಲೂ ಅಲ್ಲಲ್ಲಿ ಗುಹೆಗಳೊಳಗಿದ್ದ ಸಮಸ್ತಭೂತಗಳೂ ಆ ಪೆಟ್ಟಿನಿಂದ ನೊಂದವುಗಳಾಗಿ ವಿಕಾರಸ್ವರಗಳಿಂದ ಅರಚಿಕೊಳ್ಳುತಿದ್ದುವು. ಹೀಗೆ ಪರ್ವತವನ್ನು ತಟ್ಟಿದುದರಿಂದ ಅಲ್ಲಿನ ಪ್ರಾಣಿಗಳು ಕೂಗಿಕೊಳ್ಳುವ ದೊಡ್ಡ ಆಕ್ರಂದನಧ್ವನಿಯು ಸಮೀಪದ ಕಾಡುಗಳನ್ನೂ, ದಿಕ್ಕುಗಳನ್ನೂ, ಸಮಸ್ತಭೂಮಿಯನ್ನೂ ತುಂಬಿತು. ಆ ಬೆಟ್ಟದ ಮೇಲಿದ್ದ ವಿಷಸರ್ಪಗಳೆಲ್ಲವೂ ನಾಗರತ್ನರೇಖೆಯುಳ್ಳ ತಮ್ಮತಮ್ಮ ದೊಡ್ಡ ತಲೆಗಳನ್ನೆತ್ತಿ, ಬಾಯಿಂದ ಘೋರವಾದ ವಿಷವನ್ನು ಕಕ್ಕುತ್ತ, ಕೋಪಗೊಂಡು, ತಮ್ಮ ಹಲ್ಲುಗಳಿಂದ ಅಲ್ಲಿನ ಶಿಲೆಗಳನ್ನು ಕಡಿಯುತಿದ್ದುವು. ಹೀಗೆ ಕ್ರೂರವಿಷಗಳುಳ್ಳ ಸರ್ಪಗಳು ಕೋಪದಿಂದ ಕಚ್ಚಿದೊಡನೆಯೇ ಆ ಶಿಲೆಗಳಲ್ಲಿ ಅಗ್ನಿಜ್ವಾಲೆಗಳು ಹೊರಡಲಾರಂಭಿಸಿದುವಲ್ಲದೆ, ಅವು ಸಾವಿರಾರು ತುಂಡುಗಳಾಗಿ ಸೀಳಿ ಸಿಡಿದು ಮೇಲೆತ್ತಿಹಾರುತಿದ್ದುವು. ಆ ಬೆಟ್ಟದಲ್ಲಿ ವಿಷಹರಗಳಾದ ಮೂಲಿಕೆಗಳು ವಿಶೇಷವಾಗಿ ಹುಟ್ಟಿದ್ದರೂ, ಈ ಸರ್ಪಗಳ ವಿಷವನ್ನಡಗಿಸುವುದಕ್ಕೆ ಅವುಗಳಿಗೂ ಸಾಧ್ಯವಿಲ್ಲದಂತಾಯಿತು. ಈ ಅತ್ಯಾಹಿತಗಳನ್ನು ನೋಡಿ ಅಲ್ಲಿದ್ದ ತಪಸ್ವಿಗಳೆಲ್ಲರೂ, ಈ ಪರ್ವತವು ಪಂಚಭೂತಗಳೊಡನೆ ಒಡೆದುಹೋಗಬಹುದೆಂದು ಹೆದರಿ, ಆಗಲೇ ಅಂತರಿಕ್ಷಕ್ಕೆ ಹಾರಿಬಿಟ್ಟರು. ಮತ್ತು ಅಲ್ಲಿ ತಮ್ಮ ಸ್ತ್ರೀಯರೊಡಗೂಡಿ ಪಾನಭೋಜನಾದಿಗಳಿಂದ ವಿಹರಿಸುತಿದ್ದ ವಿದ್ಯಾಧರರು, ಆ ಪರ್ವತವು ನಡುಗುತ್ತಿರುವುದನ್ನು ಕಂಡು ಭಯಪಟ್ಟು ಮೇಲೆ ನೆಗೆಯಲಾರಂಭಿಸಿ, ತಾವು ಕೈಯಲ್ಲಿ ಹಿಡಿದಿದ್ದ ಚಿನ್ನದ ಪಾನಪಾತ್ರೆಗಳನ್ನೂ ಆ ಪಾನಭೂಮಿ

1. ಅಗ್ನಿಗೆ, "ಕಾಳಿ, ಕರಾಳಿ, ವಿಸ್ಫುಲಿಂಗಿನಿ, ಧೂಮ್ರ, ವಿಶ್ವರೋಚಿ, ಲೋಹಿತೆ, ಮನೋಜವೆ" ಎಂದು ಸಪ್ತಜ್ವಾಲೆಗಳುಂಟು. ಅವುಗಳಲ್ಲಿ ಧೂಮ್ರೆಯೆಂಬುದು ಮಧ್ಯಮಜ್ವಾಲೆಯು.

ಯಲ್ಲಿಯೇ ಬಿಸುಟರು. ಬೆಲೆಯುಳ್ಳ ಭೋಜನಪಾತ್ರೆಗಳನ್ನೂ ಅಲ್ಲಿಯೇ ಹಾಕಿಬಿಟ್ಟರು. ಚಿನ್ನದ ಕಲಶಗಳನ್ನೂ ಅಲ್ಲಿಯೇ ಬಿಟ್ಟುಹೋದರು. ಮತ್ತು ತಾವು ಆಸೆಯಿಂದ ಸಂಗ್ರಹಿಸಿಟ್ಟಿದ್ದ ಮೇಲಾದ ಭಕ್ಷ್ಯಗಳನ್ನೂ, ಲೇಹ್ಯಗಳನ್ನೂ, ಬಗೆಬಗೆಯ ಮಾಂಸಗಳನ್ನೂ, ಎತ್ತಿನ ಚರ್ಮದ ಗುರಾಣಿಗಳನ್ನೂ, ಚಿನ್ನದ ಹಿಡಿಗಳುಳ್ಳ ತಮ್ಮ ಕತ್ತಿಗಳನ್ನೂ, ಅಲ್ಲಿಯೇ ಬಿಟ್ಟು ತಮ್ಮ ತಮ್ಮ ಪತ್ನಿಯರನ್ನು ಕರೆದುಕೊಂಡು ಮೇಲಕ್ಕೆ ಹಾರಿಬಿಟ್ಟರು. ಮತ್ತು ಅಲ್ಲಿ ಸ್ವಭಾವದಿಂದಲೇ ಕಮಲದಂತೆ ಕಣ್ಣುಳ್ಳ ಕೆಲವು ವಿದ್ಯಾಧರರು, ಮದ್ಯಪಾನಮದದಿಂದ ಮತ್ತಷ್ಟು ಕೆಂಪೇರಿದ ಕಣ್ಣುಳ್ಳವರಾಗಿ, ಉತ್ತಮಗಳಾದ ಹಾರಗಳನ್ನೂ, ರಕ್ತಮಾಲಿಕೆಗಳನ್ನೂ, ರಕ್ತಚಂದನಗಳನ್ನೂ ಧರಿಸಿ, ಸಂತೋಷದಿಂದ ಮೈಮರೆತು ತಿರುಗುತಿದ್ದರೂ, ಆ ಪರ್ವತವು ಅಕಸ್ಮಾತ್ತಾಗಿ ಅದುರುತ್ತಿರುವುದನ್ನು ಕಂಡು ಭಯಪಟ್ಟು ಆ ಕ್ಷಣವೇ ಮೇಲಕ್ಕೆ ಹಾರಿಬಿಟ್ಟರು. ಮೇಲಾದ ಹಾರಗಳಿಂದಲೂ, ಕಾಲಂದುಗೆಗಳಿಂದಲೂ, ತೋಳ್ಬಳೆಗಳಿಂದಲೂ, ಕೈಬಳೆಗಳಿಂದಲೂ ಅಲಂಕೃತರಾಗಿ ಅಲ್ಲಲ್ಲಿ ವಿಹರಿಸುತಿದ್ದ ದೇವತಾಸ್ತ್ರೀಯರೆಲ್ಲರೂ, ಆ ಬೆಟ್ಟವು ನಡುಗುವುದನ್ನು ಕಂಡು ಬೆಚ್ಚರಗೊಂಡು, ಆಗಲೇ ತಮ್ಮ ತಮ್ಮ ನಾಯಕರೊಡಗೂಡಿ ಆಕಾಶಕ್ಕೆ ಹಾರಿ, ಅಲ್ಲಿ ಹಸನ್ಮುಖರಾಗಿ ನಿಂತು ಈ ಆಶ್ಚರ್ಯವನ್ನು ನೋಡುತಿದ್ದರು! ಮತ್ತು ಅಲ್ಲಿ ಮಹರ್ಷಿಗಳಂತೆ ತಪಸ್ಸಿದ್ಧರಾದ ಬೇರೆ ಕೆಲವು ವಿದ್ಯಾಧರರು, ತಮ್ಮ ತಮ್ಮ ಅಣಿಮಾದ್ಯಷ್ಟಸಿದ್ಧಿಗಳ ಬಲದಿಂದ ನಿಮಿಷಮಾತ್ರದಲ್ಲಿ ಆಕಾಶಕ್ಕೇರಿ, ಅಲ್ಲಿ ಗುಂಪುಗೂಡಿ ಈ ಪರ್ವತವನ್ನು ನೋಡುತಿದ್ದರು. ಹೀಗೆ ಅವರೆಲ್ಲರೂ ಅಂತರಿಕ್ಷದಲ್ಲಿ ನೆರೆದು ನಿಂತಿದ್ದಾಗ, ಅಲ್ಲಿ ಆತ್ಮಜ್ಞಾನವುಳ್ಳ ಮಹರ್ಷಿಗಳೂ, ಚಾರಣರೂ, ಸಿದ್ಧರೂ, ಈ ಹನುಮಂತನ ಮಹಿಮೆಯನ್ನು ತಮ್ಮ ಧ್ಯಾನದೃಷ್ಟಿಯಿಂದಲೇ ತಿಳಿದು ಸಂತೋಷಗೊಂಡು, ಒಬ್ಬರಿಗೊಬ್ಬರು "ಆಹಾ! ಈ ಮಹಾತ್ಮನ ದೇಹವೇ ಒಂದು ದೊಡ್ಡ ಬೆಟ್ಟದಂತಿರುವುದು. ಇದರಮೇಲೆ ಇವನು ವಾಯುಪುತ್ರನು! ಹೀಗಿರುವಾಗ ಇವನ ಧೈರ್ಯವನ್ನೂ, ವೇಗವನ್ನೂ, ಇವನ ಬಲವನ್ನೂ ಕೇಳಬೇಕೆ? ಅತಿಭಯಂಕರವಾದ ಈ ಮಹಾಸಮುದ್ರವನ್ನೂ ಈತನು ಹಾರಬೇಕೆಂದೆಣಿಸಿರುವನು. ರಾಮನ ಹಿತಕ್ಕಾಗಿಯೂ, ವಾನರರ ಕ್ಷೇಮಕ್ಕಾಗಿಯೂ, ಇವನು ಬೇರೊಬ್ಬರಿಗೆ ಸಾಧ್ಯವಲ್ಲದ ಈ ಸಾಹಸಕಾರ್ಯಕ್ಕೆ ಪ್ರಯತ್ನಿಸಿರುವನು. ಆದರೇನು? ಇದು ಬೇರೊಬ್ಬರಿಗೆ ಸಾಧ್ಯವಲ್ಲದಿದ್ದರೂ ಇವನಿಗೆ ಅಸಾಧ್ಯವಾಗಿರದು. ಇಚ್ಛಾಮಾತ್ರದಿಂದಲೇ ಇವನು ಈ ಸಮುದ್ರದ ಕೊನೆಯನ್ನು ಮುಟ್ಟುವುದರಲ್ಲಿ ಸಂದೇಹವಿಲ್ಲ" ಎಂದರು. ಈ ಮಾತುಗಳನ್ನು

ಕೇಳಿ ಅಲ್ಲಿದ್ದ ವಿದ್ಯಾಧರರೆಲ್ಲರೂ ಪರಮಾಶ್ಚರ್ಯಭರಿತರಾಗಿ, ಎಣೆಯಿಲ್ಲದ ಮಹಿಮೆಯುಳ್ಳವನಾಗಿ ಆ ಪರ್ವತದಮೇಲೆ ನಿಂತಿದ್ದ ಆ ಹನುಮಂತನನ್ನೇ ನೆಟ್ಟಕಣ್ಣಿನಿಂದ ನೋಡುತಿದ್ದರು. ಇತ್ತಲಾಗಿ ಆ ಪರ್ವತಾಗ್ರದಮೇಲೆ ದೊಡ್ಡ ಬೆಟ್ಟದಂತೆ ನಿಂತಿದ್ದ ಹನುಮಂತನಾದರೋ, ಅಲ್ಲಿಂದ ಹಾರುವುದಕ್ಕೆ ಸಿದ್ಧನಾಗಿ ತನ್ನ ಕೂದಲುಗಳನ್ನೆಬ್ಬಿಸಿಕೊಂಡು, ಒಮ್ಮೆ ಮೈಯನ್ನೊದರಿದನು. ಮಹಾಮೇಘದಂತೆ ಒಂದು ದೊಡ್ಡ ಸಿಂಹನಾದವನ್ನು ಮಾಡಿದನು. ಗರುಡನು ಮಹಾಸರ್ಪವನ್ನು ಹಿಡಿದು ತೂಗುವಂತೆ ಕೂದಲು ತುಂಬಿ ಬಳೆಯಂತೆ ದುಂಡಗೆ ಸುತ್ತಿದ್ದ ತನ್ನ ಬಾಲವನ್ನು ಬಿಚ್ಚಿ, ಉದ್ದಕ್ಕೆ ಬೀಸಿ, ಹಾರುವುದಕ್ಕೆ ಸಿದ್ಧನಾದನು. ವೈಗೆ ಲಂಘನವನ್ನು ತೆಗೆದುಕೊಂಡು ನಿಂತಿದ್ದ ಆ ಹನುಮಂತನು ತನ್ನ ಹಿಂದೆ ಬಿಚ್ಚಿಟ್ಟಿದ್ದ ಬಾಲವು, ಗರುಡನಿಂದುಯ್ಯಲ್ಪಡುವ ಮಹಾಸರ್ಪದಂತೆಯೇ ಕಾಣುತಿತ್ತು. ದೊಡ್ಡ ಅಗಳಿಗಳಂತೆ ಉದ್ದವಾಗಿ ನೀಡಿದ ತನ್ನ ತೋಳುಗಳೆರಡನ್ನೂ ಬಾಗಿಸಿ ಬೆಟ್ಟದಮೇಲೆ ಬಲವಾಗಿ ಊರಿಕೊಂಡು, ಕಾಲುಗಳನ್ನು ಕುಗ್ಗಿಸಿ, ಕೊರಲನ್ನು ಮುಗಿಸಿನಿಂತನು. ಹಾರುವುದಕ್ಕೆ ಸಿದ್ಧನಾಗಿ ನಿಂತಿದ್ದ ಆ ಆಂಜನೇಯನಲ್ಲಿ ತೇಜಸ್ಸೂ, ಬಲವೂ, ವೀರ್ಯವೂ ಮೊದಲಿಗಿಂತಲೂ ಇಮ್ಮಡಿಯಾಗಿ ಬೆಳೆದು ಅವನಿಗೆ ಮಹೋತ್ಸಾಹವನ್ನು ಕೊಟ್ಟುವು. ಈ ಮಹೋತ್ಸಾಹದಿಂದ ಅವನು ಮೇಲೆ ಆಕಾಶದಲ್ಲಿ ಬಹುದೂರಕ್ಕೆ ದೃಷ್ಟಿಯಿಟ್ಟು, ತನ್ನ ದಾರಿಯನ್ನು ಗುರಿಯಿಟ್ಟು ನೋಡುತ್ತ, ಉಸಿರುಕಟ್ಟಿ ಬಲವಾಗಿ ನೆಲದಮೇಲೆ ಕಾಲೂರಿನಿಂತು, ಕಿವಿಗಳನ್ನು ಕುಗ್ಗಿಸಿಕೊಂಡು, ನೆಗೆಯುವುದಕ್ಕೆ ಸಿದ್ಧನಾಗಿ, ತನ್ನ ಸುತ್ತಲೂ ನಿಂತಿದ್ದ ವಾನರರನ್ನು ಕುರಿತು, "ಎಲೈ ವೀರರೇ! ನಮ್ಮ ಶ್ರೀರಾಮನಿಂದ ಪ್ರಯೋಗಿಸಲ್ಪಡುವ ಬಾಣವು ಹೇಗೆ ವಾಯುವೇಗದಿಂದ ಹೋಗುವುದೋ, ಅದರಂತೆಯೇ ಈಗ ನಾನೂ ಒಂದೇ ನೆಗೆತಕ್ಕೆ ರಾವಣರಕ್ಷಿತವಾದ ಲಂಕೆಗೆ ಹೋಗುವುದನ್ನು ನೋಡಿರಿ! ಒಂದುವೇಳೆ ಲಂಕೆಯಲ್ಲಿ ನಾನು ಆ ಜನಕಪುತ್ರಿಯನ್ನು ಕಾಣದಿದ್ದರೆ, ಅದೇ ವೇಗದಿಂದ ಸ್ವರ್ಗಕ್ಕೆ ಹಾರಿಬಿಡುವೆನು. ಅಲ್ಲಿಯೂ ಸೀತೆಯನ್ನು ಕಾಣದಿದ್ದರೆ ಆಗಲೇ ಹಿಂತಿರುಗಿ ಪುನಃ ಲಂಕೆಗೆ ಬಂದು ರಾಕ್ಷಸರಾಜನಾದ ರಾವಣನನ್ನೇ ಹಿಂಗಟ್ಟುಕಟ್ಟಿ ಇಲ್ಲಿಗೆ ತಂದುಬಿಡುವೆನು. ಸರ್ವಪ್ರಕಾರದಿಂದಲೂ ನಾನು ಈಗ ಹಿಡಿದ ಕಾರ್ಯವನ್ನು ಸಾಧಿಸದೆ ಬಿಡುವವನಲ್ಲ. ಹೇಗಾದರೂ ನಾನು ಸೀತೆಯನ್ನು ಕರೆತರುವುದೇ ನಿಜವು. ಕೊನೆಗೆ ರಾವಣಸಹಿತವಾಗಿ ಆ ಲಂಕೆಯನ್ನೇ ಕಿತ್ತುತಂದರೂ ತರುವೆನು" ಎಂದನು. ಮಹಾವೇಗಶಾಲಿಯಾಗಿಯೂ ವಾನರೋತ್ತಮನಾಗಿಯೂ ಇರುವ ಹನುಮಂತನು ಹೀಗೆಂದು ವಾನರರಿಗೆ ಹೇಳಿ,

ಮನಸ್ಸಿನಲ್ಲಿ ಸ್ವಲ್ಪವಾದರೂ ಅಳುಕಿಲ್ಲದೆ ಆ ಕ್ಷಣವೇ ಮಹಾವೇಗದಿಂದ ಮೇಲಕ್ಕೆ ಹಾರಿಬಿಟ್ಟನು. ಸಮುದ್ರದಮೇಲೆ ಅಂತರಿಕ್ಷದಲ್ಲಿ ಹಾರುವಾಗಲೂ ಕೂಡ, ಅವನು ನಿರ್ಭಯನಾಗಿ, ತಾನೇ ಗರುಡನೆಂಬ ಭಾವದಿಂದ ಮಹೋತ್ಸಾಹ ಗೊಂಡಿದ್ದನು. ಹೀಗೆ ಹನುಮಂತನು ಮೇಲೆ ಹಾರಿದೊಡನೆ ಅವನ ವೇಗದಿಂದ ಆ ಬೆಟ್ಟದ ಮೇಲೆ ಬೆಳೆದ ಮರಗಿಡಗಳೆಲ್ಲವೂ ಸಮೂಲವಾಗಿ ಕಿತ್ತು, ಮುರಿದ ಕೊಂಬೆಗಳೊಡನೆ ಅವನ ಹಿಂದೆ ಗಾಳಿಯಲ್ಲಿ ತೂರಿಬರುತಿದ್ದುವು. ಹೀಗೆ ಹನುಮಂತನು, ಮದಿಸಿದ ಕಾಡಕೊಕ್ಕರೆಗಳಿಂದ ತುಂಬಿ ಪುಷ್ಪಭರಿತಗಳಾಗಿರುವ ಎಷ್ಟೋ ಮರಗಳನ್ನು, ತನ್ನ ತೊಡೆಗಳ ವೇಗದಿಂದ ಸೆಳೆದುಕೊಂಡು ಆಕಾಶದಲ್ಲಿ ಹಾರುತಿದ್ದನು. ಅವನ ತೊಡೆಯ ವೇಗದಿಂದ ಕೀಳಲ್ಪಟ್ಟ ವೃಕ್ಷಗಳೆಲ್ಲವೂ ದೂರ ಪ್ರಯಾಣಕ್ಕಾಗಿ ಹೊರಟಿರುವವನನ್ನು, ಅವನ ನಂಟರಿಷ್ಟರು ದಾರಿಕಳುಹಿಸುವು ದಕ್ಕಾಗಿ ಸ್ವಲ್ಪದೂರದವರಗೆ ಹಿಂಬಾಲಿಸುವಂತೆ, ಒಂದು ಮುಹೂರ್ತಕಾಲದ ವರೆಗೆ ಆ ವಾನರೇಂದ್ರನನ್ನೇ ಹಿಂಬಾಲಿಸಿ ಬರುತಿದ್ದುವು. ಅವನ ತೊಡೆಯ ವೇಗ ದಿಂದ ಕಿತ್ತು ಬಂದ ಸಾಲೆ ಮೊದಲಾದ ಇನ್ನೂ ಅನೇಕವೃಕ್ಷಗಳು, ರಾಜನನ್ನು ಹಿಂಬಾಲಿಸಿ ಹೊರಡುವ ಸೇನೆಯಂತೆ ಆ ಹನುಮಂತನ ಹಿಂದೆ ಬರುತಿದ್ದುವು. ಪುಷ್ಪಿತಗಳಾದ ಅನೇಕ ವೃಕ್ಷಗಳು ದೊಡ್ಡ ದೇಹವುಳ್ಳ ಈತನನ್ನು ಸುತ್ತಿ ಬರುತ್ತಿರಲು, ಆಗ ಹನುಮಂತನು ಗಿಡಗಳಿಂದ ತುಂಬಿದ ಒಂದು ದೊಡ್ಡ ಬೆಟ್ಟ ದಂತೆ ಅದ್ಭುತಾಕಾರದಿಂದ ಕಾಣಿಸಿಕೊಂಡನು. ಭಾರವುಳ್ಳ ಕೆಲವು ಮರಗಳು ಇಂದ್ರನ ಭಯಕ್ಕಾಗಿ ಸಮುದ್ರದಲ್ಲಿ ಬಿದ್ದು ಮುಳುಗುವ ಬೆಟ್ಟಗಳಂತೆ ನಡು ದಾರಿಯಲ್ಲಿ ಕೆಳಗೆಬಿದ್ದು ಮುಳುಗಿಹೋದುವು. ಮೇಘದಂತೆ ಮಹಾಕಾಯ ವುಳ್ಳ ಹನುಮಂತನ ದೇಹದ ಸುತ್ತಲೂ, ಚಿತ್ರವಿಚಿತ್ರಗಳಾದ ಬಣ್ಣಗಳಿಂದ ಕೂಡಿದ ಕೆಲವು ಹೂಗಳು ಅವರಿಸಿ ಬರುತ್ತಿರಲು, ಅದರಿಂದ ಅವನು ಮಿಂಚು ಹುಳುಗಳಿಂದ ತುಂಬಿದ ಬೆಟ್ಟದಂತೆ ಶೋಭಿಸುತಿದ್ದನು. ಇವನ ವೇಗಕ್ಕೆ ಸಿಕ್ಕಿ ಬಂದ ಮರಗಿಡಗಳಲ್ಲಿ ಕೆಲವು ತಮ್ಮತಮ್ಮ ಹೂಗಳನ್ನುದಿರಿಸುತ್ತ ನೀರಿನಲ್ಲಿ ಬೀಳುವಾಗ ಸ್ನೇಹಿತನನ್ನು ದಾರಿಕಳುಹಿಸಿ ಹಿಂತಿರುಗುವಾಗ, ಕಣ್ಣೀರುಬಿಡುತ್ತ ದುಃಖಸಮುದ್ರದಲ್ಲಿ ಮುಳುಗುವ ಇಷ್ಟಜನರಂತಿದ್ದುವು. ಈ ಅಂಜನೇಯನು ಹಾರುವಾಗ ಅವನ ಗಾಳಿಯ ವೇಗದಿಂದ ಹಾರಿ ಚದರಿಬಿದ್ದ ಚಿತ್ರವಿಚಿತ್ರಗಳಾದ ಹೂಗಳಿಂದ, ಆ ಸಮುದ್ರವೂ ಕೂಡ ಅನೇಕ ನಕ್ಷತ್ರಗಳಿಂದ ತುಂಬಿದ ಆಕಾಶ ದಂತೆ ಕಾಣುತಿತ್ತು. ಆಂಜನೇಯನು ತನ್ನ ಹಿಂದೆ ಹಾರಿ ಬರುತಿದ್ದ ಬಗೆ ಬಗೆಯ ಬಣ್ಣಗಳುಳ್ಳ ಹೂಗಳಿಂದ, ಆಕಾಶದಲ್ಲಿ ಮಿಂಚಿನ ಪರಂಪರೆಗಳಿಂದ

ಕೂಡಿದ ಮೇಘದಂತೆ ಶೋಭಿಸುತಿದ್ದನು. ಈ ಹನುಮಂತನ ವೇಗದಿಂದುದಿರಿ ಬಿದ್ದ ಹೂಗಳಿಂದ ಆ ಲವಣಸಮುದ್ರದ ನೀರೆಲ್ಲವೂ, ಮನೋಹರಗಳಾದ ನಕ್ಷತ್ರ ಪರಂಪರೆಗಳ ಉದಯದಿಂದ ಶೋಭಿಸುವ ಗಗನಪ್ರದೇಶದಂತೆ ತೋರಿತು. ಹನು ಮಂತನು ಆಕಾಶದಲ್ಲಿ ಹಾರಿಹೋಗುವಾಗ ನೀಡಿದ ಅವನ ತೋಳುಗಳೆರಡೂ, ಪರ್ವತದ ಮೇಲೆ ತಲೆಯೆತ್ತಿ ಆಡುತ್ತಿರುವ ಐದು ಹೆಡೆಯ ಸರ್ಪಗಳಂತೆ ಕಾಣು ತಿದ್ದುವು. ಹೀಗೆ ಹನುಮಂತನು ಕೆಳಕ್ಕೂ ಮೇಲಕ್ಕೂ ತೂಗಾಡುತ್ತ ಹಾರು ವಾಗ, ಒಮ್ಮೆ ಅಲೆಗಳಿಂದ ತುಂಬಿದ ಆ ಮಹಾಸಮುದ್ರವನ್ನೇ ಹೀರಿಬಿಡು ವಂತೆಯೂ, ಮತ್ತೊಮ್ಮೆ ಆಕಾಶವನ್ನೇ ನುಂಗಿಬಿಡುವಂತೆಯೂ ತೋರುತಿದ್ದನು. ಅಂತರಿಕ್ಷಮಾರ್ಗವನ್ನು ಹಿಡಿದು ಹೋಗುತ್ತಿರುವಾಗ ಮಿಂಚಿನಂತೆ ಮಿರುಗುತಿದ್ದ ಅವನ ಕಣ್ಣುಗಳೆರಡೂ ಬೆಟ್ಟದಮೇಲೆ ಉರಿಯುವ ಕಾಡುಗಿಚ್ಚಿನ ಎರಡು ಜ್ವಾಲೆಗಳಂತೆ ತೋರುತಿದ್ದುವು. ಮತ್ತು ಪಿಂಗಳವರ್ಣದಿಂದ ಕೂಡಿ, ವಿಸ್ತಾರ ವಾಗಿ ದುಂಡಗಿರುವ ಅವನ ಕಣ್ಣುಗುಡ್ಡೆಗಳೆರಡೂ, ಆಕಾಶದಲ್ಲಿ ಉದಿಸಿ ಬಂದಿ ರುವ ಸೂರ್ಯಚಂದ್ರಬಿಂಬಗಳಂತೆ ತೋರುತಿದ್ದುವು. ಕೆಂಪಾದ ಮೂಗಿನ ಕಾಂತಿಯಿಂದ ಕೂಡಿದ ಅವನ ಮುಖವು ಸಂಜೆಗೆಂಪಿನಿಂದ ಕೂಡಿದ ಸೂರ್ಯಬಿಂಬ ದಂತೆ ಕಾಣಿಸಿತು. ಹಾರುವಾಗ ಮೇಲಕ್ಕೆತ್ತಿದ ಅವನ ಬಾಲವು, ಆಕಾಶದಲ್ಲಿ ಎತ್ತಿ ಕಟ್ಟಲ್ಪಟ್ಟ ಇಂದ್ರಧ್ವಜದಂತೆ ಶೋಭಿಸಿತು. ದೊಡ್ಡ ದೇಹವುಳ್ಳವ ನಾಗಿಯೂ, ಬಿಳುಪಾದ ಕೋರೆಗಳುಳ್ಳವನಾಗಿಯೂ ಇರುವ ಮಹಾಪ್ರಾಜ್ಞ ನಾದ ಹನುಮಂತನು ಹಾರುವಾಗ, ಅವನ ಬಾಲವು ಆಗಾಗ ಅವನ ಮೈಗೆ ಚಕ್ರಾಕಾರವಾಗಿ ಸುತ್ತಿಕೊಳ್ಳಲು, ಪರಿವೇಷದಿಂದ ಕೂಡಿದ ಸೂರ್ಯನಂತೆ ಕಾಣುತಿದ್ದನು. ಸುತ್ತಲೂ ಕೆಂಪಾದ ಬಾಲಮೂಲಪ್ರದೇಶದಿಂದ ಕೂಡಿದ ಆ ಮಹಾಕಪಿಯು, ಆಗಲೇ ಅಗೆದು ತೆಗೆದ ವಿಸ್ತಾರವಾದ ಕೆಂಪುಧಾತುವಿನ ಗನಿಯುಳ್ಳ ಬೆಟ್ಟದಂತಿದ್ದನು. ಆ ವಾನರಸಿಂಹನು ಮಹಾವೇಗದಿಂದ ಸಮುದ್ರವನ್ನು ದಾಟಿ ಹೋಗುತಿದ್ದ ಕಾಲದಲ್ಲಿ, ಅವನ ಕಂಕುಳಿನ ಸಂದಿ ನಲ್ಲಿ ನುಗ್ಗಿಬರುವ ಗಾಳಿಯು ಮೇಘದಂತೆ ಮೊಳಗುತಿತ್ತು. ಆ ಹನುಮಂತನು ಹಾರಿಬರುವಾಗ ಅವನ ಉದ್ದವಾದ ಬಾಲವು ಆಕಾಶದಲ್ಲಿ ಉತ್ತರದಿಕ್ಕಿನಿಂದ ದಕ್ಷಿಣಕ್ಕೆ ಬೀಳುವ ಉತ್ಪಾತಸೂಚಕವಾದ ಉಲ್ಕೆ (ಬಾಲಚುಕ್ಕಿ)ಯಂತೆ ತೋರು ತಿತ್ತು. ಸೂರ್ಯನಂತೆ ತೇಜಸ್ವಿಯಾಗಿಯೂ, ದೀರ್ಘದೇಹವುಳ್ಳವನಾಗಿಯೂ ಇದ್ದ ಆ ಹನುಮಂತನ ದೇಹವು, ನಡುವಿಗೆ ಹಗ್ಗವನ್ನು ಕಟ್ಟಿದಾಗ ಉದ್ದವಾಗುವ ಆನೆಯ ದೇಹದಂತೆ ಕಾಣಿಸಿತು. ಮತ್ತು ಅವನು ಹಾರುವಾಗ ಅಂತರಿಕ್ಷದಲ್ಲಿರುವ

ಅವನ ದೇಹವೂ, ಸಮುದ್ರದ ನೀರಿನಲ್ಲಿ ಬಿದ್ದ ಅವನ ಪ್ರತಿಬಿಂಬವೂ ಏಕಾಕಾರವಾಗಿ ಕಾಣುತ್ತ, ಮುಂದೆಮುಂದೆ ಸಾಗುತ್ತಿರಲು, ಸಮುದ್ರದಲ್ಲಿ ಗಾಳಿಯಿಂದ ನಡೆಯುವ ಒಂದು ದೊಡ್ಡ ಹಡಗಿನಂತೆ ತೋರುತಿತ್ತು. ಈ ಮಹಾಕಪಿಯು ಸಮುದ್ರದ ಮೇಲೆ ಯಾವಯಾವ ಕಡೆಗೆ ಹಾರಿ ಹೋಗುತ್ತಿದ್ದನೋ ಆಯಾ ಕಡೆಗಳಲ್ಲಿ ಸಮುದ್ರದ ನೀರು ಇವನ ತೊಡೆಗಳ ವೇಗದಿಂದ ಉಲ್ಲೋಲಕಲ್ಲೋಲವಾಗಿ, ತಿರುಗುವ ಸುಳಿಗಳಿಂದಲೂ, ಕಾರುವ ನೊರೆಗಳಿಂದಲೂ, ಪ್ರವಾಹದ ಮೊರೆತದಿಂದಲೂ, ಅಪಸ್ಮಾರರೋಗಿಯಂತೆ ಕಾಣಿಸುತಿತ್ತು. ಮಹಾವೇಗವುಳ್ಳ ಆ ವಾನರೋತ್ತಮನು ದೊಡ್ಡದೊಡ್ಡ ಬಂಡೆಗಳಂತೆ ಮೇಲೇಳುವ ಅಲೆಗಳೆಲ್ಲವನ್ನೂ ತನ್ನ ಎದೆಯ ಗಾಳಿಯ ವೇಗದಿಂದಲೇ ಅಡಗಿಸುತ್ತ ಹಾರಿ ಹೋದನು. ಇವನ ವೇಗದಿಂದುಂಟಾದ ಪ್ರಬಲವಾದ ಗಾಳಿಯೂ, ಮೇಘದ ಗಾಳಿಯೂ ಒಂದಾಗಿ ಕಲೆತು, ಭಯಂಕರಧ್ವನಿಯೊಡನೆ ಸಮುದ್ರವನ್ನೇ ನಡುಗಿಸಿ ಬಿಡುವಂತಿದ್ದುವು. ಕಪಿಶ್ರೇಷ್ಠನಾದ ಆ ಹನುಮಂತನು ಹಾರುವಾಗ, ಲವಣ ಸಮುದ್ರದಿಂದ ಮೇಲೆದ್ದು ಬರುವ ದೊಡ್ಡದೊಡ್ಡ ಅಲೆಗಳನ್ನೂ ತನ್ನ ವೇಗದಿಂದ ಆಕರ್ಷಿಸುತ್ತ, ಭೂವ್ಯಾಕಾಶಗಳೆರಡನ್ನೂ ಕಿತ್ತಿಸೆಯುವಂತೆ ತೋರುತಿದ್ದನು. ಆ ಮಹಾಸಮುದ್ರದಲ್ಲಿ ಮೇರುಮಂದರಪರ್ವತಗಳಿಗೆ ಸಮಾನವಾಗಿ ಮೇಲೆದ್ದು ಬರುವ ದೊಡ್ಡ ಅಲೆಗಳೆಲ್ಲವನ್ನೂ ಎಣಿಸಿಕೊಂಡು ಹೋಗುವಂತೆ ಅವೆಲ್ಲವನ್ನೂ ಕ್ರಮವಾಗಿ ದಾಟಿ ವೇಗದಿಂದ ಹಾರಿ ಬರುತಿದ್ದನು. ಅವನ ವೇಗದಿಂದ ಮೇಲೆ ಹೊರಟ ಸಮುದ್ರ ಜಲಪ್ರವಾಹವು, ಆಕಾಶದಲ್ಲಿ ಮೇಘಗಳೊಡನೆ ಕಲೆತು, ವಿಸ್ತಾರವಾದ ಬೇರೊಂದು ಶರನ್ಮೇಘದಂತೆ ತೋರುತಿತ್ತು. ಹೀಗೆ ಎಡೆಬಿಡದೆ ಸಮುದ್ರಜಲವು ಮೇಲೆ ಹಾರುತಿದ್ದುದರಿಂದ ಆ ಸಮುದ್ರದೊಳಗಿನ ಮೀನು, ಮೊಸಳೆ, ತಿಮಿ, ಮೊದಲಾದ ಪ್ರಾಣಿಗಳೆಲ್ಲವೂ, ಬಟ್ಟೆಯನ್ನು ಬಿಚ್ಚಿಹಾಕಿದ ಮನುಷ್ಯರ ಅವಯವಗಳಂತೆ ಸ್ಪಷ್ಟವಾಗಿ ಗೋಚರಿಸುತಿದ್ದುವು. ಆಕಾಶದಲ್ಲಿ ಹಾರುತ್ತಿರುವ ಈ ಕಪಿಶ್ರೇಷ್ಠನನ್ನು ಕಂಡು, ಆ ಸಮುದ್ರದೊಳಗಿನ ಮಹಾಸರ್ಪಗಳೆಲ್ಲವೂ ಇತನೇ ಗರುಡನೆಂಬ ಭ್ರಾಂತಿಯಿಂದ ಭಯಪಟ್ಟು ತತ್ತಳಿಸುತಿದ್ದುವು. ಹತ್ತುಯೋಜನಗಳ ಅಗಲಕ್ಕೂ, ಮೂವತ್ತುಯೋಜನಗಳ ಉದ್ದಕ್ಕೂ ವ್ಯಾಪಿಸಿದ, ಆ ವಾನರಶ್ರೇಷ್ಠನ [1] ಮೈನೆರಳು, ಸಮುದ್ರಜಲಕ್ಕೂ ಒಂದಪೂರ್ವ ಶೋಭೆಯನ್ನುಂಟು

---

1. ಇಲ್ಲಿ ಛಾಯೆಯೆಂದರೆ ನೆರಳೇ ಹೊರತು ಪ್ರತಿಬಿಂಬವಲ್ಲ. ಬಿಂಬವು ಪ್ರತಿಬಿಂಬ ಪ್ರಮಾಣಕ್ಕೆ ಸರಿಯಾಗಿರಬೇಕಾದುದರಿಂದ ಬಿಂಬವಾದ ಆಂಜನೇಯನ ಶರೀರವೂ ಅದರಂತೆಯೇ ಮೂವತ್ತು ಯೋಜನಗಳ ವಿಸ್ತಾರವುಳ್ಳುದಾಗಿರಬೇಕು. ಹಾಗಿದ್ದರೆ ಮೂರೇ

ಮಾಡುತಿತ್ತು. ಹೀಗೆ ಸಮುದ್ರದಲ್ಲಿ ವಿಸ್ತಾರವಾಗಿ ವ್ಯಾಪಿಸಿ ಅವನನ್ನು ಹಿಂಬಾಲಿಸುತಿದ್ದ ಅವನ ಛಾಯೆಯು ಬಿಳೀಮೇಘಗಳ ಸಮೂಹದಂತೆ ತೋರುತಿತ್ತು. ಮಹಾತೇಜಸ್ವಿಯಾಗಿಯೂ, ದೊಡ್ಡದೇಹವುಳ್ಳವನಾಗಿಯೂ ಇದ್ದ ಆ ಕಪಿಶ್ರೇಷ್ಠನು, ನಿರಾಶ್ರಯವಾದ ಅಂತರಿಕ್ಷದಲ್ಲಿ ರೆಕ್ಕೆಗಳುಳ್ಳ ಒಂದು ದೊಡ್ಡ ಬೆಟ್ಟದಂತೆ ಕಾಣುತಿದ್ದನು. . ಈ ಕಪಿಶ್ರೇಷ್ಠನು ಅಂತರಿಕ್ಷದಲ್ಲಿ ಯಾವ ದಾರಿಯನ್ನು ಹಿಡಿದು ಹೋಗುತ್ತಿದ್ದನೋ, ಆ ದಾರಿಯುದ್ದಕ್ಕೂ ಸಮುದ್ರದ ನೀರು ಇವನ ವೇಗದಿಂದ ತಗ್ಗಿ, ಉದ್ದಕ್ಕೆ ಕಾಲುವೆಯನ್ನು ತೋಡಿದಂತೆ ಕಾಣುತಿತ್ತು. ಪಕ್ಷಿಗಳಿಗೆ ದಾರಿಯಾದ ಆಕಾಶದಲ್ಲಿ ಈತನೂ ಪಕ್ಷಿರಾಜನಂತೆ ಹಾರುತ್ತ, ವಾಯುವಿನಂತೆ ತನ್ನ ಹಿಂದೆ ಮೇಘಗಳನ್ನೆಳೆದುಕೊಂಡು ಹೋಗುತ್ತಿರಲು, ಬಿಳುಪು, ಕೆಂಪು, ಕಪ್ಪು, ಹಳದಿ ಮುಂತಾದ ವಿಚಿತ್ರವರ್ಣಗಳಿಂದ ಕೂಡಿ ಇವನನ್ನು ಬೆಂಬಿಡಿದು ಬರುತಿದ್ದ ಆ ಮೇಘಗಳು, ಬಹಳ ಅಂದವಾಗಿ ತೋರುತಿದ್ದುವು. ಇವನು, ಮೇಲೆ ಹಾರುವಾಗ ಒಮ್ಮೊಮ್ಮೆ ಮೇಘಗಳ ನಡುವೆ ನುಗ್ಗಿ ಬರುತಿದ್ದುದರಿಂದ ಆಕಾಶದಲ್ಲಿ ಆಗಾಗ ಮೇಘಗಳ ಮರೆಯಲ್ಲಡಗಿ ಪುನಃಪುನಃ ಹೊರಕ್ಕೆ ಪ್ರಕಾಶದಿಂದ ಕಾಣಿಸುವ ಚಂದ್ರನಂತೆ ತೋರುತಿದ್ದನು. ಹೀಗೆ ವೇಗದಿಂದ ಅಂತರಿಕ್ಷದಲ್ಲಿ ಹಾರಿ ಬರುವ ಕಪಿವೀರನನ್ನು ಕಂಡು, ದೇವಗಂಧರ್ವದಾನವರೆಲ್ಲರೂ ಅವನ ಮೇಲೆ ಪುಷ್ಪವೃಷ್ಟಿಯನ್ನು ಕರೆದರು. ರಾಮನ ಕಾರ್ಯಸಿದ್ಧಿಗಾಗಿ ಹಾರಿ ಹೋಗುತ್ತಿರುವ ಆ ವಾನರೋತ್ತಮನನ್ನು ಸೂರ್ಯನೂ ತನ್ನ ಕಿರಣಗಳಿಂದ ದಹಿಸಲಿಲ್ಲ. ವಾಯುವೂ ಸುಖಸ್ಪರ್ಶವಾಗುವಂತೆ ಬೀಸುತಿದ್ದನು. ಋಷಿಗಳೆಲ್ಲರೂ ಸ್ತೋತ್ರಮಾಡುತಿದ್ದರು. ಮಹಾಪರಾಕ್ರಮವುಳ್ಳ ಈತನು ಆಕಾಶಮಾರ್ಗವಾಗಿ ಹೋಗುತ್ತಿರುವುದನ್ನು ಕಂಡು, ದೇವತೆಗಳೂ, ಗಂಧರ್ವರೂ ಇವನನ್ನು ಕೊಂಡಾಡಿ ಕೀರ್ತಿಸುತಿದ್ದರು. ಈ ಹನುಮಂತನು ಸ್ವಲ್ಪವಾದರೂ ಬಳಲಿಕೆಯನ್ನು ಕಾಣಿಸದೆ ಅಷ್ಟು ಸಾಹಸಕಾರ್ಯವನ್ನು ಮಾಡುತ್ತಿರುವುದನ್ನು ಕಂಡು, ನಾಗರೂ, ಯಕ್ಷರೂ, ರಾಕ್ಷಸರೂ, ದೇವತೆಗಳೂ, ಪನ್ನಗರೂ ಅವನನ್ನು ಸ್ತುತಿಸುತಿದ್ದರು. ಹೀಗೆ ಕಪಿಶ್ರೇಷ್ಠನಾದ ಹನುಮಂತನು ರಾಮಕಾರ್ಯಾರ್ಥವಾಗಿ ಮೇಲೆ ಹಾರುತ್ತಿರುವುದನ್ನು ಕಂಡು ಇಕ್ಷ್ವಾಕುವಂಶಕ್ಕೆ

---

ಅಡಿಯಿಂದ ಆಂಜನೇಯನು ಸಮುದ್ರವನ್ನು ದಾಟಿಬಿಡುತಿದ್ದನು. ಇದಲ್ಲದೆ ಈ ನಡುವೆ ಸಂಭವಿಸಿದ ಸುರಸಾ ಸಂವಾದಾದಿಗಳಿಗೂ ಸರಿಹೋಗದು ಆದುದರಿಂದ ಇಲ್ಲಿ ನೆರಳೆಂದೇ ಗ್ರಹಿಸಬೇಕು. ಆಂಜನೇಯನು ಸಮುದ್ರವನ್ನು ದಾಟಿದುದು ಬೆಳಗಿನ ಜಾವವಾದುದರಿಂದ ಆ ವೇಳೆಯಲ್ಲಿ ನೆಳಲು ಬಿಂಬಕ್ಕಿಂತ ಉದ್ದವಾಗುವುದು ಅನುಭವಸಿದ್ಧವು.

ಮೇಲ್ಮೆಯನ್ನು ಕೋರತಕ್ಕವನಾದ ಸಮುದ್ರರಾಜನಿಗೂ ಒಂದಾಲೋಚನೆ ಹುಟ್ಟಿತು. "ನಾನೂ ವಾನರೇಂದ್ರನಾದ ಈ ಹನುಮಂತನಿಗೆ ಈ ಕಾಲದಲ್ಲಿ ತಕ್ಕ ಸಹಾಯವನ್ನು ಮಾಡದಿದ್ದರೆ, ಈ ಪ್ರಪಂಚದಲ್ಲಿ ಬಾಯುಳ್ಳವರೊಬ್ಬೊಬ್ಬರೂ ನನ್ನನ್ನು ಬಯ್ಯದೆ ಬಿಡಲಾರರು. ಮುಖ್ಯವಾಗಿ ಇಕ್ಷ್ವಾಕುಕುಲಕ್ಕೆ ಹಿರಿಯನಾದ ಸಗರನಿಂದಲೇ ನಾನು ವೃದ್ಧಿಗೆ ಬಂದವನು. ಆ ಇಕ್ಷ್ವಾಕುವಂಶದಲ್ಲಿ ಹುಟ್ಟಿದ ರಾಮನಿಗೆ ಈ ಹನುಮಂತನು ಪರಮಮಿತ್ರನು. ಆ ರಾಮನ ಕಾರ್ಯಾರ್ಥವಾಗಿಯೇ ಇವನು ಇಷ್ಟು ಕಾರ್ಯವನ್ನೂ ಮಾಡುತ್ತಿರುವನು. ಇವನ ಕಷ್ಟವನ್ನು ನೋಡಿಯೂ ನಾನು ಸುಮ್ಮನಿರಬಹುದೆ? ಇವನು ದಾರಿಯಲ್ಲಿ ತನ್ನ ಬಳಲಿಕೆಯನ್ನಾರಿಸಿಕೊಂಡು ಹೋಗುವಂತೆ ಒಂದುಪಾಯವನ್ನು ಮಾಡಬೇಕು. ಈತನು ನನ್ನಲ್ಲಿ ವಿಶ್ರಮಿಸಿಕೊಂಡಮೇಲೆ ಮುಂದಿನ ದಾರಿಯನ್ನು ಸುಖದಿಂದ ದಾಟಬಹುದು" ಎಂದು ಸಮುದ್ರರಾಜನು ಸಾಧುಬುದ್ಧಿಯಿಂದ ಯೋಚಿಸಿ, ತನ್ನಲ್ಲಿ ಮುಳುಗಿದ್ದ ಸುವರ್ಣನಾಭವೆಂದು ಹೆಸರುಗೊಂಡ ಮೈನಾಕಪರ್ವತವನ್ನು ಕುರಿತು, "ಎಲೈ ಪರ್ವತಶ್ರೇಷ್ಠನೆ! ಪಾತಾಳದಲ್ಲಿ ವಾಸಮಾಡುವ ರಾಕ್ಷಸರು ಮೇಲೆದ್ದು ಬಾರದಂತೆ, [1] ಅವರನ್ನು ತಡೆದಿಡುವುದಕ್ಕಾಗಿಯೇ ಇಂದ್ರನಿಂದ ನೀನು ಈ ಸಮುದ್ರದಲ್ಲಿಡಲ್ಪಟ್ಟಿರುವೆ. ಆಗಾಗ ಮೇಲೆದ್ದು ಬರುತ್ತಿದ್ದ ಮಹಾವೀರ್ಯವುಳ್ಳ ರಾಕ್ಷಸರಿಗೆ ಆಶ್ರಯವಾದ ದೊಡ್ಡ ಪಾತಾಳಲೋಕದ ಬಾಗಿಲನ್ನು ಅಗಳಿಯಂತೆ ತಡೆದು ನಿಂತಿರುವೆಯಲ್ಲದೆ, ನಿನಗೆ ಅಡ್ಡಲಾಗಿಯಾಗಲಿ, ಮೇಲಕ್ಕಾಗಲಿ, ಕೆಳಗಡೆಗಾಗಲಿ, ಬೆಳೆದುಕೊಂಡು ಹೋಗುವ ಅದ್ಭುತಶಕ್ತಿಯುಂಟು. ಆದುದರಿಂದ ಇಷ್ಟು ಮಹಾಮಹಿಮೆಯುಳ್ಳ ನಿನ್ನನ್ನೇ ಈಗ ನಾನು ಪ್ರೋತ್ಸಾಹಿಸಬೇಕಾಗಿರುವುದು. ಏಳು! ಅದೋ! ಕಪಿಶ್ರೇಷ್ಠನಾದ ಮತ್ತು ಮಹಾವೀರ್ಯವುಳ್ಳ ಹನುಮಂತನು ರಾಮಕಾರ್ಯಾರ್ಥವಾಗಿ ಭಯಂಕರವಾದ ಕಾರ್ಯವನ್ನಾರಂಭಿಸಿ, ನಮ್ಮ ಮೇಲೆ ಆಕಾಶದಲ್ಲಿ ನೆಗೆಯುತ್ತಿರುವುದನ್ನು ನೋಡು. ಇಕ್ಷ್ವಾಕುವಂಶದವರಿಂದ ವೃದ್ಧಿಯನ್ನು ಹೊಂದಿ, ಅವರನ್ನೇ ನಂಬಿರುವ ನಾನು ಈಗ ಅವನಿಗೆ ತಕ್ಕ ಸಹಾಯವನ್ನು ಮಾಡಲೇಬೇಕು. ಇಕ್ಷ್ವಾಕುವಂಶದವರು ನನಗೇ ಬಹಳಪೂಜ್ಯರಾಗಿರುವಾಗ, ನನ್ನನ್ನಾಶ್ರಯಿಸಿರುವ ನಿನಗೆ ಅವರು ಇನ್ನೂ ವಿಶೇಷಪೂಜ್ಯರಲ್ಲವೆ? ಈಗ ನೀನು ನನಗೆ ಸಹಾಯವನ್ನು ಮಾಡಿಯೇ ತೀರಬೇಕು. ಕಾರ್ಯವು ಮೀರಿಹೋಗಬಾರದು. ಆಯಾ

1. ಇಂದ್ರನು ಪರ್ವತಭೇದನಕಾಲದಲ್ಲಿ ಮೈನಾಕಕ್ಕೆ ಈ ಆಜ್ಞೆಯನ್ನು ಮಾಡಿ ಮನ್ನಿಸಿ ಬಿಟ್ಟಿದ್ದಾಗಿ ಊಹ್ಯವು.

ಕಾಲದಲ್ಲಿ ನಡೆಸಬೇಕಾದ ಕಾರ್ಯವನ್ನು ಮಾಡದಿದ್ದರೆ ಸತ್ಪುರುಷರಿಗೆ ಕೋಪವನ್ನುಂಟುಮಾಡಿದಂತಾಗುವುದು. ಈಗಲೇ ನೀನು ನೀರಿನಿಂದ ಮೇಲಕ್ಕೇಳು. ಈ ಕಪಿಯು ನಿನ್ನ ಮೇಲೆ ಸ್ವಲ್ಪಕಾಲದವರೆಗೆ ಕುಳ್ಳಿರಲಿ! ಈ ವಾನರೋತ್ತಮನು ನಮಗತಿಥಿಯಾಗಿರುವನಲ್ಲದೆ ಪೂಜ್ಯನಾಗಿಯೂ ಇರುವನು. ಎಲೈ ಪರ್ವತವೆ! ನೀನು ಹಾರುವುದರಲ್ಲಿ ಮೇಲೆನಿಸಿಕೊಂಡವನು! ನಿನ್ನಲ್ಲಿರುವಂತೆ ಸುವರ್ಣದ ಸಾರವು ಬೇರೆಲ್ಲಿರುವುದು! ದೇವಗಂಧರ್ವರೆಲ್ಲರೂ ನಿನ್ನನ್ನು ಸೇವಿಸುವರು. ಈ ಹನುಮಂತನೂ ನಿನ್ನಲ್ಲಿ ತನ್ನ ಬಳಲಿಕೆಯನ್ನು ತೀರಿಸಿಕೊಂಡು ಆ ಮೇಲೆ ಉಳಿದ ಭಾಗವನ್ನು ದಾಟಿ ಹೋಗಲಿ! ಎಲೈ ಮೈನಾಕವೆ! ಆ ಶ್ರೀರಾಮನ ದಯಾಸ್ವಭಾವವನ್ನೂ, ಸೀತೆಗುಂಟಾಗಿರುವ ಕಷ್ಟವನ್ನೂ, ಅದಕ್ಕಾಗಿ ಈಗ ಈ ಹನುಮಂತನು ವಹಿಸಿರುವ ಶ್ರಮವನ್ನೂ ಚೆನ್ನಾಗಿ ಪರ್ಯಾಲೋಚಿಸಿ, ನೀನು ಈಗಲೇ ಮೇಲೆದ್ದುಹೋಗಿಬಾ" ಎಂದನು. ಸಮುದ್ರವು ಹೇಳಿದ ಈ ಮಾತನ್ನು ಕೇಳಿದ ಕ್ಷಣವೇ ಮೈನಾಕವು. ತನ್ನಲ್ಲಿರುವ ದೊಡ್ಡ ದೊಡ್ಡ ಗಿಡಬಳ್ಳಿಗಳೊಡನೆ ನೀರಿನಿಂದ ಮೇಲೆ ಹಾರಿತು. ಜ್ವಲಿಸುತ್ತಿರುವ ಕಿರಣಗಳೊಡನೆ ಮೇಘಮಂಡಲವನ್ನು ಭೇದಿಸಿಕೊಂಡು ಹೊರಕ್ಕೆಬರುವ ಸೂರ್ಯನಂತೆ ಒಂದು ಮುಹೂರ್ತದೊಳಗಾಗಿಯೇ ಸಮುದ್ರಜಲವನ್ನು ಭೇದಿಸಿಕೊಂಡು ಆ ಪರ್ವತವು ಸಮುದ್ರರಾಜನ ಅಜ್ಞೆಯಿಂದ ಮೇಲೆದ್ದು ತನ್ನ ಶಿಖರಗಳನ್ನು ತೋರಿಸಿತು, ಸುವರ್ಣಮಯಗಳಾಗಿಯೂ, ಕಿನ್ನರರಿಂದಲೂ, ನಾಗರಿಂದಲೂ ತುಂಬಿದುದಾಗಿಯೂ, ಉದಿಸಿದ ಸೂರ್ಯಬಿಂಬಕ್ಕೆ ಸಮಾನಗಳಾಗಿಯೂ ತೋರುತ್ತಿರುವ ಆ ಶಿಖರಗಳು ಆಕಾಶವನ್ನು ಚುಚ್ಚಿಕೊಂಡು ಹೋಗುವಂತೆ ಮೇಲೆ ಹೊರಡಲು, ಸ್ವರ್ಣಮಯಗಳಾದ ಈ ಮೈನಾಕಶಿಖರಗಳ ಕಾಂತಿಯಿಂದ ಕತ್ತಿಯಂತೆ ಕಪ್ಪಾದ ಆಕಾಶವೆಲ್ಲವೂ ಹೊಂಬಣ್ಣವುಳ್ಳುದಾಯಿತು. ಹೀಗೆ ಸ್ವಾಭಾವಿಕವಾದ ಕಾಂತಿವಿಶೇಷದಿಂದ ಕೂಡಿದ ಸುವರ್ಣಶಿಖರಗಳಿಂದ ಆ ಮೈನಾಕವು ಏಕಕಾಲದಲ್ಲಿ ನೂರಾರು ಸೂರ್ಯಮಂಡಲಗಳು ಉದಯಿಸಿದಂತೆ ಕಾಣಿಸಿತು. ಹೀಗೆ ಏಕಾಕಿಯಾಗಿ ಮೇಲಕ್ಕೆದ್ದು ತನ್ನ ಮುಂದೆ ಲವಣಸಮುದ್ರದ ಮಧ್ಯದಲ್ಲಿ ನಿಂತಿದ್ದ ಪರ್ವತವನ್ನು ನೋಡಿ ಹನುಮಂತನು, ತನ್ನ ಗಮನಕ್ಕೆ ಏನೋ ವಿಘ್ನವುಂಟಾಯಿತೆಂದು ಎಣಿಸಿದನು. ಮಹಾವೇಗವುಳ್ಳ ಆ ಹನುಮಂತನು ಅತ್ಯುನ್ನತವಾಗಿ ತನ್ನ ಮುಂದೆ ನಿಂತಿದ್ದ ಆ ಬೆಟ್ಟವನ್ನು ನೋಡಿ, ಗಾಳಿಯು ಮೇಘವನ್ನು ಅಪ್ಪಳಿಸುವಂತೆ ತನ್ನ ಎದೆಯಿಂದ ಗುದ್ದಿ ಕೆಡಹಿದನು. ಮೈನಾಕನು ಆ ಪ್ರಹಾರವನ್ನು ತಡೆಯಲಾರದೆ ಕೆಳಗೆ ಬೀಳುತಿದ್ದರೂ, ಹನುಮಂತನ ವೇಗಾತಿಶಯ

ವನ್ನು ನೋಡಿ ಪರಮಸಂತೋಷವನ್ನು ಹೊಂದಿ ಆನಂದದಿಂದುಕ್ಕುತಿದ್ದನು. ಹನುಮಂತನ ವೀರ್ಯಕ್ಕೆ ಸಂತೋಷಗೊಂಡು ಪ್ರಸನ್ನಮುಖನಾಗಿ ತಿರುಗಿ ಆಕಾಶಕ್ಕೆ ಹಾರಿ ಮನುಷ್ಯರೂಪದಿಂದ ತನ್ನ ಶಿಖರದಮೇಲೆ ಕಾಣಿಸಿಕೊಂಡು, ಆಕಾಶದಲ್ಲಿರುವ ಆಂಜನೇಯನನ್ನು ಕುರಿತು, "ಎಲೆ ವಾನರೋತ್ತಮನೆ! ನೀನು ಈಗ ಬೇರೊಬ್ಬರಿಗೂ ಸಾಧ್ಯವಲ್ಲದ ಈ ಕಾರ್ಯವನ್ನು ನಡೆಸುತ್ತಿರುವೆ! ನನ್ನ ಶಿಖರದಲ್ಲಿ ಕ್ಷಣಕಾಲದವರೆಗೆ ನಿಂತು, ನಿನ್ನ ಬಳಲಿಕೆಯನ್ನಾರಿಸಿಕೊಂಡಾದರೂ ಸುಖವಾಗಿ ಮುಂದೆ ಹೋಗಬಾರದೆ? ಈ ಸಮುದ್ರನು ರಘುವಂಶದಲ್ಲಿ ಹುಟ್ಟಿದ ವರಿಂದಲೇ ವೃದ್ಧಿಗೆ ಬಂದವನು. ಆ ರಘುವಂಶೋತ್ತಮನಾದ ರಾಮನ ಹಿತಕ್ಕಾಗಿಯೇ ನೀನು ಹೊರಟುಬಂದಿರುವುದರಿಂದ ಈತನು ನಿನ್ನನ್ನು ಸತ್ಕರಿಸಬೇಕೆಂದಿರುವನು. ಉಪಕಾರವನ್ನು ಮಾಡಿದವರಿಗೆ ಪ್ರತ್ಯುಪಕಾರವನ್ನು ಮಾಡಬೇಕಾದುದೇ ನ್ಯಾಯವು. ಇದು ಪುರಾತನಧರ್ಮವು. ಪೂರ್ವದಲ್ಲಿ ಸಗರನು ತನಗೆ ಮಾಡಿದ ಉಪಕಾರವನ್ನು ಸ್ಮರಿಸಿಕೊಂಡು, ಈ ಸಮುದ್ರನು ಆ ವಂಶದಲ್ಲಿ ಹುಟ್ಟಿದ ರಾಮನಿಗೆ ದೂತನಾಗಿ ಬಂದ ನಿನಗೆ ಆತಿಥ್ಯವೆಂಬ ಪ್ರತ್ಯುಪಕಾರವನ್ನು ಮಾಡಬೇಕೆಂದು ಉದ್ದೇಶಿಸಿರುವನು. ಆದುದರಿಂದ ನಾನು ಮಾಡುವ ಆತಿಥ್ಯವನ್ನು ಸ್ವೀಕರಿಸಿದರೆ, ನೀನು ಸಮುದ್ರನನ್ನು ಸನ್ಮಾನಿಸಿದಂತಾಗುವುದು. ನಿನಗಾಗಿಯೇ ಸಮುದ್ರನು ನನ್ನನ್ನು ಎಷ್ಟೋ ವಿಧದಿಂದ ಪ್ರೋತ್ಸಾಹಿಸುತ್ತ, ನನ್ನನ್ನು ನೋಡಿ "ಈ ಕಪಿಶ್ರೇಷ್ಠನು ನೂರು ಯೋಜನಗಳನ್ನೂ ಒಂದೇ ನೆಗೆತಕ್ಕೆ ದಾಟಬೇಕೆಂದು ಹಾರಿರುವನು. ಈ ನಡುವೆ ನಿನ್ನ ತಪ್ಪಲುಗಳಲ್ಲಿ ವಿಶ್ರಮಿಸಿಕೊಂಡು ಆಮೇಲೆ ಉಳಿದ ಭಾಗವನ್ನು ದಾಟಲಿ" ಎಂದು ಹೇಳಿ ಕಳುಹಿಸಿರುವನು. ಆದುದರಿಂದ ಎಲೈ ವಾನರೋತ್ತಮನೆ! ನನ್ನ ಮೇಲೆ ಈಗ ಸ್ವಲ್ಪಕಾಲದವರೆಗೆ ಕುಳಿತಿದ್ದು ಶ್ರಮವನ್ನಾರಿಸಿಕೊಂಡು ಮುಂದೆ ಹೋಗು. ಇದೋ! ಇಲ್ಲಿ ರುಚಿರುಚಿಯಾದ, ಗಡ್ಡೆಗೆಣಸುಗಳು ಬೇಕಾದಷ್ಟು ಬೆಳೆದಿರುವುವು. ಸುಗಂಧಪುಷ್ಪಗಳು ತುಂಬಿರುವುವು. ಇವೆಲ್ಲವನ್ನೂ ಅನುಭವಿಸಿ ಮುಂದೆ ಹೋಗು. ಎಲೈ ಕಪೀಂದ್ರನೆ! ನಿನ್ನೊಡನೆ ನಮಗುಂಟಾಗಿರುವ ಸಂಬಂಧವು ಲೋಕಪ್ರಸಿದ್ಧವಾದುದು. ಇದರಮೇಲೆ ನೀನು ಅತಿಥಿಯು. ನಾವು ಆತಿಥ್ಯವನ್ನು ಕೊಡುವವರಾಗಿರುವೆವು. ಈ ಘಟನೆಯನ್ನಾದರೂ ನೀನು ಮನಸ್ಸಿಗೆ ತಂದುಕೊಂಡು ನಮ್ಮ ಪೂಜೆಯನ್ನು ಕೈಕೊಳ್ಳಬೇಕು. ಈ ಸಂಬಂಧವನ್ನು ಹೊಸದಾಗಿ ನಾವಿಬ್ಬರು ಮಾತ್ರ ಕೊಂಡಾಡುವವರಲ್ಲ. ಮಹಾತ್ಮರಾದ ಸಜ್ಜನರೆಲ್ಲರೂ ಆತ್ಮಾದರದಿಂದ ಇದನ್ನು ಪರಿಗ್ರಹಿಸಿರು

ವರು. ಆದರೆ, ಎಲೈ ವಾನರೋತ್ತಮನೆ ! ನೀನು ಇಲ್ಲಿ ತಂಗಿ ಹೋದಮಾತ್ರಕ್ಕೆ ನಿನ್ನ ಶಕ್ತಿಗೆ ನ್ಯೂನತೆಯೆಂದೆಣಿಸಬೇಡ ! ವೇಗದಲ್ಲಿಯಾಗಲಿ, ಲಂಘನಶಕ್ತಿಯಲ್ಲಿಯಾಗಲಿ ನೀನು ಮೇಲೆನಿಸಿರುವುದರಲ್ಲಿ ಸಂದೇಹವಿಲ್ಲ. ಧರ್ಮವನ್ನು ತಿಳಿದವನಿಗಾಗಲಿ, ಅದನ್ನು ತಿಳಿಯಬೇಕೆಂಬ ಅಕ್ಕರೆಯುಳ್ಳವನಿಗಾಗಲಿ ಅತಿಥಿಯು ಕೇವಲ ಪ್ರಾಕೃತನಾಗಿದ್ದರೂ ಪೂಜಾರ್ಹನೆನಿಸುವನು. ಹಾಗಿರುವಾಗ ನಿನ್ನಂತಹ ಮಹಾತ್ಮನು ಪೂಜೆಗೆ ಯೋಗ್ಯನೆಂಬುದನ್ನು ಹೇಳಬೇಕಾದುದೇನು ? ಎಲೈ ಕಪಿಕುಂಜರನೆ ! ನೀನಾದರೋ ದೇವಶ್ರೇಷ್ಠನಾಗಿ ಮಹಾತ್ಮನೆನಿಸಿಕೊಂಡ ವಾಯುದೇವನಿಗೆ ಪುತ್ರನು. ವೇಗದಲ್ಲಿಯೂ ಅತನಿಗೆ ಸಮಾನನು. ನಾವು ನಿನ್ನನ್ನು ಸತ್ಕರಿಸಿದರೆ ಆ ವಾಯುದೇವನನ್ನೇ ಸತ್ಕರಿಸಿದಂತಾಗುವುದು. ಆದುದರಿಂದ ನೀನು ಅವಶ್ಯವಾಗಿ ನಮಗೆ ಪೂಜ್ಯನು. ವಾಯುವನ್ನು ನಾವು ಪೂಜಿಸಬೇಕಾದುದಕ್ಕೆ ಕಾರಣವನ್ನು ಹೇಳುವೆನು ಕೇಳು. ಮೊದಲು ಕೃತಯುಗದಲ್ಲಿ ಪರ್ವತಗಳೆಲ್ಲವೂ ರೆಕ್ಕೆಯುಳ್ಳವುಗಳಾಗಿದ್ದುವು. ಅವು ಆ ರೆಕ್ಕೆಗಳ ಬಲದಿಂದ ಗರುಡನಿಗೂ ವಾಯುವಿಗೂ ಸಮವಾದ ವೇಗವುಳ್ಳವುಗಳಾಗಿ ನಾನಾದಿಕ್ಕುಗಳಿಗೂ ಹಾರುತಿದ್ದುವು. ಹೀಗೆ ಬೆಟ್ಟಗಳು ಹಾರುತ್ತಿರುವುದನ್ನು ಕಂಡು, ದೇವತೆಗಳೂ, ಋಷಿಗಳೂ, ಸಮಸ್ತಭೂತಗಳೂ "ಅವು ತಮ್ಮ ಮೇಲೆ ಎಲ್ಲಿ ಬೀಳುವುವೋ" ಎಂದು ಭಯಗೊಂಡಿರಲು, ಆಗ ಶತಕ್ರತುವಾದ ಇಂದ್ರನು ಕೋಪಗೊಂಡು, ತನ್ನ ವಜ್ರಾಯುಧದಿಂದ ಪರ್ವತಗಳ ರೆಕ್ಕೆಯನ್ನು ಕಂಡಕಂಡಕಡೆಯಲ್ಲಿ ಕಡಿಯುತ್ತ ಬಂದನು. ಹಾಗೆಯೇ ದೇವೇಂದ್ರನು ತನ್ನ ವಜ್ರಾಯುಧವನ್ನೆತ್ತಿಕೊಂಡು ನನ್ನನ್ನೂ ಬೆನ್ನಟ್ಟಿ ಬಂದನು. ಆಗ ಮಹಾತ್ಮನಾದ ನಿನ್ನ ತಂದೆಯು ಅತಿವೇಗದಿಂದ ನನ್ನನ್ನು ತೂರಿಸಿಕೊಂಡು ಬಂದು ಈ ಲವಣಸಮುದ್ರದಲ್ಲಿ ಹಾಕಿಬಿಟ್ಟನು. ಎಲೈ ವಾನರೋತ್ತಮನೆ ! ನಿನ್ನ ತಂದೆಯೇ ನನ್ನ ರೆಕ್ಕೆಗಳನ್ನೂ ಉಳಿಸಿ ನನ್ನನ್ನು ಕಾಪಾಡಿದನು. ಆದುದರಿಂದ ಆ ವಾಯುದೇವನು ನನಗೆ ಪರಮಪೂಜ್ಯನು. ಅದಕ್ಕಾಗಿಯೇ ನಿನ್ನನ್ನೂ ನಾನು ಸತ್ಕರಿಸಬೇಕಾಗಿರುವುದು. ಈಗ ನಿನ್ನೊಡನೆ ನನಗುಂಟಾದ ಸಂಬಂಧವು ನನ್ನ ಭಾಗ್ಯವೆಂದೇ ಭಾವಿಸುವೆನು. ಆದುದರಿಂದ ಎಲೆ ಮಹಾಕಪೀ ! ಈ ಸಂದರ್ಭದಲ್ಲಿ ನೀನು ಪ್ರೀತಿಯಿಟ್ಟು, ನನ್ನ ಸತ್ಕಾರವನ್ನು ಸ್ವೀಕರಿಸಿ ಈ ಸಮುದ್ರರಾಜನಿಗೂ, ನನಗೂ ಮನಸ್ಸಂತೋಷವನ್ನುಂಟುಮಾಡಬೇಕು. ನಿನ್ನ ಬಳಲಿಕೆಯನ್ನೂ ತೀರಿಸಿಕೊಂಡು ನಮ್ಮ ಪೂಜೆಯನ್ನೂ ಸ್ವೀಕರಿಸು ! ನಮ್ಮ ಪ್ರೀತಿಪೂರ್ವಕವಾದ ಈ ಸತ್ಕಾರವನ್ನು ನೀನು ಅವಶ್ಯವಾಗಿ ಮನ್ನಿಸಬೇಕು. ನಿನ್ನ ದರ್ಶನವೇ ನನಗೆ ಅತ್ಯಾನಂದವನ್ನುಂಟುಮಾಡಿರುವುದು" ಎಂದನು. ಇದನ್ನು

ಕೇಳಿ ಆ ವಾನರಶ್ರೇಷ್ಠನು ಆ ಪರ್ವತೋತ್ತಮನನ್ನು ಕುರಿತು, "ಎಲೈ ಮೈನಾಕನೆ! ಇಷ್ಟರಿಂದಲೇ ನಾನು ಸಂತೋಷಪಟ್ಟೆನು. ನಿನ್ನ ಆತಿಥ್ಯವೂ ನನಗೆ ಬಂದಂತಾಯಿತು. ನಿನ್ನ ವಿಷಾದವನ್ನು ಬಿಡು! ನನ್ನನ್ನು ಮನ್ನಿಸಿ ಬಿಟ್ಟುಕೊಡು! ನನ್ನ ಮುಂದಿನ ಕಾರ್ಯಕ್ಕೆ ಇದು ತಕ್ಕ ಕಾಲವಾಗಿರುವುದು. ಈ ಕಾಲವೇ ನನ್ನನ್ನು ಆತುರಪಡಿಸುತ್ತಿರುವುದು. ಹಗಲು ಕಳೆಯುತ್ತ ಬಂದಿತು. ನಾನು ರಾಮಬಾಣದಂತೆ ಎಲ್ಲಿಯೂ ನಿಲ್ಲದೆ ವೇಗದಿಂದ ಲಂಕೆಗೆ ಹೋಗಿ ಬರುವೆನೆಂದು ವಾನರರಿಗೆ ಪ್ರತಿಜ್ಞೆಮಾಡಿಕೊಟ್ಟು ಬಂದಿರುವೆನು. ನಡುವೆ ನಿಲ್ಲುವುದು ಯುಕ್ತವಲ್ಲ" ಎಂದು ಸಮಾಧಾನವನ್ನು ಹೇಳಿ ಸಂತೋಷದಿಂದ ಅರಳಿದ ಮುಖವುಳ್ಳವನಾಗಿ, ತನ್ನ ಕೈಯಿಂದ ಆ ಬೆಟ್ಟವನ್ನು ಸವರಿ ಅಂತರಿಕ್ಷದ ದಾರಿಯನ್ನೇ ಹಿಡಿದು ಮುಂದೆ ಹೊರಟನು. ಇಷ್ಟರಲ್ಲಿ ಪರ್ವತರಾಜ ಸಮುದ್ರರಾಜರಿಬ್ಬರೂ ಆ ವಾಯುಪುತ್ರನನ್ನು ಗೌರವಿಸಿ, ತಕ್ಕ ಆಶೀರ್ವಚನಗಳನ್ನು ಹೇಳಿ ಪೂಜಿಸಿದರು. ಆ ಮೇಲೆ ಆಂಜನೇಯನು ಆ ಬೆಟ್ಟವನ್ನೂ ಬಿಟ್ಟು, ಮೇಲೆ ಬಹಳದೂರಕ್ಕೆ ಹಾರಿ ನೆಗೆದು ತನ್ನ ತಂದೆಯಾದ ವಾಯುವಿನ ಮಾರ್ಗವನ್ನೇ ಸೇರಿ ಆಕಾಶದಲ್ಲಿ ಹೋಗುತ್ತಿದ್ದನು. ಹನುಮಂತನು ನಡೆಸಿದ ಈ ಎರಡನೆಯ ಅಸಾಧ್ಯಕಾರ್ಯವನ್ನೂ ನೋಡಿ ಸಮಸ್ತ ದೇವತೆಗಳೂ, ಸಿದ್ಧರೂ, ಮಹರ್ಷಿಗಳೂ ಅತನನ್ನು ಪ್ರಶಂಸೆಮಾಡುತಿದ್ದರು. ಮತ್ತು ಸುನಾಭವೆಂಬ ಆ ಸುವರ್ಣಪರ್ವತದ ಕಾರ್ಯವನ್ನು ನೋಡಿ ಅಲ್ಲಿದ್ದ ದೇವತೆಗಳೂ, ಸಹಸ್ರಾಕ್ಷನಾದ ಇಂದ್ರನೂ, ಸಂತೋಷಭರಿತರಾಗಿದ್ದರು. ಆಗ ಧೀಮಂತನಾದ ಇಂದ್ರನೂ, ಸಂತೋಷದಿಂದ ಕುಗ್ಗಿದ ಕಂಠಸ್ವರವುಳ್ಳವನಾಗಿ, ತಾನಾಗಿಯೇ ಮುಂದೆ ಬಂದು ಸುನಾಭವೆಂಬ ಆ ಪರ್ವತೋತ್ತಮವನ್ನು ಕುರಿತು, "ಎಲೈ ಹಿರಣ್ಯನಾಭನೆ! ನೀನೀಗ ಸಮಸ್ತಪರ್ವತಗಳಿಗೂ ಮೇಲಾದವನು. ನಿನ್ನ ಕಾರ್ಯಕ್ಕಾಗಿ ನಾನು ಬಹಳ ಸಂತೋಷಪಟ್ಟೆನು. ನನಗೆ ನಿನ್ನಲ್ಲಿದ್ದ ವೈರವೂ ಹೋಯಿತು. ನಿನಗೆ ಅಭಯವನ್ನು ಕೊಡುವೆನು. ನಿನಗಿಷ್ಟಬಂದಂತೆ ಸುಖವಾಗಿರು. ಭಯಪಡಬೇಕಾದ ಸಂದರ್ಭದಲ್ಲಿಯೂ ನಿರ್ಭಯನಾಗಿ ಸಮುದ್ರದ ಮೇಲೆ ನೂರು ಯೋಜನಗಳನ್ನು ದಾಟುತಿದ್ದ ವೀರನಾದ ಹನುಮಂತನಿಗೆ ನೀನು ಒಳ್ಳೇ ಸಹಾಯವನ್ನು ಮಾಡಿದೆ. ದಶರಥಪುತ್ರನಾದ ರಾಮನಿಗೆ ಈ ವಾನರನು ದೂತನಾಗಿ ಹೊರಟಿರುವಾಗ ಅವನಿಗೆ ನೀನು ಸತ್ಕಾರವನ್ನು ಮಾಡಿದುದಕ್ಕಾಗಿ ನಾನು ಬಹಳ ಸಂತೋಷಪಟ್ಟೆನು" ಎಂದನು. ತನ್ನ ವಿಷಯದಲ್ಲಿ ದೇವೇಂದ್ರನು ಸಂತುಷ್ಟನಾದುದನ್ನು ನೋಡಿ ಆ ಪರ್ವತಕ್ಕೂ ಪರಮಸಂತೋಷವಾಯಿತು. ಇಂದ್ರನಿಂದ ಅಭಯವನ್ನು ಪಡೆದ ಮೈನಾಕವು ಅಂದಿನಿಂದ

ನಿರ್ಭಯವಾಗಿ ಸುಖದಿಂದಿತ್ತು. 1 ಮೈನಾಕವು ಅವರಿಸಿ ನಿಂತಿದ್ದ ಸಮುದ್ರ ಪ್ರದೇಶವನ್ನೂ ಆಂಜನೇಯನು ಒಂದು ಮುಹೂರ್ತದಲ್ಲಿ ದಾಟಿಬಿಟ್ಟನು. ಆಮೇಲೆ ದೇವತೆಗಳೂ, ಸಿದ್ಧರೂ, ಗಂಧರ್ವರೂ, ಮಹರ್ಷಿಗಳೂ ಸೇರಿ, ಸೂರ್ಯನಂತೆ ತೇಜಸ್ಸುಳ್ಳವಳಾಗಿಯೂ, ಪನ್ನಗರಿಗೆ ಮಾತೆಯಾಗಿಯೂ ಇರುವ ಸುರಸೆಯೆಂಬವಳನ್ನು ನೋಡಿ, "ಎಲೆ ಸುರಸೆ! ಹನುಮಂತನೆಂಬ ಹೆಸರುಳ್ಳ ಈ ವಾಯುಪುತ್ರನು ಸಮುದ್ರದಮೇಲೆ ಹಾರಿ ಹೋಗುವುದನ್ನು ನೋಡು! ಎಷ್ಟುದೂರಕ್ಕೆಹಾರಿದರೂ ಅವನಿಗೆ ಮೇಲೆಮೇಲೆ ಬಲವು ಹೆಚ್ಚುತ್ತಿರುವುದು. ಅವನ ಕಾಂತಿಯೂ ಉಬ್ಬಿಬರುತ್ತಿರುವುದು. ಈಗ ನೀನು ಪರ್ವತದಂತೆ ದೊಡ್ಡದಾಗಿಯೂ ಭಯಂಕರವಾಗಿಯೂ ಇರುವ ಒಂದು ರಾಕ್ಷಸಾಕೃತಿಯನ್ನು ತಾಳಿ, ಅವನ ದಾರಿಗಡ್ಡಲಾಗಿ ನಿಂತು, ಒಂದು ಮುಹೂರ್ತಕಾಲದವರೆಗೆ ಅವನ ಗಮನವನ್ನು ತಡೆದಿಡು! ಪಿಂಗಳವರ್ಣವಾದ ಕಣ್ಣುಗಳನ್ನೂ, ಭಯಂಕರಗಳಾದ ಕೋರೆದಾಡೆಗಳನ್ನೂ ತೋರಿಸುತ್ತ, ಆಕಾಶದಂತೆ ಅಗಲವಾದ ಬಾಯನ್ನು ತೆರೆದೇ ಅವನ ಮುಂದೆ ನಿಲ್ಲು. ಅವನು ನಿನ್ನನ್ನು ಜಯಿಸಿ ಮುಂದೆ ಹೋಗುವನೋ, ಅಥವಾ ಭಯಪಟ್ಟು ದುಃಖದಿಂದೋಡುವನೋ ಎಂಬುದನ್ನು ತಿಳಿಯಬೇಕೆಂದಿರುವೆವು. ಆದರೆ ಅವನ ಬಲಪರಾಕ್ರಮಗಳನ್ನು ನಾವು ಮೊದಲೇ ಚೆನ್ನಾಗಿ ಬಲ್ಲೆವು. ಆದರೂ ಸಂದೇಹನಿವೃತ್ತಿಗಾಗಿ ತಿರುಗಿ ಪರೀಕ್ಷಿಸಬೇಕೆಂದು ತೋರಿರುವುದು" ಎಂದರು. ದೇವತೆಗಳೆಲ್ಲರೂ ಹೀಗೆಂದು ಹೇಳಿ ಸುರಸೆಯನ್ನು ಸತ್ಕರಿಸಿ ಕಳುಹಿಸಲು, ಆಗಲೇ ಆ ನಾಗಮಾತೆಯು, ಸಮುದ್ರದನಡುವೆ ಅತಿ ವಿಕಾರವಾದ ಘೋರರಾಕ್ಷಸಿರೂಪದಿಂದ ಆ ವಾನರವೀರನ ದಾರಿಯನ್ನಡ್ಡಗಟ್ಟಿ ನಿಂತು, ಆತನನ್ನುಕುರಿತು ಹೇಳುವಳು. "ಎಲೈ ವಾನರೋತ್ತಮನೆ! ದೇವತೆಗಳು ನಿನ್ನನ್ನು ನನಗೆ ಆಹಾರವಾಗಿ ತೋರಿಸಿರುವರು. ನಿನ್ನನ್ನು ನಾನು ಭಕ್ಷಿಸಿ ಬಿಡಬೇಕು. ನನ್ನಬಾಯಲ್ಲಿ ಪ್ರವೇಶಿಸು" ಎಂದಳು. ಸುರಸೆಯು ಹೇಳಿದ ಈ ಮಾತನ್ನು ಕೇಳಿಯೂ, ಆಂಜನೇಯನು ಉಲ್ಲಾಸದಿಂದರಳಿದ ಮುಖವುಳ್ಳವನಾಗಿ, ಕೈಜೋಡಿಸಿ ಅವಳ ಮುಂದೆ ನಿಂತು, "ದಶರಥಪುತ್ರನಾದ ರಾಮನೆಂಬವನು ತನ್ನ ತಮ್ಮನಾದ ಲಕ್ಷ್ಮಣನೊಡನೆಯೂ, ಭಾರ್ಯೆಯಾದ ಸೀತೆಯೊಡನೆಯೂ ಸೇರಿ ದಂಡಕಾರಣ್ಯಕ್ಕೆ ಬಂದಿದ್ದನು. ಅಲ್ಲಿನ ರಾಕ್ಷಸರೊಡನೆ ಪ್ರಬಲವಾದ ವೈರವನ್ನು ಬೆಳೆಸಿದ ಆ ರಾಮನು ಬೇರೆ ಕಾರ್ಯಾತುರದಿಂದ ಸೀತೆಯನ್ನು

---

1. ಆಂಜನೇಯನು ಹಿಂತಿರುಗಿ ಬರುವಾಗಲೂ ಈ ಮೈನಾಕವನ್ನು ಮುಟ್ಟಿಬಂದುದಾಗಿ ಹೇಳಿರುವುದರಿಂದ ಮೈನಾಕವು ಅದುವರೆಗೂ ಹಾಗೆಯೇ ನಿಂತಿತ್ತೆಂದೂಹ್ಯವು.

ಬಿಟ್ಟು ಹೊರಗೆ ಹೋಗಿದ್ದಾಗ, ಕೀರ್ತಿವಂತಿಯಾದ ಆತನ ಪತ್ನಿಯನ್ನು ರಾವಣ ನೆಂಬ ರಾಕ್ಷಸನು ಕದ್ದುಯ್ದಿರುವನು. ನಾನು ಆ ರಾಮನ ಆಜ್ಞಾನುಸಾರ ವಾಗಿಯೇ ಸೀತೆಯ ಬಳಿಗೆ ದೂತನಾಗಿ ಹೋಗುತ್ತಿರುವೆನು. ಅಮ್ಮಾ! ನೀನೂ ಕೂಡ ತ್ರಿಲೋಕನಾಥನಾದ ಆ ರಾಮನ ರಾಜ್ಯದಲ್ಲಿ ವಾಸಮಾಡುವವಳಲ್ಲವೆ? ಆದುದರಿಂದ ನಿನ್ನಿಂದಾದಮಟ್ಟಿಗೆ ನೀನೂ ಅವನಿಗೆ ಸಹಾಯವನ್ನು ಮಾಡಬೇಕು. ಆದುದರಿಂದ ಅವನ ಕಾರ್ಯಾರ್ಥವಾಗಿ ಹೊರಟಿರುವ ನನ್ನನ್ನು ತಡೆಯಬೇಡ! ಸರ್ವಥಾ ನನ್ನನ್ನು ಬಿಡುವುದಕ್ಕೆ ನಿನಗೆ ಸಮ್ಮತವಿಲ್ಲದ ಪಕ್ಷದಲ್ಲಿ, ನಾನು ಸೀತೆಯನ್ನೂ, ರಾಮನನ್ನೂ ಕಂಡು, ಅವರವರ ಯೋಗಕ್ಷೇಮಗಳನ್ನು ತಿಳಿಸಿ ಬಂದಮೇಲೆ ನಿನ್ನ ಬಾಯಲ್ಲಿ ಪ್ರವೇಶಿಸಿಬಿಡುವೆನು. ಬೇಕಾದರೆ ಈ ವಿಷಯದಲ್ಲಿ ನಾನು ನಿನಗೆ ಆಣೆಯಿಟ್ಟು ಪ್ರಮಾಣಮಾಡಿಕೊಡುವೆನು" ಎಂದನು. ಇದನ್ನು ಕೇಳಿ ಕಾಮರೂಪಿಣಿಯಾದ ಸುರಸೆಯು ಪುನಃ ಹನುಮಂತನನ್ನು ಕುರಿತು, "ಅಯ್ಯಾ! ಯಾರಾದರೇನು? ನನ್ನ ಕಡೆಗೆ ಬಂದಮೇಲೆ ನನ್ನನ್ನು ಮೀರಿ ಹೋಗಕೂಡದು. ನನಗೆ ಇದೊಂದು ವರವು" ಎಂದಳು. (1-ಆ ಹನುಮಂತನ ಬಲವನ್ನು ಪರೀಕ್ಷಿಸಬೇಕೆಂದು ಬಂದ ಸುರಸೆಯು ಹೀಗೆಂದು ಹೇಳಿ ತಿರುಗಿ ಆತ ನನ್ನು ನೋಡಿ, "ಎಲೆ ವಾನರೋತ್ತಮನೇ! ಯಾರಾದರೇನು? ನನ್ನ ಬಾಯಲ್ಲಿ ಪ್ರವೇಶಿಸದೆ ಮುಂದೆ ಹೋಗಕೂಡದು. ಆದುದರಿಂದ ನೀನು ನನ್ನ ಬಾಯನ್ನು ಪ್ರವೇಶಿಸಿಯೇ ಹೋಗಬೇಕು. ಪೂರ್ವದಲ್ಲಿ ನನಗೆ ಬ್ರಹ್ಮನು ಈ ವರವನ್ನು ಕೊಟ್ಟಿರುವನು" ಎಂದು ಹೇಳುತ್ತ, ಆ ಸುರಸೆಯು ಅತಿರಭಸದಿಂದ ಮುಂದೆ ಬಂದು ವಿಸ್ತಾರವಾಗಿ ತನ್ನ ಬಾಯನ್ನು ತೆರೆದುಕೊಂಡು ಮಾರುತಿಯ ಮುಂದೆ ನಿಂತಳು. ಇದನ್ನು ಕಂಡು ಹನುಮಂತನಿಗೆ ತಡೆಯಲಾರದ ಕೋಪವುಂಟಾ ಯಿತು. ಆಗ ಆ ಕಪಿವೀರನು ಅತ್ಯಾಕ್ರೋಶದಿಂದ ಸುರಸೆಯನ್ನು ನೋಡಿ "ಎಲೆ ಸುರಸೆ! ಎಲ್ಲಿ? ನನ್ನನ್ನು ನುಂಗುವ ನಿನ್ನ ಬಾಯನ್ನು ತೋರಿಸು" ಎಂದಾ ರ್ಭಟಿಸಿ, ಆಗಲೇ ತನ್ನ ದೇಹವನ್ನು ಹತ್ತುಯೋಜನಗಳ ಉದ್ದಕ್ಕೂ, ಅಷ್ಟೇ ಅಗಲಕ್ಕೂ ವ್ಯಾಪಿಸುವಂತೆ ಬೆಳೆಸಿಬಿಟ್ಟನು. ಈ ಹನುಮಂತನು ಹತ್ತುಗಾವುದ ಗಳ ವಿಸ್ತಾರಕ್ಕೆ ಬೆಳೆದು ಮಹಾಮೇಘದಂತಿರುವುದನ್ನು ಕಂಡು, ಸುರಸೆಯು ತನ್ನ ಬಾಯನ್ನು ಇಪ್ಪತ್ತುಯೋಜನಗಳ ವಿಸ್ತಾರಕ್ಕೆ ಅಗಲಿಸಿದಳು. ಇವಳ ಬಾಯಿಯು ಅಷ್ಟುದೊಡ್ಡದಾದದನ್ನು ಕಂಡು ಧೀಮಂತನಾದ ಹನುಮಂತನು, ತನ್ನ ಮೈಯನ್ನು ಮೂವತ್ತುಯೋಜನಗಳ ಪ್ರಮಾಣಕ್ಕೆ ಬೆಳೆಸಿದನು.

1. ಈ ಕುಂಡಲೀಕರಣವುಳ್ಳಭಾಗವು ಪ್ರಕ್ಷಿಪ್ತವೆಂದು ತೋರುವುದು.

ಇದನ್ನು ನೋಡಿ ಸುರಸೆಯು ನಾಲ್ವತ್ತು ಯೋಜನಪ್ರಮಾಣಕ್ಕೆ ತನ್ನ ಬಾಯನ್ನಗಲಿಸಿದಳು. ಹನುಮಂತನು ಐವತ್ತುಯೋಜನಕ್ಕೆ ಬಳೆದನು. ಸುರಸೆಯ ಬಾಯಿಯು ಅರುವತ್ತು ಯೋಜನಗಳ ಅಗಲವಾಯಿತು. ಹನುಮಂತನ ದೇಹವು ಎಪ್ಪತ್ತು ಯೋಜನಗಳ ಪ್ರಮಾಣಕ್ಕೆ ಬಳೆಯಿತು. ಸುರಸೆಯು ಎಂಬತ್ತು ಯೋಜನಗಳ ಪ್ರಮಾಣಕ್ಕೆ ಬಾಯನ್ನಗಲಿಸಿದಳು. ಹನುಮಂತನ ದೇಹವು ತೊಂಬತ್ತು ಯೋಜನಗಳಷ್ಟಾಯಿತು. ಸುರಸೆಯ ಬಾಯಿಯು ನೂರುಯೋಜನಗಳ ಅಗಲದಷ್ಟಾಯಿತು. ಆಗ ಧೀಮಂತನಾದ ವಾಯುಪುತ್ರನು ಉದ್ದವಾದ ನಾಲಗೆಯಿಂದ ಕೂಡಿ, ನರಕದಂತೆ ಭಯಂಕರವಾಗಿ ತೆರೆದಿರುವ ಆ ಸುರಸೆಯ ಬಾಯನ್ನು ನೋಡಿದನು. ಸೂಕ್ಷ್ಮರೂಪದಿಂದ ಆ ಬಾಯೊಳಗೆ ನುಗ್ಗಿ ತಟ್ಟನೆ ಹೊರಗೆ ಬಂದುಬಿಡುವುದಕ್ಕೆ ಇದೇ ಸರಿಯಾದ ಸಮಯವೆಂದೂಹಿಸಿ, ತನ್ನ ಮೈಯನ್ನು ಅತಿಸೂಕ್ಷ್ಮವಾಗಿ ಹೆಬ್ಬೆರಳಿನ ಗಾತ್ರಕ್ಕೆ ಮಾಡಿಕೊಂಡು, ಆ ಬಾಯೊಳಗೆ ನುಗ್ಗಿ, ಎವೆಹಾರುವಷ್ಟರಲ್ಲಿ ವೇಗದಿಂದ ಹೊರಕ್ಕೆ ಬಂದು, ಮೊದಲಿನಂತೆ ಅಂತರಿಕ್ಷದಲ್ಲಿ ನಿಂತು, ಆಕೆಯನ್ನು ಕುರಿತು ಹೀಗೆಂದು ಹೇಳುವನು. "ಎಲೆ[1] ದಕ್ಷಪುತ್ರಿ! ನಾನು ನಿನ್ನ ಬಾಯಲ್ಲಿ ನುಗ್ಗಿಬಂದೆನಷ್ಟೆ? ಇನ್ನು ನಿನಗೆ ನಮಸ್ಕಾರವು. ಬ್ರಹ್ಮನು ನಿನಗೆ ಕೊಟ್ಟಿರುವ ವರವೂ ಸಫಲವಾಯಿತು. ಇನ್ನು ನನ್ನನ್ನುಬಿಡು" ಎಂದನು. ರಾಹುವಿನ ಬಾಯಿಯಿಂದ ಮುಕ್ತನಾದ ಚಂದ್ರನಂತೆ ತನ್ನ ಬಾಯಿಂದ ಹೊರಕ್ಕೆ ಬಂದು ನಿಂತಿರುವ ಆಂಜನೇಯನನ್ನು ಕಂಡು ಆ ಸುರಸಾದೇವಿಯು ಸಂತುಷ್ಟಳಾಗಿ, ತನ್ನ ನಿಜರೂಪವನ್ನು ತೋರಿಸುತ್ತ "ಅಯ್ಯಾ ವಾನರೋತ್ತಮನೆ! ಎಲೆ ಸೌಮ್ಯನೆ! ಇನ್ನು ನೀನು ಸುಖವಾಗಿ ನಿನ್ನ ಕಾರ್ಯಸಿದ್ಧಿಗಾಗಿ ಹೋಗಿ ಬಾ! ಸೀತೆಯನ್ನು ತಂದು ಮಹಾತ್ಮನಾದ ಶ್ರೀರಾಮನೊಡನೆ ಸೇರಿಸು" ಎಂದಳು. ಹನುಮಂತನು ನಡೆಸಿದ ಈ ಮೂರನೆಯ ಅಸಾಧ್ಯಕಾರ್ಯವನ್ನೂ ನೋಡಿ ಅಲ್ಲಿದ್ದ ಸಮಸ್ತಭೂತಗಳೂ "ಭಲೆ ಭಲೆ!" ಎಂದು ಆ ವಾನರೋತ್ತಮನನ್ನು ಕೊಂಡಾಡುತಿದ್ದುವು. ವೇಗದಲ್ಲಿ ಗರುಡನಿಗೆಣೆಯಾದ ಈ ಆಂಜನೇಯನು ಬೇರೊಬ್ಬರಿಂದ ದಾಟಲಸಾಧ್ಯವಾದ ಆ ಮಹಾಸಾಗರವನ್ನೂ ಕೂಡ ಆಕಾಶಮಾರ್ಗದಿಂದಲೇ ದಾಟಿ ಹೋಗುತ್ತಿದ್ದನು. ಅಂತರಿಕ್ಷಮಾರ್ಗಸಂಚಾರವೇನು ಸುಲಭಸಾಧ್ಯವೆ? ಮೋಡಗಳಿಂದ ಅಲ್ಲಲ್ಲಿ ಪ್ರವಹಿಸುವ ಜಲಧಾರೆಯೇ ಎಡೆಬಿಡದೆ ಸುರಿಯುತ್ತಿರುವುದು. ಅಲ್ಲಲ್ಲಿ ಪಕ್ಷಿ

---

1. ಇಲ್ಲಿ ಹನುಮಂತನು ದಕ್ಷಪುತ್ರಿಯೆಂದು ಸಂಬೋಧಿಸಿರುವುದರಿಂದ, ಹಿಂದೆ ಸುರಸೆಯು ಹೇಳಿದಮಾತಿನಲ್ಲಿ ತನ್ನ ಜನ್ಮವೃತ್ತಾಂತವನ್ನೂ ಅವನಿಗೆ ತಿಳಿಸಿರಬೇಕೆಂದೂಹ್ಯವು

ಸಮೂಹಗಳು ಗುಂಪಾಗಿ ಸಂಚರಿಸುತ್ತಿರುವುವು. ಮತ್ತೊಂದುಕಡೆಯಲ್ಲಿ ಗಾನ ವಿದ್ಯೆಗೆ ಆಚಾರ್ಯರಾದ ತುಂಬುರನೊದಲಾದ ವಿದ್ಯಾಧರರು ತುಂಬಿರುವರು. ಅಲ್ಲಲ್ಲಿ ಉದ್ದವಾಗಿ ನೆಟ್ಟಗಿರುವ ಇಂದ್ರಧನುಸ್ಸು ಹಬ್ಬಿರುವುದು. ಸಿಂಹಗಳಿಂದಲೂ, ಆನೆಗಳಿಂದಲೂ, ಹುಲಿಗಳಿಂದಲೂ, ಪಕ್ಷಿಗಳಿಂದಲೂ, ಸರ್ಪಗಳಿಂದಲೂ ಎಳೆಯಲ್ಪಡುವ ಅತಿಶುಭ್ರಗಳಾದ ದೇವವಿಮಾನಗಳು ಅಲ್ಲಲ್ಲಿ ಸುತ್ತಿಬರುತ್ತಿರುವುವು. ಆಗಾಗ ಇಂದ್ರನ ವಜ್ರಾಘಾತದಿಂದುಂಟಾದ ಸಿಡಿಲಿನ ವೇಗದಿಂದುಬ್ಬಿ ಬರುವ ಬೆಂಕಿಯ ಕಿಡಿಗಳು ಆಕಸ್ಮಿಕವಾಗಿ ವ್ಯಾಪಿಸುತ್ತಿರುವುವು. ತಾವು ನಡೆಸಿದ ಪುಣ್ಯಕಾರ್ಯಗಳಿಂದ ಸ್ವರ್ಗವನ್ನು ಜಯಿಸಿದ ಮಹಾತ್ಮರನೇಕರು ಅಲ್ಲಲ್ಲಿ ತುಂಬಿರುವರು. ಅಗ್ನಿಹೋತ್ರನು ದೇವತೆಗಳಿಗೆ ಹವಿಸ್ಸನ್ನು ಹೊತ್ತುಕೊಂಡು ಹೋಗುವ ದಾರಿಯೇ ಇದು. ಅಶ್ವಿನ್ಯಾದಿತಾರೆಗಳಿಗೂ, ಸೂರ್ಯಚಂದ್ರರಿಗೂ, ಇತರ ಗ್ರಹನಕ್ಷತ್ರಗಳಿಗೂ ಇದೇ ಆಶ್ರಯವಾಗಿ ಶೋಭಿಸುತ್ತಿರುವುದು. ಎಲ್ಲಿ ನೋಡಿದರೂ ಮಹರ್ಷಿಗಳೂ, ನಾಗರೂ, ಯಕ್ಷರೂ, ಗಂಧರ್ವರೂ ತುಂಬಿರುವರು. ಮತ್ತು ಅದು ವಿವಿಕ್ತವಾಗಿಯೂ ನಿರ್ಮಲವಾಗಿಯೂ, ಕೊನೆಮೊದಲಿಲ್ಲದೆ ಸರ್ವವ್ಯಾಪಕವಾಗಿಯೂ, ವಿಶ್ವಾವಸುವೆಂಬ ಗಂಧರ್ವರಾಜನಿಂದ ಸೇವಿತವಾಗಿಯೂ ಇರುವುದು. ಐರಾವತಕ್ಕೂ ಚಂದ್ರಸೂರ್ಯರಿಗೂ ಅದೇ ಸಂಚಾರ ಮಾರ್ಗವು. ಪ್ರಾಣಿಲೋಕಕ್ಕಾಗಿ ಬ್ರಹ್ಮನು ನಿರ್ಮಿಸಿದ ವಿಸ್ತಾರವಾದ ಮೇಲುಕಟ್ಟೋ ಎಂಬಂತಿರುವುದು. ವೀರರಾದ ವಿದ್ಯಾಧರರು ಆಗಾಗ ಅಲ್ಲಿ ಬಂದು ನೆರೆಯುತ್ತಿರುವರು. ಇಂತಹ ಆಕಾಶದಲ್ಲಿಯೂ ಹನುಮಂತನು ಗರುಡನಂತೆ ವೇಗದಿಂದ ಹಾರಿಬಂದನು. (ಇವನು ಬಿರುಗಾಳಿಯಂತೆ ತನ್ನ ವೇಗದಿಂದ ಮೇಘಗಳನ್ನೂ ಎಳೆದುಕೊಂಡು ಹೋಗುತ್ತಿದ್ದನು. ಇವನ ಹಿಂದೆ ಕಪ್ಪು, ಕೆಂಪು, ಹಳದಿ, ಬಿಳುಪು ಮುಂತಾದ ಬಣ್ಣಗಳುಳ್ಳ ಮೇಘಗಳು ಶೋಭಿಸುತ್ತಿರಲು, ಆಗಾಗ ಮೇಘಗಳ ನಡುವೆ ನುಗ್ಗಿನುಗ್ಗಿ ಬರುತ್ತ ಮಳೆಗಾಲದ ಚಂದ್ರನಂತೆ ತೋರುತಿದ್ದನು.) ಹೀಗೆ ನಿರಾಲಂಬವಾದ ಆಕಾಶದಲ್ಲಿ ರೆಕ್ಕೆಯುಳ್ಳ ಬೆಟ್ಟದಂತೆ ಅತಿವೇಗದಿಂದ ಹಾರಿಬರುತ್ತಿರುವ ಹನುಮಂತನನ್ನು, ಸಿಂಹಿಕೆಯೆಂಬ ರಾಕ್ಷಸಿಯೊಬ್ಬಳು ನೋಡಿದಳು. ಅವಳೂ ಕಾಮರೂಪಿಣಿಯಾದುದರಿಂದ, ತನ್ನ ದೇಹವನ್ನು ದೊಡ್ಡದಾಗಿ ಬೆಳೆಸಿಕೊಂಡು, ತನ್ನ ಮನಸ್ಸಿನಲ್ಲಿ "ಅಹಾ! ಬಹುಕಾಲಕ್ಕೆ ಈಗ ನಾನು ಚೆನ್ನಾಗಿ ಆಹಾರವನ್ನು ಭಕ್ಷಿಸಬಹುದು. ಬಹುಕಾಲಕ್ಕೆ ಈ ದೊಡ್ಡಜಂತುವು ನನ್ನ ಕೈಗೆ ಸಿಕ್ಕಿಬಿದ್ದಿರುವುದು" ಎಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ಸಮುದ್ರದಮೇಲೆ ಬಿದ್ದಿದ್ದ ಆಂಜನೇಯನ ದೇಹಚ್ಛಾಯೆ

ಯನ್ನು ಹಿಡಿದು ತಡೆದಳು. ಈ ನೆರಳನ್ನು ಹಿಡಿದೊಡನೆಯೇ ಹನುಮಂತನ ನಡೆಯೂ ನಿಂತುಹೋಯಿತು. ಆಗ ಹನುಮಂತನು ಬೆಜ್ಜರಬಿದ್ದು ತನ್ನ ಮನಸ್ಸಿನಲ್ಲಿ "ಓಹೋ! ಅಕಸ್ಮಾತ್ತಾಗಿ ಯಾರೋ ನನ್ನನ್ನು ತಡೆದಿರುವರಲ್ಲಾ! ಸಮುದ್ರದಲ್ಲಿ ಇದಿರುಗಾಳಿಯಿಂದ ತಡೆಯಲ್ಪಟ್ಟ ದೊಡ್ಡ ಹಡಗಿನಂತೆ ಈಗ ನನ್ನ ಪರಾಕ್ರಮಕ್ಕೂ ಕಾಲುಮುರಿದಂತಾಯಿತು" ಎಂದು ಚಿಂತಾಕ್ರಾಂತನಾಗಿ, ದಿಗ್ಭ್ರಾಂತನಾದಂತೆ ತನ್ನ ಪಕ್ಕಗಳಲ್ಲಿಯೂ, ಮೇಲೆಯೂ, ಕೆಳಗೂ ಕಣ್ಣಿಟ್ಟು ನೋಡುತ್ತಿದ್ದನು. ಆಗ ಕೆಳಗೆ ಲವಣ ಸಮುದ್ರದಲ್ಲಿ ಮೇಲೆದ್ದು ನಿಂತಿದ್ದ ಒಂದು ದೊಡ್ಡಭೂತವು ಅವನ ಕಣ್ಣಿಗೆ ಗೋಚರಿಸಿತು. ವಿಕಾರವಾದ ಮುಖವುಳ್ಳ ಆ ಭೂತವನ್ನು ನೋಡಿ ಹನುಮಂತನು ತನ್ನ ಮನಸ್ಸಿನಲ್ಲಿ "ಅಹಾ! ಹಿಂದೆ ಸುಗ್ರೀವನು ಸಮುದ್ರದಲ್ಲಿ ನೆರಳನ್ನು ಹಿಡಿದು ಭಕ್ಷಿಸತಕ್ಕ ಭೂತವಿರುವುದೆಂದೂ, ಅದು ಮಹಾವೀರ್ಯವುಳ್ಳುದೆಂದೂ, ಅದ್ಭುತಾಕಾರವುಳ್ಳುದೆಂದೂ ಹೇಳಿದ್ದನು. ಇದೇ ಆ ಭೂತವೆಂಬುದರಲ್ಲಿ ಸಂದೇಹವಿಲ್ಲ" ಎಂದೆಣಿಸಿ, ಬುದ್ಧಿಶಾಲಿಯಾದುದರಿಂದ, ಆ ಸಿಂಹಿಕೆಯ ನಿಜತತ್ವವನ್ನು ತಾನಾಗಿಯೇ ಚೆನ್ನಾಗಿ ಊಹಿಸಿ ತಿಳಿದುಕೊಂಡು, ಮಳೆಗಾಲದ ಮೇಘದಂತೆ ಕ್ಷಣಮಾತ್ರದಲ್ಲಿ ತನ್ನ ದೇಹವನ್ನು ದೊಡ್ಡದಾಗಿ ಬಳೆಸಿಬಿಟ್ಟನು. ಆ ಮಹಾಕಪಿಯ ದೇಹವು ಹೀಗೆ ಮೇಲೆಮೇಲೆ ಬಳೆಯುತ್ತಿರುವುದನ್ನು ನೋಡಿ ಸಿಂಹಿಕೆಯು, ಪಾತಾಳರಂಧ್ರಕ್ಕೆ ಸಮಾನವಾದ ತನ್ನ ಬಾಯನ್ನೂ ಮೇಲೆಮೇಲೆ ಆಗಲಿಸುತ್ತ ಬಂದಳು. ಮೇಘಗಳ ಗುಡುಗಿನಂತೆ ಗರ್ಜಿಸುತ್ತ ಅವನಮೇಲೆ ಹಾರುವುದಕ್ಕೂ ಯತ್ನಿಸಿದಳು. ಆಗ ಹನುಮಂತನು ಆ ರಾಕ್ಷಸಿಯ ಬಿಚ್ಚಿದ ಬಾಯನ್ನೂ, ಅವಳ ದೇಹದ ಪ್ರಮಾಣವನ್ನೂ, ಪ್ರಾಣಾಶ್ರಯವಾದ ಅವಳ ಮರ್ಮಸ್ಥಳವನ್ನೂ ನೋಡಿ ತಿಳಿದುಕೊಂಡನು. ವಜ್ರದಂತೆ ದೃಢದೇಹವುಳ್ಳ ಈತನು ಆಗಲೇ ತನ್ನ ದೇಹವನ್ನು ಚೆನ್ನಾಗಿ ಉಡುಗಿಸಿ ಸಣ್ಣದಾಗಿ ಮಾಡಿಕೊಂಡು, ಆ ರಾಕ್ಷಸಿಯ ಬಿಚ್ಚಿದ ಬಾಯಿಯಲ್ಲಿ ಬಿದ್ದನು. ಪರ್ವಕಾಲದಲ್ಲಿ ರಾಹುವಿನಿಂದ ನುಂಗಲ್ಪಡುವ ಪೂರ್ಣಚಂದ್ರನಂತೆ ಆ ರಾಕ್ಷಸಿಯ ಬಾಯಿಯಲ್ಲಿ ಪ್ರವೇಶಿಸಿರುವ ಆಂಜನೇಯನನ್ನು ಸಿದ್ಧಚಾರಣಾದಿಗಳೆಲ್ಲರೂ ಆಶ್ಚರ್ಯದಿಂದಲೂ, ಸಂಭ್ರಮದಿಂದಲೂ ನೋಡುತ್ತಿದ್ದರು. ಆಮೇಲೆ ಹನುಮಂತನು ತನ್ನ ಕೂರಾದ ಉಗುರುಗಳಿಂದ ಸಿಂಹಿಕೆಯ ಮರ್ಮಸ್ಥಳಗಳನ್ನು ಭೇದಿಸಿ ಆಗಲೇ ಮನೋವೇಗದಿಂದ ಮೇಲೆ ಹಾರಿಬಿಟ್ಟನು. ಹೀಗೆ ಮಹಾಬುದ್ಧಿಯುಳ್ಳ ಹನುಮಂತನು ತನ್ನ ಸೂಕ್ಷ್ಮದೃಷ್ಟಿಯ ಬಲದಿಂದಲೂ, ತನ್ನ ಧೈರ್ಯದಿಂದಲೂ, ಸಾಮರ್ಥ್ಯ

ದಿಂದಲೂ ಸಿಂಹಿಕೆಯನ್ನು ಕೊಂದು, ತಿರುಗಿ ಮೊದಲಿನಂತೆ ತನ್ನ ದೇಹವನ್ನು ದೊಡ್ಡದಾಗಿ ಬಳೆಸಿಕೊಂಡನು. ಹನುಮಂತನಿಂದ ಸೀಳಲ್ಪಟ್ಟ ಎದೆಯುಳ್ಳ ರಾಕ್ಷಸಿಯು ಆಗಲೇ ಶಕ್ತಿಗುಂದಿ ಸತ್ತು ನೀರಿನಲ್ಲಿ ಬಿದ್ದಳು. ಹೀಗೆ ವಾನರನಿಂದ ಹತಳಾಗಿ ಬಿದ್ದ ರಾಕ್ಷಸಿಯನ್ನು ನೋಡಿ ಆಕಾಶಚಾರಿಗಳಾದ ಸಮಸ್ತಭೂತಗಳೂ ಹನುಮಂತನನ್ನು ಕೊಂಡಾಡುತ್ತ, ಅವನನ್ನು ಕುರಿತು “ಎಲೈ ಕಪಿಶ್ರೇಷ್ಠನೆ! ಈಗ ನೀನು ನಡೆಸಿದ ಕಾರ್ಯವೋ ಬಹಳ ಭಯಂಕರವಾದುದು. ನಿನ್ನಿಂದ ಒಂದು ಮಹಾಭೂತವು ಸಂಹೃತವಾಯಿತು. ಇನ್ನು ನೀನು ಉದ್ದೇಶಿಸಿರುವ ಕಾರ್ಯವನ್ನು ಕ್ಷೇಮದಿಂದ ಸಾಧಿಸು, ಎಲೈ ವಾನರೇಂದ್ರನೆ! ಲೋಕದಲ್ಲಿ ಯಾವನಿಗೆ ನಿನ್ನಲ್ಲಿರುವಂತೆ ಈ ಧೈರ್ಯವೂ, ಈ ಸೂಕ್ಷ್ಮದೃಷ್ಟಿಯೂ, ಈ ಮಹಾಬುದ್ಧಿಯೂ, ಈ ಸಾಮರ್ಥ್ಯವೂ, ಇವು ನಾಲ್ಕೂ ತುಂಬಿರುವುವೋ ಅವನ ಕಾರ್ಯಗಳು ಎಂದಿಗೂ ಕೆಡುವುದಿಲ್ಲ” ಎಂದರು. ಹೀಗೆ ಪೂಜ್ಯನಾದ ಹನುಮಂತನು ಅವರಿಂದ ಸಮ್ಮಾನಿತನಾಗಿ, ಮುಂದೆ ನಡೆಸಬೇಕಾದ ತನ್ನ ಕಾರ್ಯವನ್ನುದ್ದೇಶಿಸಿ ಗರುಡವೇಗದಿಂದ ಆಕಾಶದಲ್ಲಿ ಹೋಗುತ್ತಿದ್ದನು. ಹೀಗೆ ನೂರುಯೋಜನಗಳನ್ನೂ ದಾಟಿ ಹೆಚ್ಚು ಕಡಿಮೆಯಾಗಿ ಆ ದಕ್ಷಿಣತೀರದ ಸಮೀಪವನ್ನು ಸೇರಿ, ಅಲ್ಲಿ ಸುತ್ತಲೂ ಕಣ್ಣಿಟ್ಟು ನೋಡುತ್ತಿರುವಾಗ, ಮುಂದೆ ಆ ಸಮುದ್ರತೀರದಲ್ಲಿ ಒಂದು ದೊಡ್ಡ ಅಡವಿಗಳ ಸಾಲನ್ನು ಕಂಡನು. ಹಾರಿಬರುತ್ತಿರುವಾಗಲೇ ಆ ವಾನರೋತ್ತಮನು ಮುಂದೆ ಬಗೆಬಗೆಯ ವೃಕ್ಷಗಳಿಂದಲಂಕೃತವಾದ ಒಂದು ದ್ವೀಪವನ್ನೂ, ಮಲಯಪರ್ವತದ ಉಪವನಗಳನ್ನೂ ಕಂಡನು. ಮತ್ತು ಅಲ್ಲಿನ ಸಮುದ್ರವನ್ನೂ, ಅದರ ತೀರದಲ್ಲಿರುವ ಜಲಮಯಪ್ರದೇಶಗಳನ್ನೂ, ಅಲ್ಲಿನ ಮರಗಳನ್ನೂ, ಅಲ್ಲಿನ ನದಿಗಳ ಉತ್ಪತ್ತಿಸ್ಥಾನಗಳನ್ನೂ ಕಂಡನು. ಅವನು ಬಹಳ ಬುದ್ಧಿವಂತನಾದುದರಿಂದ, ಮಹಾಮೇಘದಂತೆ ಆಕಾಶವೆಲ್ಲವನ್ನೂ ವ್ಯಾಪಿಸಿದಂತಿರುವ ತನ್ನ ದೊಡ್ಡ ದೇಹವನ್ನು ತಾನೇ ನೋಡಿ, ತನ್ನಲ್ಲಿ ತಾನು “ಓಹೋ! ಇದೇನು! ನನ್ನ ದೇಹವು ಹೀಗೆ ಬಳೆದಿರುವುದನ್ನೂ, ನನ್ನ ಈ ಮಹಾವೇಗವನ್ನೂ ನೋಡಿದರೆ, ಇಲ್ಲಿನ ರಾಕ್ಷಸರೆಲ್ಲರೂ ಆಶ್ಚರ್ಯಪಟ್ಟು ನನ್ನ ನಿಜಸ್ಥಿತಿಯನ್ನು ತಿಳಿದುಕೊಳ್ಳಬೇಕೆಂದು ಕುತೂಹಲದಿಂದ ನನ್ನ ಮುಂದೆ ಸೇರಿಬಿಡುವರಲ್ಲವೆ? ಎಂದು ಚಿಂತಿಸಿ, ಆಗಲೇ ಪರ್ವತದಂತಿರುವ ತನ್ನ ದೇಹವನ್ನು ಸಣ್ಣದಾಗಿ ಮಾಡಿ ತಮಸ್ಸನ್ನು ಕಿತ್ತುಹಾಕಿದ ಆತ್ಮಜ್ಞಾನಿಯಂತೆ ಸೌಮ್ಯಸ್ವರೂಪದಿಂದಿದ್ದನು. ಬಲಿಯ ಕೊಬ್ಬನ್ನು ಮುರಿಯುವುದಕ್ಕಾಗಿ ತ್ರಿವಿಕ್ರಮಾವತಾರವನ್ನೆತ್ತಿ ಈ ಪ್ರಪಂಚವೆಲ್ಲವನ್ನೂ ಮೂರಡಿಗಳಿಂದಳೆದು ತಿರುಗಿ ವಾಮನರೂಪದಿಂದ ಕಾಣಿಸಿ

ಕೊಂಡ ಮಹಾವಿಷ್ಣುವಿನಂತೆ, ಹನುಮಂತನು ತನ್ನ ದೇಹವನ್ನು ಬಹಳವಾಗಿ ಉಡುಗಿಸಿಕೊಂಡು, ಸಾಮಾನ್ಯಸ್ವರೂಪದಿಂದಿದ್ದನು. ಹೀಗೆ ಅಂಜನೇಯನು ಆಯಾಕಾರ್ಯಗಳಿಗೆ ತಕ್ಕಂತೆ ನಾನಾರೂಪಗಳನ್ನು ಧರಿಸಿ ಕೊನೆಗೆ ಸಮುದ್ರತೀರ ವನ್ನೂ ಸೇರಿದನು. ಶತ್ರುಗಳಿಗೆ ದುರ್ಜಯನಾದ ಆ ಹನುಮಂತನು ಮುಂದಿನ ಕಾರ್ಯಾಲೋಚನೆಯಿಂದ ತನ್ನ ದೊಡ್ಡದೇಹವನ್ನು ತಾನೇ ನೋಡಿ, ಅದು ಲಂಕಾಪ್ರವೇಶಕ್ಕೆ ಉಚಿತವಾದ ರೂಪವಲ್ಲನೆಂದು ನಿರ್ಧರಿಸಿಕೊಂಡು, ತನ್ನ ನಿಜರೂಪದಿಂದಲೇ ಇದ್ದನು. ದೊಡ್ಡ ಪರ್ವತಶಿಖರದಂತಿರುವ ಆ ಮಹಾತ್ಮನು ಆಕಾಶದಿಂದ ಕೆಳಗೆ ತೂಗಾಡುವುದೋ ಎಂಬಂತೆ ಕೊನೆಗಾಣದ ಔನ್ನತ್ಯವುಳ್ಳ ಲಂಬವೆಂಬ ಒಂದು ಪರ್ವತದ ಶಿಖರದಲ್ಲಿ ಇಳಿದನು. ವಿಚಿತ್ರಶಿಖರಗಳುಳ್ಳು ದಾಗಿಯೂ ತಾಳೆ, ತೆಂಗು, ಶ್ಲೇಷ್ಮಾತರ (ಅಂಬಟೆ), ಮೊದಲಾದ ವೃಕ್ಷಗಳಿಂದ ತುಂಬಿದುದಾಗಿಯೂ ಇರುವ ಆ ಶಿಖರದಲ್ಲಿಳಿದ್ದು, ಅಲ್ಲಿಂದ ಸಮುದ್ರತೀರಕ್ಕೆ ಬಂದು ತ್ರಿಕೂಟಪರ್ವತದ ಮೇಲಿದ್ದ ಲಂಕಾನಗರಿಯನ್ನೂ ಕಂಡನು. ಅಲ್ಲಿಯೂ ಹನುಮಂತನು ತನ್ನ ದೊಡ್ಡಸ್ವರೂಪವನ್ನು ಬಿಟ್ಟು ಅಲ್ಲಿನ ಮೃಗ ಗಳನ್ನೂ ಪಕ್ಷಿಗಳನ್ನೂ ಹೆದರಿಸುತ್ತಾ, ಆ ತ್ರಿಕೂಟಪರ್ವತವನ್ನು ಸೇರಿದನು. ಹೀಗೆ ಅಂಜನೇಯನು ಅಸಂಖ್ಯಾತರಾದ ದಾನವರಿಗೂ, ಪನ್ನಗರಿಗೂ, ಆಶ್ರಯವಾಗಿಯೂ ದೊಡ್ಡದೊಡ್ಡ ಅಲೆಗಳ ಪರಂಪರೆಯಿಂದ ಕೂಡಿದು ದಾಗಿಯೂ ಇರುವ ಮಹಾಸಾಗರವನ್ನು ತನ್ನ ದೇಹಬಲದಿಂದಲೇ ಹಾರಿ, ಸಮುದ್ರ ತೀರದಲ್ಲಿಳಿದು, ಅಮರಾವತಿಯಂತೆ ಸೊಬಗುಳ್ಳ ಲಂಕಾಪುರಿಯನ್ನು ಕಂಡನು.

ಇಲ್ಲಿಗೆ ಮೊದಲನೆಯ ಸರ್ಗವು.

---

ಹನುಮಂತನು ಲಂಕೆಯ ಸಮೀಪಕ್ಕೆ ಬಂದುದು, ಚಂದ್ರೋದಯವು.

ಹೀಗೆ ಮಹಾಬಲಾಢ್ಯನಾದ ಅಂಜನೇಯನು ಯಾರಿಂದಲೂ ದಾಟಲಸಾಧ್ಯ ವಾದ ಸಮುದ್ರವನ್ನು ನಿಶ್ಚಿಂತಚಿತ್ತನಾಗಿ ದಾಟಿ, ತ್ರಿಕೂಟಶಿಖರದಲ್ಲಿರುವ ಲಂಕೆಯನ್ನು ಕಂಡನು. ಅಲ್ಲಿ ಮರಗಳಿಂದುದುರಿದ ಪುಷ್ಪವರ್ಷದಿಂದ ಮುಚ್ಚಿದ ಮೈಯುಳ್ಳವನಾಗಿ, ಪುಷ್ಪದಿಂದ ಮಾಡಿದ ಒಂದು ವಾನರಪ್ರತಿಮೆಯಂತೆ ಕಾಣು ತಿದ್ದನು. ಶ್ರೀಮಂತನಾದ ಆ ಅಂಜನೇಯನು ಅತ್ಯುತ್ತಮ ಪರಾಕ್ರಮವುಳ್ಳವ

ನಾದುದರಿಂದ, ಒಂದೇ ನೆಗೆತಕ್ಕೆ ಆ ನೂರುಯೋಜನಗಳನ್ನು ದಾಟಿದರೂ, ಒಂದು ನಿಟ್ಟುಸಿರನ್ನಾದರೂ ಬಿಡದೆ, ಸ್ವಲ್ಪಮಾತ್ರವಾದರೂ ಬಳಲಿಕೆಯಿಲ್ಲ ದಿದ್ದನು. ಆಗಲೂ ಆವನು ತನ್ನ ಮನಸ್ಸಿನಲ್ಲಿ "ಅನೇಕ ಶತಯೋಜನಗಳನ್ನಾದರೂ ದಾಟಬಲ್ಲ ನನಗೆ ನೂರೇ ಯೋಜನಗಳೆಂಬ ಸಂಖ್ಯಾನಿಯಮವುಳ್ಳ ಈ ಸಮುದ್ರದ ಕೊನೆಯನ್ನಷ್ಟು ಹಾರುವುದೊಂದಸಾಧ್ಯವೆ?" ಎಂದು ಉತ್ಸಾಹದಿಂದುಬ್ಬುತ್ತಿದ್ದನು, ವೀರ್ಯವುಳ್ಳ ಸಮಸ್ತವಾನರರಿಗೂ ತಾನೊಬ್ಬನೇ ಮೇಲೆನಿಸಿಕೊಂಡ ಆ ಹನು ಮಂತನು, ಹೀಗೆ ಸಮುದ್ರವನ್ನು ದಾಟಿ ಲಂಕೆಯನ್ನು ಸಮೀಪಿಸಿ, ಅಲ್ಲಿನ ಹಸುರಾದ ಹುಲ್ಲುನೆಲಗಳನ್ನೂ, ಸುಗಂಧವುಳ್ಳ ತೋಟಗಳನ್ನೂ, ದೊಡ್ಡ ದೊಡ್ಡ ಕಲ್ಲುಬಂಡೆಗಳುಳ್ಳ ಪ್ರದೇಶಗಳನ್ನೂ, ಬೆಟ್ಟದ ಸೀಮೆಗಳನ್ನೂ, ಮರಗಳ ಸಾಲುಗಳನ್ನೂ ನೋಡುತ್ತ, ಅವುಗಳ ನಡುದಾರಿಯಿಂದಲೇ ಹೊರಟು ಹಾಗೆಯೇ ಮರಗಳಿಂದ ತುಂಬಿದ ಅನೇಕ ಪರ್ವತ ಶಿಖರಗಳನ್ನೂ, ಪುಷ್ಪಿತಗಳಾದ ತೋಟಗಳ ಸಾಲುಗಳನ್ನೂ ದಾಟಿಹೋದನು. ಮಹಾತೇಜಸ್ವಿಯಾಗಿಯೂ, ವಾನರೋತ್ತಮ ನಾಗಿಯೂ ಇರುವ ಆ ಹನುಮಂತನು, ಕೊನೆಗೆ ಲಂಬವೆಂಬ ಆ ಬೆಟ್ಟದಮೇಲೆ ನಿಂತು ಅದರ ಸುತ್ತಿನ ಅಡವಿಗಳನ್ನೂ, ತೋಟಗಳನ್ನೂ, ತ್ರಿಕೂಟಶಿಖರ ದಲ್ಲಿರುವ ಲಂಕಾಪಟ್ಟಣವನ್ನೂ ನೋಡಿದನು. ಮತ್ತು ಅದರ ಸುತ್ತಲೂ ಸರಳ ವೃಕ್ಷಗಳನ್ನೂ, ಕರ್ಣಿಕಾರಗಳನ್ನೂ, ಪುಷ್ಪಿತಗಳಾದ ಖರ್ಜೂರದ ಗಿಡಗಳನ್ನೂ, ಜಂಬೀರ ವೃಕ್ಷಗಳನ್ನೂ, ಹೂಗಳಿಂದಲೂ ಮೊಗ್ಗುಗಳಿಂದಲೂ ತುಂಬಿ, ಅನೇಕ ಪಕ್ಷಿಗಳಿಗಾಶ್ರಯವಾಗಿ, ಗಾಳಿಯಿಂದಾಡುವ ಕೊನೆಗಳುಳ್ಳ, ಬೆಟ್ಟದ ಮಲ್ಲಿಗೆ, ಕೇದಗೆ, ಪ್ರಿಯಂಗು, ಸುವಾಸನೆಯುಳ್ಳ ಕಡವು, ಏಳೆಲೆಬಾಳೆ, ಸರ್ಜಕ, ಕೋವಿ ದಾರ, ಕಣಿಗಿಲೆ, ಮುಂತಾದ ಮರಗಳ ಸಾಲನ್ನೂ ಕಂಡನು. ಮತ್ತು ಹಂಸ ಕಾರಂಡವಾದಿ ಜಲಪಕ್ಷಿಗಳಿಂದಲೂ, ತಾವರೆ, ನೈದಿಲೆ ಮೊದಲಾದ ನೀರುಹೂಗ ಳಿಂದಲೂ ತುಂಬಿದ ಕೊಳಗಳನ್ನೂ, ಬಗೆಬಗೆಯ ಕ್ರೀಡಾಸ್ಥಾನಗಳನ್ನೂ, ನಾನಾವಿಧಗಳಾದ ಜಲಾಶಯಗಳನ್ನೂ ಕಂಡನು. ಸಮಸ್ತ ಋತುಗಳಲ್ಲಿಯೂ ಫಲಪುಷ್ಪಗಳನ್ನು ಬಿಡತಕ್ಕ ಬಗೆಬಗೆಯ ಮರಗಳಿಂದ ತುಂಬಿದ ತೋಟಗಳನ್ನೂ, ಮನೋಹರಗಳಾದ ಉದ್ಯಾನಗಳನ್ನೂ ನೋಡಿದನು. ಶ್ರೀಮಂತನಾದ ಆ ಕಪಿ ಶ್ರೇಷ್ಠನು ಹಾಗೆಯೇ ಇನ್ನೂ ಮುಂದೆ ಹೋಗಿ ರಾವಣಪಾಲಿತವಾದ ಲಂಕೆಯನ್ನು ಸಮೀಪಿಸಿ ಅಲ್ಲಿ ನಿಂತು, ಅದರ ಅಂದವನ್ನು ನೋಡುತಿದ್ದನು. ಆ ಲಂಕೆಯ ಸುತ್ತಲೂ ತಾವರೆ, ನೈದಿಲೆ ಮೊದಲಾದ ಹೂಗಳಿಂದಲಂಕೃತವಾದ ಕಂದಕಗಳು ಶೋಭಿಸು ವುವು. ಸೀತೆಯನ್ನು ಕದ್ದು ತಂದುದಕ್ಕೆ ಪ್ರಯೋಜನವನ್ನು ಸಾಧಿಸಬೇಕೆಂದು

ರಾವಣನು ಅದರ ಸುತ್ತಲೂ ಪ್ರಬಲವಾದ ಕಾವಲನ್ನಿರಿಸಿದ್ದುದರಿಂದ, ಭಯಂಕರವಾದ ಬಿಲ್ಲುಬಾಣಗಳನ್ನು ಹಿಡಿದ ರಾಕ್ಷಸರು ಸುತ್ತಲೂ ಎಚ್ಚರಿಕೆಯಿಂದ ಪಹರೆ ಕೊಡುತ್ತಿರುವರು. ಆ ಮಹಾಪಟ್ಟಣವು ಸುತ್ತಲೂ ಮನೋಹರವಾದ ಚಿನ್ನದ ಕೋಟೆಯಿಂದ ಆವರಿಸಲ್ಪಟ್ಟಿರುವುದು. ನವಗ್ರಹಗಳ ಸಮೂಹದಂತೆ ದೊಡ್ಡವುಗಳಾಗಿಯೂ, ಶರತ್ಕಾಲದ ಮೇಘಗಳಂತೆ ಬಿಳುಪಾಗಿಯೂ ಇರುವ ಮನೆಗಳಿಂದ ರಮ್ಯವಾಗಿರುವುದು. ಉಭಯಪಾರ್ಶ್ವದ ಸೌಧಗಳ ಸಾಲಿನಿಂದ ಬಿಳುಪಾಗಿಯೂ, ಎತ್ತರವಾಗಿಯೂ ಕಾಣುವ ರಾಜಬೀದಿಗಳು ನೂರಾರು ಅಟ್ಟಲೆಗಳಿಂದಲೂ [1] ಧ್ವಜಪತಾಕೆಗಳಿಂದಲೂ ಶೋಭಿಸುತ್ತಿರುವುವು. ಅಲ್ಲಿನ ಚಿನ್ನದ ಬಾಗಿಲುಗಳೆಲ್ಲವೂ ವಿಚಿತ್ರಲತೆಗಳಂತಿರುವ ಚಿತ್ರರೇಖೆಗಳಿಂದ ಶೋಭಿಸುತ್ತಿರುವುವು. ಸ್ವರ್ಗದಲ್ಲಿರುವ ಅಮರಾವತಿಯಂತೆ ಬಹಳ ಶುಭ್ರಗಳಾಗಿಯೂ ಮಂಗಳಕರಗಳಾಗಿಯೂ ಇರುವ ಮನೆಗಳಿಂದ ನಿಬಿಡವಾಗಿ, ಅತ್ಯುನ್ನತವಾದ ಬೆಟ್ಟದ ತುದಿಯ ಮೇಲಿರುವ ಆ ಲಂಕಾಪಟ್ಟಣವು, ಆಕಾಶದಲ್ಲಿಯೇ ಕಟ್ಟಿರುವ ಒಂದು ದೊಡ್ಡಪಟ್ಟಣದಂತೆ ತೋರುತ್ತಿತ್ತು. ಹೀಗೆ ರಾಕ್ಷಸೇಂದ್ರನಿಂದ ರಕ್ಷಿತವಾಗಿಯೂ, ವಿಶ್ವಕರ್ಮನಿಂದ ನಿರ್ಮಿತವಾಗಿಯೂ ಇರುವ ಆ ಲಂಕೆಯು ಅಂತರಿಕ್ಷದಲ್ಲಿ ತೂಗಾಡುವಂತಿರುವುದನ್ನು ಕಂಡನು. ಕೈಸಾಲೆಗಳೆಂಬ ಜಘನಗಳಿಂದಲೂ, ಸ್ವಚ್ಛವಾದ ನೀರೆಂಬ ದುಕೂಲದಿಂದಲೂ, ತೋಟೆಗಳ ಮೇಲೆ ಏರಿಸಲ್ಪಟ್ಟ ಶತಘ್ನೀ ಶೂಲಗಳೆಂಬ ತುರುಬಿನಿಂದಲೂ, ಅಟ್ಟಲೆಗಳೆಂಬ ಹೂಮುಡಿಗಳಿಂದಲೂ ಆ ನಗರಿಯು ಒಬ್ಬ ಸುಂದರಸ್ತ್ರೀಯಂತೆ ತೋರುತಿತ್ತು. ವಿಶ್ವಕರ್ಮನಿರ್ಮಿತವಾದರೂ ಮನಸ್ಸಂಕಲ್ಪದಿಂದಲೇ ಮಾಡಿಟ್ಟಂತೆ ಲೋಕಮೋಹಕವಾದ ಆ ಲಂಕೆಯನ್ನು ನೋಡುತ್ತ ಹನುಮಂತನು ಅಲ್ಲಿಂದ ಹಾಗೆಯೇ ಆ ಪಟ್ಟಣದ ಉತ್ತರದಿಕ್ಕಿನ ಬಾಗಿಲನ್ನು ಸೇರಿ, ಅಲ್ಲಿ ನಿಂತು, ಸೀತೆಯನ್ನು ಕಾಣುವ ಉಪಾಯವೇನೆಂದು ಚಿಂತಿಸುತಿದ್ದನು. ಆ ನಗರಿಯು ಕೈಲಾಸಶಿಖರದಂತೆ ಕಾಂತಿವಿಶಿಷ್ಟವಾಗಿ, ಆಕಾಶವನ್ನು ಚುಚ್ಚುವಂತೆ ಮಹೋನ್ನತವಾಗಿ, ಎತ್ತರವಾದ ಉಪ್ಪರಿಗೆಯ ಮನೆಗಳಿಂದ ಮೇಲೆ ಹಾರಿ ಹೋಗುವಂತಿತ್ತು. ಸರ್ಪಗಳಿಂದ ತುಂಬಿದ ಭೋಗವತೀ ಪಟ್ಟಣದಂತೆ ಅನೇಕ ಘೋರರಾಕ್ಷಸರಿಂದ ತುಂಬಿ, ಪೂರ್ವದಲ್ಲಿ ಧನಪತಿಯಾದ ಕುಬೇರನಿಗೆ ವಾಸಸ್ಥಾನವಾಗಿಯೂ ಸುನಿರ್ಮಿತವಾಗಿಯೂ ಸ್ಪಷ್ಟವಾಗಿಯೂ ಇರುವ ಆ

---

1. ಹೂಬಳ್ಳಿ ಮೊದಲಾದ ಚಿತ್ರರೇಖೆಗಳಿಂದ ಕೂಡಿ ಅಲಂಕಾರಾರ್ಥವಾಗಿ ನಡಲ್ಪಟ್ಟವುಗಳಿಗೆ ಪತಾಕೆಗಳೆಂದೂ, ಮೀನು, ಮೊಸಳೆ, ಮುಂತಾದ ಆಕಾರಗಳಿಂದ ಆಯಾ ರಾಜ್ಯಕ್ಕೆ ಅಸಾಧಾರಣ ಚಿಹ್ನಗಳಾಗಿರುವ ಬಾವುಟಗಳಿಗೆ ಧ್ವಜಗಳೆಂದೂ ವ್ಯವಹಾರವು.

ಪಟ್ಟಣದ ಸೊಗಸನ್ನಾಗಲಿ, ಅದರ ವಿಸ್ತಾರವನ್ನಾಗಲಿ ಹೀಗೆಂದೂಹಿಸುವುದೂ ಸಾಧ್ಯವಿಲ್ಲದಂತಿತ್ತು. ಬಿಲದಲ್ಲಿ ಕಾವಲಿರುವ ವಿಷಸರ್ಪಗಳಂತೆ ಕ್ರೂರವಾದ ಕೋರೆಹಲ್ಲುಗಳುಳ್ಳ ಘೋರರಾಕ್ಷಸರನೇಕರು ಶೂಲಪಟ್ಟಸಾದ್ಯಾಯುಧಗಳನ್ನು ಕೈಯಲ್ಲಿ ಹಿಡಿದು, ಅದರ ಸುತ್ತಲೂ ಕಾವಲಿರುವರು. ಹೀಗೆ ಆ ಪಟ್ಟಣಕ್ಕಿರುವ ಬಲವಾದ ಕಾವಲನ್ನೂ, ಅದನ್ನು ಬಳಸಿಕೊಂಡಿರುವ ಅಗಾಧವಾದ ಸಮುದ್ರವನ್ನೂ, ರಾವಣನೆಂಬ ತನ್ನ ಘೋರಶತ್ರುವು ಅದರ ನಡುವೆ ಸೇರಿಕೊಂಡಿರುವುದನ್ನೂ ನೋಡಿದಮೇಲೆ, ಆಂಜನೇಯನ ಮನಸ್ಸಿನಲ್ಲಿ ಪ್ರಬಲವಾದ ಚಿಂತೆಯು ಹುಟ್ಟಿತು. “ಇಲ್ಲಿಗೆ ನಮ್ಮ ಕಡೆಯ ವಾನರರು ಬಂದರೂ ಅವರಿಂದ ಏನೂ ಸಾಧ್ಯವಾಗದು. ಯುದ್ಧಮಾಡಿ ಈ ಲಂಕೆಯನ್ನು ಜಯಿಸಬೇಕೆಂದರೆ ದೇವತೆಗಳಿಂದಲೂ ಸಾಧ್ಯವಿಲ್ಲ. ರಾವಣನೆಂಬ ಕ್ರೂರ ರಾಕ್ಷಸನಿಂದ ರಕ್ಷಿಸಲ್ಪಡುತ್ತಲಿರುವ ಅತಿದುರ್ಗಮವಾದ ಈ ಲಂಕೆಯನ್ನು, ಒಂದು ವೇಳೆ ಮಹಾಬಾಹುವಾದ ರಾಮನು ಪ್ರಯತ್ನಪಟ್ಟು ಬಂದು ಸೇರಿದರೂ ಇಲ್ಲಿ ಅವನೇನು ಮಾಡಬಲ್ಲನು? ಇಲ್ಲಿನ ರಾಕ್ಷಸರು ಅತಿಮೂರ್ಖರಾದುದರಿಂದ ಸಾಮಕ್ಕೆ ವಶರಾಗುವವರಲ್ಲ. ದಾನಕ್ಕೆ ಆಸೆಪಡುವವರಲ್ಲ. ಭೇದದಿಂದ ಬೇರ್ಪಡುವವರಲ್ಲ. ದಂಡೋಪಾಯಕ್ಕೂ ಹೆದರುವವರಲ್ಲ, ಇವರು ಯಾವುದಕ್ಕೂ ಬಗ್ಗುವವರಲ್ಲ. ಇದೂ ಅಲ್ಲದೆ, ವಾಲಿಪುತ್ರನಾದ ಅಂಗದನೊಬ್ಬನು, ನೀಲನೊಬ್ಬನು, ನಾನೊಬ್ಬನು, ಧೀಮಂತನಾದ ನಮ್ಮ ಸುಗ್ರೀವರಾಜನೊಬ್ಬನು; ಈ ನಾಲ್ಕುಮಂದಿ ವಾನರರು ಮಾತ್ರವೇ ಒಂದುವೇಳೆ ಈ ದುರ್ಗಮವಾದ ಲಂಕೆಗೆ ಬರಬಹುದೇ ಹೊರತು, ಬೇರೊಬ್ಬನಿಗೂ ಇಲ್ಲಿಗೆ ಬರುವುದಕ್ಕೂ ಸಾಧ್ಯವಲ್ಲವೆಂದೇ ತೋರುವುದು. ಅವೆಲ್ಲವೂ ಹಾಗಿರಲಿ! ಮೊದಲು ಸೀತೆಯು ಇನ್ನೂ ಬದುಕಿರುವಳೋ ಇಲ್ಲವೋ ಎಂಬುದನ್ನು ತಿಳಿದುಕೊಳ್ಳುವೆನು. ಮೊದಲು ಅವಳನ್ನು ಕಂಡಮೇಲೆ ಮುಂದಿನ ಕಾರ್ಯಗಳ ಸಾಧ್ಯಾಸಾಧ್ಯತೆಯನ್ನು ಯೋಚಿಸಿಕೊಳ್ಳಬಹುದು” ಎಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು. ಆಮೇಲೆ ಕಪಿಶ್ರೇಷ್ಠನಾದ ಆ ಹನುಮಂತನಿಗೆ ಮತ್ತೊಂದಾಲೋಚನೆಯು ಹುಟ್ಟಿತು. ರಾಮನ ಮೇಲ್ಮೆಯನ್ನೇ ಚಿಂತಿಸುತ್ತಿರುವ ಆತನು ಆ ಬೆಟ್ಟದ ಶಿಖರದಲ್ಲಿ ನಿಂತಹಾಗೆಯೇ, ಒಂದು ಮುಹೂರ್ತಕಾಲದವರೆಗೆ ತನ್ನಲ್ಲಿ ತಾನೇ ಚಿಂತಿಸುತ್ತ ಕೊನೆಗೆ, ಈ ರೂಪದಿಂದಲೇ ನಾನು ಈ ರಾಕ್ಷಸರ ನಗರಿಯನ್ನು ಪ್ರವೇಶಿಸಬೇಕೆಂದರೆ ಸಾಧ್ಯವಾಗದು. ಬಲಾಢ್ಯರಾದ ಅನೇಕ ಕ್ರೂರ ರಾಕ್ಷಸರು ಇದನ್ನು ಕಾಯುತ್ತಿರುವರು. ಇಲ್ಲಿನ ರಾಕ್ಷಸರೊಬ್ಬೊಬ್ಬರೂ ಬಹಳ ಪರಾಕ್ರಮವುಳ್ಳವರು. ಮತ್ತು ಬಲವುಳ್ಳವರು. ಇವರೆಲ್ಲರನ್ನೂ ವಂಚಿಸಿಯೇ ನಾನು ಸೀತೆಯನ್ನು ಹುಡುಕಬೇಕೇ ಹೊರತು ಬೇರೆ

ದಾರಿಯಿಲ್ಲ. ಕಂಡೂ ಕಾಣದ ರೂಪದಿಂದ ಈ ರಾತ್ರಿಯಲ್ಲಿಯೇ ಲಂಕೆಯನ್ನು ಪ್ರವೇಶಿಸಿ ನನ್ನ ಈ ದೊಡ್ಡ ಕಾರ್ಯವನ್ನು ಸಾಧಿಸಿಕೊಳ್ಳಬೇಕಾದುದೇ ಈಗ ಯುಕ್ತವು!" ಎಂದು ನಿರ್ಧರಿಸಿಕೊಂಡನು. ಹೀಗೆ ಹನುಮಂತನು ದೇವದಾನವರಿಗೂ ಪ್ರವೇಶಿಸಲಸಾಧ್ಯವಾದ ಆ ಲಂಕಾನಗರಿಯನ್ನು ನೋಡಿ, ಮುಂದೆ ಹೇಗೆ ನಡೆಯಿಸಬೇಕೆಂದು ಚಿಂತಿಸುತ್ತ ಏನೊಂದೂ ತೋರದೆ ಬಾರಿಬಾರಿಗೂ ನಿಟ್ಟುಸಿರನ್ನು ಬಿಡುತ್ತ, "ದುರಾತ್ಮನಾದ ರಾವಣನ ಕಣ್ಣಿಗೆ ಬೀಳದಂತೆ ಈ ಲಂಕೆಯನ್ನು ಹುಡುಕಿ, ಜನಕಪುತ್ರಿಯಾದ ಸೀತೆಯನ್ನು ಯಾವ ಉಪಾಯದಿಂದ ನೋಡಲಿ! ಮಹಾತ್ಮನಾದ ರಾಮನ ಕಾರ್ಯವು ಕೆಡದಂತೆ ನಡೆಯುವ ರೀತಿಯು ಹೇಗೆ? ಯಾರೂ ಇಲ್ಲದೆ ಸೀತೆಯೊಬ್ಬಳೇ ಇರುವ ಸಮಯದಲ್ಲಿ ನಾನೊಬ್ಬನೇ ಹೋಗಿ ಅವಳನ್ನು ನೋಡಿಬರುವುದು ತಾನೇ ಹೇಗೆ? ಅವಿವೇಕಿಯಾದ ದೂತನ ವಶದಲ್ಲಿ ಬಿಟ್ಟರೆ, ಪೂರ್ಣವಾಗಿ ಕೈಗೂಡಿ ಬರುತ್ತಿರುವ ಕಾರ್ಯವೂ ಕೂಡ ದೂರಾಲೋಚನೆಯಿಲ್ಲದೆ ದೇಶಕಾಲಗಳಿಗೆ ಅನುಸಾರವಾಗದೆ, ಸೂರ್ಯೋದಯಕಾಲದ ಕತ್ತಲೆಯಂತೆ ಕೆಟ್ಟುಹೋಗುವುದು. ಮೊದಲೇ ಕಾರ್ಯಾಕಾರ್ಯಗಳನ್ನು ಚೆನ್ನಾಗಿ ವಿಮರ್ಶಿಸಿ, ದೂರಾಲೋಚನೆಯಿಂದ ನಿಶ್ಚಯಿಸಿದ ಬುದ್ಧಿಯೂ ಕೂಡ ಅಂತಹ ಬುದ್ಧಿಹೀನರಾದ ದೂತರ ವಶಕ್ಕೆ ಬಿಟ್ಟರೆ ಫಲಿಸದೆ ಕೆಟ್ಟುಹೋಗುವುದು. ಏನೂ ತಿಳಿಯದಿದ್ದರೂ ತಾವು ಎಲ್ಲವನ್ನೂ ಬಲ್ಲೆವೆಂಬ ಗರ್ವವುಳ್ಳ ದೂತರು ಕೈಗೆ ಬಂದ ಕಾರ್ಯವನ್ನೂ ಕೆಡಿಸಿ ಅನರ್ಥವನ್ನೂ ತಂದಿಡುವರು. ಈಗ ಮಾಡುವುದೇನು! ರಾಮನ ಕಾರ್ಯವು ಕೆಡದಿರುವುದಕ್ಕೆ ಉಪಾಯವೇನು? ನಾನು ಏನೂ ತಿಳಿಯದ ಮೂಢನೆಂದು ಹೇಳಿಸಿಕೊಳ್ಳದೆ ಚಾತುರ್ಯದಿಂದ ಕಾರ್ಯಸಾಧನೆಯನ್ನು ಮಾಡಿಕೊಂಡು ಹೋಗುವ ರೀತಿಯಾವುದು? ಸಮುದ್ರಲಂಘನವನ್ನು ಮಾಡಿ ಬಂದುದು ವ್ಯರ್ಥವಾಗಿ ಹೋಗದಂತೆ ಮಾಡುವುದಕ್ಕೆ ದಾರಿಯೇನು? ಈಗ ನಾನು ಮಾತ್ರ ರಾಕ್ಷಸರ ಕಣ್ಣಿಗೆ ಬಿದ್ದುಬಿಟ್ಟರೆ, ರಾವಣನನ್ನು ಕೊಲ್ಲಬೇಕೆಂದಿರುವ ಆ ರಾಮನ ಕಾರ್ಯವೆಲ್ಲವೂ ಕೆಟ್ಟುಹೋಗುವುದೇ ನಿಜವು. ರಾಕ್ಷಸರಿಗೆ ತಿಳಿಯದಂತೆ ಈ ಪಟ್ಟಣದಲ್ಲಿ ಯಾವಕಡೆಯಲ್ಲಿರುವುದಕ್ಕೂ ಸಾಧ್ಯವಲ್ಲ. ಬೇರೊಬ್ಬರು ರಾಕ್ಷಸರೂಪದಿಂದಲೇ ಇಲ್ಲಿಗೆ ಬಂದರೂ ಅವರು ಕಂಡುಹಿಡಿಯುವರು. ಹೀಗಿರುವಾಗ ಬೇರೆ ರೂಪದಿಂದ ಹೋದರೆ ಇನ್ನು ಹೇಳತಕ್ಕುದೇನು? ಗಾಳಿಯಾದರೂ ಇಲ್ಲಿ ರಾಕ್ಷಸರಿಗೆ ತಿಳಿಯದಹಾಗೆ ಸಂಚರಿಸಲಾರದೆಂದೇ ನನಗೆ ತೋರುವುದು. ಬಲಾಢ್ಯರಾದ ಈ ರಾಕ್ಷಸರಿಗೆ ತಿಳಿಯದುದೊಂದೂ ಇಲ್ಲವು. ಇಲ್ಲಿಗೆ ನಾನು ಈ ದೊಡ್ಡ ರೂಪದಿಂದಲೇ ಹೋದಪಕ್ಷದಲ್ಲಿ ನಾನೂ ನಾಶ

ಹೊಂದುವುದಲ್ಲದೆ ಪ್ರಭುವಾದ ರಾಮನ ಕೆಲಸವೂ ಕೆಟ್ಟುಹೋಗುವುದು. ಆದುದರಿಂದ ಕಾರ್ಯಸಿದ್ಧಿಗಾಗಿ ಈ ರಾತ್ರಿಯಲ್ಲಿ ನನ್ನ ರೂಪವನ್ನು ಸಣ್ಣದಾಗಿ ಮಾಡಿಕೊಂಡು, ಈ ಲಂಕೆಯನ್ನು ನುಗ್ಗಿಬಿಡುವೆನು. ಬೇರೊಬ್ಬರಿಗೆ ಪ್ರವೇಶಿಸಲಸಾಧ್ಯವಾದ ಈ ರಾವಣ ನಗರಿಯನ್ನು ಈ ರಾತ್ರಿಯಲ್ಲಿಯೇ ಪ್ರವೇಶಿಸಿ, ಇಲ್ಲಿನ ಸಮಸ್ತ ಗೃಹಗಳನ್ನೂ ಹುಡುಕಿ ಸೀತೆಯನ್ನು ನೋಡುವುದೇ ನಿಜವು” ಹೀಗೆಂದು ನಿಶ್ಚಯಿಸಿಕೊಂಡು ಹನುಮಂತನು ಸೀತೆಯನ್ನು ಹುಡುಕುವುದರಲ್ಲಿ ಆತುರವುಳ್ಳವನಾಗಿ ಸೂರ್ಯಾಸ್ತಸಮಯವನ್ನೇ ನಿರೀಕ್ಷಿಸುತಿದ್ದನು. ಸೂರ್ಯನು ಮುಳುಗಿ ರಾತ್ರಿಯೂ ಸಮೀಪಿಸಿತು. ಆಗ ಹನುಮಂತನು ತನ್ನ ದೇಹವನ್ನು ಸಂಕೋಚಪಡಿಸಿಕೊಂಡು, ಬೆಕ್ಕಿನ ಗಾತ್ರದಷ್ಟು ಮೈಯುಳ್ಳವನಾಗಿ, ಅತ್ಯಾಶ್ಚರ್ಯಕರವಾದ ರೂಪವನ್ನು ಹೊಂದಿಬಿಟ್ಟನು. ಪ್ರದೋಷಕಾಲಕ್ಕೆ ಸರಿಯಾಗಿ ಈ ವೀರ್ಯವಂತನು ವೇಗದಿಂದ ಹೊರಟು ವಿಸ್ತಾರವಾದ ರಾಜಮಾರ್ಗಗಳುಳ್ಳ ಲಂಕಾಪುರಿಯನ್ನು ಪ್ರವೇಶಿಸುವುದಕ್ಕೆ ಸಿದ್ಧನಾದನು. ಅಲ್ಲಿ ಅವನು, ಉಪ್ಪರಿಗೆಗಳ ಸಾಲಿನಿಂದಲೂ, ಚಿನ್ನಬೆಳ್ಳಿಗಳ ಕಂಬಗಳಿಂದಲೂ, ಸುವರ್ಣಮಯವಾದ ಗವಾಕ್ಷಗಳಿಂದಲೂ ನಿಬಿಡವಾಗಿ, ಗಂಧರ್ವನಗರದಂತೆ ಆಶ್ಚರ್ಯಕರವಾಗಿ ಮತ್ತು ಏಳೆಂಟು ಕಕ್ಷ್ಯಗಳುಳ್ಳ ಉಪ್ಪರಿಗೆಗಳಿಂದ ಕೂಡಿರುವ ಆ ಮಹಾನಗರಿಯ ಅಂದವನ್ನು ನೋಡುತಿದ್ದನು. ಸ್ಫಟಿಕದ ಹರಳುಗಳಿಂದ ಕೆತ್ತಲ್ಪಟ್ಟ ಅಲ್ಲಿನ ಸುವರ್ಣದ ನೆಲಗಟ್ಟುಗಳನ್ನೂ, ವೈಡೂರ್ಯರತ್ನಗಳಿಂದ ಚಿತ್ರಿತವಾಗಿ ಮುತ್ತಿನ ಕುಚ್ಚುಗಳಿಂದಲಂಕರಿಸಲ್ಪಟ್ಟ ಅಲ್ಲಿನ ರಾಕ್ಷಸರ ಮನೆಗಳನ್ನೂ ಕಂಡನು. ಅಲ್ಲಲ್ಲಿ ಕಟ್ಟಿರುವ ಚಿತ್ರವಿಚಿತ್ರಗಳಾದ ಚಿನ್ನದ ತೋರಣಗಳು ಆ ಲಂಕಾನಗರಿಗೆ ಅತಿಶಯವಾದ ಒಂದು ಶೋಭೆಯನ್ನುಂಟುಮಾಡುತಿದ್ದುವು. ಹೀಗೆಂದೂಹಿಸುವುದಕ್ಕೂ ಸಾಧ್ಯವಲ್ಲದ ಅದ್ಭುತಾಕಾರವುಳ್ಳ ಆ ಲಂಕೆಯನ್ನು ನೋಡಿದೊಡನೆ, ಈ ಹನುಮಂತನಿಗೆ, ಅದನ್ನು ಹೇಗೆ ಪ್ರವೇಶಿಸುವುದೆಂಬ ಚಿಂತೆಯೂ, ಅದರ ಅದ್ಭುತಾಕಾರವನ್ನು ನೋಡುವುದರಿಂದುಂಟಾದ ಸಂತೋಷವೂ ಸಮವಾಗಿ ನೆಲೆಗೊಂಡಿತು.

ಸೀತಾನ್ವೇಷಣದಲ್ಲಿ ಆತುರವುಳ್ಳ ಆ ವಾಯುಪುತ್ರನು ಬಿಳುಪಾಗಿಯೂ, ಮಹೋನ್ನತವಾಗಿಯೂ ಇರುವ ಉಪ್ಪರಿಗೆಗಳ ಸಾಲುಳ್ಳುದಾಗಿಯೂ, ಚಿನ್ನದ ಕುಚ್ಚಿನ ತೋರಣವುಳ್ಳುದಾಗಿಯೂ, ರಾವಣನ ಭುಜಗಳಿಂದ ರಕ್ಷಿತವಾಗಿಯೂ ಭಯಂಕರ ಪರಾಕ್ರಮವುಳ್ಳ ರಾಕ್ಷಸರಿಂದ ನಿಬಿಡವಾಗಿಯೂ ಇರುವ ಲೋಕಪ್ರಸಿದ್ಧವಾದ ಪಟ್ಟಣವನ್ನು ನೋಡುತ್ತ, ಹೀಗೆ ಚಿಂತಿಸುತ್ತಿರುವಷ್ಟರಲ್ಲಿ, ಚಂದ್ರನೂ ಇವನಿಗೆ ಸಹಾಯಮಾಡುವವನಂತೆ, ನಕ್ಷತ್ರಸಮೂಹದಿಂದ ಪರಿವೃತವಾಗಿ ತನ್ನ

ಚಂದ್ರಿಕೆಯಿಂದ ಸಮಸ್ತಲೋಕವನ್ನೂ ಬೆಳಗುತ್ತ, ಅನೇಕ ಸಹಸ್ರಕಿರಣಗಳೊಡನೆ ಆಕಾಶದಲ್ಲಿ ಉದಿಸಿಬಂದನು. ಶಂಖದಂತೆಯೂ, ಹಾಲಿನಂತೆಯೂ, ತಾವರೆದಂಟನಂತೆಯೂ, ಶುಭ್ರವರ್ಣವುಳ್ಳವನಾಗಿ, ಕೊಳದಲ್ಲಿ ಈಜಾಡುವ ಹಂಸದಂತೆ ಆಕಾಶದಲ್ಲಿ ಉದಿಸಿ ಬಂದಿರುವ ಚಂದ್ರನನ್ನು ಈ ಆಂಜನೇಯನೂ ನೋಡಿದನು.

ಇಲ್ಲಿಗೆ ಎರಡನೆಯ ಸರ್ಗವು.

---

## ಲಂಕಾದೇವತೆಯು ಹನುಮಂತನನ್ನು ತಡೆದುದು ; ಹನುಮಂತನು ಅವಳನ್ನು ನಿಗ್ರಹಿಸಿ ಅವಳ ಅನುಮತಿಯಿಂದ ಪಟ್ಟಣಪ್ರವೇಶಮಾಡಿದುದು.

ಹೀಗೆ ಹನುಮಂತನು ಆಕಾಶದಲ್ಲಿ ತೂಗಾಡುವ ಮೇಘದಂತಿದ್ದ ಲಂಬವೆಂಬ ಆ ಪರ್ವತಶಿಖರದಲ್ಲಿ ನಿಂತು, ಪ್ರಕೃತಕಾರ್ಯವನ್ನು ಚಿಂತಿಸಿ ಮನಸ್ಸಿಗೆ ಧೈರ್ಯವನ್ನು ತಂದುಕೊಂಡನು. ಬುದ್ಧಿಶಾಲಿಯಾಗಿಯೂ, ಮಹಾ ವೀರ್ಯವುಳ್ಳವನಾಗಿಯೂ ಇರುವ ಆ ವಾನರೋತ್ತಮನು ಆ ರಾತ್ರಿಯಲ್ಲಿಯೇ ಲಂಕೆಯನ್ನು ಪ್ರವೇಶಿಸಿಬಿಡಬೇಕೆಂದೆಣಿಸಿದನು. ರಾವಣರಕ್ಷಿತವಾದ ಆ ಪಟ್ಟಣದಲ್ಲಿಯಾದರೋ ಎಲ್ಲಿ ನೋಡಿದರೂ ಅಂದವಾದ ಅಡವಿಗಳೂ, ಸ್ವಚ್ಛಜಲವುಳ್ಳ ಮಡುಗಳೂ ತುಂಬಿರುವುವು. ಎತ್ತ ನೋಡಿದರೂ ಶರತ್ಕಾಲದ ಮೇಘಗಳಂತಿರುವ ಉಪ್ಪರಿಗೆ ಮನೆಗಳು ಕಂಗೊಳಿಸುವುವು. ಅಲ್ಲಿ ಯಾವಾಗಲೂ ಜನಗಳ ಕೋಲಾಹಲವು ಸಮುದ್ರಘೋಷದಂತೆ ಕೇಳಿಸುತ್ತಿರುವುದು. ಆ ಪಟ್ಟಣದ ಯಾವಮೂಲೆಯಲ್ಲಿ ನಿಂತರೂ ತಂಪಾದ ಸಮುದ್ರದ ಗಾಳಿಯು ಬೀಸುತ್ತಿರುವುದು. ಕುಬೇರನಗರಿಯಾದ ಅಲಕಾನಗರಿಯೋ ಎಂಬಂತೆ ವಿಶೇಷಧನಾಢ್ಯರಿಂದ ನಿಬಿಡವಾಗಿರುವುದು. ಸುಣ್ಣಬಳಿದು ಬಿಳುಪಾದ ಬಾಗಿಲುವಾಡಗಳೆಲ್ಲವೂ ಜಗತಿಕಟ್ಟುಗಳಿಂದಲೂ ತೋರಣಗಳ ಸಾಲಿನಿಂದಲೂ ಶೋಭಿಸುತ್ತಿರುವುವು. ಸರ್ಪಗಳಿಗೆ ನೆಲೆಯಾಗಿ ಪಾತಾಳದಲ್ಲಿ ಅಡಗಿರುವ ಭೋಗವತೀಪಟ್ಟಣದಂತೆ ಕಾಣುತ್ತಿರುವುದು. ಅಲ್ಲಿನ ಉಪ್ಪರಿಗೆಗಳು ಮಿಂಚಿನಿಂದ ಕೂಡಿದ ಮೇಘಗಳಿಗೆ ವಿಶ್ರಮಸ್ಥಾನವಾಗಿಯೂ, ನಕ್ಷತ್ರಮಾರ್ಗಗಳಿಗೆ ನೆಲೆಯಾಗಿಯೂ, ಮಂದಮಾರುತಕ್ಕೆ ಸಂಚಾರಸ್ಥಾನವಾಗಿಯೂ ಇರುವುದರಿಂದ, ಆ ಪುರವು ಇಂದ್ರನ ಅಮರಾವತಿಯಂತೆಯೇ ಶೋಭಿಸುತ್ತಿರುವುದು. ಅದರ ಸುತ್ತಲೂ ಸುವರ್ಣಮಯವಾದ ಪ್ರಾಕಾರವು ಬಳಸಿಕೊಂಡಿರುವುದು. ಅಲ್ಲಲ್ಲಿ ಕಿರುಗೆಜ್ಜೆಗಳ ಘಲಘಲಧ್ವನಿ

ಯೊಡನೆ ಧ್ವಜಪತಾಕೆಗಳು ಆಡುತ್ತಿರುವುವು. ಇಂತಹ ಲಂಕಾನಗರಿಯನ್ನು ಸಮೀಪಿಸಿ, ಅದರ ಪ್ರಾಕಾರದ ಬಳಿಯಲ್ಲಿ ನಿಂತು. ಹನುಮಂತನು ಆ ಪಟ್ಟಣದ ನಾಲ್ಕು ಕಡೆಗಳನ್ನೂ ನೋಡಿ ಆಶ್ಚರ್ಯದಿಂದ ಬೆರಗಾಗಿದ್ದನು. ಇದಲ್ಲದೆ ಪ್ರಾಕಾರದ ಮುಂಭಾಗದಲ್ಲಿ ಚಿನ್ನದಬಾಗಿಲುಗಳು' ಅದರ ಮುಂದೆ ವೈಡೂರ್ಯದ ಜಗಲಿಗಳು! ವಜ್ರ,ಸ್ಫಟಿಕ, ಮುತ್ತು, ಕೆಂಪು ಮುಂತಾದ ನವರತ್ನಗಳಿಂದ ಕೆತ್ತಲ್ಪಟ್ಟ ನೆಲಗಟ್ಟುಗಳು ! ಪುಟಹಾಕಿದ ಚಿನ್ನದಿಂದ ಮಾಡಲ್ಪಟ್ಟ ಜಗಲಿಗಳು ! ಅವುಗಳ ಮೇಲೆ ಚೊಕ್ಕಬೆಳ್ಳಿಯ ಚಿತ್ರದ ಕೆಲಸಗಳು! ಆ ಜಗಲಿಗಳ ಮುಂದೆ ವೈಡೂರ್ಯದ ಸೋಪಾನಗಳು! ಆ ಸೋಪಾನಗಳ ಕೆಳಗೆ ಸ್ಫಟಿಕದ ಮರಳುಗಳಿಂದ ತುಂಬಿದ ಅಂಗಳಗಳು ! ಇವುಗಳಿಂದ ಮನೋಹರವಾದ ಅಲ್ಲಿನ ದ್ವಾರಪ್ರದೇಶವನ್ನು ನೋಡಿದನು. ಮತ್ತು ಅಲ್ಲಲ್ಲಿ ಅಂದವಾದ ತೋಟ್ಟಿಯ ಮನೆಗಳೂ ಆಕಾಶಕ್ಕೆ ಹಾರಿ ಹೋಗುವಂತಿರುವ ಮಹೋನ್ನತಗಳಾದ ಉಪ್ಪರಿಗೆಗಳೂ ಗೋಚರಿಸುತಿದ್ದುವು. ಮತ್ತು ಆ ಪ್ರಾಕಾರದ ಬಾಗಿಲಲ್ಲಿ ಒಂದು ಕಡೆಯಿಂದ ಕ್ರೌಂಚಪಕ್ಷಿಗಳ ಕೂಗು! ಮತ್ತೊಂದು ಕಡೆಯಿಂದ ನವಿಲುಗಳ ಕೇಕಾಧ್ವನಿ! ಇನ್ನೊಂದು ಕಡೆಯಲ್ಲಿ ರಾಜಹಂಸಗಳ ಕಲಧ್ವನಿ! ಒಂದು ಕಡೆಯಿಂದ ಮಂಗಳವಾದ್ಯಧ್ವನಿಗಳು! ಬೇರೊಂದು ಕಡೆಯಿಂದ ಸ್ತ್ರೀಯರ ಆಭರಣಧ್ವನಿಗಳು ! ಇವೆಲ್ಲವೂ ಈ ಅಂಜನೇಯನ ಕಿವಿಗೆ ಬೀಳುತಿದ್ದುವು. ಪೂರ್ವದಿಕ್ಕಿನಲ್ಲಿದ್ದ ಇಂದ್ರನಗರಿಯೇ ಅಲ್ಲಿಗೆ ಬಂದು ನೆಲಸಿದಂತೆ ಅತಿ ವೈಭವದಿಂದ ಕೂಡಿದುದಾಗಿಯೂ, ಈಗ ಆಕಾಶಕ್ಕೆ ಹಾರಿಹೋಗಬೇಕೆಂದು ಪ್ರಯತ್ನಿಸುತ್ತಿದೆಯೋ ಎಂಬಂತೆ ಮಹೋನ್ನತವಾಗಿಯೂ ಇರುವ ಆ ಪಟ್ಟಣವನ್ನು ನೋಡಿ ಹನುಮಂತನಿಗೆ ಬಹಳ ಹರ್ಷವುಂಟಾಯಿತು. ಸರ್ವೋತ್ತಮವಾಗಿಯೂ, ಸರ್ವಸೌಭಾಗ್ಯಯುಕ್ತವಾಗಿಯೂ ಇರುವ ರಮ್ಯವಾದ ಆ ರಾಕ್ಷಸರಾಜನ ಪಟ್ಟಣವನ್ನು ನೋಡಿ ಹನುಮಂತನು ತನ್ನ ಮನಸ್ಸಿನಲ್ಲಿ "ಅಹಾ! ಶಸ್ತ್ರಪಾಣಿಗಳಾದ ರಾವಣನ ಸೈನಿಕರಿಂದ ರಕ್ಷಿತವಾದ ಈ ಪಟ್ಟಣವನ್ನು ಬೇರೆ ಯಾರೂ ತಮ್ಮ ಶಕ್ತಿಯಿಂದ ನುಗ್ಗಿ ಬರಲಾರರು. ಒಂದುವೇಳೆ ಪ್ರಯತ್ನಪಟ್ಟರೆ, ಕುಮುದಾಂಗದರಿಬ್ಬರು, ವಾನರೇಂದ್ರನಾದ ಸುಷೇಣನೊಬ್ಬನು, ಮೈಂದದ್ವಿವಿದರಿಬ್ಬರು, ಇವರಿಗೆಮಾತ್ರ ಸಾಧ್ಯವಾದರೂ ಆಗಬಹುದು. ಸೂರ್ಯಪುತ್ರನಾದ ಸುಗ್ರೀವನೂ ಕುಶಪರ್ವನೆಂಬ ಕಪಿಯೂ, ಋಕ್ಷನೂ, ಕೇತಮಾಲನೂ, ಇದನ್ನು ಸಾಧಿಸಬಲ್ಲರೆಂಬುದರಲ್ಲಿಯೂ ಸಂದೇಹವಿಲ್ಲ. ಹಾಗೆಯೇ ನನಗೂ ಅಷ್ಟಾಗಿ ಇದು ಅಸಾಧ್ಯವಾಗಿರದು" ಎಂದು ಚಿಂತಿಸಿ, ಶ್ರೀರಾಮಲಕ್ಷ್ಮಣರಂತೂ ಇದನ್ನು ಅನಾಯಾಸದಿಂದಲೇ ಸಾಧಿಸಬಹುದೆಂದೂ ನಿಶ್ಚಯಿಸಿಕೊಂಡು, ಮನಸ್ಸಿನಲ್ಲಿ ಸಂತೋಷ

ದಿಂದ ಹಿಗ್ಗುತ್ತಿದ್ದನು. ಪುನಃ ಆ ವಾನರೋತ್ತಮನು ಸುತ್ತಲೂ ಚೆನ್ನಾಗಿ ಕಣ್ಣಿಟ್ಟುನೋಡುವಾಗ ಆ ನಗರಿಯು ರತ್ನರಾಶಿಗಳೆಂಬ ಬಟ್ಟೆಯನ್ನುಟ್ಟು, ಗೋಕುಲಗಳೆಂಬ ತಲೆದುರುಬುಗಳಿಂದ ಕೂಡಿ ಯಂತ್ರಶಾಲೆಗಳೆಂಬ ಸ್ತನಗಳಿಂದ ಶೋಭಿಸುತ್ತಿರುವ ಸರ್ವಾಲಂಕಾರಭೂಷಿತೆಯಾದ ಒಬ್ಬ ಉತ್ತಮಸ್ತ್ರೀಯಂತೆ ಕಾಣುತ್ತಿತ್ತು. ಅಲ್ಲಿನ ದೊಡ್ಡ ಮನೆಗಳ ಕಾಂತಿಯಿಂದಲೇ ಅಲ್ಲಿನ ಅಂಧಕಾರ ವೆಲ್ಲವೂ ಅಡಗಿ ಹೋಗುವಂತೆ ಪ್ರಕಾಶಮಾನವಾಗಿತ್ತು. ಆ ಲಂಕೆಯನ್ನು ಪ್ರವೇಶಿಸುವುದಕ್ಕಾಗಿ ಮಹಾಬಲಾಢ್ಯನಾದ ಈ ವಾನರೋತ್ತಮನು ಮುಂದೆ ಬರುತ್ತಿರುವಾಗ, ಲಂಕಾಧಿದೇವತೆ ಮೊದಲು ಆತನನ್ನು ಕಂಡಳು. ರಾವಣ ರಕ್ಷಿತೆಯಾದ ಆ ಲಂಕೆಯು ಈತನು ಒಳಗೆ ಬರುವುದನ್ನು ಕಂಡೊಡನೆ, ಮೇಲೆದ್ದು ನಿಂತು, ವಿಕಾರವಾದ ಮುಖವುಳ್ಳವಳಾಗಿ, ಆ ವಾಯುಪುತ್ರನ ಮುಂದೆ ನಿಂತು ಉಚ್ಚಸ್ವರದಿಂದ ಆರ್ಭಟಿಸುತ್ತ, ಆವನನ್ನು ಕುರಿತು "ಎಲೆ ಕಾಡುಕಪಿಯೆ! ನೀನು ಯಾರು ? ಇಲ್ಲಿಗೆ ಬಂದ ಕಾರ್ಯವೇನು ? ನಿನ್ನ ಪ್ರಾಣವಿರುವುದರೊಳಗಾಗಿ ನಿಜಸ್ಥಿತಿಯನ್ನು ಹೇಳಿಬಿಡು ? ಸುತ್ತಲೂ ರಾವಣನ ಸೈನ್ಯದಿಂದ ರಕ್ಷಿತವಾದ ಈ ಲಂಕೆಯನ್ನು ಪ್ರವೇಶಿಸಬೇಕೆಂದರೆ, ವಾನರನಾದ ನಿನಗೆ ಎಂದಿಗೂ ಸಾಧ್ಯವಲ್ಲ" ಎಂದಳು. ಹೀಗೆ ಅಡ್ಡಗಟ್ಟಿ ಕೂಗುತ್ತಿರುವ ಆಕೆಯನ್ನು ನೋಡಿ ವೀರನಾದ ಹನುಮಂತನು, "ಎಲೆ ರಾಕ್ಷಸಿ! ನೀನು ನನ್ನನ್ನು ಪ್ರಶ್ನೆಮಾಡುವುದರಿಂದ ನನ್ನ ನಿಜಸ್ಥಿತಿಯನ್ನು ನಿನಗೆ ಮುಂದೆ ತಿಳಿಸುವೆನು. ಮೊದಲು ನೀನು ಯಾರೆಂಬುದನ್ನು ನನಗೆ ತಿಳಿಸು. ವಿಕಾರವಾದ ಕಣ್ಣುಳ್ಳ ನೀನು ಈ ಪಟ್ಟಣದ ಬಾಗಿಲಲ್ಲಿ ನಿಂತಿರುವುದೇಕೆ ? ಹೀಗೆ ಭಯಂಕರಸ್ವರೂಪಳಾಗಿ ನನ್ನನ್ನು ತಡೆದು ಹೆದರಿ ಸುವುದಕ್ಕೆ ಕಾರಣವೇನು ?" ಎಂದನು. ಹನುಮಂತನು ಹೇಳಿದ ಈ ವಾಕ್ಯ ವನ್ನು ಕೇಳಿ, ಕಾಮರೂಪಿಣಿಯಾದ ಆ ಲಂಕೆಯು ಬಹಳ ಕೋಪಗೊಂಡು, ಕ್ರೂರಸ್ವರದಿಂದ ಆತನನ್ನು ಕುರಿತು "ಎಲೈ ವಾನರನೆ! ನಾನು ಇಲ್ಲಿನ ರಾಕ್ಷಸರಿಗೆ ರಾಜನಾದ, ಮಹಾತ್ಮನಾದ ರಾವಣನ ಆಜ್ಞೆಯಂತೆ ಈ ಪಟ್ಟಣಕ್ಕೆ ಕಾವಲಿರುವೆನು. ನನ್ನನ್ನಿದಿರಿಸುವುದು ಯಾರಿಗೂ ಸಾಧ್ಯವಲ್ಲ. ನನ್ನನ್ನು ತಿರಸ್ಕರಿಸಿ ಈ ಲಂಕೆಗೆ ಪ್ರವೇಶಿಸುವುದಕ್ಕೂ ನಿನ್ನಿಂದ ಸಾಧ್ಯವಾಗದು. ಈಗಲೇ ನೀನು ನನ್ನಿಂದ ಹತನಾಗಿ ಪ್ರಾಣವನ್ನು ಬಿಟ್ಟು ನೆಲದಮೇಲೆ ಮಲಗುವುದರಲ್ಲಿ ಸಂದೇಹವಿಲ್ಲ. ಎಲೆ ಕಪಿಯೇ! ನಾನೇ ಲಂಕಾ ನಗರಿಯೆಂದು ತಿಳಿ! ನಾನೇ ಇದನ್ನು ಸುತ್ತಲೂ ಕಾಯುತ್ತಿರುವೆನು. ಇದ್ದ ಸ್ಥಿತಿಯನ್ನು ನಿನಗೆ ತಿಳಿಸಿರುವೆನು" ಎಂದಳು. ಲಂಕೆಯು ಹೇಳಿದ ಈ ಮಾತನ್ನು ಕೇಳಿದಾಗಲೂ, ವಾಯುಪುತ್ರ

ನಾದ ಹನುಮಂತನು ಸ್ವಲ್ಪವೂ ಭಯಪಡದೆ, ತನ್ನ ಪ್ರಯತ್ನವನ್ನೂ ಬಿಡದೆ, ಒಂದು ದೊಡ್ಡ ಬೆಟ್ಟದಂತೆ ಅವಳ ಮುಂದೆ ಅಲ್ಲಾಡದೆ ನಿಂತಿದ್ದನು. ಬುದ್ಧಿಯಿಂದಲೂ, ಪರಾಕ್ರಮದಿಂದಲೂ ಮೇಲೆನಿಸಿಕೊಂಡ ಆ ಹನುಮಂತನು ವಿಕಾರವಾದ ಸ್ತ್ರೀ ರೂಪದಿಂದಿರುವ ಆಕೆಯನ್ನು ನೋಡಿ, ಮೃದುವಾಕ್ಯದಿಂದ "ಎಲೆ ಲಂಕೆ! ಉಪ್ಪರಿಗೆಗಳಿಂದಲೂ, ಕೋಟೆಗಳಿಂದಲೂ ಪುರದ್ವಾರಗಳಿಂದಲೂ, ಶೋಭಿಸುವ ಈ ಲಂಕಾಪುರಿಯನ್ನು ನೋಡಬೇಕೆಂಬುದಕ್ಕಾಗಿಯೇ ನಾನು ಇಲ್ಲಿಗೆ ಬಂದೆನು. ಇದನ್ನು ನೋಡಿ ಬರಬೇಕೆಂದು ನನಗೆ ಬಹಳ ಆಸೆಯುಂಟು. ಈ ಲಂಕೆಯಲ್ಲಿರುವ ವನಗಳನ್ನೂ, ತೋಟಗಳನ್ನೂ, ದೊಡ್ಡ ದೊಡ್ಡ ಅಡವಿಗಳನ್ನೂ, ಇಲ್ಲಿನ ಮರಗಳನ್ನೂ ಸುತ್ತಿ ನೋಡುವುದಕ್ಕಾಗಿಯೇ ಬಂದಿರುವೆನು" ಎಂದನು. ಇದನ್ನು ಕೇಳಿ ಲಂಕೆಯು ತಿರುಗಿ ಆಂಜನೇಯನನ್ನು ಕುರಿತು, ಮತ್ತಷ್ಟು ಕ್ರೂರಸ್ವರದಿಂದ ಕೂಗುತ್ತ "ಎಲೆ ಬುದ್ಧಿಗೆಟ್ಟ ವಾನರಾಧಮನೇ! ನೀನು ಮೊದಲು ನನ್ನನ್ನು ಜಯಿಸದೆ ರಾವಣರಕ್ಷಿತವಾದ ಈ ಪಟ್ಟಣವನ್ನು ಹೊಕ್ಕುನೋಡಿ ಬರಬೇಕೆಂದರೆ ಸಾಧ್ಯವೆ?" ಎಂದಳು. ಆಗ ಹನುಮಂತನು ಆ ರಾಕ್ಷಸಿಯನ್ನು ಕುರಿತು ಪುನಃ ಮೃದುವಾಕ್ಯದಿಂದ, "ಎಲೆ ಭದ್ರೆ! ಈ ಪಟ್ಟಣವನ್ನು ಒಂದಾವರ್ತಿ ಚೆನ್ನಾಗಿ ನೋಡಿ, ಆ ಮೇಲೆ ನಾನು ಬಂದ ದಾರಿಯನ್ನು ಹಿಡಿದು ಹಿಂತಿರುಗಿ ಹೋಗುವೆನು" ಎಂದನು. ಇದನ್ನು ಕೇಳಿ ಆ ಲಂಕೆಯ ಕೋಪವು ಮಿತಿಮೀರಿಹೋಯಿತು. ಆಗಲೇ ಭಯಂಕರವಾಗಿ ಕೂಗುತ್ತ ಮದದಿಂದ ಮುಂದೆ ಬಂದು, ತನ್ನ ಅಂಗೈಯಿಂದ ಹನುಮಂತನನ್ನು ಬಲವಾಗಿ ಹೊಡೆದಳು. ಲಂಕೆಯು ತನ್ನನ್ನು ಹೊಡೆದೊಡನೆ ಹನುಮಂತನು ಕುಪಿತನಾಗಿ, ಮಹಾಧ್ವನಿಯಿಂದ ಗರ್ಜಿಸುತ್ತ ತನ್ನ ಎಡದ ಕೈಯ್ಯಬೆರಳುಗಳನ್ನು ಸೇರಿಸಿ ಹಿಡಿದು ಆ ಮುಷ್ಟಿಯಿಂದ ಆಕೆಯನ್ನು ಹೊಡೆದನು. ಆಗ ಕೋಪದಿಂದ ಅವನಿಗೆ ಮೈತಿಳಿಯದಂತಾಗಿದ್ದರೂ, ಸ್ತ್ರೀಯನ್ನು ಕೊಲ್ಲಬಾರದೆಂಬ ಬುದ್ಧಿಯಿಂದ ಆ ಕೋಪವನ್ನು, ಸಂಪೂರ್ಣವಾಗಿ ತೋರಿಸಲಾರದೆ ಹೋದನು. ಹಾಗಿದ್ದರೂ ಅವನ ಎಡದ ಕೈಯ್ಯ ಆ ಮುಷ್ಟಿಪ್ರಹಾರವನ್ನೂ ಆ ರಾಕ್ಷಸಿಯು ತಡೆಯಲಾರದೆ, ಜರ್ಝರಿತವಾದ ದೇಹವುಳ್ಳವಳಾಗಿ ತನ್ನ ವಿಕಾರಸ್ವರೂಪದೊಡನೆಯೇ ನೆಲದಲ್ಲಿ ಬಿದ್ದಳು. ಪ್ರಾಜ್ಞನಾದ ಹನುಮಂತನು ಹೀಗೆ ಅವಳು ನೆಲದಲ್ಲಿ ಬಿದ್ದುದನ್ನು ನೋಡಿ, ಹೆಂಗಸೆಂಬುದಕ್ಕಾಗಿ ಅವಳಲ್ಲಿ ಮರುಕಗೊಂಡು ಆಕೆಯನ್ನು ಅಷ್ಟರಲ್ಲಿಯೇ ಬಿಟ್ಟು ಬಿಟ್ಟನು. ಹನುಮಂತನ ಪ್ರಹಾರದಿಂದ ಬಹಳವಾಗಿ ನೊಂದ ಆ ಲಂಕೆಯು ಆಗಲೇ ಕೊಬ್ಬಡಗಿ, ಗದ್ಗದಸ್ವರದಿಂದ ಆ ಹನುಮಂತನನ್ನು ಕುರಿತು, ವಿನಯಪೂರ್ವಕವಾಗಿ, "ಎಲೈ ಮಹಾಬಾಹುವಾದ ವಾನರೋತ್ತ

ಮನೆ! ಪ್ರಸನ್ನಳಾಗು! ನನ್ನನ್ನು ಪ್ರಾಣದೊಡನೆ ಬಿಡು! ಎಲೆ ಸೌಮ್ಯನೆ! ನಿನ್ನಂತಹ ಸಾತ್ವಿಕರು ಮಹಾಬಲಾಢ್ಯರಾದರೂ ಧರ್ಮವನ್ನು ತಪ್ಪಿ ಹೋಗುವವ ರಲ್ಲ! ಎಲೆ ವೀರನೆ! ನಾನೇ ಲಂಕಾನಗರಿಯೆಂದು ತಿಳಿ! ಈಗ ನೀನು ನಿನ್ನ ಪರಾಕ್ರಮದಿಂದ ನನ್ನನ್ನು ಜಯಿಸಿದಂತಾಯಿತು. ಈಗ ನಿನಗೊಂದು ಸಾರವಾದ ರಹಸ್ಯವನ್ನು ತಿಳಿಸುವೆನು ಕೇಳು. 1 ಪೂರ್ವದಲ್ಲಿ ಸ್ವಯಂಭುವಾದ ಬ್ರಹ್ಮನು ನನಗೆ ಒಂದು ವರವನ್ನು ಕೊಟ್ಟಿರುವನು. ಆಗ ಅವನು ನನ್ನನ್ನು ನೋಡಿ "ಯಾವಾಗ ಒಬ್ಬವಾನರನು ಬಂದು ತನ್ನ ಪರಾಕ್ರಮದಿಂದ ನಿನ್ನನ್ನು ವಶಪಡಿಸಿಕೊಳ್ಳುವನೋ, ಆಗಲೇ ಇಲ್ಲಿನ ರಾಕ್ಷಸರಿಗೆ ವಿಪತ್ಕಾಲವು ಬಂದುದಾಗಿ ತಿಳಿಯಬೇಕು" ಎಂದು ಸೂಚಿಸಿರುವನು. ಎಲೆ ಸೌಮ್ಯನೆ! ಈಗ ನಿನ್ನ ದರ್ಶನದಿಂದ ಆ ಬ್ರಹ್ಮನು ನನಗೆ ಹೇಳಿದ್ದ ಕಾಲವು ಪ್ರಾಪ್ತವಾಯಿತು. ಬ್ರಹ್ಮನ ಬಾಯಿಯಿಂದ ಬಂದ ಮಾತು ತಪ್ಪುವು ದೆಂದರೇನು? ಸೀತೆಯ ನಿಮಿತ್ತದಿಂದಲೇ ದುರಾತ್ಮನಾದ ಇಲ್ಲಿನ ರಾಕ್ಷಸರಾಜನಿಗೂ ಸಮಸ್ತರಾಕ್ಷಸರಿಗೂ ಕೊನೆಗಾಲವು ಸಂಭವಿಸಿತು. ಆದುದರಿಂದ ಎಲೈ ವಾನ ರೋತ್ತಮನೆ! ನೀನು ಇನ್ನು ಮೇಲೆ ರಾವಣರಕ್ಷಿತವಾದ ಈ ಲಂಕೆಯನ್ನು ಯಥೇಷ್ಟ ವಾಗಿ ಪ್ರವೇಶಿಸು. ನೀನು ಇಲ್ಲಿ ಯಾವ ಯಾವ ಕಾರ್ಯವನ್ನು ನಡೆಸಬೇಕೆಂದೆಣಿಸಿರು ವೆಯೋ ಅವೆಲ್ಲವನ್ನೂ ಸ್ವೇಚ್ಛೆಯಿಂದ ನಡೆಸು. ಎಲೈ ವಾನರಶ್ರೇಷ್ಠನೆ! ನಂದಿ ಕೇಶ್ವರನೇ ಮೊದಲಾದವರ ಶಾಪಕ್ಕೀಡಾಗಿ, ರಾಕ್ಷಸರಾಜನಾದ ರಾವಣನಿಂದ ಪಾಲಿತವಾದ ಈ ನಗರಿಯನ್ನು ಪ್ರವೇಶಿಸಿ, ನಿನಗೆ ಇಷ್ಟಬಂದ ಕಡೆಯಲ್ಲಿ ಯಥೇಚ್ಛ ವಾಗಿ ತಿರುಗುತ್ತ, ಜನಕಪುತ್ರಿಯಾದ ಸೀತೆಯನ್ನು ಹುಡುಕಿಬಾ!" ಎಂದಳು.

ಇಲ್ಲಿಗೆ ಮೂರನೆಯ ಸರ್ಗವು.

---

1. ರಾವಣನು ದಿಗ್ವಿಜಯಕಾಲದಲ್ಲಿ ನಡೆಸಿದ ಅಕೃತ್ಯಗಳಿಗೆ ಕೋಪಿಸಿ ಪೂರ್ವದಲ್ಲಿ ನಂದಿ ಮೊದಲಾದವರು ಲಂಕೆಗೆ ಆಗಲೇ ನಾಶವುಂಟಾಗುವಂತೆ ಶಪಿಸಿಬಿಟ್ಟರು. ಆಗ ಲಂಕೆಯು ಬ್ರಹ್ಮನಲ್ಲಿ ಹೋಗಿ ಮೊರೆಯಿಟ್ಟು, ತನಗೆ ಎಂದಿಗೂ ನಾಶವಿಲ್ಲದಂತೆ ವರವನ್ನು ಕೊಡಬೇಕೆಂದು ಪ್ರಾರ್ಥಿಸಿದಳು. ಆಗ ಬ್ರಹ್ಮನು ಆ ಲಂಕೆಯ ಕೋರಿಕೆಯಂತೆಯೇ ನಡೆಸ ಬಿದ್ದರೂ "ಮುಂದೆ ಒಬ್ಬವಾನರನು ಬಂದು ನಿನ್ನನ್ನು ಯಾವಾಗ ಜಯಿಸುವನೋ ಆಗ ನಿನಗೆ ನಾಶವುಂಟಾಗಲಿ" ಎಂದು ವರವನ್ನು ಕೊಟ್ಟು ಕಳುಹಿಸಿದನು. ಈ ಕಥಾ ಸಂದರ್ಭವನ್ನು ಇಲ್ಲಿಗೆ ಅನುಸಂಧಿಸಿಕೊಳ್ಳಬೇಕು.

ಹನುಮಂತನು ಪ್ರಾಕಾರವನ್ನು ದಾಟಿ ಲಂಕೆಯನ್ನು ಪ್ರವೇಶಿಸಿ,
ಅಲ್ಲಿ ರಾಕ್ಷಸರ ಹರ್ಮ್ಯಗಳನ್ನೂ, ರಾವಣನ
ಮೂಲಬಲವನ್ನೂ ನೋಡಿದುದು.

ಹೀಗೆ ಹನುಮಂತನು ಕಾಮರೂಪಿಣಿಯಾದ ಆ ಲಂಕೆಯನ್ನು ತನ್ನ ಪರಾಕ್ರಮದಿಂದ ಜಯಿಸಿದ ಮೇಲೆ, ಆ ಲಂಕೆಯೊಳಗೆ ಪ್ರವೇಶಿಸುವುದಕ್ಕೆ ಸಿದ್ಧನಾದನು. ಇವನು ಬಹಳ ಶಕ್ತಿಯುಳ್ಳವನಾಗಿಯೂ ಮಹಾಬಾಹುವಾಗಿಯೂ ಇದ್ದುದರಿಂದ, 1 ಆ ಪ್ರಾಕಾರದ ಬಾಗಿಲಲ್ಲಿ ಪ್ರವೇಶಿಸದೆ ಅದರ ಗೋಡೆಯನ್ನು ಹಾರಿ ಒಳಕ್ಕಿಳಿದನು. ತನ್ನ ಪ್ರಭುವಾದ ಸುಗ್ರೀವನಿಗೆ ಶ್ರೇಯಸ್ಸನ್ನೂ, † ರಾವಣನಿಗೆ ಕೇಡನ್ನೂ ಕೋರುವ ಈ ಹನುಮಂತನು, ಶತ್ರುವಿನ ತಲೆಯನ್ನು ಮೆಟ್ಟುವ ರೀತಿಯಲ್ಲಿ, ತನ್ನ ಎಡದ ಕಾಲನ್ನೇ ಮೊದಲು ಆ ಲಂಕೆಯ ನೆಲದ ಮೇಲೆ ಊರಿದನು. ಹೀಗೆ ಬಲಾಢ್ಯನಾದ ಮಾರುತಿಯು ಆ ರಾತ್ರಿಯಲ್ಲಿಯೇ ಲಂಕೆಯನ್ನು ಪ್ರವೇಶಿಸಿ, ಮುತ್ತಿನ ಮಣಿಗಳಿಂದಲೂ, ಬಿಡುಹೂಗಳ ಸಮೂಹದಿಂದಲೂ ಶೋಭಿತವಾದ ಅಲ್ಲಿನ ರಾಜಮಾರ್ಗವನ್ನು ಹಿಡಿದು ಮುಂದೆ ಹೊರಟನು. ಆ ಪಟ್ಟಣದ ಬೀದಿಗಳಲ್ಲಿ ಎಲ್ಲಿ ನೋಡಿದರೂ ನೃತ್ತಗೀತಾದಿ ವಾದ್ಯಧ್ವನಿಗಳೂ, ಅಟ್ಟಹಾಸದಿಂದ ನಗುವ ಶಬ್ದಗಳೂ ಕೇಳಿಸುತ್ತಿದ್ದುವು. ಮತ್ತು ಆ ನಗರಿಯು ಮೇಘಗಳಿಂದ ತುಂಬಿದ ಆಕಾಶದಂತೆ ವಜ್ರಾಲಂಕೃತಗಳಾಗಿಯೂ ಐರಾವತದಂತೆ

---

1. ಅಲ್ಲಿ ಹನುಮಂತನು ಲಂಕೆಗೆ ಪ್ರವೇಶಿಸುವಾಗ ಬಾಗಿಲನ್ನು ಬಿಟ್ಟು ಪ್ರಾಕಾರದ ಗೋಡೆಯನ್ನೇರಿ ಇಳಿದುದೇಕೆಂದರೆ:—"ಗ್ರಾಮಂ ವಾ ನಗರಂ ವಾಪಿ ಪಟ್ಟಣಂ ವಾ ಪರಸ್ಯ ಹಿ। ವಿಶೇಷಾತ್ಸಮಯೇ ಸೌಮ್ಯ ನ ದ್ವಾರೇಣ ವಿಶೇನ್ನೃಪ" ಎಂಬ ಶಾಸ್ತ್ರಾನುಸಾರವಾಗಿ ಶತ್ರುವಿನ ಗ್ರಾಮವನ್ನಾಗಲಿ, ನಗರವನ್ನಾಗಲಿ ಪ್ರವೇಶಿಸುವಾಗ ದ್ವಾರಪ್ರದೇಶದಿಂದ ಹೋಗಕೂಡದೆಂದೂ, ಅದರಲ್ಲಿಯೂ ಮುಖ್ಯವಾಗಿ ಶತ್ರುಜಯವನ್ನುದ್ದೇಶಿಸಿ ಬರುವವನು ಹಾಗೆ ಪ್ರವೇಶಿಸಲೇಕೂಡದೆಂದೂ ವಿಧಿಯುಂಟು. ಈ ವಿಧಿಯನ್ನನುಸರಿಸಿಯೇ ಹನುಮಂತನು ಗೋಡೆಯನ್ನು ಹತ್ತಿಳಿದನೆಂದು ಗ್ರಾಹ್ಯವು.

† ಅಲ್ಲಿ ಹನುಮಂತನು ಮೊದಲು ತನ್ನ ಎಡದ ಕಾಲನ್ನೂರಿದುದೇಕೆಂದರೆ:— "ಪ್ರಯಾಣಕಾಲೇ ಚ ಗೃಹಪ್ರವೇಶೇ ವಿವಾಹಕಾಲೇಽಪಿ ಚ ದಕ್ಷಿಣಾಂಘ್ರಿಮ್। ಕೃತ್ವಾಗ್ರತಃ ಶತ್ರುಪುರಪ್ರವೇಶೇ ವಾಮಂ ನಿದಧ್ಯಾತ್ಪುರತೋ ನೃಪಾಲ" ಪ್ರಯಾಣಕಾಲಗಳಲ್ಲಿಯೂ ನೂತನ ಗೃಹಪ್ರವೇಶಕಾಲದಲ್ಲಿಯೂ, ವಿವಾಹಕಾಲದಲ್ಲಿಯೂ ಮೊದಲು ಬಲದ ಕಾಲನ್ನಿಡಬೇಕು. ಶತ್ರುಪುರಪ್ರವೇಶಕಾಲದಲ್ಲಿ ಮೊದಲು ಎಡಗಾಲನ್ನಿಡಬೇಕು" ಎಂಬ ಬೃಹಸ್ಪತಿ ವಚನಾನುಸಾರವಾಗಿ, ಶತ್ರುವಿನ ಕೇಡನ್ನು ಕೋರತಕ್ಕ ಆಂಜನೇಯನು ಮೊದಲು ತನ್ನ ಎಡದ ಕಾಲನಿಟ್ಟುದಾಗಿ ಗ್ರಾಹ್ಯವು.

ಬಿಳುಪಾಗಿಯೂ ಇರುವ ಉತ್ತಮಗೃಹಗಳಿಂದ ಅತಿ ಮನೋಹರವಾಗಿದ್ದಿತು. ಮತ್ತು ಅಲ್ಲಿ ಮಂಗಳಾಲಂಕಾರಗಳುಳ್ಳ ಅನೇಕ ರಾಕ್ಷಸಗೃಹಗಳಿದ್ದುವು. ಶರನ್ಮೇಘಗಳಂತೆ ಬಿಳುಪಾಗಿಯೂ ವಿಚಿತ್ರಗಳಾಗಿಯೂ, 1 ಪದ್ಮ, ಸ್ವಸ್ತಿಕ, ವರ್ಧಮಾನಗಳೆಂಬ ಬೇರೆ ಬೇರೆ ತರದ ಸನ್ನಿವೇಶವುಳ್ಳವುಗಳಾಗಾಗಿಯೂ ಇರುವ ಅನೇಕರಾಜಗೃಹಗಳೂ ತುಂಬಿದ್ದುದರಿಂದ, ಆ ಪಟ್ಟಣವು ತನ್ನ ದಿವ್ಯಕಾಂತಿಯಿಂದ ಜ್ವಲಿಸುತ್ತಿರುವುದೋ ಎಂಬಂತೆ ಕಾಣುತಿತ್ತು. ಸುಗ್ರೀವನಿಗೆ ಹಿತಕಾಂಕ್ಷಿಯಾದ ಹನುಮಂತನು ರಾಮಕಾರ್ಯಾರ್ಥವಾಗಿ ಅಲ್ಲಲ್ಲಿ ಸುತ್ತುತ್ತ, ಪುಷ್ಪಾಭರಣಗಳಿಂದಲಂಕೃತವಾದ ಆ ಪಟ್ಟಣದ ಅಂದವೆಲ್ಲವನ್ನೂ ನೋಡಿದನು. ಅಷ್ಟು ದುರ್ಗಮವಾದ ಲಂಕೆಗೆ ತಾನು ನಿರಾಯಾಸವಾಗಿ ಪ್ರವೇಶಿಸಿಬಿಟ್ಟುದೇ ರಾಮನ ಕಾರ್ಯಸಿದ್ಧಿಗೆ ಸೂಚಕವೆಂದೂ ಹಿಗ್ಗುತಿದ್ದನು. ಹಾಗೆಯೇ ಅವನು ಮನೆಮನೆಗೆ ನುಗ್ಗುತ್ತ, ಅಲ್ಲಲ್ಲಿ ಬೇರೆಬೇರೆ ವಿಧವಾದ ಕಟ್ಟಡಗಳುಳ್ಳ ಮನೆಗಳ ಸನ್ನಿವೇಶವನ್ನು ನೋಡುತ್ತಬಂದನು. ಮತ್ತು ಅಲ್ಲಲ್ಲಿ ಯೌವನಮದದಿಂದ ಮದಿಸಿದ ಪುರಸ್ತ್ರೀಯರು, ಎದೆ, ಕೊರಲು, ಶಿರಸ್ಸುಗಳೆಂಬ ಮೂರು ಸ್ಥಾನಗಳಿಂದ ಹುಟ್ಟಿಬರುವ ಮಂದ್ರ, ಮಧ್ಯಮ, ತಾರಗಳೆಂಬ ಸ್ಥಾಯಿಗಳೊಡನೆ ಕೂಡಿ ದೇವಲೋಕದ ಅಪ್ಸರಸ್ತ್ರೀಯರಂತೆ ಕಿವಿಗಿಂಪಾಗಿ ಹಾಡುವ ಹಾಡುಗಳನ್ನು ಕೇಳಿದನು. ಮತ್ತು ಅಲ್ಲಲ್ಲಿ ಸಂಚರಿಸುವ ಸ್ತ್ರೀಯರ ಕಾಂಚೀಧ್ವನಿ, ಕಾಲಂದುಗೆಗಳ ಧ್ವನಿ, ಧನಿಕರ ಮನೆಗಳಿಂದ ಕೇಳಿಬರುವ ಸೋಪಾನಧ್ವನಿ ಇವೆಲ್ಲವೂ ಇವನ ಕಿವಿಗೆ ಬೀಳುತಿದ್ದುವು. ಅಲ್ಲಲ್ಲಿ ವೀರಭಟರು ಉತ್ಸಾಹದಿಂದ ತಮ್ಮ ತಮ್ಮ ಭುಜಗಳನ್ನು ತಟ್ಟಿ ಸಿಂಹನಾದಮಾಡುವ ಶಬ್ದಗಳನ್ನೂ ಅಲ್ಲಲ್ಲಿ ರಾಕ್ಷಸರ ಮನೆಗಳಲ್ಲಿ ಜಪಮಾಡುವವರ ಮಂತ್ರಧ್ವನಿಗಳನ್ನೂ ಕೇಳಿದನು. ಮತ್ತು ಅಲ್ಲಲ್ಲಿ ವೇದಾಧ್ಯಯನಪರರಾದ ಬ್ರಹ್ಮರಾಕ್ಷಸರನ್ನೂ, ಅಲ್ಲಲ್ಲಿ ಉತ್ಸಾಹಗರ್ಜನಗಳೊಡನೆ ರಾವಣನನ್ನು ಸ್ತೋತ್ರಮಾಡುತಿದ್ದ ರಾಕ್ಷಸಭಟರನ್ನೂ ಕಂಡನು. ಅಲ್ಲಲ್ಲಿ ರಾಜಮಾರ್ಗಗಳನ್ನಾವರಿಸಿ ನಿಂತಿರುವ ರಾವಣನ ಮೂಲಬಲವನ್ನೂ ಆ ಮೂಲಬಲದ ನಡುನಡುವೆ ಕಾರ್ಯಾತುರದಿಂದ ಓಡಾಡುತಿದ್ದ ಅನೇಕಮಾತರನ್ನೂ ನೋಡಿದನು. ಮತ್ತು ಆ ರಾಕ್ಷಸರಲ್ಲಿ ದೀಕ್ಷೆಬಟ್ಟವರು ಕೆಲವರು! ಜಟಾಧಾರಿಗಳು ಕೆಲವರು! ಮುಂಡನಮಾಡಿದ ತಲೆಯುಳ್ಳವರು ಕೆಲವರು!

---

1. "ಚತುಶ್ಶಾಲಾ ಚತುರ್ದ್ವಾರಾ ಸರ್ವತೋಭದ್ರಸಂಜ್ಞಿತಾ। ಪಶ್ಚಿಮದ್ವಾರರಹಿತಾ ಮಥ್ಯಾವರ್ತಾ ಪಯೂನಸಾ। ದಕ್ಷಿಣದ್ವಾರರಹಿತಾ ವರ್ಧಮಾನಾ ಧನಪ್ರದಾ। ಪ್ರಾಗ್ದ್ವಾರರಹಿತಾ ಸ್ವಸ್ತಿಕಾಖ್ಯಾ ಪುತ್ರಧನಪ್ರದಾ॥" ಎಂದು ಗೃಹಲಕ್ಷಣವು.

ಗೋಚರ್ಮವನ್ನುಟ್ಟು ನಿಂತವರು ಕೆಲವರು! ದಿಗಂಬರರು ಕೆಲವರು. ಅನಿಷ್ಟ ಪರಿಹಾರಕ್ಕಾಗಿ ಆಯುಧಗಳಂತೆ ಕೈಯಲ್ಲಿ ದರ್ಭೆಯ ಮುಷ್ಟಿಗಳನ್ನು ಹಿಡಿದವರು ಕೆಲವರು. ಶತ್ರುಗಳನ್ನು ಶೂನ್ಯಮಾಡಿ ಕೊಲ್ಲಬೇಕೆಂದು ಅಗ್ನಿಕುಂಡವನ್ನು ಬೆಳೆಸಿಟ್ಟುಕೊಂಡಿರುವವರು ಕೆಲವರು. ಕೂಟ, ಮುದ್ಗರ, ದಂಡ ಮೊದಲಾದ ಆಯುಧಗಳನ್ನೆತ್ತಿ ಹಿಡಿದು ನಿಂತವರು ಕೆಲವರು. ಕೆಲವರಿಗೆ ಒಂದೇ ಕಣ್ಣು! ಕೆಲವರಿಗೆ ಒಂದೇ ಕಿವಿ! ಕೆಲವರಿಗೆ ಜೋಲುವ ಹೊಟ್ಟೆ! ಕೆಲವರಿಗೆ ಜೋಲುವ ಮೊಲೆಗಳು! ಅತಿಘೋರಸ್ವರೂಪವುಳ್ಳವರು ಕೆಲವರು! ವಕ್ರಮುಖವುಳ್ಳವರು ಕೆಲವರು. ವಕ್ರದೇಹವುಳ್ಳವರು ಕೆಲವರು. ಗಿಡ್ಡಮೈಯುಳ್ಳವರು ಕೆಲವರು. ಕೆಲವರ ಕೈಯಲ್ಲಿ ಬಿಲ್ಲು! ಕೆಲವರ ಕೈಯಲ್ಲಿ ಕತ್ತಿ! ಕೆಲವರ ಕೈಯಲ್ಲಿ ನೂರು ಮುಳ್ಳುಗಳುಳ್ಳ ಕಬ್ಬಿಣದ ಒನಕೆ! ಕೆಲವರ ಕೈಯಲ್ಲಿ ದೊಡ್ಡಲಾಳಮುಂಡಿಗೆ! ಕೆಲವರ ಮೈಮೇಲೆ ಚಿತ್ರವಿಚಿತ್ರಗಳಾದ ಕವಚಗಳು! ಹೀಗೆ ಅನೇಕ ರಾಕ್ಷಸ ವೀರಭಟರನ್ನು ಕಂಡನು. ಮತ್ತು ಅಲ್ಲಿನ ರಾಕ್ಷಸರಲ್ಲಿ ಅತಿಸ್ಥೂಲವೂ ಅಲ್ಲದೆ, ಅತಿಕೃಶವೂ ಅಲ್ಲದೆ, ಬಹಳ ಉದ್ದವೂ ಅಲ್ಲದೆ, ಬಹಳ ಹ್ರಸ್ವವೂ ಅಲ್ಲದೆ, ಬಹಳ ಬಿಳಿದೂ ಅಲ್ಲದೆ, ಬಹಳಕರಿದೂ ಅಲ್ಲದೆ, ಬಹಳ ಗೂನೂ ಅಲ್ಲದೆ ಬಹಳಗಿಡ್ಡವೂ ಅಲ್ಲದೆ ಸಹಜರೀತಿಯಿಂದಿರುವ ಮೈಯುಳ್ಳವರನ್ನೂ ಕಂಡನು. ಹೀಗೆ ವಿಕಾರರೂಪ ವುಳ್ಳವರೂ, ವಿಚಿತ್ರರೂಪವುಳ್ಳವರೂ, ಅಂದವಾದ ಸೌಂದರ್ಯವುಳ್ಳವರೂ, ಒಳ್ಳೇ ವರ್ಚಸ್ಸುಳ್ಳವರೂ ಅಲ್ಲಲ್ಲಿ ಗೋಚರಿಸುತಿದ್ದರು. ಮತ್ತು ಅಲ್ಲಲ್ಲಿ ಧ್ವಜದಂಡಗಳನ್ನು ಹೊತ್ತುನಿಂತವರು ಕೆಲವರು! ಪತಾಕೆಗಳನ್ನು ಹಿಡಿದವರು ಕೆಲವರು! ಬಗೆ ಬಗೆಯ ಆಯುಧಗಳನ್ನು ಹಿಡಿದವರು ಕೆಲವರು! ಮತ್ತು ಶಕ್ತಿಯನ್ನು ಆಯುಧ ವಾಗಿ ಹಿಡಿದಿದ್ದವರು ಕೆಲವರು! ಮರಗಳನ್ನು ಆಯುಧವಾಗಿ ಹಿಡಿದವರು ಕೆಲ ವರು! ಹಾಗೆಯೇ ಪಟ್ಟಿಸ, ವಜ್ರ, ಬಲೆ, ಹಗ್ಗ ಮುಂತಾದ ಬೇರೆಬೇರೆ ಆಯುಧ ಗಳನ್ನು ಕೈಯಲ್ಲಿ ಹಿಡಿದವರೂ ಎಷ್ಟೋಮಂದಿಯಿದ್ದರು. ಮತ್ತು ಅಲ್ಲಿ ಗಂಧ ಪುಷ್ಪಾಲಂಕೃತರನ್ನೂ, ಸರ್ವಾಭರಣಭೂಷಿತರನ್ನೂ, ಇನ್ನೂ ಬೇರೆಬೇರೆ ಆಲಂ ಕಾರಗಳಿಂದ ಕೂಡಿ ಸ್ವೇಚ್ಛೆಯಿಂದ ವಿಹರಿಸುತಿದ್ದವರನ್ನೂ ಕಂಡನು. ಮತ್ತು ಅಲ್ಲಲ್ಲಿ ತೀಕ್ಷ್ಣಶೂಲಗಳನ್ನೂ, ವಜ್ರವನ್ನೂ ಆಯುಧವಾಗಿ ಹಿಡಿದ ಬಲಾಢ್ಯರೂ ಎಷ್ಟೋಮಂದಿಯಿದ್ದರು. ಹೀಗೆ ಆ ಪಟ್ಟಣದ ನಡುವೆ ರಾವಣನ ಆಜ್ಞೆಯಿಂದ ಎಚ್ಚರಿಕೆಯೊಡನೆ ಕಾವಲಿರುವ ಲಕ್ಷಸೈನಿಕರುಳ್ಳ ಮಧ್ಯಮಗುಲ್ಮವೆಂಬ ಮೂಲ ಬಲವನ್ನು ಕಂಡನು. ಆ ಪ್ರದೇಶವನ್ನು ನೋಡಿದಮೇಲೆ ಆಂಜನೇಯನು ಮುಂದೆ ಸುವರ್ಣಮಯವಾದ ದೊಡ್ಡ ಹೊರಬಾಗಿಲುಳ್ಳುದಾಗಿಯೂ, ಲೋಕವಿಖ್ಯಾತ

ವಾಗಿಯೂ ಪರ್ವತಾಗ್ರದಲ್ಲಿ ಪ್ರತಿಷ್ಠಿತವಾಗಿಯೂ, ಕಮಲಗಳೆಂಬ ಶಿರೋಭೂಷಣ ಗಳುಳ್ಳ ಅಗುಳುಗಳಿಂದ ಅಲಂಕೃತವಾಗಿಯೂ, ದೊಡ್ಡ ಪ್ರಾಕಾರದಿಂದ ಆವೃತ ವಾಗಿಯೂ ಇರುವ ಮತ್ತೊಂದು ಅರಮನೆಯನ್ನು ಕಂಡನು. ಇಂದ್ರಲೋಕ ಕ್ಕೆಣೆಯಾಗಿ, ದಿವ್ಯಸೌಭಾಗ್ಯದಿಂದ ಕೂಡಿದುದಾಗಿ, ದಿವ್ಯಧ್ವನಿಗಳಿಂದ ತುಂಬಿದು ದಾಗಿದ್ದ ಆ ಅರಮನೆಯಲ್ಲಿ ಒಂದುಕಡೆಯಿಂದ ಕುದುರೆಗಳ ಹೇಷಾಧ್ವನಿಗಳೂ, ಮತ್ತೊಂದುಕಡೆಯಿಂದ ಸ್ತ್ರೀಯರ ಆಭರಣಧ್ವನಿಗಳೂ ಎಡೆಬಿಡದೆ ಕೇಳಿಸುತ್ತಿದ್ದುವು. ಎಲ್ಲಿ ನೋಡಿದರೂ ರಥಗಳೂ, ವಾಹನಗಳೂ, ವಿಮಾನಗಳೂ, ಆನೆಕುದುರೆಗಳೂ ಕಿಕ್ಕಿರಿಸಿ ತುಂಬಿದ್ದುವು. ಅಲ್ಲಲ್ಲಿ ಬಿಳೀಮೇಘಗಳ ಸಾಲಿನಂತಿರುವ ನಾಲ್ಕುಕೊಂಬುಳ್ಳ ಐರಾವತಜಾತಿಯ ಆನೆಗಳು ತಿರುಗುತ್ತಿದ್ದುವು. ಮತ್ತು ಸ್ವಭಾವದಿಂದಲೇ ಅತಿ ರಮ್ಯವಾದ ಆದರ ಬಾಗಿಲಲ್ಲಿ, ಅಲಂಕಾರಾರ್ಥವಾಗಿ ಸಾಕಿಟ್ಟ ಮೃಗಪಕ್ಷಿಗಳು ಚೆನ್ನಾಗಿ ಕೊಬ್ಬಿ ಬೆಳೆದು ಆ ಪ್ರದೇಶಕ್ಕೆ ಮತ್ತಷ್ಟು ಅಂದವನ್ನು ಕೊಡು ತ್ತಿದ್ದುವು. ಮಹಾವೀರ್ಯವುಳ್ಳ ಸಾವಿರಾರುಮಂದಿ ರಾಕ್ಷಸರು ದ್ವಾರಪಾಲಕರಾಗಿ ಎಚ್ಚರಿಕೆಯಿಂದ ಕಾದಿದ್ದರು. ಹೀಗಿರತಕ್ಕ ಆ ರಾಕ್ಷಸೇಂದ್ರನ ಅರಮನೆಯ ಸಮೀಪಕ್ಕೆ ಬಂದನು. ಹೀಗೆ ಹನುಮಂತನು ಬೇರೆಬೇರೆ ಜಾತಿಯ ಸುವರ್ಣಗಳಿಂದ ರಚಿತವಾದ ಪ್ರಾಕಾರವುಳ್ಳುದಾಗಿಯೂ, ಬೆಲೆಯುಳ್ಳ ಮುತ್ತಿನ ಮಣಿಗಳಿಂದ ಭೂಷಿತವಾದ ಹೊರಭಾಗವುಳ್ಳುದಾಗಿಯೂ, ಸರ್ವೋತ್ತಮವಾದ ಅಗರುಚಂದ ನಾದಿಗಳಿಂದ ಲೇಪಿತವಾಗಿಯೂ ಇದ್ದ ಅಲ್ಲಿನ ಪ್ರಾಕಾರದೊಳಗೂ ಪ್ರವೇಶಿಸಿದನು.

ಇಲ್ಲಿಗೆ ನಾಲ್ಕನೆಯ ಸರ್ಗವು.

---

{ ಚಂದ್ರಿಕಾವರ್ಣನವು. ಹನುಮಂತನು ಬಹಳಹೊತ್ತಿನವರೆಗೆ ಸೀತೆಯನ್ನು ಕಾಣದುದಕ್ಕಾಗಿ ಶೋಕಿಸುತಿದ್ದುದು. }

ಹೀಗೆ ಧೀಮಂತನಾದ ಆ ಹನುಮಂತನು ರಾವಣನ ಅರಮನೆಯನ್ನು ಪ್ರವೇಶಿಸುವಷ್ಟರಲ್ಲಿ ಅರ್ಧರಾತ್ರಿಯು ಸಮಯವಾಯಿತು. ಆ ಕಾಲಕ್ಕೆ ಸರಿಯಾಗಿ ಚಂದ್ರನು ವಿಶೇಷಕಾಂತಿವಿಶಿಷ್ಟನಾಗಿ, ನಕ್ಷತ್ರಗಳಿಂದ ಪರಿವೃತನಾಗಿ, ಮಂದೆಯಲ್ಲಿ ತಿರುಗುತ್ತಿರುವ ಕೊಬ್ಬಿದ ಗೂಳಿಯಂತೆ ಆಕಾಶಮಧ್ಯಗತನಾಗಿ, ನಾಲ್ಕು ಕಡೆಗಳಿಗೂ ತನ್ನ ತಂಪಾದ ಕಿರಣಗಳನ್ನು ಹರಡುತಿದ್ದನು. ಹೀಗೆ ತನ್ನ ಕಿರಣಗಳಿಂದ ಸಮಸ್ತಜನರ ದುಃಖವನ್ನೂ ನೀಗಿಸುತ್ತ, ಮಹಾಸಾಗರವನ್ನೂ ವೃದ್ಧಿಹೊಂದಿಸುತ್ತ, ಪ್ರಾಣಿಗಳಿಗೂ ಉತ್ಸಾಹವನ್ನುಂಟುಮಾಡುತ್ತ, ಮುಂದೆ ಸಾಗಿಬರುತ್ತಿರುವ ಚಂದ್ರನನ್ನು ಹನುಮಂತನು ಕಂಡನು. ಭೂಲೋಕದಲ್ಲಿ ಮಂದರಪರ್ವತಕ್ಕೂ, ಪ್ರದೋಷಕಾಲಗಳಲ್ಲಿ ಸಮುದ್ರಕ್ಕೂ, ತಾವರೆಕೊಳಗಳಲ್ಲಿ ಕಮಲಗಳಿಗೂ ಯಾವ ಕಾಂತಿವಿಶೇಷವುಂಟೋ ಅವೆಲ್ಲವೂ ಆಗ ಆ ಚಂದ್ರಬಿಂಬವೊಂದರಲ್ಲಿಯೇ ಅಡಗಿರುವಂತೆ ತೋರುತಿತ್ತು. ಬೆಳ್ಳಿಯ ಪಂಜರದಲ್ಲಿ ಅಡಗಿದ ಹಂಸದಂತೆಯೂ, ಮಂದರಪರ್ವತದ ಗುಹೆಯಲ್ಲಿ ಸೇರಿರುವ ಸಿಂಹದಂತೆಯೂ, ಮದದಿಂದ ಕೊಬ್ಬಿದ ಆನೆಯನ್ನೇರಿರುವ ವೀರನಂತೆಯೂ ಚಂದ್ರನು ಆಕಾಶಮಧ್ಯಗತನಾಗಿ ಪ್ರಕಾಶಿಸುತಿದ್ದನು. ತುಂಬಿದ ಕಳೆಗಳುಳ್ಳ ಆಗಿನ ಚಂದ್ರನು ತೀಕ್ಷ್ಣವಾದ ಕೊಂಬುಗಳುಳ್ಳ ಮಹಾವೃಷಭದಂತೆಯೂ, ಎತ್ತರವಾದ ಶಿಖರಗಳುಳ್ಳ ಶ್ವೇತಪರ್ವತದಂತೆಯೂ, ಚಿನ್ನದ ಕಟ್ಟುಗಳುಳ್ಳ ಕೊಂಬುಗಳಿಂದ ಶೋಭಿಸುವ ಮದದಾನೆಯಂತೆಯೂ ಶೋಭಿಸುತಿದ್ದನು. ಮತ್ತು ಮಹಾಪ್ರಭಾವವುಳ್ಳ ಚಂದ್ರನು ಇಬ್ಬನಿ, ಮಂಜು, ಮುಂತಾದ ದೋಷಗಳನ್ನು ತಗ್ಗಿಸಿ, ಸೂರ್ಯಕಿರಣಸಂಬಂಧದಿಂದ ಕತ್ತಲೆಯನ್ನೂ ಅಡಗಿಸಿ, ತನ್ನ ಬಿಂಬದ ಪ್ರಕಾಶದಿಂದಲೇ ತನ್ನೊಳಗಿನ ಕಳಂಕದ ಕಾಂತಿಯನ್ನು ಮತ್ತಷ್ಟು ವ್ಯಕ್ತಪಡಿಸುತ್ತ, ಪ್ರಕಾಶಿಸುತಿದ್ದನು. ಪರ್ವತಶಿಲೆಯನ್ನೇರಿ ನಿಂತ ಸಿಂಹದಂತೆಯೂ, ರಣರಂಗದಲ್ಲಿ ಬಂದು ನಿಂತ ಮದದಾನೆಯಂತೆಯೂ, ರಾಜಪೀಠವನ್ನೇರಿದ ರಾಜನಂತೆಯೂ, ಆಗ ಆಕಾಶಮಧ್ಯಗತನಾದ ಚಂದ್ರನು ಉಲ್ಲಾಸವಿಶಿಷ್ಟವಾದ ಒಂದು ವಿಶೇಷಕಾಂತಿಯಿಂದ ಕೂಡಿ ಶೋಭಿಸುತಿದ್ದನು. ಪ್ರಕಾಶಮಾನವಾದ ಆ ಚಂದ್ರಿಕೆಯಿಂದ ನೀಗಿದ ಕತ್ತಲೆಯುಳ್ಳುದಾಗಿಯೂ, ರಾಕ್ಷಸರ ಮತ್ತು ಪಿಶಾಚಗಳ ಹಾವಳಿಯನ್ನು ಹೆಚ್ಚಿಸತಕ್ಕುದಾಗಿಯೂ, ನಾಯಿಕಾನಾಯಕರ ಪ್ರಣಯಕೋಪವನ್ನಡಗಿಸಿ ಅವರ ಮನಸ್ಸನ್ನು ಕ್ಷಣಮಾತ್ರದಲ್ಲಿ ತಿಳಿವಾಗಿಸತಕ್ಕುದಾಗಿಯೂ ಇದ್ದ ಪೂಜ್ಯವಾದ ಆ ರಾತ್ರಿಯು

ಸಮಸ್ತಜನರಿಗೂ ಸ್ವರ್ಗಭೋಗವನ್ನುಂಟುಮಾಡುವಂತಿತ್ತು. ಆಗ ಆ ಪಟ್ಟಣದ ನಾಲ್ಕುಕಡೆಗಳಿಂದಲೂ, ವೀಣೆ ಮೊದಲಾದ ತಂತ್ರೀವಾದ್ಯಗಳು ಕಿವಿಗಿಂಪಾಗುವಂತೆ ಕೇಳಿಸುತಿದ್ದುವು. ಸಚ್ಚರಿತ್ರವುಳ್ಳ ಸ್ತ್ರೀಯರು ತಮ್ಮತಮ್ಮ ಪತಿಗಳೊಡಗೂಡಿ ಸುಖನಿದ್ರೆಯನ್ನು ಮಾಡುತಿದ್ದರು. ಹಾಗೆಯೇ ರಾತ್ರಿಸಂಚಾರಿಗಳಾದ ಗೂಬೆಗಳೂ, ಭೂತಬೇತಾಳಾದಿಗಳೂ, ರಾಕ್ಷಸರೂ, ಉತ್ಸಾಹದಿಂದ ಹೊರಕ್ಕೆಬಂದು, ಅತಿಭಯಂಕರವಾಗಿಯೂ ಆಶ್ಚರ್ಯಕರವಾಗಿಯೂ ಇರುವ ಕ್ರೂರಕೃತ್ಯಗಳಿಂದ ಕ್ರೀಡಿಸುವುದಕ್ಕೆ ತೊಡಗಿದರು. ಮತ್ತು ಹನುಮಂತನು ಅಲ್ಲಲ್ಲಿ ಮದ್ಯಪಾನದಿಂದ ಮದವೇರಿ ಮೈಮರೆತಿರುವವರನ್ನೂ, ಅನೇಕ ಜನಸಮೂಹದಿಂದಲೂ ಬಂಡಿಗಳಿಂದಲೂ, ಕುದುರೆಗಳಿಂದಲೂ, ಭದ್ರಗಜಗಳಿಂದಲೂ, ಭದ್ರಾಸನಗಳಿಂದಲೂ ತುಂಬಿ, ವೀರಲಕ್ಷ್ಮಿಗಾಶ್ರಯವಾದ ಮನೆಗಳ ಸಾಲನ್ನೂ ಕಂಡನು. ಮತ್ತು ಅಲ್ಲಿ ಒಬ್ಬರನ್ನೊಬ್ಬರು ನೋಡಿ ಹಾಸ್ಯಮಾಡಿ ನಗುವವರು ಕೆಲವರು. ಒಬ್ಬರಮೇಲೊಬ್ಬರು ತೋಳು ಹಾಕಿಕೊಂಡು ಉಲ್ಲಾಸದಿಂದ ನಡೆಯುವವರು ಕೆಲವರು! ಮದದಿಂದ ಮೈಮರೆತು ಹುಚ್ಚುಹುಚ್ಚಾಗಿ ಕೂಗುತ್ತಿರುವವರು ಕೆಲವರು. ಕೊಬ್ಬಿನಿಂದ ಒಬ್ಬರನ್ನೊಬ್ಬರು ಹೆದರಿಸುತ್ತಿರುವವರು ಕೆಲವರು. ತಮ್ಮ ತಮ್ಮ ಉಬ್ಬಿದ ಎದೆಗಳನ್ನು ತೆರೆದಿಟ್ಟುಕೊಂಡು ಬರುವವರು ಕೆಲವರು. ತಮ್ಮ ತಮ್ಮ ನಾಯಿಕೆಯರ ಮೇಲೆ ಕೈಹಾಕಿಕೊಂಡು ಬರುವವರು ಕೆಲವರು. ತಮ್ಮ ಮಾಯಾಬಲದಿಂದ ಕ್ಷಣಕ್ಷಣಕ್ಕೂ ವಿಚಿತ್ರರೂಪಗಳನ್ನು ಧರಿಸಿ ಬರುತ್ತಿರುವವರು ಕೆಲವರು. ತಮ್ಮ ದೃಢವಾದ ಬಿಲ್ಲನ್ನು ಹಿಡಿಯುತ್ತ ಬರುವವರು ಕೆಲವರು. ಇಂತಹ ರಾಕ್ಷಸರನ್ನೂ ಕಂಡನು. ಹಾಗೆಯೇ ರಾಕ್ಷಸಸ್ತ್ರೀಯರಲ್ಲಿಯೂ ಗಂಧಾನುಲೇಪನಗಳಿಂದಲಂಕರಿಸಿಕೊಳ್ಳುತ್ತಿರುವವರು ಕೆಲವರು. ಸುಖನಿದ್ರೆಯಿಂದ ಮಲಗಿರುವವರು ಕೆಲವರು. ನಗೆಮೊಗದಿಂದ ಉಲ್ಲಾಸಗೊಂಡು ನಗುತ್ತಿರುವವರು ಕೆಲವರು. ಪ್ರಣಯಕೋಪದಿಂದ ಕೊರಗಿ ನಿಟ್ಟುಸಿರು ಬಿಡುತ್ತಿರುವವರು ಕೆಲವರು. ಹೀಗೆ ನಾನಾಬಗೆಯ ಚೇಷ್ಟೆಗಳುಳ್ಳ ಸ್ತ್ರೀಯರನ್ನೂ ಕಂಡನು. ಅಲ್ಲಲ್ಲಿ ಮದದಿಂದ ಗರ್ಜಿಸುತ್ತಿರುವ ಮದದಾನೆಗಳನ್ನೂ, ಜನರಿಂದ ಗೌರವಿಸಲ್ಪಡುವ ಸತ್ಪುರುಷಶ್ರೇಷ್ಠರನ್ನೂ ಕಂಡನು. ಮತ್ತು ಆ ಲಂಕಾನಗರಿಯು ಕೋಪದಿಂದ ಬುಸುಗುಟ್ಟುವ ಸರ್ಪಗಳಿಂದ ತುಂಬಿದ ಮಡುವಿನಂತೆ, ತಮ್ಮೊಡನೆ ಯುದ್ಧಕ್ಕೆ ತಕ್ಕ ವೀರರಿಲ್ಲದುದಕ್ಕಾಗಿ ಚಿಂತೆಯಿಂದ ನಿಟ್ಟುಸಿರು ಬಿಡುತ್ತಿರುವುದನ್ನೂ ಕಂಡನು. ಮತ್ತು ಬುದ್ಧಿಯಲ್ಲಿ ಶ್ರೇಷ್ಠರಾಗಿಯೂ, ಕಾಲಕ್ಕೆ ತಕ್ಕ ನಡೆವಳಿಕೆಯನ್ನು ತಿಳಿದವರಾಗಿಯೂ, ಆಸ್ತಿಕರಾಗಿಯೂ, ಪ್ರಜೆಗಳಲ್ಲಿ

ಪ್ರಮುಖರಾಗಿಯೂ, ಬಗೆಬಗೆಯ ವೇಷವುಳ್ಳವರಾಗಿಯೂ, ರಮ್ಯವಾದ ಹೆಸರುಗಳುಳ್ಳವರಾಗಿಯೂ ಇದ್ದ ಕೆಲವು ರಾಕ್ಷಸಪ್ರಧಾನರನ್ನೂ ಕಂಡನು. ಮತ್ತು ಅಲ್ಲಿ ಉತ್ತಮವಾದ ರೂಪವುಳ್ಳವರಾಗಿಯೂ, ಆ ರೂಪಕ್ಕನುಗುಣವಾದ ಸಮಸ್ತ ಸದ್ಗುಣಗಳಿಂದ ತುಂಬಿದವರಾಗಿಯೂ, ಆ ಗುಣಗಳಿಗೆ ತಕ್ಕ ನಡೆವಳಿಕೆಯುಳ್ಳವರಾಗಿಯೂ ಇರುವ ಕೆಲವು ರಾಕ್ಷಸರನ್ನೂ ಕಂಡು ಆನಂದಿಸಿದನು. ಅದರಂತೆಯೇ ದುರ್ಗುಣಗಳಿಗೆ ತಕ್ಕಂತೆ ವಿಕಾರರೂಪವುಳ್ಳ ಕೆಲವು ರಾಕ್ಷಸರನ್ನೂ ನೋಡಿದನು. ಮತ್ತು ಅಲ್ಲಿ ಮಂಜುಲವಸ್ತ್ರಾಭರಣಗಳಿಂದಲೂ, ಅವುಗಳಿಗೆ ತಕ್ಕಸೌಂದರ್ಯ ಲಾವಣ್ಯಾದಿಗಳಿಂದಲೂ ಶೋಭಿಸುತ್ತ, ತಮ್ಮ ತಮ್ಮ ಪ್ರಿಯರಲ್ಲಿ ಶುದ್ಧವಾದ ಪ್ರೇಮವನ್ನಿಟ್ಟು, ತಮ್ಮ ಪಾತಿವ್ರತ್ಯಧರ್ಮದಿಂದಲೂ, ತಮ್ಮ ಕಟಾಕ್ಷ ಭ್ರೂವಿಕ್ಷೇಪಾದಿಗಳಿಂದಲೂ, ಆ ಪ್ರಿಯರ ಮನಸ್ಸನ್ನಾಕರ್ಷಿಸುತ್ತ, ತಮ್ಮ ಪ್ರಿಯರಲ್ಲಿಯೂ ಮಧುಪಾನಗಳಲ್ಲಿಯೂ ಅತ್ಯಾಸಕ್ತರಾಗಿ, ವಿಶೇಷವೈಭವಗಳಿಂದ ಕೂಡಿ, ನಕ್ಷತ್ರಗಳಂತೆ ಶೋಭಾವಿಶಿಷ್ಟರಾದ ರಾಕ್ಷಸಸ್ತ್ರೀಯರನ್ನೂ ಕಂಡನು. ಮತ್ತು ಆ ಅರ್ಧರಾತ್ರಿಯಲ್ಲಿ ತಮ್ಮತಮ್ಮ ನಾಯಕರಿಂದ ಗಾಢಾಲಿಂಗಿತರಾಗಿ, ಸೌಂದರ್ಯಲಕ್ಷ್ಮಿಗೆ ಮುಖ್ಯಾಶ್ರಯರಾಗಿ ಆನಂದಸಾಗರದಲ್ಲಿ ಮುಳುಗಿ, ಹೂಗಳಲ್ಲಿ ಓಲಾಡುವ ಹೆಣ್ಣುದುಂಬಿಗಳಂತೆ ಆನಂದಪರವಶರಾದ ಮತ್ತೆ ಕೆಲವು ಸುಂದರಾಂಗಿಯರನ್ನೂ ಕಂಡನು. ಮತ್ತು ಅಲ್ಲಿನ ಪುರಸ್ತ್ರೀಯರಲ್ಲಿ ಉಪ್ಪರಿಗೆಯ ಮೇಲೆ ತಮ್ಮ ತಮ್ಮ ಪಾತಿವ್ರತ್ಯವನ್ನು ಬಿಡದೆ ಪತಿಯ ಪ್ರೇಮಕ್ಕೆ ಪಾತ್ರರಾಗಿ, ಅದಕ್ಕೆ ತಕ್ಕಂತೆ ತಾವೂ ಅವರಲ್ಲಿ ಮೋಹವನ್ನಿಟ್ಟು ಮನ್ಮಥಾವೇಶಪರವಶರಾಗಿರುವವರು ಕೆಲವರು. ರಹಸ್ಯಸ್ಥಳಗಳಲ್ಲಿ ತಮ್ಮ ತಮ್ಮ ಪ್ರಿಯರೊಡನೆ ರತಿಕೇಳಿಯನ್ನು ನಡೆಸಿ, ಆಯಾಸದಿಂದ ಮೈಮರೆತುಮೇಲು ಹೊದ್ದಿಕೆಯೂ ಇಲ್ಲದೆ,ಬಂಗಾರದಂತೆ ಹೊಳೆಯುವ ಮೈಯನ್ನು ತೆರೆದು ಮಲಗಿರುವವರು ಕೆಲವರು. ಚಂದ್ರನಂತೆ ಬಿಳುಪಾದ ಕಾಂತಿಯುಳ್ಳವರು ಕೆಲವರು. ಮನೋಹರವಾದ ಮೈಬಣ್ಣವುಳ್ಳವರಾದರೂ ಪತಿವಿರಹದುಃಖದಿಂದ ಬಾಡಿದ ಬಣ್ಣವುಳ್ಳವರು ಕೆಲವರು. ಮತ್ತು ಆ ರಾತ್ರಿಯ ಚಂದ್ರಿಕೆಯಲ್ಲಿ ತಮ್ಮ ತಮ್ಮ ಮನಸ್ಸಿಗೊಪ್ಪಿದ ನಾಯಕರ ಬಳಿಗೆ ಹೊರಟು, ಆನಂದದಿಂದ ಅವರೊಡನೆ ಕ್ರೀಡಿಸುತಿದ್ದ ಅಭಿಸಾರಿಕೆಯರು ಕೆಲವರು. ತಮ್ಮ ತಮ್ಮ ಮನೆಗಳಲ್ಲಿಯೇ ತಮ್ಮ ಪತಿಗಳೊಡನೆ ಕ್ರೀಡಿಸುತ್ತ, ತೃಪ್ತರಾಗಿ ಸಂತೋಷದಿಂದಿರುವ ಕುಲಪಾಲಿಕೆಯರು ಕೆಲವರು. ಹೀಗೆ ಅನೇಕ ಸ್ತ್ರೀಯರನ್ನು ನೋಡುತ್ತ ಬಂದನು. ಮತ್ತು ಧೀಮಂತನಾದ ಆ ಕಪಿವೀರನು, ರಾಕ್ಷಸಸ್ತ್ರೀಯರಾರೋ ಮನುಷ್ಯಸ್ತ್ರೀಯರಾರೋ ಎಂಬುದನ್ನು ತಿಳಿಯುವುದಕ್ಕಾಗಿ ಆಯಾ ಸ್ತ್ರೀಯರ

ಚಂದ್ರಬಿಂಬಸಮಾನಗಳಾದ ಮುಖಬಿಂಬಗಳನ್ನೂ, ಬಾಗಿದ ಕಣ್ಣಿವೆಗಳುಳ್ಳ ಅವರವರ ನೋಟಗಳನ್ನೂ ಚೆನ್ನಾಗಿ ಗಮನಿಸಿ ನೋಡುತಿದ್ದನು. ಮತ್ತು ಹಿಂದೆ ರಾಮನು ಹೇಳಿದ್ದ ಸೀತೆಯ ಆಭರಣಗಳ ಗುರುತುಗಳೇನಾದರೂ ಕಾಣಬಹುದೋ ಎಂಬ ಆಸೆಯಿಂದ, ಮಿಂಚುಗಳಂತೆ ಹೊಳೆಯುವ ಅವರ ಆಭರಣಗಳನ್ನೆಲ್ಲಾ ಗಮನಿಸಿ ನೋಡುತ್ತ ಬಂದನು. ಎಷ್ಟು ನೋಡಿದರೇನು? ಸುಂದರಾಂಗಿಯಾಗಿ, ಸತ್ಕುಲಪ್ರಸೂತೆಯಾಗಿ, ಅರಳಿದ ಬಳ್ಳಿಯಂತೆ ಅಂದವಾದ ರೂಪವುಳ್ಳವಳಾಗಿ, ಮನಸ್ಸಂಕಲ್ಪದಿಂದಲೇ ಹುಟ್ಟಿದ ಆಯೋನಿಜೆಯೆನಿಸಿರುವ ಸೀತಾದೇವಿಯು ಮಾತ್ರ ಈತನ ಕಣ್ಣಿಗೆ ಗೋಚರಿಸಲಿಲ್ಲ. ಆಕೆಯಾದರೋ ಪಾತಿವ್ರತ್ಯವೆಂಬ ಉತ್ತಮ ಧರ್ಮವೊಂದರಲ್ಲಿಯೇ ನಿತ್ಯಾಸಕ್ತಳಾಗಿರತಕ್ಕವಳು. ರಾಮನೊಬ್ಬನನ್ನೇ ಕಣ್ಣಿಟ್ಟು ಕಾದಿರತಕ್ಕವಳು. ಆತನೊಬ್ಬನಲ್ಲಿಯೇ ಮೋಹಗೊಂಡು ಮೈಮರೆತಿರುವವಳು. ಸದ್ಗುಣಸಂಪತ್ತುಳ್ಳ ಶ್ರೀರಾಮನ ಮನಸ್ಸನ್ನೂ ತನ್ನ ಕಡೆಗಾಕರ್ಷಿಸಿ, ತಾನೂ ಅವರಲ್ಲಿ ನಿತ್ಯವಾಸಮಾಡತಕ್ಕವಳು. ಉತ್ತಮಸ್ತ್ರೀಯರಲ್ಲಿಯೂ ಉತ್ತಮೆ ಯೆನಿಸಿಕೊಂಡವಳು. ರಾಮವಿರಹತಾಪದಿಂದ ಎಡೆಬಿಡದೆ ಸಂಕಟಪಡುತ್ತಿರುವವಳು. ಮೊದಲು ರಾಮನೊಡಗೂಡಿದ ಕಾಲದಲ್ಲಿ ರತ್ನಹಾರಗಳಿಂದಲಂಕೃತವಾದ ತನ್ನ ಕಂಠವನ್ನು, ಈಗ ಎಡೆಬಿಡದೆ ಸುರಿಯುವ ಬಾಷ್ಪಧಾರೆಯಿಂದ ಕಂದಿಸುತ್ತಿರುವ ವಳು. ಅಂದವಾದ ಕಣ್ಣಿವೆಗಳಿಂದಲೂ, ಇಂಪಾದ ಕಂಠಸ್ವರದಿಂದಲೂ ಕೂಡಿ, ಕಾಡಿನಲ್ಲಿ ಕುಣಿಯುವ ನವಿಲಿನಂತೆ ಸೊಗಸುಬೀರುವ ಸೌಂದರ್ಯವುಳ್ಳವಳು. ಅಸ್ಪಷ್ಟ ವಾದ ಕಲೆಯುಳ್ಳ ಚಂದ್ರರೇಖೆಯಂತೆಯೂ, ಕೊಳೆಮುಚ್ಚಿದ ಚಿನ್ನದ ಸಲಿಗೆ ಯಂತೆಯೂ, ಗಾಯದಲ್ಲಿ ಹುದುಗಿ ಮುರಿಸಿಕೊಂಡಿರುವ ಬಾಣದಲಗಿನಂತೆಯೂ, ಗಾಳಿಯಿಂದ ಚದರಿದ ಮೇಘಲೇಖೆಯಂತೆಯೂ ಈಗ ರಾಮವಿರಹದಿಂದ ತನ್ನ ಸ್ವಾಭಾವಿಕಸ್ಥಿತಿಯನ್ನು ಬಿಟ್ಟು ಕಂದಿದ ಸ್ವರೂಪವುಳ್ಳವಳು. ಇಂತಹ ಸ್ತ್ರೀರತ್ನವು ಮಾತ್ರ ಈ ಆಂಜನೇಯನ ಕಣ್ಣಿಗೆ ಬೀಳಲಿಲ್ಲ. ಹೀಗೆ ಎಲ್ಲೆಲ್ಲಿ ಹುಡುಕಿದರೂ ತನಗೆ ರಾಜೇಂದ್ರನಾದ ಆ ಶ್ರೀರಾಮನ ಧರ್ಮಪತ್ನಿಯು ಕಣ್ಣಿಗೆ ಬೀಳದುದನ್ನು ನೋಡಿ, ಹನುಮಂತನು ದುಃಖದಲ್ಲಿ ಮುಳುಗಿದವನಾಗಿ, ಸ್ವಲ್ಪಕಾಲದವರೆಗೆ ಏನೂ ತೋರದ ಮೂಢನಂತೆ ಮೈಮರೆತಿದ್ದನು.

ಇಲ್ಲಿಗೆ ಐದನೆಯ ಸರ್ಗವು.

---



## ಹನುಮಂತನು ರಾವಣನ ಅಂತಃಪುರವನ್ನು ನೋಡಿದುದು.



ಆ ಹನುಮಂತನು ಅಲ್ಲಿದ್ದ ರಾಜಗೃಹಗಳೆಲ್ಲವನ್ನೂ ಚೆನ್ನಾಗಿ ಹುಡುಕಿಯೂ, ವಿದೇಹಪುತ್ರಿಯನ್ನು ಕಾಣದುದಕ್ಕಾಗಿ ಮನಸ್ಸಿನಲ್ಲಿ ಕೊರಗುತ್ತ, ತಿರುಗಿ ಪಟ್ಟಣವನ್ನೆಲ್ಲಾ ಸುತ್ತಿಬರಬೇಕೆಂದು ಹೊರಟು, ಆಯಾ ಸಂದರ್ಭಗಳಿಗೆ ತಕ್ಕ ರೂಪವನ್ನು ಧರಿಸಿ, ಅತಿವೇಗದಿಂದ ಆ ಪುರವೆಲ್ಲವನ್ನೂ ಸುತ್ತಿಬಂದನು. ಕೊನೆಗೆ ಹಿಂತಿರುಗಿ ರಾಕ್ಷಸೇಂದ್ರನಾದ ಆ ರಾವಣನ ಅರಮನೆಯನ್ನೇ ಚೆನ್ನಾಗಿ ಒಳಹೊಕ್ಕು ಹುಡುಕಿ ನೋಡಬೇಕೆಂದು ನಿಶ್ಚಯಿಸಿಕೊಂಡು, ಹಿಂತಿರುಗಿ ಆ ರಾವಣನ ಮನೆಯ ಸಮೀಪಕ್ಕೆ ಬಂದನು. ಸೂರ್ಯಕಾಂತಿಯಿಂದ ಹೊಳಪೇರಿದ ಚಿನ್ನದ ಕೋಟೆಯಿಂದ ಪರಿವೃತವಾಗಿಯೂ, ಸಿಂಹಗಳಿಂದ ರಕ್ಷಿತವಾದ ಕಾಡಿನಂತೆ ಘೋರರಾಕ್ಷಸರಿಂದ ರಕ್ಷಿತವಾಗಿಯೂ ಇರುವ ಆ ಮನೆಯನ್ನು ನೋಡಿ ನೋಡಿ ಈ ಆಂಜನೇಯನು ಆಶ್ಚರ್ಯದಿಂದುಕ್ಕುತಿದ್ದನು. ಆ ಪ್ರಾಕಾರದ ಕಾಂತಿಯು ಇವನ ದೇಹದ ಮೇಲೆ ಬಿದ್ದು ಇವನ ದೇಹಕಾಂತಿಯನ್ನು ಮತ್ತಷ್ಟು ಹೆಚ್ಚಿಸುತಿತ್ತು. ಆ ಮನೆಯಾದರೋ ಚಿನ್ನದ ಚಿತ್ರಕಾರ್ಯಗಳುಳ್ಳ ಬೆಳ್ಳಿಯ ಹೊರಬಾಗಿಲುಗಳಿಂದಲೂ, ಚಿತ್ರವಿಚಿತ್ರಗಳಾದ ಕೊತ್ತಳಗಳಿಂದಲೂ, ಅತಿ ಮನೋಹರಗಳಾದ ಒಳಬಾಗಿಲುಗಳಿಂದಲೂ ಶೋಭಿಸುತ್ತಿರುವುದು. ಅಲ್ಲಲ್ಲಿ ಪ್ರಮುಖರಾದ ರಾಜಪುರುಷರು ಆನೆಗಳನ್ನೇರಿ ಸುತ್ತಲೂ ಕಾವಲಾಗಿ ಸಂಚರಿಸುತ್ತಿರುವರು. ಯಾವ ಅಸಾಧ್ಯ ಕಾರ್ಯವನ್ನಾದರೂ ನಿರಾಯಾಸವಾಗಿ ನಿರ್ವಹಿಸತಕ್ಕ ಮಹಾಶೂರರೂ ಸುತ್ತುತ್ತಿರುವರು. ಎಂತಹ ವೀರರಿಗೂ ಅವಧ್ಯಗಳಾದ ಎಷ್ಟೋ ರಥಾಶ್ವಗಳು ತುಂಬಿರುವುವು. ದಂತಗಳಿಂದಲೂ ಬೆಳ್ಳಿಬಂಗಾರಗಳಿಂದಲೂ ನಿರ್ಮಿತಗಳಾಗಿ, ಸಿಂಹ ವ್ಯಾಘ್ರಗಳ ಚರ್ಮಗಳಿಂದ ಮಾಡಲ್ಪಟ್ಟ ಮೇಲುಹೊದ್ದಿಕೆಗಳುಳ್ಳ ಚಿತ್ರವಿಚಿತ್ರಗಳಾದ ರಥಗಳು ಎಡೆಬಿಡದೆ ತಿರುಗುತ್ತಿರುವುವು. ಯಾವ ಕಡೆಯಲ್ಲಿ ನೋಡಿದರೂ ಅದು ಅಮೂಲ್ಯಗಳಾದ ರಾಜಪೀಠಗಳಿಂದಲೂ, ಪಾತ್ರಸಾಮಗ್ರಿಗಳಿಂದಲೂ ತುಂಬಿರುವುದು. ಅನೇಕ ಮಹಾರಥರಿಗೆ ವಾಸಸ್ಥಾನವಾಗಿರುವುದು. ದೊಡ್ಡದೊಡ್ಡ ರಥಗಳೂ ಸಿಂಹಾಸನಗಳೂ, ಶೋಭಿಸುತ್ತಿರುವುವು. ಚೆನ್ನಾಗಿ ಕೊಬ್ಬಿಬೆಳೆದು ನೇತ್ರಾನಂದಕರಗಳಾದ ಬಗೆಬಗೆಯ ಮೃಗಪಕ್ಷಿಗಳು ಅಲ್ಲಿ ಸಾವಿರಾರು ಸಂಖ್ಯೆಯಿಂದ ಸುತ್ತುತ್ತಿರುವುವು. ಶಸ್ತ್ರವಿದ್ಯೆಯಲ್ಲಿ ಸುಶಿಕ್ಷಿತರಾದ ಅನೇಕ ರಾಕ್ಷಸರು ಅದರ ಹೊರಗೆ ಕಾವಲಾಗಿರುವರು. ಅಲ್ಲಲ್ಲಿ ಬಹಳ ಸೌಂದರ್ಯದಿಂದಲೂ, ಉಲ್ಲಾಸದಿಂದಲೂ ಕೂಡಿದ ಉತ್ತಮ ಸ್ತ್ರೀಯರು ತುಂಬಿ ನೆರೆದಿರುವರು.

ಅಲ್ಲಿ ಸುತ್ತುತ್ತಿರುವ ಸ್ತ್ರೀಪುರುಷರ ಆಭರಣಧ್ವನಿಗಳೇ ಸಮುದ್ರಘೋಷದಂತೆ ಮೊಳಗುತ್ತಿರುವುವು. ಮತ್ತು ಅಲ್ಲಿ ರಾಜಚಿಹ್ನಗಳಾದ ಛತ್ರಚಾಮರಾದಿಗಳು ಅಸಂಖ್ಯಾತವಾಗಿರುವುವು. ಮೇಲಾದ ಅಗರು ಚಂದನಾದಿಗಳ ವಾಸನೆಯು ಘಮಘಮಿಸುತ್ತಿರುವುದು. ಸಿಂಹಗಳಿಂದ ತುಂಬಿದ ಮಹಾರಣ್ಯದಂತೆ ಅಲ್ಲಲ್ಲಿ ಅನೇಕ ಪ್ರಧಾನಪುರುಷರು ತುಂಬಿರುವರು. ಮತ್ತು ಅಲ್ಲಿ ಭೇರಿ, ಮದ್ದಲೆ, ವೀಣೆ, ಶಂಖ, ಮೊದಲಾದ ಮಂಗಳವಾದ್ಯಧ್ವನಿಗಳು ಎಡೆಬಿಡದೆ ಕೇಳಿಸುತ್ತಿರುವುವು. ಆ ರಾಜಗೃಹವು ಯಾವಾಗಲೂ ಗಂಧಪುಷ್ಪಾದಿಗಳಿಂದ ಅಲಂಕೃತವಾಗಿರುವುದು. ಆಹಿತಾಗ್ನಿಯಾದ ರಾವಣನು ಆಗಾಗ ಪರ್ವಕಾಲಗಳಲ್ಲಿ ಮಾಡತಕ್ಕಹೋಮಾಗ್ನಿಯು ಜ್ವಲಿಸುತ್ತಿರುವುದು. ರಾಕ್ಷಸರೆಲ್ಲರೂ ಎಡೆಬಿಡದೆ ಅದನ್ನು ಪೂಜಿಸುತ್ತಿರುವರು. ಸಮುದ್ರದಂತೆ ಅತಿಗಂಭೀರವಾಗಿಯೂ, ಸಮುದ್ರದಂತೆಯೇ ನಿತ್ಯ ಘೋಷವುಳ್ಳದಾಗಿಯೂ, ರತ್ನಮಯವಾಗಿಯೂ, ಉತ್ತಮವಸ್ತುಗಳಿಂದ ತುಂಬಿದುದಾಗಿಯೂ ಇದ್ದ ರಾವಣನ ಈ ಮನೆಯನ್ನು ಆಂಜನೇಯನು ಪ್ರವೇಶಿಸಿ, ರಥಗಜತುರಗಾದಿಗಳಿಂದ ನಿಬಿಡವಾಗಿ, ಪ್ರಕಾಶಮಾನವಾದ ರೂಪದಿಂದ ಕೂಡಿದ ಆ ಮನೆಯನ್ನು ಸುತ್ತುಸುತ್ತಿ ನೋಡುತ್ತ, ತನ್ನ ಮನಸ್ಸಿನಲ್ಲಿ "ಈ ಲಂಕೆಗೆ ಇದೇ ಒಂದಾಭರಣವು" ಎಂದೆಣಿಸಿ, ಅದರ ಸುತ್ತಲೂ ಸೀತೆಯನ್ನು ಹುಡುಕಲಾರಂಭಿಸಿದನು. ಅಲ್ಲಿದ್ದ ಒಂದೊಂದು ರಾಕ್ಷಸಗೃಹವನ್ನೂ ನುಗ್ಗಿನುಗ್ಗಿ ಅಲ್ಲಲ್ಲಿನ ಉದ್ಯಾನಗಳನ್ನೂ, ಉಪ್ಪರಿಗೆಗಳನ್ನೂ, ನಿರ್ಭಯವಾಗಿ ಪ್ರವೇಶಿಸಿ ನೋಡುತ್ತ ತಿರುಗುತಿದ್ದನು. ಆಮೇಲೆ ಮಹಾವೀರ್ಯವುಳ್ಳ ಆ ಹನುಮಂತನು ವೇಗದಿಂದ ಹಾರಿ ಪ್ರಹಸ್ತನ ಮನೆಯನ್ನು ಪ್ರವೇಶಿಸಿದನು. ಅಲ್ಲಿಂದಿಳಿದು ಮಹಾಪಾರ್ಶ್ವನ ಮನೆಗೆ ಬಂದನು. ಆ ಮೇಲೆ ಮೇಘದಂತೆ ಮಹತ್ತಾದ ಕುಂಭಕರ್ಣನ ಮನೆಗೆ ನುಗ್ಗಿದನು. ಹಾಗೆಯೇ ವಿಭೀಷಣನ ಮನೆಗೂ ಪ್ರವೇಶಿಸಿದನು. ಅಲ್ಲಿಂದ ಮಹೋದರನ ಮನೆಗೆ ಬಂದನು. ಅಲ್ಲಿಂದ ಹೊರಟು ಕ್ರಮವಾಗಿ, ವಿರೂಪಾಕ್ಷ, ವಿದ್ಯುಜ್ಜಿಹ್ವ, ವಿದ್ಯುನ್ಮಾಲಿಗಳೆಂಬ ರಾಕ್ಷಸರ ಮನೆಗಳನ್ನು ನೋಡಿಬಂದನು. ಅಲ್ಲಿಂದ ವಜ್ರದಂಷ್ಟ್ರನ ಮನೆಗೆ ಹೋದನು. ಹಾಗೆಯೇ ಮಹಾತೇಜಸ್ವಿಗಳಾದ ಶುಕಸಾರಣರು, ರಾವಣನ ಪುತ್ರನಾದ ಇಂದ್ರಜಿತ್ತು, ಜಂಬುಮಾಲಿ, ಸುಮಾಲಿ, ರಶ್ಮಿಕೇತು, ಸೂರ್ಯಶತ್ರು, ವಜ್ರಕಾಯ, ಮುಂತಾದ ರಾಕ್ಷಸರು ವಾಸಮಾಡುತಿದ್ದ ಒಂದೊಂದು ಮನೆಯನ್ನೂ ನುಗ್ಗಿ ನೋಡುತ್ತ ಬಂದನು. ಅಲ್ಲಿಂದ ಮುಂದೆ ಹೊರಟು, ಧೂಮ್ರಾಕ್ಷ, ಸಂಪಾತಿ, ವಿದ್ಯುದ್ರೂಪ, ಘನ, ವಿಘನ, ಶುಕನಾಸ, ವಕ್ರಶಠ, ಬ್ರಹ್ಮಕರ್ಣ, ದಂಷ್ಟ್ರ, ಯುದ್ಧೋನ್ಮತ್ತ, ಮತ್ತ, ಧ್ವಜಗ್ರೀವ, ನಾದಿ,

ಮೊದಲಾದ ರಾಕ್ಷಸರ ಮನೆಗಳಿಗೂ ಹೋಗಿ ನೋಡಿದನು. ಮತ್ತು ವಿದ್ಯುಜ್ಜಿಹ್ವ, ಇಂದ್ರಜಿಹ್ವ, ಹಸ್ತಿಮುಖ, ಕರಾಳ, ಪಿಶಾಚ, ಶೋಣಿತಾಕ್ಷರೆಂಬ ರಾಕ್ಷಸರ ನಿವಾಸಗಳಿಗೂ ಹೋಗಿ ನೋಡಿದನು. ಹೀಗೆ ವಾಯುಪುತ್ರನಾದ ಹನುಮಂತನು ಒಂದೊಂದು ಮನೆಯನ್ನೂ ದಾಟಿ ಹೋಗುತ್ತ, ಮಹಾರ್ಹಗಳಾದ ಆಯಾಮನೆಗಳಲ್ಲಿ ಅವರವರು ಅನುಭವಿಸುತ್ತಿರುವ ಐಶ್ವರ್ಯಸಮೃದ್ಧಿಗಳೆಲ್ಲವನ್ನೂ ನೋಡಿದನು. ಮಹಾಯಶಸ್ವಿಯಾದ ಆ ಕಪೀಶ್ವರನು ಸುತ್ತಲೂ ಇದ್ದ ಈ ರಾಕ್ಷಸರ ಮನೆಗಳೆಲ್ಲವನ್ನೂ ಸುತ್ತಿ ನೋಡಿದ ಮೇಲೆ, ರಾಕ್ಷಸಚಕ್ರವರ್ತಿಯಾದ ರಾವಣನ ಮನೆಯೊಳಗೂ ಪ್ರವೇಶಿಸಿದನು. ಅದರ ನಾಲ್ಕುಕಡೆಗಳನ್ನೂ ಸುತ್ತಿ ನೋಡುತ್ತ ರಾವಣನು ತನ್ನ ಅಂತಃಪುರಸ್ತ್ರೀಯರನ್ನಿರಿಸತಕ್ಕ ಒಂದು ಪ್ರಧಾನಗೃಹವನ್ನು ನೋಡಿ ಆ ಸ್ಥಳಕ್ಕೆ ಬಂದನು. ಅದರ ಸುತ್ತಲೂ ಶೂಲಗಳನ್ನೂ, ಮುದ್ಗರಗಳನ್ನೂ, ಶಕ್ತ್ಯಾಯುಧಗಳನ್ನೂ, ತೋಮರಗಳನ್ನೂ ಹಿಡಿದು ಎಚ್ಚರಿಕೆಯಿಂದ ಮಲಗಿರುವ ವಿಕಾರನೇತ್ರೆಯರಾದ ಕೆಲವು ರಾಕ್ಷಸಸ್ತ್ರೀಯರನ್ನೂ, ಆ ಮನೆಗೆ ಕಾವಲಾಗಿದ್ದ ಇನ್ನೂ ನಾನಾವಿಧ ರಾಕ್ಷಸ ಸೈನ್ಯಗಳನ್ನೂ ಕಂಡನು. ಆ ಸೈನ್ಯದಲ್ಲಿ ಬಗೆಬಗೆಯ ಆಯುಧಗಳನ್ನು ಹಿಡಿದ ಮಹಾಕಾಯವುಳ್ಳ ರಾಕ್ಷಸರನ್ನೂ, ಕೆಂಪು, ಬಿಳುಪು, ಕಪ್ಪು, ಮುಂತಾದ ವಿವಿಧವರ್ಣಗಳುಳ್ಳ ವೇಗಶಾಲಿಗಳಾದ ಕುದುರೆಗಳನ್ನೂ, ಉತ್ತಮಜಾತಿಯಲ್ಲಿ ಹುಟ್ಟಿ ಅಂದವಾದ ರೂಪವುಳ್ಳವುಗಳಾಗಿ, ಚೆನ್ನಾಗಿ ಶಿಕ್ಷಿತಗಳಾದುದರಿಂದ ಯುದ್ಧದಲ್ಲಿ ಐರಾವತಕ್ಕೆ ಸಮಾನಗಳಾಗಿರುವ ಉತ್ತಮಗಜಗಳನ್ನೂ ಕಂಡನು. ಆ ಆನೆಗಳೆಲ್ಲವೂ ಒಂದೇ ಬಡಿತಕ್ಕೆ ಶತ್ರುಸೈನ್ಯಗಳನ್ನು ಧ್ವಂಸಮಾಡತಕ್ಕ ಮಹಾದೇಹವುಳ್ಳವುಗಳಾಗಿ, ಮಳೆಯನ್ನು ಸುರಿಯುವ ಮೇಘದಂತೆಯೂ, ಗಿರಿನದಿಗಳನ್ನು ಸ್ರವಿಸುವ ಬೆಟ್ಟಗಳಂತೆಯೂ ಎಡೆಬಿಡದೆ ಮದಜಲವನ್ನು ಸುರಿಸುತ್ತ, ಮೇಘಧ್ವನಿಯಂತೆ ಗಂಭೀರಗರ್ಜನವುಳ್ಳವುಗಳಾಗಿ, ಶತ್ರುಗಳಿಂದಿದಿರಿಸಲಾಗದ ಶಕ್ತಿಯುಳ್ಳವುಗಳಾಗಿದ್ದುವು. ಮತ್ತು ಅಲ್ಲಿ ಹನುಮಂತನು ಜಾಂಬೂನದವೆಂಬ ಮೇಲಾದ ಸುವರ್ಣದಿಂದಲೂ, ಬೇರೆ ಬಗೆಯ ಬಂಗಾರಗಳಿಂದಲೂ ಅಲಂಕೃತರಾಗಿ, ಬಾಲಸೂರ್ಯಬಿಂಬಕ್ಕೆಣೆಯಾದ ತೇಜಸ್ಸುಳ್ಳವರಾಗಿದ್ದ ಸಾವಿರಾರುಮಂದಿ ಕಾಲಾಳುಗಳನ್ನೂ ಕಂಡನು. ಮತ್ತು ಅಲ್ಲಿ ಆ ವಾಯುಪುತ್ರನು ವಿವಿಧಾಕಾರಗಳುಳ್ಳ ಪಲ್ಲಕ್ಕಿಗಳನ್ನೂ, ಚಿತ್ರವಿಚಿತ್ರಗಳಾದ ಬಳ್ಳಿವನಗಳನ್ನೂ, ಚಿತ್ರಶಾಲೆಗಳನ್ನೂ, ಕ್ರೀಡಾಗೃಹಗಳನ್ನೂ, ಕ್ರೀಡಾರ್ಥವಾಗಿ ಮರದಿಂದ ಮಾಡಿದ ಕೃತ್ರಿಮಪರ್ವತಗಳನ್ನೂ, ಅಂದವಾದ ರತಿಗೃಹಗಳನ್ನೂ, ಹಗಲಿನಲ್ಲಿ ವಿಹಾರಕ್ಕಾಗಿ ಕಟ್ಟಿರುವ ಮನೆಗಳನ್ನೂ ನೋಡಿದನು.

ಹನುಮಂತನು ಈ ಸನ್ನಿವೇಶಗಳೆಲ್ಲವನ್ನೂ ನೋಡುತ್ತ ಮುಂದೆ ಮುಂದೆ ಹೋದಾಗ, ಅಲ್ಲಿ ಇದುವರೆಗೆ ನೋಡಿದ ಸಮಸ್ತಗೃಹಗಳಿಗಿಂತಲೂ ಉತ್ತಮವಾಗಿ ಮಂದರಪರ್ವತದಂತಿರುವ ಮತ್ತೊಂದು ಭವನವು ಕಾಣಿಸಿತು. ಆ ದಿವ್ಯಭವನದಲ್ಲಿ ನವಿಲುಗಳ ವಿಹಾರಕ್ಕಾಗಿ ನಿರ್ಮಿತಗಳಾದ ಅನೇಕ ಕ್ರೀಡಾಸ್ಥಾನಗಳು ಕಾಣುತ್ತಿರುವುವು. ಮತ್ತು ಅದು ಸುತ್ತಲೂ ಧ್ವಜಾಲಂಕೃತವಾಗಿ, ನವರತ್ನಗಳಿಂದ ಚಿತ್ರಿತವಾಗಿ ಶೋಭಿಸುತ್ತಿರುವುದು. ನವನಿಧಿಗಳೂ ಅಲ್ಲಿ ತುಂಬಿರುವುವು. ಚತುರರಾದ ಅನೇಕ ಶಿಲ್ಪಿಗಳು ಸೇರಿ, ಅವರವರ ಶಿಲ್ಪಚಾತುರ್ಯವೆಲ್ಲವನ್ನೂ ಉಪಯೋಗಿಸಿ ನಿರ್ಮಿಸಿದಂತಿರುವುದು. ಪರಮೇಶ್ವರನಿಗೆ ವಾಸಭೂತವಾದ ಕೈಲಾಸದ ಸೊಬಗನ್ನನುಕರಿಸುತ್ತಿರುವುದು. ರತ್ನಗಳ ಕಾಂತಿಯಿಂದಲೂ, ರಾವಣನ ತೇಜಸ್ಸಿನಿಂದಲೂ ತುಂಬಿದ ಆ ರಾಜಗೃಹವು ಸಹಸ್ರಕಿರಣಗಳಿಂದ ಜ್ವಲಿಸುವ ಸೂರ್ಯನಂತೆಯೇ ಹೊಳೆಯುತ್ತಿರುವುದು. ಅಲ್ಲಿದ್ದ ಶಯನಾಸನಾದಿಗಳೆಲ್ಲವೂ ಕೇವಲಸ್ವರ್ಣಮಯಗಳು! ಮತ್ತು ಆ ಮನೆಯ ಅಂಗಳವೆಲ್ಲವೂ ಅಲ್ಲಲ್ಲಿ ಚೆಲ್ಲಿದ ಜೇನಿನಂತಿರುವ ಮದ್ಯರಸದಿಂದಲೂ, ರತ್ನಖಚಿತಗಳಾದ ಮಧುಪಾತ್ರಗಳಿಂದಲೂ ನಿಬಿಡವಾಗಿ ಅತಿರಮಣೀಯವಾಗಿಯೂ ವಿಶಾಲವಾಗಿಯೂ ಇರುವುವು. ಆ ದಿವ್ಯಭವನವು ಸಾಕ್ಷಾತ್ಕುಬೇರಭವನದಂತೆಯೇ ತೋರುತ್ತಿರುವುದು. ಕಾಂಚೀನೂಪುರಾದ್ಯಾಭರಣಧ್ವನಿಗಳೂ, ತಾಳಮೃದಂಗಾದಿ ವಾದ್ಯಧ್ವನಿಗಳೂ ಅಲ್ಲಿಂದ ಎಡೆಬಿಡದೆ ಹೊರಟುಬರುತಿದ್ದುವು. ಅನೇಕ ಪ್ರಾಸಾದಗಳಿಂದಲೂ ಅಸಂಖ್ಯಾತವಾದ ಸ್ತ್ರೀರತ್ನಗಳಿಂದಲೂ, ಅತಿವಿಶಾಲಗಳಾದ ತೊಟ್ಟಿಗಳಿಂದಲೂ ಶೋಭಿಸುತಿದ್ದ ಆ ಮನೆಯ ಪ್ರಾಕಾರವನ್ನು ಹನುಮಂತನು ಪ್ರವೇಶಿಸಿದನು.

ಇಲ್ಲಿಗೆ ಆರನೆಯ ಸರ್ಗವು.

---

ಹನುಮಂತನು ರಾವಣನ ಅಂತಃಪುರದೊಳಗಿರುವ
ಗೃಹಗಳ ಸಾಲನ್ನೂ, ಅಲ್ಲಿದ್ದ ಪುಷ್ಪಕವಿಮಾನವನ್ನೂ
ನೋಡಿದುದು.

ಬಲಾಢ್ಯನಾದ ಹನುಮಂತನು ಆ ನಿವೇಶನದ ಸುತ್ತಲೂ ಇನ್ನೂ ಅನೇಕ ಗೃಹಸಮೂಹಗಳನ್ನು ಕಂಡನು. ಅವೆಲ್ಲವೂ ವೈಡೂರ್‍ಯಾದಿಮಣಿಗಳಿಂದ ಖಚಿತಗಳಾದ ಚಿನ್ನದ ಕಿಟಕಿಗಳಿಂದಲೂ, ಗೃಹಪಕ್ಷಿಗಳಿಂದಲೂ ಶೋಭಿಸುತ್ತಾ, ವರ್ಷಾಕಾಲದಲ್ಲಿ ಮಿಂಚಿನಿಂದಲೂ, ಚಾತಕಪಕ್ಷಿಗಳಿಂದಲೂ ಕೂಡಿದ ಮಹಾಮೇಘಗಳಂತೆ ತೋರುವುವು. ಆಯಾ ಮಹಾಭವನಗಳೊಳಗೆ ಶಂಖ, ಕತ್ತಿ, ಬಿಲ್ಲು ಮುಂತಾದ ಆಯುಧಗಳಿಂದ ತುಂಬಿದ ಕಿರುಮನೆಗಳೂ, ಅಲ್ಲಿನ ಉಪ್ಪರಿಗೆಗಳಮೇಲೆ ಅಂದವಾಗಿಯೂ, ವಿಶಾಲಗಳಾಗಿಯೂ ಇರುವ ಚಂದ್ರಶಾಲೆಗಳೂ ಶೋಭಿಸುವುವು. ಮತ್ತು ನಾನಾರತ್ನಸಮೂಹಗಳಿಂದ ಬೆಳಗುತ್ತಾ, ದೇವಾಸುರರಿಂದಲೂ ಪೂಜಿತಗಳಾಗಿ, ಶಿಲ್ಪಶಾಸ್ತ್ರಕ್ರಮದಿಂದ ನಿರ್ದೋಷವಾಗಿ, ರಾವಣನ ಭುಜಬಲಾರ್ಜಿತಗಳಾಗಿ, ಸರ್ವಸೌಭಾಗ್ಯಗಳಿಂದ ತುಂಬಿದುದಾಗಿದ್ದ ಆದರಸುತ್ತಿನ ಮನೆಗಳೆಲ್ಲವನ್ನೂ ಹನುಮಂತನು ನೋಡಿದನು. ಹೀಗೆ ಎಷ್ಟೋ ಪ್ರಯತ್ನದಿಂದ ನಿರ್ಮಿತಗಳಾದ ಸಂಸ್ಥಾನವಿಶೇಷಗಳುಳ್ಳುದಾಗಿಯೂ, ಸಾಕ್ಷಾನ್ಮಯನು ತನಗಾಗಿಯೇ ಕಟ್ಟಿಟ್ಟುಕೊಂಡಂತೆ ಭೂಮಿಯಲ್ಲಿರುವ ಸಮಸ್ತಗೃಹಗಳಿಗಿಂತಲೂ ಸಮಸ್ತಭಾಗಗಳಲ್ಲಿಯೂ ಮೇಲೆನಿಸಿಕೊಂಡ ಆ ಗೃಹಗಳನ್ನೆಲ್ಲಾ ನೋಡುತ್ತ ಬಂದು, ಕೊನೆಗೆ ಅವುಗಳ ನಡುವೆ ಮಹೋನ್ನತವಾಗಿ ಮೇಘದಂತಿರುವ ಪುಷ್ಪಕವಿಮಾನವನ್ನು ಕಂಡನು. ಆ ವಿಮಾನವಾದರೋ ಅತಿಮನೋಹರವಾಗಿ, ಕೇವಲಸುವರ್ಣಮಯವಾಗಿ, ಆ ರಾಕ್ಷಸಚಕ್ರವರ್ತಿಯ ಬಲಕ್ಕನುರೂಪವಾಗಿ, ಒಂದು ದೊಡ್ಡಮನೆಯಂತೆ ಅತಿವಿಸ್ತಾರವಾಗಿ, ಎಣೆಯಿಲ್ಲದ ಸೌಂದರ್‍ಯದಿಂದ ಶೋಭಿಸುವುದು. ಮತ್ತು ಭೂಮಿಗಿಳಿದು ಬಂದ ಸ್ವರ್ಗವೋ ಎಂಬಂತೆ ಕಾಂತಿಯಿಂದ ಜ್ವಲಿಸುತ್ತಿರುವುದು. ನವರತ್ನಖಚಿತವಾಗಿ, ಬಗೆಬಗೆಯ ಮರಗಳ ಹೂಗಳಿಂದ ಹೊದಿಸಲ್ಪಟ್ಟು, ಮಹೋನ್ನತವಾಗಿಯೂ ಇದ್ದುದರಿಂದ ಧೂಳಿಯಿಂದ ಮುಚ್ಚಿದ ದೊಡ್ಡ ಪರ್ವತದಂತೆ ಶೋಭಿಸುವುದು. ಕುಡಿಮಿಂಚುಗಳಿಂದ ಕೂಡಿದ ಮೇಘವೋ ಎಂಬಂತೆ ಅನೇಕಸ್ತ್ರೀಯರಿಂದ ಕೂಡಿರುವುದು. ಸಮಸ್ತಲೋಕಗಳಿಂದಲೂ ಪೂಜಿತವಾದ ಆ ವಿಮಾನವು ಆಕಾಶದಲ್ಲಿ ಹಂಸಶ್ರೇಷ್ಠಗಳಿಂದುಯ್ಯಲ್ಪಡುವ ಪುಣ್ಯಾತ್ಮರ ವಿಮಾನದಂತೆ ಕಾಂತಿವಿಶಿಷ್ಟವಾಗಿ ಶೋಭಿಸುತಿತ್ತು. ಮತ್ತು ರತ್ನಖಚಿತವಾದ ಆ ವಿಮಾನವು, ಬಣ್ಣಬಣ್ಣದ ಧಾತುಗಳಿಂದ ಚಿತ್ರಿತ

ವಾದ ಪರ್ವತಶಿಖರದಂತೆಯೂ, ಚಂದ್ರಾದಿಗ್ರಹಗಳಿಂದ ತುಂಬಿದ ಆಕಾಶದಂತೆಯೂ, ಹಲವುಬಣ್ಣಗಳಿಂದ ಗುಂಪುಗೂಡಿರುವ ಮೇಘಗಳಂತೆಯೂ ವಿಚಿತ್ರವರ್ಣವುಳ್ಳುದಾಗಿತ್ತು. ಆ ವಿಮಾನದಲ್ಲಿ ಈ ಸಮಸ್ತಭೂಮಿಯೂ, ಅದರ ಮೇಲಿನ ಸಮಸ್ತ ಪರ್ವತಸಮೂಹಗಳೊಡನೆ ಚಿತ್ರರೂಪದಿಂದ ಕಾಣಿಸಲ್ಪಟ್ಟಿದ್ದುದಲ್ಲದೆ, ಆ ಪರ್ವತಗಳ ಮೇಲೆ ಬಗೆಬಗೆಯ ವೃಕ್ಷಗಳೂ, ಆ ವೃಕ್ಷಗಳಲ್ಲಿರಬೇಕಾದ ಹೂಗಳೂ, ಹೂಗಳಲ್ಲಿರಬೇಕಾದ ಎಸಳುಗಳೂ, ಅವುಗಳ ನಡುನಡುವೆ ಕೇಸರಗಳೇ ಮುಂತಾದ ಸೂಕ್ಷ್ಮಾವಯವಗಳೂ ಚಿತ್ರದಿಂದಲೇ ಸ್ಪಷ್ಟವಾಗಿ ಬಿಡಿಸಲ್ಪಟ್ಟಿದ್ದುವು. ಮತ್ತು ಆ ಚಿತ್ರದಲ್ಲಿ ಸುಧಾಧವಳಗಳಾದ ಉಪ್ಪರಿಗೆಮನೆಗಳೂ, ಅಂದವಾದ ನೀರುಹೂಗಳುಳ್ಳ ಮಡುಗಳೂ, ಅವುಗಳಲ್ಲಿ ಕೇಸರಗಳಿಂದ ತುಂಬಿದ ಕಮಲಗಳೂ, ಇನ್ನೂ ಚಿತ್ರವಿಚಿತ್ರಗಳಾದ ವನಗಳೂ ಕಾಣಿಸಲ್ಪಟ್ಟಿದ್ದುವು. ಹೀಗೆ ಮೇಲೆ ಮೇಲೆ ಅತಿಶಯಿಸಿ ಹೋಗುತ್ತಿರುವ ಅನೇಕ ರತ್ನಪ್ರಭೆಗಳಿಂದ ಶೋಭಿತವಾಗಿ, ಉಪ್ಪರಿಗೆಮನೆಗಳಿಗಿಂತಲೂ ಮಹೋನ್ನತವಾಗಿ ಪ್ರಕಾಶಿಸುತಿದ್ದ ಪುಷ್ಪಕವೆಂಬ ಆ ದೊಡ್ಡವಿಮಾನವನ್ನೆಲ್ಲಾ ಆಂಜನೇಯನು ಕಣ್ಣಿಟ್ಟು ನೋಡುತಿದ್ದನು. ಮತ್ತು ಆ ದಿವ್ಯವಿಮಾನದಲ್ಲಿ ವೈಡೂರ್ಯದಿಂದಲೂ, ಬೆಳ್ಳಿಯಿಂದಲೂ, ಹವಳದಿಂದಲೂ ರಚಿಸಲ್ಪಟ್ಟ ಬೇರೆಬೇರೆ ಪಕ್ಷಿಜಾತಿಗಳೂ, ವಿಚಿತ್ರರತ್ನಗಳಿಂದ ಕೆತ್ತಿದ ಸರ್ಪಗಳೂ, ಉತ್ತಮಜಾತಿಗೆ ತಕ್ಕಂತೆ ಅಂದವಾದ ರೂಪವುಳ್ಳ ಕುದುರೆಗಳೂ ಚಿತ್ರಿಸಲ್ಪಟ್ಟಿದ್ದುವು. ಅವರಲ್ಲಿ ಚಿತ್ರಿಸಿದ ಪಕ್ಷಿಜಾತಿಗಳೆಲ್ಲವೂ ಬಗ್ಗಿದ ರೆಕ್ಕೆಗಳಿಂದಲೂ, ಅಂದವಾದ ಮುಖಭಾವದಿಂದಲೂ, ಸೊಗಸಾದ ಗರಿಗಳಿಂದಲೂ ಬಹಳ ರಮ್ಯವಾಗಿ ಕಾಣುತಿದ್ದುವಲ್ಲದೆ, ಆ ಗರಿಗಳಮೇಲೆ ಹವಳದಿಂದಲೂ ಚಿನ್ನದಿಂದಲೂ ಸಣ್ಣಸಣ್ಣ ಹೂಗಳನ್ನು ಬಿಡಿಸಿದ್ದುದರಿಂದ ಅವೆಲ್ಲವೂ ಕಾಮದೇವನ ಕ್ರೀಡಾರ್ಥವಾದ ಪಕ್ಷಿಗಳಂತೆಯೇ ತೋರುತಿದ್ದುವು. ಮತ್ತು ಅದು ಮಹೋನ್ನತವಾದುದರಿಂದ ಆಕಾಶಮಧ್ಯದಲ್ಲಿರುವ ಮೇಘದಂತೆ ಕಾಣುತಿತ್ತು. ಕೇವಲಸುವರ್ಣಮಯವಾಗಿ, °ಎಣೆಯಿಲ್ಲದ ಅಂದವುಳ್ಳುದಾಗಿ ರಾವಣನ ಭುಜಬಲಕ್ಕನುರೂಪವಾಗಿ, ಮನೆಯಂತೆ ವಿಸ್ತಾರವಾದ ಆ ಪುಷ್ಪಕವಿಮಾನವನ್ನು ಹನುಮಂತನು ಕಂಡನು. ಮತ್ತು ಅದರಲ್ಲಿ ತಾವರೆಕೊಳಗಳೂ, ಅವುಗಳಲ್ಲಿ ಪದ್ಮಹಸ್ತೆಯಾದ ಗಜಲಕ್ಷ್ಮಿಯೂ, ಆ ಲಕ್ಷ್ಮೀದೇವಿಯ ಎರಡು ಪಕ್ಕಗಳಲ್ಲಿಯೂ ತಮ್ಮ ತಮ್ಮ ಅಂದವಾದ ಸೊಂಡಿಲುಗಳಿಂದ ತಾವರೆ ನೈದಿಲೆ ಮೊದಲಾದ ಹೂಗಳನ್ನೆತ್ತಿ ಹಿಡಿದು, ಕಮಲಧೂಳಿಯಿಂದ ತುಂಬಿದ ಮೈಯುಳ್ಳವುಗಳಾಗಿ ನಿಂತಿರುವ ಆನೆಗಳೂ ಚಿತ್ರಿಸಲ್ಪಟ್ಟಿದ್ದುವು. ರಮಣೀಯವಾಗಿಯೂ ಮಂಗಳಕರ

ವಾಗಿಯೂ, ದೊಡ್ಡಪರ್ವತಕ್ಕೆಣೆಯಾಗಿಯೂ ಇದ್ದ ಆ ಅರಮನೆಯಲ್ಲಿ ಹನುಮಂತನು ಯಾವಯಾವಕಡೆಯನ್ನು ಸುತ್ತಿನೋಡಿದರೂ ರಾವಣನಾಗಲಿ, ಅವನ ಸ್ತ್ರೀಯರಾಗಲಿ ಇರುವ ಸ್ಥಲವನ್ನು ಕಾಣದೆ ಆಶ್ಚರ್ಯದಿಂದ ಬೆರಗಾಗಿದ್ದನು. ವಸಂತಕಾಲದಲ್ಲಿ ಚೆನ್ನಾಗಿ ಪುಷ್ಪಿಸಿ ಸುವಾಸನೆಯನ್ನು ಹೊರಡಿಸುತ್ತಿರುವ ವೃಕ್ಷಗಳಿಂದ ತುಂಬಿದ ದೊಡ್ಡಪರ್ವತಗುಹೆಗಳೋ ಎಂಬಂತಿರುವ ಆ ಮನೆಗಳನ್ನು ನೋಡಿದಷ್ಟೂ ಹನುಮಂತನಿಗೆ ಮೇಲೆಮೇಲೆ ಆಶ್ಚರ್ಯವು ಹೆಚ್ಚುತ್ತಿತ್ತು. ಹೀಗೆ ಹನುಮಂತನು ಸಮಸ್ತದಾನವರಿಂದ ಪೂಜಿತವಾಗಿಯೂ, ರಾವಣನಿಂದ ಸುರಕ್ಷಿತವಾಗಿಯೂ ಇದ್ದ ಆ ಲಂಕಾಪುರಿಯನ್ನು ಪ್ರವೇಶಿಸಿ, ಎಲ್ಲೆಲ್ಲಿ ತಿರುಗಿದರೂ, ಪೂಜ್ಯಳಾಗಿಯೂ, ಪ್ರಿಯಪತಿಯೊಡ ರಾಮನ ಗುಣಗಳಿಗೆ ವಶವಾದ ಮನಸ್ಸುಳ್ಳವಳಾಗಿಯೂ ಇದ್ದ ಜನಕಪುತ್ರಿಯನ್ನು ಕಾಣದುದಕ್ಕಾಗಿ ದುಃಖಾಕ್ರಾಂತನಾಗಿದ್ದನು. ಹೀಗೆ ಆ ಹನುಮಂತನು ಎಷ್ಟೆಷ್ಟೋ ಉಪಾಯಗಳನ್ನು ಮನಸ್ಸಿನಲ್ಲಿ ಚಿಂತಿಸುತ್ತ, ತನ್ನ ನೀತಿಮಾರ್ಗವನ್ನು ಮಾತ್ರ ಬಿಡದೆ, ಅತಿಸೂಕ್ಷ್ಮದೃಷ್ಟಿಯಿಂದಲೂ, ಮಹಾಧೈರ್ಯದಿಂದಲೂ ಸಂಚರಿಸುತಿದ್ದರೂ, ಸೀತಾದೇವಿಯನ್ನು ಕಾಣಲಾರದೆ, ಚಿಂತಾಕ್ರಾಂತನಾಗಿಯೇ ಇದ್ದನು.

ಇಲ್ಲಿಗೆ ಏಳನೆಯ ಸರ್ಗವು.

---


## ಹನುಮಂತನು ತಿರುಗಿ ಆ ಪುಷ್ಪಕವಿಮಾನವನ್ನೇ ವಿವರವಾಗಿ ನೋಡಿದುದು.


ವಾಯುಪುತ್ರನಾದ ಆ ಕಪಿವೀರನು, ಆ ಅರಮನೆಯ ಮಧ್ಯದಲ್ಲಿ ನಿಂತು ವಜ್ರಾದಿರತ್ನಗಳಿಂದಲೂ ಉತ್ತಮವಾದ ಬಂಗಾರದ ಕುಸುರಿಗೆಲಸಗಳಿಂದಲೂ, ಚಿತ್ರಿತವಾದ ಆ ದೊಡ್ಡಪುಷ್ಪಕವಿಮಾನವನ್ನೇ ನೋಡುತಿದ್ದನು. ಅದರ ನಿರ್ಮಾಣವೈಚಿತ್ರ್ಯವನ್ನು ಇಷ್ಟಿಷ್ಟೆಂದು ನಿರ್ಣಯಿಸುವುದಕ್ಕೂ ಸಾಧ್ಯವಲ್ಲ. ಅದಕ್ಕೆ ಸಾಟಿಯಾದುದು ಮತ್ತೊಂದಿಲ್ಲ. ಅದರಲ್ಲಿ ತಿದ್ದಿ ಸರಿಮಾಡಬೇಕಾದ ಭಾಗವು ಒಂದಾದರೂ ಇಲ್ಲ. ಅದನ್ನು ರಚಿಸಿದ ವಿಶ್ವಕರ್ಮನು, ಅದರ ಅಂದವನ್ನು ತಾನೇ ಮೆಚ್ಚಿ "ಭಲೆ! ಶಹಬಾಸ್!" ಎಂದು ತನಗೆ ತಾನೇ ಕೊಂಡಾಡಿರುವನು. ಅದು ಆಕಾಶವನ್ನು ಭೇದಿಸುವಂತೆ ಮಹೋನ್ನತವಾಗಿರುವುದು. ಭೂಸ್ಪರ್ಶವಿಲ್ಲದೆ ಅಂತರಿಕ್ಷಮಾರ್ಗವನ್ನೇ ಹಿಡಿದು ಮೇಲೆ ನಿಂತಿರುವುದು.

ಔನ್ನತ್ಯದಿಂದ ಸೂರ್ಯನ ದಾರಿಯನ್ನು ತೋರಿಸುವುದಕ್ಕೆ ಇದೊಂದು ಗುರುತೋ ಎಂಬಂತೆ ಕಾಣುವುದು. ಆ ವಿಮಾನದಲ್ಲಿ ಅತಿಪ್ರಯತ್ನವಿಲ್ಲದೆ ನಿರ್ಮಿಸಿದ ಭಾಗ ವೊಂದಾದರೂ ಇಲ್ಲ. ಅದರಲ್ಲಿ ಬೆಲೆಯಿಲ್ಲದ ರತ್ನಗಳೊಂದಾದರೂ ಇಲ್ಲ. ಅದರೊಳಗಿನ ವಿಶೇಷಗಳು ದೇವಗೃಹಗಳಲ್ಲಿಯೂ ಇಲ್ಲ. ಅದರಲ್ಲಿ ನೋಟಕ್ಕೆ ಅತಿಶಯವಾಗಿ ತೋರದ ಒಂದು ವಸ್ತುವಾದರೂ ಇಲ್ಲ. ಮತ್ತು ಅದು ಎಷ್ಟೋ ಮಹಾತಪಸ್ಸುಗಳಿಂದಲೂ, ಅಸಾಧ್ಯಪರಾಕ್ರಮದಿಂದಲೂ ರಾವಣನು ಸಂಪಾದಿ ಸಿಟ್ಟ ದಿವ್ಯವಿಮಾನವೇ ಹೊರತು ಸಾಮಾನ್ಯವಾದುದಲ್ಲ. ಅದು ಹತ್ತಿ ಕುಳಿತ ವರು ತಮ್ಮ ಮನಸ್ಸಿನಲ್ಲಿ ಕೋರಿದ ಸ್ಥಳಗಳಿಗೆ ಆ ಕ್ಷಣವೇ ತಂದುಬಿಡುವ ಮಹಾ ಮಹಿಮೆಯುಳ್ಳುದು. ಅದರಲ್ಲಿ ವಿಮಾನಗೋಪುರಾದಿ ನಾನಾವಿಧ ಸನ್ನಿವೇಶ ಗಳು ಕಂಗೊಳಿಸುತ್ತಿರುವುವು. ಅದರೊಳಗಿನ ನಿರ್ಮಾಣವೈಚಿತ್ರ್ಯಗಳೆಲ್ಲವೂ ಸಮವಾಗಿಯೂ ಅಲ್ಲಲ್ಲಿಗೆ ಅನುರೂಪವಾಗಿಯೂ ಇರುವುವು. ಮತ್ತು ಅದು ಯಜಮಾನನ ಮನೋಭಾವವನ್ನು ತಾನಾಗಿಯೇ ತಿಳಿದುಕೊಂಡು ಆಯಾ ಕ್ಷಣವೇ ವಾಯುವೇಗದಿಂದ ಅಲ್ಲಲ್ಲಿಗೆ ತಂದುಬಿಡತಕ್ಕ ಅದ್ಭುತಶಕ್ತಿಯುಳ್ಳುದು. ಅದನ್ನಿದಿರಿಸುವುದು ಯಾರಿಗೂ ಸಾಧ್ಯವಲ್ಲ. ಮಹಾತ್ಮರಾಗಿಯೂ, ಪುಣ್ಯಶಾಲಿ ಗಳಾಗಿಯೂ, ಭಾಗ್ಯಸಂಪನ್ನರಾಗಿಯೂ, ಯಶಸ್ವಿಗಳಾಗಿಯೂ, ಉತ್ತಮ ಗುಣವುಳ್ಳವರಾಗಿಯೂ ಇರುವ ಇಂದ್ರಾದಿದೇವತೆಗಳಿಗೆ ವಾಸಭೂಮಿಯಾದ ಸ್ವರ್ಗದಂತೆಯೇ ತೋರುತ್ತಿರುವುದು. ಮತ್ತು ಅದು ಬೆಲೆಯುಳ್ಳ ರತ್ನಗಳೇ ಮೊದಲಾದ ವಸ್ತುಗಳನ್ನು ಸೇರಿಸಿ, ಸರ್ವೋತ್ತಮವಾದ ಶಿಲ್ಪಚಾತುರ್ಯದಿಂದ ನಿರ್ಮಿತವಾಗಿರುವುದು. ಚಿತ್ರವಿಚಿತ್ರಗಳಾದ ಅನೇಕ ಶಿಖರಗಳಿಂದಲೂ, ಬಗೆ ಬಗೆಯ ಅವಾಂತರ ಶಿಖರಗಳಿಂದಲೂ ಕೂಡಿರುವ ಮಹಾಪರ್ವತದಂತೆ ಮನೋ ಹರವಾಗಿರುವುದು, ಶರಚ್ಚಂದ್ರನಂತೆ ಶುಭ್ರವಾಗಿ ಒಪ್ಪುತ್ತಿರುವುದು. ಮತ್ತು ಕುಂಡಲಾಲಂಕೃತಗಳಾದ ಮುಖಗಳಿಂದಲೂ, ದುಂಡಗೆ ಬಾಗಿದ ವಿಶಾಲನೇತ್ರ ಗಳಿಂದಲೂ, ದೊಡ್ಡದೇಹದಿಂದಲೂ ಕೂಡಿ, ಅತಿವೇಗದಿಂದ ಆಕಾಶದಲ್ಲಿ ಹಾರಿಬರುವಂತೆ ತೋರುವ ಅನೇಕ ಭೂತಪ್ರತಿಮೆಗಳು ಗೋಪುರದ ಬೊಂಬೆಯ ಆಕಾರಕ್ಕೆ ಆ ವಿಮಾನವನ್ನು ಹೊತ್ತು ನಿಂತಿರುವಂತೆ ಅದರಸುತ್ತಲೂ ಚಿತ್ರಿಸಲ್ಪಟ್ಟಿರುವುದು. ಹೀಗೆ ವಸಂತಪುಷ್ಪಗಳಂತೆ ಮನೋಹರವಾಗಿಯೂ ವಸಂತ ಋತುವಿಗಿಂತಲೂ ಹೆಚ್ಚು ರಮಣೀಯವಾಗಿಯೂ ತೋರುತಿದ್ದ ಅಂತಹ ವಿಮಾನರತ್ನವನ್ನು ಹನುಮಂತನು ನೋಡಿದನು.

ಇಲ್ಲಿಗೆ ಎಂಟನೆಯ ಸರ್ಗವು.

---

ಪುಷ್ಪಕವಿಮಾನ ವರ್ಣನವು.

ಆಮೇಲೆ ಹನುಮಂತನು ಆ ವಿಮಾನದ ಮಧ್ಯದಲ್ಲಿಯೂ ಕೂಡ ವಿಸ್ತಾರವಾಗಿಯೂ ಉದ್ದವಾಗಿಯೂ ಇದ್ದ ಒಂದು ಮನೆಯನ್ನು ಕಂಡನು. ಅನೇಕವಾದ ಅಂತಸ್ತುಗಳಿಂದ ತುಂಬಿದ ಆ ಗೃಹವು ಅರ್ಧಯೋಜನ ವಿಸ್ತಾರವಾಗಿಯೂ ಒಂದು ಯೋಜನದುದ್ದವಾಗಿಯೂ ಇತ್ತು. ಶತ್ರುಸೂದನನಾದ ಹನುಮಂತನು ಆಯತಾಕ್ಷಿಯಾದ ಸೀತೆಯನ್ನು ಹುಡುಕುತ್ತ, ಮೊದಲು ಅದರ ಸುತ್ತಲೂ ತಿರುಗಿ ಅಲ್ಲಲ್ಲಿದ್ದ ರಾಕ್ಷಸರ ಮನೆಗಳೆಲ್ಲವನ್ನೂ ನೋಡುತ್ತ ಬಂದು, ಕೊನೆಗೆ ಅಲ್ಲಿ ರಾಕ್ಷಸೇಂದ್ರನಾದ ರಾವಣನಿಗೆ ನಿವಾಸವಾಗಿದ್ದ ಬೇರೊಂದು ಮನೆಯ ಬಳಿಗೆ ಬಂದನು. [1] ನಾಲ್ಕು ಕೊಂಬಿನ ಆನೆಗಳೂ, ಮೂರುಕೊಂಬಿನ ಆನೆಗಳೂ, ಒಂದೆರಡು ಕೊಂಬಿನ ಆನೆಗಳೂ, ಅನೇಕವಾಗಿ ಅದರ ಸುತ್ತಲೂ ಕಾವಲಾಗಿ ಸುತ್ತುತಿದ್ದುವು. ಅತಿವಿಸ್ತಾರವಾದ ಆ ಮನೆಯ ಸುತ್ತಲೂ ಆಯುಧಪಾಣಿಗಳಾದ ಅನೇಕ ರಾಕ್ಷಸಭಟರೂ ಕಾವಲಿರುತಿದ್ದರು. ಅಲ್ಲಿ ರಾವಣಪತ್ನಿಯರಾದ ಅನೇಕ ರಾಕ್ಷಸಸ್ತ್ರೀಯರೂ, ಆ ರಾವಣನು ಅಲ್ಲಲ್ಲಿ ದಿಗ್ವಿಜಯಕ್ಕಾಗಿ ಹೊರಟಾಗ ಪರಾಕ್ರಮದಿಂದ ತಂದಿಟ್ಟ ರಾಜಕನ್ಯಕೆಯರೂ ತುಂಬಿ ನೆರೆದಿದ್ದರು. ಹೀಗೆ ಆಯುಧಧಾರಿಗಳಿಂದಲೂ, ಸ್ತ್ರೀಯರಿಂದಲೂ ಪೂರ್ಣವಾದ ಆ ಗೃಹವು ಮೊಸಳೆಗಳಿಂದಲೂ ತಿಮಿಂಗಿಲಗಳಿಂದಲೂ, ಬಗೆಬಗೆಯ ಮೀನುಗಳಿಂದಲೂ ವ್ಯಾಕುಲವಾಗಿ, ಸರ್ಪಗಳಿಂದ ತುಂಬಿ, ಮಹಾವಾತದ ವೇಗದಿಂದಾಡುತ್ತಿರುವ ಸಾಗರದಂತೆಯೇ ತೋರುತಿತ್ತು. ಕುಬೇರನಲ್ಲಿ ಯಾವ ಐಶ್ವರ್ಯಸಮೃದ್ಧಿಯುಂಟೋ, ಹರಿಹಯನಾದ ಇಂದ್ರನಲ್ಲಿ ಯಾವ ಭಾಗ್ಯಸಮೃದ್ಧಿಯುಂಟೋ ಅವೆಲ್ಲವೂ ಯಾವಾಗಲೂ ಎಡೆಬಿಡದೆ ಆ ರಾವಣಗೃಹದಲ್ಲಿ ಸ್ಥಿರವಾಗಿ ನಿಂತಿತ್ತು. ಲೋಕರಂಜಕನಾದ ಕುಬೇರನಿಗೆ ಯಾವ ಧನಸಮೃದ್ಧಿಯುಂಟೋ, ಯಮನಲ್ಲಿ ಯಾವ ಸಿರಿಯುಂಟೋ, ವರುಣನಿಗೆ ಯಾವ ಸಂಪತ್ತುಂಟೋ ಆ ಸಮೃದ್ಧಿಯೊಂದೊಂದೂ ಅಲ್ಲಿಗಿಂತಲೂ ವಿಶೇಷವಾಗಿ ಇಲ್ಲಿನ ಒಂದೊಂದು ರಾಕ್ಷಸಗೃಹಗಳಲ್ಲಿಯೂ ಕಾಣುತ್ತಿರುವುವು. ಆಮೇಲೆ ಅಂಜನೇಯನು ರಾವಣನ ಹರ್ಮ್ಯಮಧ್ಯದಲ್ಲಿ ಬೇರೊಂದು ಮನೆಯಂತೆ ವಿಶಾಲವಾಗಿದ್ದ ಪುಷ್ಪಕವೆಂಬ ಆ ವಿಮಾನದಕಡೆಗೆ ಬಂದನು. ಅಂದವಾದ ರಚನೆಯುಳ್ಳುದಾಗಿಯೂ, ಅನೇಕ ನಿರ್ಯೂಹಗಳಿಂದ ಶೋಭಿತವಾಗಿಯೂ, ನವರತ್ನ ಖಚಿತವಾಗಿಯೂ ಇರುವ ಆ ವಿಮಾನವನ್ನು ಪೂರ್ವ

---

1. ಇದು ಪುಷ್ಪಕವಿಮಾನಮಧ್ಯದಲ್ಲಿರುವ ಮುಖ್ಯವಾದ ಮನೆಗಿಂತಲೂ ಬೇರೆಯಾದುದು.

ದಲ್ಲಿ ವಿಶ್ವಕರ್ಮನು ಬ್ರಹ್ಮನಿಗಾಗಿ ಸ್ವರ್ಗದಲ್ಲಿ ನಿರ್ಮಿಸಿಟ್ಟನು. ಕುಬೇರನು ದೊಡ್ಡ
ತಪಸ್ಸಿನಿಂದ ಬ್ರಹ್ಮನನ್ನು ಮೆಚ್ಚಿಸಿ ಅವನಿಂದ ಅದನ್ನು ಪಡೆದನು. ಕೊನೆಗೆ
ರಾವಣನು ತನ್ನ ವೀರ್ಯದಿಂದ ಕುಬೇರನನ್ನು ಜಯಿಸಿ ಆ ವಿಮಾನವನ್ನು ತನಗೆ
ವಶಮಾಡಿಕೊಂಡನು. ಆ ವಿಮಾನದಲ್ಲಿ ನಡುನಡುವೆ ತೋಳದ ಪ್ರತಿಮೆಗಳಿಂದ
ಕೆತ್ತಿದ ಅಂದವಾದ ಚಿನ್ನಬೆಳ್ಳಿಯ ಕಂಬಗಳು ಸುತ್ತಲೂ ದೇದೀಪ್ಯಮಾನವಾದ
ಕಾಂತಿಯಿಂದ ಹೊಳೆಯುತ್ತಿರುವುವು. ಅದರ ಮೇಲಿನ ಅಂತಸ್ತುಗಳೆಲ್ಲವೂ
ಅತಿರಮ್ಯಾಕೃತಿಯುಳ್ಳವುಗಳಾಗಿ ಮೇರುಮಂದರಗಿರಿಗಳಂತೆ ಮಹೋನ್ನತ
ಗಳಾಗಿ ಆಕಾಶವನ್ನು ಚುಚ್ಚುವಂತಿರುವುವು. ವಿಶ್ವಕರ್ಮನಿಂದ ಸುನಿರ್ಮಿತವಾದ ಆ
ವಿಮಾನವು ಸೂರ್ಯಾಗ್ನಿಗಳಂತೆ ಜ್ವಲಿಸುತ್ತ, ಬಂಗಾರದ ಮತ್ತು ಸ್ಫಟಿಕದ ಮೆಟ್ಟ
ಲುಗಳುಳ್ಳದಾಗಿ, ಗೋಡೆಗಳಮೇಲೆ ಅಲಂಕಾರಾರ್ಥವಾಗಿ ಸ್ವಸ್ತಿಕಾದ್ಯಾಕಾರಗ
ಳಿಂದ ಮಾಡಿದ ಜಾಲಗಳೆಂಬ ಕಿಟಕಿಗಳಿಂದಲೂ, ಗಾಳಿಬರುವ ಗವಾಕ್ಷಗಳಿಂದಲೂ
ಶೋಭಿಸುತ್ತಿರುವುದು. 1 ಹಾಲಿನಲ್ಲಿ ಹಾಕಿದೊಡನೆ ಆ ಹಾಲನ್ನು ನೀಲವರ್ಣ
ವಾಗಿ ಮಾಡತಕ್ಕ ಉತ್ತಮಜಾತಿಯ ಇಂದ್ರನೀಲಮಣಿಗಳಿಂದಲೂ, ಸಿಂಹಳ
ದ್ವೀಪಜನ್ಯಗಳಾದ ಮಹಾನೀಲವೆಂಬ ಪಚ್ಚೆಗಲ್ಲುಗಳಿಂದಲೂ, ಚಿತ್ರಿತ
ವಾಗಿರುವುದು. ಚಿತ್ರವಿಚಿತ್ರಗಳಾದ ಹವಳಗಳಿಂದಲೂ, ಬೆಲೆಯುಳ್ಳ ರತ್ನಗ
ಳಿಂದಲೂ, ಎಣೆಯಿಲ್ಲದ ಮುತ್ತಿನ ಮಣಿಗಳಿಂದಲೂ ಅಂದವಾದ ನೆಲ
ಗಟ್ಟುಳ್ಳದಾಗಿಯೂ, ಬಂಗಾರದ ಬಣ್ಣವುಳ್ಳ ರಕ್ತಚಂದನ ಗಂಧದಿಂದ ಸುವಾಸಿತ
ವಾಗಿಯೂ ಇರುವುದು. ಹೀಗೆ ಮಧ್ಯಾಹ್ನ ಸೂರ್ಯನಂತೆ ಕಾಂತಿಯಿಂದ ಜ್ವಲಿಸುತ್ತ,
ವಿಚಿತ್ರಾಕೃತಿಗಳುಳ್ಳ ಮೇಲುಮನೆಗಳಿಂದೊಪ್ಪುತ್ತಿದ್ದ ಆ ಪುಷ್ಪಕ ವಿಮಾನವನ್ನು
ನೋಡಿ, ಹನುಮಂತನು ಅದರಮೇಲೆಯೂ ಏರಿದನು. ಆಗಲೇ ಹನುಮಂತನು
ಉತ್ತಮವಾದ ಮದ್ಯದ ಪರಿಮಳದಿಂದಲೂ, ಭಕ್ಷ್ಯಗಳ ಸುವಾಸನೆಯಿಂದಲೂ,
ಮೃಷ್ಟಾನ್ನಗಳ ಗಂಧದಿಂದಲೂ ರೂಪುಗೊಂಡಂತೆ ಆ ವಿಮಾನಮಧ್ಯದಿಂದ
ಹೊರಟುಬರುತ್ತಿದ್ದ ಸುಗಂಧವಾಯುವನ್ನಾಘ್ರಾಣಿಸಿದನು. ಬಂಧುವು ತನ್ನ
ಪ್ರಿಯಬಂಧುವನ್ನಿದಿರುಗೊಂಡು ಬರುವಂತೆ, ಸರ್ವೋತ್ತಮವಾದ ಆ ಸುಗಂಧವು,
ಈ ಆಂಜನೇಯನನ್ನಿದಿರುಗೊಂಡು "ಇದೋ ಇತ್ತಬರಬೇಕೆಂದು" ಅತ್ಯಾದರ
ದಿಂದ ರಾವಣನಿರುವ ಸ್ಥಳಕ್ಕೆ ಕರೆದೊಯ್ಯುತ್ತಿರುವಂತೆ ತೋರಿತು. ಆ ಸುಗಂಧದ
ದಾರಿಯನ್ನೇ ಹಿಡಿದು ಹನುಮಂತನು ರಾವಣನಿದ್ದ ನಿವೇಶನಕ್ಕೆ ಬಂದು, ಅತಿ

---

1. 'ಕ್ಷೀರಮಧ್ಯೇ ಕ್ಷಿಪೇನ್ನೀಲಂ ಕ್ಷೀರಂಚೇನ್ನೀಲತಾಂ ವ್ರಜೇತ್। ಇಂದ್ರನೀಲ
ಮಿತಿಖ್ಯಾತಮಿತಿ ಚಾಗಸ್ತ್ಯಭಾಷಿತಮ್' ಎಂದು ರತ್ನಪರೀಕ್ಷಾಶಾಸ್ತ್ರವು.

ವಿಸ್ತಾರವಾಗಿಯೂ, ಮಂಗಳಕರವಾಗಿಯೂ, ಉತ್ತಮಕಾಂತಿಯಂತೆ ರಾವಣನಿಗೆ ವಿಶೇಷಪ್ರೀತಿಪಾತ್ರವಾಗಿಯೂ ಇದ್ದ ಆದರ ಅಂದವನ್ನೇ ನೋಡುತಿದ್ದನು. ಅದಕ್ಕಾದರೋ ರತ್ನದ ಸೋಪಾನಗಳು! ಚಿನ್ನದ ಕಿಟಕಿಗಳು! ಸ್ಫಟಿಕದ ನೆಲಗಟ್ಟುಗಳು! ನಡುನಡುವೆ ದಂತದ ಹಲಗೆಗಳು! ಸುತ್ತಲೂ ಮುತ್ತು, ಹವಳ, ಬೆಳ್ಳಿ, ಚಿನ್ನ, ಮುಂತಾದುವುಗಳಿಂದ ಚಿತ್ರಿತಗಳಾದ ಅನೇಕ ರತ್ನಸ್ತಂಭಗಳು! ಇವೆಲ್ಲವೂ ವಿಶೇಷಶೋಭೆಯನ್ನುಂಟುಮಾಡುತಿದ್ದುವು. ಕಂಬಗಳೆಲ್ಲವೂ ಸಮಪ್ರಮಾಣವುಳ್ಳವುಗಳಾಗಿಯೂ, ಋ ಜು ಗ ಳಾ ಗಿ ಯೂ, ಉನ್ನತಗಳಾಗಿಯೂ ಇದ್ದುವು. ಮೇಲೆ ಬಾಗಿದ ಅವುಗಳ ಮೋತೆಗಳು ರೆಕ್ಕೆಗಳಂತೆ ಕಾಣುತಿದ್ದುದರಿಂದ ಆ ರೆಕ್ಕೆಗಳಿಂದಲೇ ಆ ಮನೆಯು ಮೇಲೆ ಹಾರುತ್ತಿರುವುದೋ ಎಂಬಂತೆ ತೋರುತಿತ್ತು. ಮತ್ತು ಆ ವಿಮಾನದ ನಡುವೆ ಸಮುದ್ರಪರ್ವತಾರಣ್ಯಗಳೇ ಮೊದಲಾದ ಸಮಸ್ತಲಕ್ಷಣಗಳಿಂದ ಚಿತ್ರಿಸಲ್ಪಟ್ಟ ಭೂಮ್ಯಾಕಾರವುಳ್ಳ ರತ್ನಗಂಬಳಿಯುನ್ನು ಹಾಸಿದ್ದುದರಿಂದ ಆ ವಿಮಾನವು ಅನೇಕ ರಾಷ್ಟ್ರಗಳಿಂದಲೂ ಮನೆಗಳಿಂದಲೂ ತುಂಬಿದ ಭೂಮಿಯಂತೆಯೇ ಅತಿವಿಶಾಲವಾಗಿರುವುದು. ಅಲ್ಲಲ್ಲಿ ಮದಿಸಿದ ಪಕ್ಷಿಗಳು ಧ್ವನಿಮಾಡುತ್ತಿರುವುವು. ಮತ್ತು ಅದು ದಿವ್ಯಗಂಧದಿಂದ ಸುವಾಸಿತವಾಗಿ ಘಮಘಮಿಸುತ್ತಿರುವುದು. ಅಲ್ಲಿ ಅಮೂಲ್ಯಗಳಾದ ಆಸನಗಳು ಶೋಭಿಸುತ್ತಿರುವುವು. ರಾಕ್ಷಸಚಕ್ರವರ್ತಿಯಾದ ರಾವಣನಿಗೂ ಅದು ಅತ್ಯಾದರಣೀಯವಾದ ಸ್ಥಾನವಾಗಿರುವುದು. ಮತ್ತು ಅದು ಅಗರುಧೂಪದ ಹೊಗೆಯಿಂದ ಧೂಮ್ರವರ್ಣವಾಗಿಯೂ, ನಿರ್ಮಲವಾಗಿಯೂ, ಹಂಸದಂತೆ ಬಿಳುಪಾಗಿಯೂ ಇರುವುದು. ವಿಚಿತ್ರ ಕಾಂತಿಯಿಂದ ಶೋಭಿಸುವ ಶಬಲೆಯೆಂಬ ವಸಿಷ್ಠಧೇನುವಿನಂತೆ, ಮೇಲೆ ಚೆಲ್ಲಿದ ಪುಷ್ಪೋಪಹಾರಗಳಿಂದ ಚಿತ್ರವರ್ಣವುಳ್ಳುದಾಗಿ ಶೋಭಿಸುವುದು. ನೋಡಿದಾಗಲೇ ಒಂದುಬಗೆಯ ಉಲ್ಲಾಸವನ್ನುಂಟುಮಾಡುತ್ತಿರುವುದು. ತನ್ನ ಕಾಂತಿಯಿಂದ ಬಣ್ಣಗಳಿಗೂ ಬಣ್ಣವೇರಿಸುವಂತಿರುವುದು. ನೋಡಿದಾಗಲೇ ಅವರವರ ಮನಸ್ಸಿನಲ್ಲಿರುವ ದುಃಖವನ್ನೆಲ್ಲಾ ನೀಗಿಸತಕ್ಕುದಾಗಿರುವುದು. ಸಮಸ್ತಭಾಗ್ಯಗಳಿಗೂ ತಾನೇ ತೌರುಮನೆಯಂತಿರುವುದು. ರಾ ವ ಣ ನಿಂ ದ ಸಾಕ್ಷಾತ್ತಾಗಿಯೇ ರಕ್ಷಿತವಾದ ಇಂತಹ ನಿವೇಶನವು, ತಾಯಿಯು ಮಕ್ಕಳಿಗೆ ಹೇಗೋಹಾಗೆ, ಹನುಮಂತನ ಪಂಚೇಂದ್ರಿಯಗಳನ್ನೂ ತನ್ನೊಳಗಿನ ಸರ್ವೋತ್ತಮಗಳಾದ ರೂಪ ರಸ ಗಂಧ ಸ್ಪರ್ಶ ಶಬ್ದಗಳೆಂಬ ಐದುವಿಷಯಗಳಿಂದ ಸಂಪೂರ್ಣವಾಗಿ ತೃಪ್ತಿಹೊಂದಿಸುತಿತ್ತು. ಹನುಮಂತನು ಅದನ್ನು ನೋಡಿ ತನ್ನ ಮನಸ್ಸಿನಲ್ಲಿ "ಇದೇ ಸ್ವರ್ಗವೋ! ಇದೇ ದೇವಲೋಕವೋ! ಇಂದ್ರನಿಗೆ ಸ್ಥಾನವಾದ ಅಮರಾ

ವತಿಯು ಇದೇ ಆಗಿರಬೇಕು! ಅಥವಾ ಸಿದ್ಧಿರೂಪವಾದ ಪರಬ್ರಹ್ಮನ ಸ್ಥಾನ ವಾಗಿಯೂ ಇರಬಹುದು!'' ಎಂದು ಆಶ್ಚರ್ಯದಿಂದ ಚಿಂತಿಸುತ್ತಿದ್ದನು. ಜೂಜಿ ನಲ್ಲಿ ಇತರರಿಗೆ ಹಣವನ್ನು ಸೋತವನು, ಚಿಂತೆಯಿಂದ ಕೊರಗುತ್ತ, ನಿಶ್ಚಲನಾಗಿ ನಿಂತು ಧ್ಯಾನಿಸುವಂತೆ, ಅಲ್ಲಿ ಅಲ್ಲಾಡದೆ ನಿಂತು ಉರಿಯುತ್ತಿರುವ ಅನೇಕ ಸ್ವರ್ಣ ಪ್ರದೀಪಗಳನ್ನು ಕಂಡನು. ಆ ದೀಪಗಳ ಪ್ರಕಾಶದಿಂದಲೂ, ರಾವಣನ ತೇಜಸ್ಸಿ ನಿಂದಲೂ, ಸ್ತ್ರೀಯರ ಆಭರಣ ಕಾಂತಿಗಳಿಂದಲೂ ಆ ನಿವೇಶನವೆಲ್ಲವೂ ದೇದೀಪ್ಯ ಮಾನವಾಗಿ ಉರಿಯುವಂತೆಯೇ ತೋರುತಿತ್ತು. ಅಲ್ಲಿ ನಾನಾವರ್ಣದ ಬಟ್ಟೆಗ ಳನ್ನೂ, ನಾನಾಬಣ್ಣದ ಪುಷ್ಪಮಾಲೆಗಳನ್ನೂ ಧರಿಸಿ, ನಾನಾವೇಷಗಳಿಂದಲಂಕೃತ ರಾದ ಸಾವಿರಾರುಮಂದಿ ವಾರಸ್ತ್ರೀಯರು ಅಲ್ಲಿನ ಕುಥಾಸ್ತರಣದಮೇಲೆ ಮಲ ಗಿರುವುದನ್ನು ಕಂಡನು. ಆ ಸ್ತ್ರೀಸಮೂಹವೆಲ್ಲವೂ ಆ ರಾತ್ರಿಯಲ್ಲಿ ಬಹಳಹೊತ್ತಿನ ವರೆಗೆ ಕ್ರೀಡಿಸುತಿದ್ದು, ಅರ್ಧರಾತ್ರಿಯಾದಮೇಲೆ ಪಾನಮದದಿಂದಲೂ ನಿದ್ರೆ ಯಿಂದಲೂ ಮೈಮರೆತು,ಭೂಷಣಾದಿಧ್ವನಿಗಳೂ ಇಲ್ಲದೆ ನಿಶ್ಶಬ್ದವಾಗಿ ಮಲಗಿರಲು, ಆ ನಿವೇಶನವು, ಸದ್ದಿಲ್ಲದೆ ಮೌನದಿಂದ ಮಲಗಿರುವ ಹಂಸಭೃಂಗಗಳುಳ್ಳ ದೊಡ್ಡ ಕಾನನಗೊಳದಂತಿತ್ತು. ಹೀಗೆ ಬಿಚ್ಚಿದ ಹಲ್ಲುಗಳಿಂದಲೂ, ಮುಚ್ಚಿದ ಕಣ್ಣುಗಳಿಂ ದಲೂಕೂಡಿ ಕಮಲಗಂಧವನ್ನು ಹೊರಡಿಸುತಿದ್ದ ಆ ಸ್ತ್ರೀಯರ ಮುಖಗಳೆಲ್ಲವನ್ನೂ ಆಂಜನೇಯನು ನೋಡಿದನು. ಆ ಮುಖಗಳೆಲ್ಲವೂ ಹನುಮಂತನಿಗೆ ಬೆಳಗಾದ ಮೇಲೆ ಅರಳಿ ರಾತ್ರಿಕಾಲಗಳಲ್ಲಿ ಮುಚ್ಚಿಕೊಳ್ಳುವ ಸ್ವಭಾವವುಳ್ಳ ಕಮಲಗಳಂತೆಯೇ ತೋರಿದುವು. ಆಗ ಅವನು ಮನಸ್ಸಿನಲ್ಲಿ ''ಅಹಾ! ಅರಳಿದ ಕಮಲಗಳಂತೆಯೇ ಈ ಮುಖಕಮಲಗಳೂ ಕೂಡ ಭೃಂಗಗಳಿಗೆ ತಮ್ಮ ವಾಸನೆಯಿಂದ ಆಸೆಯನ್ನು ಹುಟ್ಟಿಸುತ್ತಿರುವುವು. ಯಾವ ಗುಣಗಳಲ್ಲಿ ನೋಡಿದರೂ ಇವು ಕಮಲಗಳೊಡನೆ ಹೋಲುವುವು,'' ಎಂದು ವಿಸ್ಮಯಪಡುತ್ತ ನಿಂತಿದ್ದನು. ಸ್ತ್ರೀಯರಿಂದ ತುಂಬಿದ ಆ ಮನೆಯು ತಾರೆಗಳಿಂದ ಶೋಭಿಸುವ ಶರತ್ಕಾಲದ ರಾತ್ರಿಯಂತೆ ಕಾಣುತಿತ್ತು. ಸ್ತ್ರೀಯರಿಂದ ಪರಿವೃತನಾಗಿ ಮಲಗಿದ್ದ ರಾಕ್ಷಸ ಚಕ್ರವರ್ತಿಯೂ ಕೂಡ ನಕ್ಷತ್ರ ಗಳಿಂದ ಪರಿವೃತನಾಗಿ ಮೆರೆಯುವ ಚಂದ್ರನಂತೆ ತೋರುತಿದ್ದನು. ಆಗ ಹನು ಮಂತನು ಅಲ್ಲಿದ್ದ ಸ್ತ್ರೀಯರ ಸೌಂದರ್ಯವನ್ನು ನೋಡಿ ಆಶ್ಚರ್ಯಭರಿತನಾಗಿ ''ಅಹಾ! ಪುಣ್ಯಶೇಷವಿರುವಾಗಲೇ ಆಕಾಶದಿಂದ ಕೆಳಗೆ ಬಿದ್ದ ನಕ್ಷತ್ರಗಳೆಲ್ಲವೂ ಒಂದಾಗಿ ಕಲೆತು ಇಲ್ಲಿ ಸ್ತ್ರೀರೂಪದಿಂದ ಬಂದು ಸೇರಿರುವಂತಿದೆ,'' ಎಂದೆಣಿಸು ತಿದ್ದನು. ಆ ಸ್ತ್ರೀಯರ ದೇಹಕಾಂತಿ ರೂಪಸೌಂದರ್ಯಾದಿಗಳೆಲ್ಲವೂ ನಕ್ಷತ್ರಗಳ ಕಾಂತಿಲಾವಣ್ಯಾದಿಗಳನ್ನೇ ಹೋಲುತಿದ್ದುವು. ಆ ಸ್ತ್ರೀಯರು ಮದ್ಯವನ್ನು

ಕುಡಿದು ರತಿಕ್ರೀಡೆಯನ್ನು ಮಾಡುವಾಗ ಕದಲಿದ ಪುಷ್ಪಾಭರಣಗಳುಳ್ಳವರಾಗಿ ಹಾಗೆಯೇ ನಿದ್ರೆಯಿಂದ ಮೈಮರೆತು ಪ್ರಜ್ಞೆಯಿಲ್ಲದಂತೆ ಮಲಗಿದ್ದರು. ಅವರಲ್ಲಿ ಕದಲಿದ ತಿಲಕವುಳ್ಳವರು ಕೆಲವರು. ಜಾರಿದ ಕಾಲಂದುಗೆಯುಳ್ಳವರು ಕೆಲವರು. ಪಕ್ಕದಲ್ಲಿ ಜಾರಿಬಿದ್ದ ಹಾರವುಳ್ಳವರು ಕೆಲವರು. ತೊಡರಿ ಸುತ್ತಿಕೊಂಡ ಮುತ್ತಿನ ಹಾರವುಳ್ಳವರು ಕೆಲವರು. ಸಡಿಲಿದ ಬಟ್ಟೆಯುಳ್ಳವರು ಕೆಲವರು. ಕಿತ್ತು ಹೋದ ನಡುವಿನ ಪಟ್ಟಿಯುಳ್ಳವರು ಕೆಲವರು. ಹೀಗೆ ಆ ಸ್ತ್ರೀಯರೆಲ್ಲರೂ ದೊಡ್ಡ ಭಾರವನ್ನು ಹೊತ್ತುತಂದ ಬಳಲಿಕೆಯನ್ನಾರಿಸುವುದಕ್ಕಾಗಿ, ನೆಲದ ಧೂಳಿಯಲ್ಲಿ ಬಿದ್ದು ಹೊರಳುವ ಕುದುರೆಯ ಮರಿಗಳಂತೆ ಕಾಣುತಿದ್ದರು. ಮತ್ತು ಅಲ್ಲಿ ಉತ್ತಮವಾದ ಕುಂಡಲಗಳನ್ನು ಧರಿಸಿ, ಕದಲಿದ ಪುಷ್ಪಮಾಲಿಕೆಯುಳ್ಳ ಕೆಲವು ಸ್ತ್ರೀಯರು, ಕಾಡಿನಲ್ಲಿ ಆನೆಯಿಂದ ಕಿತ್ತುಹಾಕಲ್ಪಟ್ಟ ಅರಳಿದ ಬಳ್ಳಿಗಳಂತೆ ಕಾಣುತಿದ್ದರು. ಮತ್ತೆ ಕೆಲವು ಸ್ತ್ರೀಯರ ಸ್ತನ ಮಧ್ಯಗಳಲ್ಲಿ ಚಂದ್ರಸೂರ್ಯರ ಕಾಂತಿಯಿಂದ ಹೊಳೆಯುತಿದ್ದ ದೊಡ್ಡ ದೊಡ್ಡ ಮುತ್ತಿನ ಹಾರಗಳು, ಅಲ್ಲಲ್ಲಿ ನಿದ್ರಿ ಸುತ್ತಿರುವ ಹಂಸಗಳಂತಿದ್ದುವು. ಹಾಗೆಯೇ ಕೆಲವರ ವೈಡೂರ್ಯಾಭರಣಗಳು ಕಲಹಂಸಗಳಂತೆಯೂ, ಕೆಲವರ ಎದೆಕಟ್ಟುಗಳು ಚಕ್ರವಾಕಗಳಂತೆಯೂ, ಕೆಲವರ ಜಘನಗಳು ಮಳಲುದಿಣ್ಣೆಗಳಂತೆಯೂ ಶೋಭಿಸುತಿದ್ದುದರಿಂದ, ಆ ಸ್ತ್ರೀಯ ರೆಲ್ಲರೂ ಹಂಸಕಾರಂಡವ ಚಕ್ರವಾಕಾದಿ ಪಕ್ಷಿಗಳಿಂದ ತುಂಬಿದ ನದಿಗಳಂತೆಯೇ ಕಾಣಿಸುತಿದ್ದರು. ಮತ್ತು ಆ ಸ್ತ್ರೀಯರ ಕಿರುಗೆಜ್ಜೆಗಳು ಮೊಗ್ಗುಗಳಂತೆಯೂ, ಸ್ವರ್ಣಾಭರಣಗಳು ಅರಳಿದ ಕಮಲಗಳಂತೆಯೂ, ನಿದ್ರಾವಸ್ಥೆಯಲ್ಲಿಯೂ ಅವರು ನಟಿಸುವ ಶೃಂಗಾರಚೇಷ್ಟೆಗಳು ಆಡುವ ಮೊಸಳೆಗಳಂತೆಯೂ, ಅವರಿಗೆ ವಿಶೇಷ ಕೀರ್ತಿಹೇತುವಾದ ಅವರ ದೇಹಪ್ರಭೆಯು, ಪಕ್ಕದ ತೀರಗಳಂತೆಯೂ ಕಾಣುತ್ತಿ ರಲು, ಅವರೆಲ್ಲರೂ ಮಲಗಿದ ನದಿಗಳಂತೆ ಪ್ರಕಾಶಿಸುತಿದ್ದರು. ಮತ್ತು ಅಲ್ಲಿ ಕೆಲವು ಸ್ತ್ರೀಯರ ಸ್ತನಾಗ್ರಗಳಲ್ಲಿಯೂ, ಅತಿ ಮೃದುವಾದ ಇತರಾವಯವಗ ಳಲ್ಲಿಯೂ ಆಭರಣಗಳ ಒತ್ತಿನಿಂದುಂಟಾದ ರೇಖೆಗಳು, ಅಲ್ಲಲ್ಲಿಟ್ಟ ಭೂಷಣಗ ಳಂತೆಯೇ ಕಾಣುತಿದ್ದುವು. ಕೆಲವರ ಸೀರೆಯ ಸೆರಗುಗಳು ಅವರ ಉಸಿರಿನ ಗಾಳಿಯಿಂದ ಬಾರಿಬಾರಿಗೂ ಹಾರಿಹಾರಿ ಅವರ ಮುಖದಮೇಲೆ ಬಿದ್ದು ಕುಣಿಯು ತಿದ್ದುವು. ಹೀಗೆ ಆಡುತಿದ್ದ ಚಿತ್ರವಿಚಿತ್ರಗಳಾದ ಬಟ್ಟೆಗಳೆಲ್ಲವೂ, ಆ ಸ್ತ್ರೀಯರ ಮುಖಗಳಮೇಲೆ ಗಾಳಿಯಿಂದಾಡುವ ಬಗೆಬಗೆಯ ಬಣ್ಣದ ಧ್ವಜಪತಾಕೆಗಳಂತೆ ಕಾಣುತಿದ್ದುವು. ಮತ್ತು ಕೆಲವು ಉತ್ತಮಸ್ತ್ರೀಯರ ಕಿವಿಯೋಲೆಗಳೂಕೂಡ ಅವರವರ ನಿಟ್ಟುಸಿರಿನ ಗಾಳಿಯಿಂದ ಮೆಲ್ಲಗೆ ಅಲುಗುವಂತಿದ್ದುವು. ಸಹಜವಾಗಿಯೇ

ಸುವಾಸನೆಯುಳ್ಳುದಾಗಿ, ಅದರಮೇಲೆ ಆ ಸ್ತ್ರೀಯರು ರಾತ್ರಿಯಲ್ಲಿ ಪಾನಮಾಡಿರುವ ಸಕ್ಕರೆಯೊಡಗೂಡಿದ ಮದ್ಯದ ವಾಸನೆಯಿಂದಲೂ ಕಲೆತು, ಸುಖಕರವಾಗಿ ಬೀಸುತ್ತಿದ್ದ ಅವರ ಉಸಿರಿನ ಗಾಳಿಯು ರಾವಣನನ್ನು ಬಾರಿಬಾರಿಗೂ ಆತ್ಮಾನಂದಪಡಿಸುತಿತ್ತು. ಅಲ್ಲಿದ್ದ ಕೆಲವು ರಾವಣ ಪತ್ನಿಯರು ನಡುನಡುವೆ ಎಚ್ಚರಗೊಂಡು, ಪಕ್ಕದಲ್ಲಿ ಮಲಗಿದ್ದ ತಮ್ಮ ಸವತಿಯರ ಮುಖವನ್ನೇ ರಾವಣನ ಮುಖವೆಂದು ತಿಳಿದು, ಅದಕ್ಕೆ ಬಾರಿಬಾರಿಗೂ ಮುತ್ತಿಕ್ಕುತಿದ್ದರು. ಮದಪಾನದಿಂದ ಮೈಮರೆತು ಜ್ಞಾನವಿಲ್ಲದೆ ಬಿದ್ದಿದ್ದ ಆ ಸವತಿಯರೂ ಕೂಡ, ರಾವಣನೇ ತಮ್ಮನ್ನು ಚುಂಬಿಸುವನೆಂದು ತಿಳಿದು ಪ್ರತಿಚುಂಬನದಿಂದ ಆ ಸವತಿಯರನ್ನು ಸಂತೋಷಪಡಿಸುತಿದ್ದರು. ಅಲ್ಲಿ ಕಟಕಾದಿಗಳಿಂದಲಂಕೃತವಾದ ತಮ್ಮ ತೋಳುಗಳನ್ನೇ ತಲೆದಿಂಬಾಗಿ ಮಾಡಿ ಮಲಗಿದ್ದವರು ಕೆಲವರು. ಉಟ್ಟ ಬಟ್ಟೆಯನ್ನೇ ಸುತ್ತಿ ತಲೆಗಿಟ್ಟುಕೊಂಡು ಮಲಗಿದ್ದವರು ಕೆಲವರು. ಇದಲ್ಲದೆ, ಒಬ್ಬಳ ಎದೆಯಮೇಲೆ ಮತ್ತೊಬ್ಬಳು, ಅವಳ ಭುಜದಮೇಲೆ ಇನ್ನೊಬ್ಬಳು, ಅವಳ ತೊಡೆಯಲ್ಲಿ ಬೇರೊಬ್ಬಳು, ಅವಳ ತೋಳಿನಮೇಲೆ ಮತ್ತೊಬ್ಬಳು, ಹೀಗೆ ತಲೆಯನ್ನಿಟ್ಟುಕೊಂಡು ಸಾಲಾಗಿ ಕೆಲವರು ಮಲಗಿದ್ದರು. ಅಲ್ಲಿದ್ದ ಸ್ತ್ರೀಯರೆಲ್ಲರೂ ಹೀಗೆ ಒಬ್ಬರಿಗೊಬ್ಬರು, ಎದೆ, ತೋಳು, ತೊಡೆ, ಮುಂತಾದ ಅವಯವಗಳನ್ನೇ ತಲೆದಿಂಬಾಗಿ ಮಾಡಿಕೊಂಡು, ಒಬ್ಬರ ಮೇಲೊಬ್ಬರು ಕೈಕಾಲುಗಳನ್ನು ಬೀಸಿ ಮೈಮರೆತು ಮಲಗಿದ್ದರು. ಆ ಸವತಿಯರಲ್ಲಿ ಒಬ್ಬರಿಗೊಬ್ಬರಿಗೆ ಅಸಹನವೆಂಬುದೇ ಸ್ವಾಭಾವಿಕವಾಗಿದ್ದರೂ, ಮದಪಾನದಿಂದ ಮೈಮರೆತು ಮಲಗಿದ್ದಾಗ, ಅನೇಕ ಭ್ರಮರಗಳಿಗಾಶ್ರಯವಾಗಿ, ದಾರದಲ್ಲಿ ಪೋಣಿಸಲ್ಪಟ್ಟ ಪುಷ್ಪಮಾಲಿಕೆಯಂತೆ ಕಾಣುತ್ತಿದ್ದರು. ಸುಗಂಧನಿಶ್ವಾಸವೆಂಬ ವಸಂತದ ಗಾಳಿಯಿಂದ ಉಲ್ಲಾಸಹೊಂದಿದುದಾಗಿಯೂ, ಒಂದಕ್ಕೊಂದು ಹೆಣೆದಂತೆ ಸೇರಿದುದಾಗಿಯೂ, ನೀವಿ (ನಡುಗಂಟು) ಗಳೆಂಬ ಪುಷ್ಪಸಮೂಹವುಳ್ಳುದಾಗಿಯೂ, ಒಂದಕ್ಕೊಂದು ಸೇರಿದ ಸ್ಕಂಧ (ಹೆಗಲು) ವುಳ್ಳುದಾಗಿಯೂ, ಮುಂಗುರುಳುಗಳೆಂಬ ಭ್ರಮರಗಳಿಂದ ತುಂಬಿದುದಾಗಿಯೂ ಇದ್ದ ಆ ಸ್ತ್ರೀಯರ ಸಾಲು, ಒಂದು ದೊಡ್ಡ ಹೂ ಬಳ್ಳಿಯ ತೋಟದಂತೆ ಕಾಣುತಿತ್ತು. ಆಯಾ ಸ್ತ್ರೀಯರು ಧರಿಸಿದ್ದ ಪುಷ್ಪಾಭರಣಾದಿಗಳೂ ಅವರ ಅವಯವಗಳೂ ಬೇರೆಯಾಗಿದ್ದರೂ, ಅವರೆಲ್ಲರೂ ಸೇರಿದಂತೆ ಮಾಲಾಕಾರವಾಗಿ ಮಲಗಿದ್ದುದರಿಂದ, ಇದೇ ಇವರಿವರ ದೇಹವೆಂದು ಪ್ರತ್ಯೇಕಿಸಿ ತಿಳಿಯವುದೇ ಅಸಾಧ್ಯವಾಗಿತ್ತು. ರಾವಣನು ಎಚ್ಚರಗೊಂಡಿರುವಾಗ ಅಚೇತನಗಳಿಗೂ ಅವನ ಪತ್ನಿಯರನ್ನು ಕಣ್ಣಿಟ್ಟು ನೋಡುವುದು ಅಸಾಧ್ಯವೆಂಬುದನ್ನು ತಿಳಿದು, ಅಲ್ಲಿನ ಸುವರ್ಣಸ್ತಂಭಗಳಲ್ಲಿದ್ದ ದೀಪಗಳೂಕೂಡ

ಈಗ ರಾವಣನು ಮೈಮರೆತು ಮಲಗಿರುವಾಗಲೇ ಆ ಸ್ತ್ರೀಯರನ್ನು ಎವೆಯಿಕ್ಕದೆ ನಿಶ್ಚಲವಾಗಿ ನೋಡುವಂತೆ ಕಾಣಿಸಿದುವು. ಅಲ್ಲಿ ತಾವೇ ರಾವಣನಲ್ಲಿ ಕಾಮಮೋಹಿತರಾಗಿಬಂದ ಎಷ್ಟೋಮಂದಿ ರಾಜಕನ್ಯಕೆಯರೂ, ಪಿತೃದೇವತಾಸ್ತ್ರೀಯರೂ, ದೈತ್ಯಾಂಗನೆಯರೂ, ಗಂಧರ್ವ ರಾಕ್ಷಸಕನ್ಯಕೆಯರೂ ಸೇರಿದ್ದರು. ಮತ್ತೆ ಕೆಲವರನ್ನು ರಾವಣನು ತನ್ನ ಭುಜಬಲದಿಂದಲೂ ಜಯಿಸಿ ತಂದಿಟ್ಟಿದ್ದನು. ಆ ರಾವಣನಿಗೆ ತಾನಾಗಿ ಆಸೆಪಟ್ಟು ಮೋಹಿಸಿ ಹಿಡಿದು ತರಬೇಕಾದ ಸ್ತ್ರೀಯರೊಬ್ಬರೂ ಇಲ್ಲದಿದ್ದರೂ, ಈ ನೆಪದಿಂದಲಾದರೂ ಆ ಸ್ತ್ರೀಯರ ಬಂಧುಗಳೊಡನೆ ತನಗೆ ಯುದ್ಧವು ಲಭಿಸಬಹುದೆಂಬ ಆಸೆಯಿಂದಲೇ ಆ ಸ್ತ್ರೀಯರನ್ನು ಸೆರೆಹಿಡಿದು ತಂದಿದ್ದನು. ಅಲ್ಲಿದ್ದ ಯುವತಿಯರೆಲ್ಲರೂ ತಾವಾಗಿಯೇ ರಾವಣನಲ್ಲಿ ಮೋಹಗೊಂಡು ಬಂದು ಸೇರಿದ್ದವರೇ ಹೊರತು, ಜನಕಪುತ್ರಿಯಾದ ಸೀತೆಯು ಹೊರತು ಬೇರೊಬ್ಬರಲ್ಲಿಯೂ ರಾವಣನು ಮೋಹಗೊಂಡು ತಾನಾಗಿ ಬಲಾತ್ಕರಿಸಿ ತಂದವನಲ್ಲ. ಅಲ್ಲಿ ಯಾವಳೊಬ್ಬಳಾಗಲಿ ರಾವಣನನ್ನು ಬಿಟ್ಟು ಬೇರೊಬ್ಬ ಪುರುಷನನ್ನು ಕಾಮಿಸುವವಳಲ್ಲ. ರಾವಣನಿಗೆ ಮೊದಲು ಬೇರೊಬ್ಬ ಪುರುಷನನ್ನು ವರಿಸಿದವಳೂ ಅಲ್ಲಿ ಯಾರೂ ಇಲ್ಲ. ಇಷ್ಟೇ ಅಲ್ಲದೆ ಅಲ್ಲಿದ್ದ ಸ್ತ್ರೀಯರಲ್ಲಿ ಕುಲಹೀನೆಯಾಗಲಿ, ಅಸಮರ್ಥೆಯಾಗಲಿ, ಉಪಚಾರಹೀನೆಯಾಗಲಿ, ಸತ್ವವಿಲ್ಲದವಳಾಗಲಿ, ರಾವಣನಿಗೆ ಮೋಹಪಾತ್ರಳಲ್ಲದವಳಾಗಲಿ ಯಾವಳೊಬ್ಬಳೂ ಇರಲಿಲ್ಲ. ಶತ್ರುಗಳಲ್ಲಿಯೂ ಸಾಧುಬುದ್ಧಿಯುಳ್ಳ ಆ ಹನುಮಂತನು ಆ ಸ್ತ್ರೀಸಮೂಹವನ್ನು ನೋಡಿ ತನ್ನ ಮನಸ್ಸಿನಲ್ಲಿ [1] ಆಹಾ! ಈ ರಾಕ್ಷಸಪತ್ನಿಯರಂತೆಯೇ ರಾಮನ ಧರ್ಮಪತ್ನಿಯಾದ ಸೀತೆಯೂ, ತನ್ನ ಪತಿಯಾದ ರಾಮನೊಡಗೂಡಿ ಸುಖದಿಂದಿದ್ದ ಪಕ್ಷದಲ್ಲಿ, ಆಗ ಈ ರಾವಣನ ಬದುಕೂ ಎಷ್ಟೋ ಮೇಲಾಗಿರುತಿತ್ತು" ಎಂದು ಚಿಂತಿಸುತ್ತ, ತಿರುಗಿ ತನ್ನಲ್ಲಿ ತಾನು "ಛೀ! ಹಾಗೆ ಹೋಲಿಸಬಾರದು! ಈ ರಾಕ್ಷಸಿಯರೆಲ್ಲಿ? ಆ ಸೀತೆಯ ಗುಣಗಳೆಲ್ಲಿ? ಅಯ್ಯೋ!

---

1. ಇಲ್ಲಿ "ಬಭೂವ ಬುದ್ಧಿಸ್ತು ಹರೀಶ್ವರಸ್ಯ ಯದೀದೃಶೀ ರಾಘವಧರ್ಮಪತ್ನೀ। ಇಮಾ ಯಥಾ ರಾಕ್ಷಸರಾಜಭಾರ್ಯಾಸ್ಸುಜಾತಮಸ್ಯೇತಿ ಹಿ ಸಾಧುಬುದ್ಧೇಃ॥ ಪುನಶ್ಚ ಸೋಽಚಿಂತಯದಾರ್ತರೂಪೋ ಧ್ರುವಂ ವಿಶಿಷ್ಟಾ ಗುಣತೋ ಹಿ ಸೀತಾ। ಅಥಾಯಮಸ್ಯಾಂ ಕೃತವಾನ್ಮಹಾತ್ಮಾ ಲಙ್ಕೇಶ್ವರಃ ಕಷ್ಟಮನಾರ್ಯಕರ್ಮ॥" ಎಂದು ಮೂಲವು. ಇದಕ್ಕೆ ವ್ಯಾಖ್ಯಾನಗಳಲ್ಲಿ ಬೇರೆ ವಿಧವಾಗಿ ಅನೇಕಾರ್ಥಗಳನ್ನು ವಿವರಿಸಿದ್ದರೂ, ಅವುಗಳಲ್ಲಿ ಮೇಲೆ ಕಾಣಿಸಿರುವ ಅರ್ಥವೇ ಸಮಂಜಸವಾಗಿಯೂ, ಸಮಯೋಚಿತವಾಗಿಯೂ, ಸುಸಂಬದ್ಧವಾಗಿಯೂ ಇರುವುದರಿಂದ ಉಳಿದ ಅರ್ಥಭೇದಗಳೆಲ್ಲವನ್ನೂ ಇಲ್ಲಿ ಕಾಣಿಸಿಲ್ಲ.

ರಾವಣನು ಇಷ್ಟು ಮಹಾವೈಭವವುಳ್ಳವನಾಗಿದ್ದರೂ, ಆ ಸೀತೆಯನ್ನು ಕದ್ದುತಂದು ಇಂತಹ ದುಷ್ಕಾರ್ಯವನ್ನು ಮಾಡಿದನು ! ಅಯ್ಯೋ ! ಏನು ಕಷ್ಟವು?" ಎಂದು ಮನಸ್ಸಿನಲ್ಲಿ ಕೊರಗುತಿದ್ದನು.

ಇಲ್ಲಿಗೆ ಒಂಬತ್ತನೆಯ ಸರ್ಗವು.

---

ಹನುಮಂತನು ರಾವಣಾಂತಃಪುರದಲ್ಲಿ ನಾನಾರೀತಿಯಿಂದ ನಿದ್ರಿಸುತಿದ್ದ ಸ್ತ್ರೀಯರನ್ನೂ, ಮಂಡೋದರಿಯನ್ನೂ ಕಂಡು, ಅವಳನ್ನೇ ಸೀತೆಯೆಂದು ಭ್ರಮಿಸಿದುದು.

ಹೀಗೆ ಹನುಮಂತನು ಅಲ್ಲಲ್ಲಿ ನೋಡುತ್ತಿರುವಾಗ, ಮುಂದೆ ನವರತ್ನ ಖಚಿತವಾಗಿ ಸಾಕ್ಷಾದ್ದೇವೇಂದ್ರನ ಶಯನಗೃಹಕ್ಕೆಣೆಯಾದ ಸ್ಫಟಿಕದ ಶಯನಮಂಟಪವನ್ನು ಕಂಡನು. ಆ ಮಂಟಪಕ್ಕಾದರೋ, ಸುತ್ತಲೂ ಅಂಚಿನಲ್ಲಿ ಚಿತ್ರದ ಕೆಲಸ ಮಾಡಲ್ಪಟ್ಟ ದಂತದ ಕಟ್ಟುಗಳು ! ಅದರಿಂದಾಚೆಗೆ ಚಿನ್ನದ ಕುಸುರಿಗಳು ! ಅದರಮೇಲೆ ಬೆಲೆಯುಳ್ಳ ಮೇಲಾದ ಹಾಸಿಗೆಗಳು! ಹೀಗೆ ಸರ್ವೋತ್ತಮಸೌಭಾಗ್ಯವುಳ್ಳ ಆ ಮಂಟಪಕ್ಕೆ, ಒಂದು ಕಡೆಯಲ್ಲಿ ಮುತ್ತಿನ ಕುಚ್ಚುಗಳಿಂದಲಂಕೃತವಾಗಿ ಚಂದ್ರಬಿಂಬದಂತಿದ್ದ ಶ್ವೇತಛತ್ರವು ಎತ್ತಿ ಕಟ್ಟಲ್ಪಟ್ಟಿರುವುದು. ಸೂರ್ಯನಂತೆ ದೇದೀಪ್ಯಮಾನವಾದ ಆ ಮಂಟಪದ ಸುತ್ತಲೂ ರಕ್ತಾಶೋಕಪುಷ್ಪಗಳ ಹೂದಂಡೆಗಳು ತೂಗಾಡುವುವು. ಅದರ ನಾಲ್ಕುಕಡೆಗಳಲ್ಲಿಯೂ ಕೀಲುಬೊಂಬೆಗಳು ಎಡೆಬಿಡದೆ ಚಾಮರವನ್ನು ಹಾಕುತ್ತಿರುವುವು. ಆ ಮಂಟಪದಿಂದ ಹಲವು ಬಗೆಯ ಸುಗಂಧಪರಿಮಳವೂ, ಧೂಪದ ವಾಸನೆಯೂ ಘಮಘಮಿಸಿ ಹೊರಟು ಬರುತ್ತಿರುವುದು. ಮೇಲಾದ ದುಪ್ಪಟಿಯೂ, ಉಣ್ಣೆಯ ಚರ್ಮವೂ ಅದರಮೇಲೆ ಹಾಸಲ್ಪಟ್ಟಿರುವುವು! ಸುತ್ತಲೂ ಹೂವಿನ ಕುಚ್ಚುಗಳು ತೂಗಾಡುತ್ತಿರುವುವು. ಹನುಮಂತನು ಈ ಶಯನಮಂಟಪದ ಸೊಗಸನ್ನು ನೋಡುತ್ತಿರುವಾಗಲೇ, ಆ ಮಂಟಪದ ನಡುವೆ ಹಾಸಿಗೆಯಲ್ಲಿ ಮಲಗಿದ್ದ ಒಂದು ದೊಡ್ಡ ರಾಕ್ಷಸಾಕೃತಿಯನ್ನು ಕಂಡನು. ಆ ರಾಕ್ಷಸನಿಗಾದರೋ ಮೇಘದಂತೆ ಕಪ್ಪಾದ ಮೈ! ಕಿವಿಯಲ್ಲಿ ದೇದೀಪ್ಯಮಾನವಾಗಿ ಜ್ವಲಿಸುವ ಕುಂಡಲಗಳು ! ಕೆಂಪಾದ ಕಣ್ಣುರೆಪ್ಪೆಗಳು ! ಹಾಸಿಗೆಯಮೇಲೆ ಉದ್ದಕ್ಕೆ ನೀಡಿದ ದೊಡ್ಡ ತೋಳುಗಳು ! ನಡುವಿನಲ್ಲಿ ಚಿನ್ನದ ಸರಿಗೆಯ ಪಟ್ಟೆಮಡಿ ! ಮೈಮೇಲೆ ಸುಗಂಧದಿಂದ ಘಮಘಮಿಸುತ್ತಿರುವ ರಕ್ತ

ಚಂದನದಪಟ್ಟೆ! ಹೀಗೆ ಮಹಾದ್ಭುತರೂಪವುಳ್ಳವನಾಗಿ, ಮೈಯುದ್ದಕ್ಕೂ ಸ್ವರ್ಣಾಭರಣಗಳನ್ನು ತೊಟ್ಟು, ಹಾಸಿಗೆಯಲ್ಲಿ ಮಲಗಿದ್ದ ಆ ರಾಕ್ಷಸನು, ಮಿಂಚಿನಿಂದ ಕೂಡಿ ಸಂಧ್ಯಾರಾಗದಿಂದ ರಂಜಿಸುವ ಕಾಳಮೇಘದಂತೆ ಕಾಣಿಸುತಿದ್ದನು. ದಿವ್ಯಾಭರಣಗಳಿಂದ ಸ್ಫುರದ್ರೂಪಿಯಾಗಿಯೂ, ಕಾಮರೂಪಿಯಾಗಿಯೂ, ರಾಕ್ಷಸಕನ್ಯೆಯರಿಗೆ ಪ್ರಿಯನಾಗಿಯೂ, ಸಮಸ್ತರಾಕ್ಷಸಕುಲವನ್ನೂ ಕ್ಷೇಮದಿಂದ ಪೋಷಿಸತಕ್ಕವನಾಗಿಯೂ ಇರುವ ಆ ರಾಕ್ಷಸನು, ಆ ರಾತ್ರಿಯ ಮನ್ಮಥಕ್ರೀಡೆಗಳಿಂದಲೂ, ಮದ್ಯಪಾನದಿಂದಲೂ ಮೈಮರೆತು, ಕೈಕಾಲುಗಳನ್ನು ನೀಡಿ ಮಲಗಿರಲು, ಸಮುದ್ರಮಥನವಾದ ಮೇಲೆ ಆಯಾಸದಿಂದ ಬಳಲಿ, ಗಿಡಬಳ್ಳಿಗಳೊಡನೆ ಮಲಗಿರುವ ಮಂದರಪರ್ವತದಂತಿದ್ದನು. ಬುಸುಗುಟ್ಟುವ ಮಹಾಸರ್ಪದಂತೆ ನಿಶ್ವಾಸಿಸುತ್ತ, ಮೇಲಾದ ಹಾಸಿಗೆಯಲ್ಲಿ ಮಲಗಿದ್ದ ಆ ರಾಕ್ಷಸನನ್ನು ಕಂಡು ಹನುಮಂತನು ಮುಂದೆ ಹೋಗಿ ಅವನೇ ರಾವಣನಿರಬಹುದೆಂದೆಣಿಸಿ "ಛೀ! ಈ ಪಾಪಿಯ ಬಳಿಯಲ್ಲಿಯೇ ನಿಲ್ಲಬಾರದು!" ಎಂದು ಹಾಗೆಯೇ ಬೆಚ್ಚಿಬಿದ್ದವನಂತೆ ಹಿಂದಕ್ಕೆ ಸರಿದನು. ಆಮೇಲೆ ಸೋಪಾನಮಾರ್ಗವಾಗಿ ಬೇರೊಂದು ವೇದಿಕೆಯನ್ನೇರಿ ಕುಳಿತು, ಆ ರಾಕ್ಷಸನು ಮಲಗಿದ ರೀತಿಯನ್ನು ನಟ್ಟಕಣ್ಣಿನಿಂದ ನೋಡುತಿದ್ದನು. ಅವನು ಮಲಗಿದ್ದ ಹಾಸಿಗೆಯು ಮದದಾನೆಯಿಂದಾವರಿಸಲ್ಪಟ್ಟ ದೊಡ್ಡಗಿರಿನದಿಯಂತೆ ತೋರುತಿತ್ತು. ಚಿನ್ನದ ತೋಳ್ಬಳೆಗಳಿಂದಲಂಕೃತಗಳಾಗಿ ಹಾಸಿಗೆಯಲ್ಲಿ ಚಾಚಿದ್ದ ಅವನ ತೋಳುಗಳೆರಡೂ, 1 ಎರಡು ಇಂದ್ರಧ್ವಜಗಳಂತೆ ಶೋಭಿಸುತಿದ್ದುವು. ಆ ತೋಳುಗಳಮೇಲೆ ಒಂದುಕಡೆಯಲ್ಲಿ ಐರಾವತದ ಕೊಂಬಿನ ತಿವಿತದಿಂದುಂಟಾದ ರೇಖೆಗಳು! ಮತ್ತೊಂದುಕಡೆಯಲ್ಲಿ ಇಂದ್ರನ ವಜ್ರಪ್ರಹಾರದಿಂದುಂಟಾದ ಗುರುತುಗಳು! ಬೇರೊಂದು ಕಡೆಯಲ್ಲಿ ವಿಷ್ಣುಚಕ್ರಾಹತಿಯಿಂದುಂಟಾದ ಗಾಯಗಳು! ಇವೆಲ್ಲವೂ ಸ್ಪಷ್ಟವಾಗಿ ಕಾಣಿಸುತಿದ್ದುವು. ಮತ್ತು ಆ ತೋಳುಗಳೆರಡೂ ಮಾಂಸತುಂಬಿ ದಪ್ಪನಾಗಿಯೂ, ಒಂದಕ್ಕೊಂದು ಸಮವಾಗಿ ಉಬ್ಬಿದ ಹೆಗಲುಗಳಿಂದ ಅಂದವಾಗಿಯೂ, ಮೈಯಳತೆಗೆ ತಕ್ಕ ಪ್ರಮಾಣವುಳ್ಳವುಗಳಾಗಿಯೂ, ಬಲಪೂರ್ಣಗಳಾಗಿಯೂ ಇದ್ದುವು. ಉಗುರುಗಳೂ ಹೆಬ್ಬೆರಳುಗಳೂ ಶುಭಲಕ್ಷಣಗಳಿಂದೊಪ್ಪುತಿದ್ದವು. ಎಸಳಾದ ಬೆರಳುಗಳು ಅದಕ್ಕೆ ಇನ್ನೂ ಅಂದ

---

1. ರಾವಣನಿಗೆ ಇಪ್ಪತ್ತು ತೋಳುಗಳೂ, ಹತ್ತು ತಲೆಗಳೂ ಇರಬೇಕಾದರೂ, ಇಲ್ಲಿ ಎರಡೇ ತೋಳುಗಳನ್ನು ಹೇಳಿದುದು ಹೇಗೆಂದರೆ; ಅವನು ಕಾಮರೂಪಿಯಾದುದರಿಂದ ಆ ರಾತ್ರಿಯಲ್ಲಿ ರತಿಕ್ರೀಡೆಯ ಸೌಕರ್ಯಕ್ಕಾಗಿ ಎರಡು ತೋಳುಗಳಿಂದಲೇ ಕೂಡಿದ್ದನೆಂದು ಗ್ರಾಹ್ಯವು.

ವನ್ನು ಕೊಡುತಿದ್ದುವುವು. ಒಂದೊಂದು ತೋಳೂ ಒಂದೊಂದು ಬಾಗಿಲಗಳಿಯಂತೆಯೂ, ಮದದಾನೆಯ ಸೊಂಡಿಲಿನಂತೆಯೂ ತೋರುತಿತ್ತು. ಅಂದವಾದ ಬೆರಳುಗಳಿಂದ ಕೂಡಿ, ಶುಭ್ರವಾದ ಹಾಸಿಗೆಯ ಮೇಲೆ ಚಾಚಿದ ಆ ತೋಳುಗಳೆರಡು, ಐದು ಹೆಡೆಯುಳ್ಳ ಎರಡು ಮಹಾಸರ್ಪಗಳಂತಿದ್ದುವು. ಆ ತೋಳುಗಳೆರಡೂ, ಮೊಲದ ರಕ್ತದಂತೆ ಕೆಂಪಾಗಿಯೂ, ಸುಗಂಧಶೀತಲವಾಗಿಯೂ ಇದ್ದ ದಿವ್ಯಚಂದನದಿಂದ ಲೇಪಿಸಲ್ಪಟ್ಟು, ದಿವ್ಯಾಲಂಕಾರಗಳಿಂದ ಶೋಭಿಸುತಿದ್ದುವು. ಆಗಾಗ ದಿವ್ಯಸ್ತ್ರೀಯರಿಂದೊತ್ತಲ್ಪಟ್ಟು ದಿವ್ಯಪರಿಮಳಯುಕ್ತವಾಗಿದ್ದ ಆ ತೋಳುಗಳು ಇದುವರೆಗೆ, ಎಷ್ಟೋಮಂದಿ ಯಕ್ಷರನ್ನೂ, ಪನ್ನಗರನ್ನೂ, ಗಂಧರ್ವರನ್ನೂ, ದೇವದಾನವರನ್ನೂ ಗೋಳಾಡಿಸಿರುವುವು. ಹೀಗೆ ಮಂದರಪರ್ವತದಮೇಲೆ ಕೋಪಗೊಂಡು ಮಲಗಿರುವ ಮಹಾಸರ್ಪಗಳಂತೆ, ಹಾಸಿಗೆಯಮೇಲೆ ನೀಡಿದ ರಾವಣನ ತೋಳುಗಳನ್ನು ಆಂಜನೇಯನು ನೋಡಿದನು. ಮಾಂಸತುಂಬಿದ ಆ ತೋಳುಗಳಿಂದ ರಾವಣನು ಎರಡು ಶಿಖರಗಳಿಂದ ಕೂಡಿದ ಒಂದು ದೊಡ್ಡ ಬೆಟ್ಟದಂತೆ ಕಾಣುತಿದ್ದನು. ಆ ರಾಕ್ಷಸನು ಉಸಿರುಬಿಡುವಾಗ ಅವನ ಬಾಯಿಯಿಂದ ವಿಶೇಷವಾದ ಮದ್ಯಗಂಧವೂ, ಅದರೊಡನೆ, ಮಾವು, ಹೊನ್ನೆ, ಪಗಡೆ ಮುಂತಾದ ಹೂಗಳ ಪರಿಮಳವೂ, ಮೃಷ್ಟಾನ್ನರಸದ ಸುವಾಸನೆಯೂ, ಹೊರಟುಬರುತಿತ್ತು. ಅವನ ಉಸಿರಿನ ಗಾಳಿಯೇ ಆ ಮನೆಯ ಅಂಗಳವೆಲ್ಲವನ್ನೂ ತುಂಬಿರುವಂತೆ ತೋರುತಿತ್ತು. ಆ ರಾಕ್ಷಸನ ತಲೆಯಮೇಲೆ ನಿದ್ರೆಯ ಹೊರಳಾಟದಿಂದ ಸ್ವಲ್ಪವಾಗಿ ಕದಲಿದ ರತ್ನಖಚಿತವಾದ ಸುವರ್ಣಕಿರೀಟವೂ, ಕಿವಿಯಲ್ಲಿ ಕಾಂತಿಯಿಂದ ದೇದೀಪ್ಯಮಾನವಾದ ಕರ್ಣಕುಂಡಲಗಳೂ, ನಡುವಿನಲ್ಲಿ ಪಟ್ಟೆಮಡಿಯ ದುಕೂಲವೂ, ಮೈಮೇಲೆ ಬೆಲೆಯುಳ್ಳ ಪೀತಾಂಬರವೂ, ಅಗಲವಾಗಿ ಉಬ್ಬಿದ ಅವನ ಎದೆಯಲ್ಲಿ ರಕ್ತಚಂದನದ ಗುರುತುಳ್ಳ ಮುತ್ತಿನಹಾರಗಳೂ, ಅವನ ರಾಜತೇಜಸ್ಸಿಗೆ ಮತ್ತಷ್ಟು ಕಳೆಯೇರಿಸುವಂತಿದ್ದುವು. ರಕ್ತದಂತೆ ಕೆಂಪೇರಿದ ಅವನ ಕಣ್ಣುಗಳೂ, ಉದ್ದಿನ ರಾಶಿಯಂತೆ ಕಪ್ಪಾದ ಅವನ ದೇಹವೂ, ಬುಸುಗುಟ್ಟುವಂತೆ ಅವನ ಮೂಗಿನ ರಂಧ್ರಗಳಿಂದ ಹೊರಟು ಬರುವ ನಿಶ್ವಾಸವೂ, ನೋಡುವವರಿಗೆ ಭಯವನ್ನುಂಟುಮಾಡುವಂತಿದ್ದುವು. ಹಾಸಿಗೆಯಲ್ಲಿ ಮಲಗಿದ ಆ ರಾಕ್ಷಸನು ಗಂಗಾಪ್ರವಾಹದಲ್ಲಿ ಮಲಗಿದ ಒಂದು ಮದದಾನೆಯಂತಿದ್ದನು. ಆ ಮಂಟಪದ ನಾಲ್ಕು ಕಡೆಗಳಲ್ಲಿಯೂ ಸುವರ್ಣಮಯಗಳಾದ ದೀಪಸ್ತಂಭಗಳು ನಾಲ್ಕು ದಿಕ್ಕುಗಳನ್ನೂ ಬೆಳಗುವಂತೆ ಉರಿಯುತ್ತಿರಲು, ಆ ದೀಪಪ್ರಭೆಯಲ್ಲಿ ಮಿಂಚಿನಲ್ಲಿ ಕಾಣುವ ಮೇಘದಂತೆ ಈ ರಾವಣನ ಅವಯವಗಳೆಲ್ಲವೂ ಕಾಣುತ್ತಿದ್ದುವು. ಅಲ್ಲಿ ಆಂಜನೇಯನು

ಮಹಾದೇಹವುಳ್ಳ ಆ ರಾವಣನ ಕಾಲಿನ ಕಡೆಯಲ್ಲಿ ಸಾಲಾಗಿ ಮಲಗಿದ್ದ ರಾಕ್ಷಸ ಪತ್ನಿಯರನ್ನೂ ಕಂಡನು. ಅವರೊಬ್ಬೊಬ್ಬರೂ ಚಂದ್ರನಂತೆ ಪ್ರಕಾಶಮಾನವಾದ ಮುಖವುಳ್ಳವರಾಗಿಯೂ, ಅಂದವಾದ ಕುಂಡಲವುಳ್ಳವರಾಗಿಯೂ, ಬಾಡದ ಪುಷ್ಪಾಭರಣವುಳ್ಳವರಾಗಿಯೂ ನಿದ್ರಿಸುತಿದ್ದರು. ಇದಲ್ಲದೆ ನೃತ್ತಗೀತವಾದ್ಯಗಳಲ್ಲಿ ಕುಶಲರಾಗಿಯೂ, ಅವಶ್ಯವಿದ್ದಾಗ ರಾವಣನ ಭೋಗಕ್ಕೆ ಯೋಗ್ಯರಾಗಿಯೂ, ಇದ್ದ ಕೆಲವು ರೂಪವತಿಯರು ಉತ್ತಮಾಭರಣಗಳನ್ನು ಧರಿಸಿ ಅಲ್ಲಲ್ಲಿ ಮಲಗಿರುವುದನ್ನೂ ಕಂಡನು. ಅಲ್ಲಿದ್ದ ಒಬ್ಬೊಬ್ಬ ಹೆಂಗಸಿನ ಕಿವಿಗಳಲ್ಲಿಯೂ ವಜ್ರವೈಡೂರ್ಯಗಳಿಂದ ಕೆತ್ತಲ್ಪಟ್ಟ ಸುವರ್ಣಕುಂಡಲಗಳೂ, ಒಬ್ಬೊಬ್ಬರ ಭುಜಗಳಲ್ಲಿಯೂ ರತ್ನಖಚಿತಗಳಾದ ತೋಳ್ಬಳೆಗಳೂ ಒಪ್ಪುತಿದ್ದುವು. ಆ ಸ್ತ್ರೀಯರು ತಲೆಗೆ ಕೈಯಿಟ್ಟು ಮಲಗಿದ್ದಾಗ ಕೈಬಳೆಗಳ ಮತ್ತು ಕಿವಿಯೋಲೆಗಳ ಕಾಂತಿಯೆರಡೂ ಒಂದಾಗಿ ಕಲೆತು ದೇದೀಪ್ಯಮಾನವಾಗಿ ಜ್ವಲಿಸುತಿದ್ದುವು. ಕುಂಡಲಾಲಂಕೃತಗಳಾಗಿ ಚಂದ್ರನಿಗೆಣೆಯಾದ ಅವಳ ಮುಖಗಳಿಂದ, ಆ ಶಯನಮಂಟಪವು ನಕ್ಷತ್ರಗಳಿಂದ ತುಂಬಿದ ಆಕಾಶದಂತೆ ಪ್ರಕಾಶಿಸುತಿತ್ತು. ಆ ರಾಕ್ಷಸಸ್ತ್ರೀಯರೆಲ್ಲರೂ ರಾತ್ರಿಯಲ್ಲಿ ಮದ್ಯಪಾನದಿಂದಲೂ, ಮನ್ಮಥಕ್ರೀಡೆಯಿಂದಲೂ ಬಳಲಿದವರಾಗಿ, ಅಲ್ಲಿ ತವುತಮಗೆ ಸಿಕ್ಕಿದ ಸ್ಥಲಗಳಲ್ಲಿ ಮೈಮರೆತು ಮಲಗಿದ್ದ ರೀತಿಯನ್ನು ಹನುಮಂತನು ನೋಡುತ್ತ ಬಂದನು. ನೃತ್ಯದಲ್ಲಿ ವಿಶೇಷಪರಿಚಯವುಳ್ಳವಳೊಬ್ಬಳು ತನ್ನ ಗಾಢನಿದ್ರೆಯಲ್ಲಿಯೂ ಆ ವಾಸನೆಯನ್ನು ಬಿಡದೆ, ಭರತಶಾಸ್ತ್ರಾನುಸಾರವಾಗಿಯೇ ಕೈಕಾಲುಗಳನ್ನೊದರುತಿದ್ದಳು. ಹಾಗೆಯೇ ಆ ಸ್ತ್ರೀಯರಲ್ಲಿ, ನದೀಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವ ಕಮಲಪಬಳ್ಳಿಯು, ನಡುದಾರಿಯಲ್ಲಿ ಸಿಕ್ಕಿದ ದೋಣಿಗೆ ಸುತ್ತಿಕೊಂಡಂತೆ ವೀಣೆಯನ್ನಪ್ಪಿಕೊಂಡು ಮಲಗಿದ್ದವಳೊಬ್ಬಳು! ಕೈಗೂಸನ್ನು ತಂಕುಳಲ್ಲಿ ಎತ್ತಿಕೊಂಡಂತೆ, ಡವಣೆಯನ್ನು ಕಕ್ಷದಲ್ಲಿಟ್ಟು ಮಲಗಿದವಳೊಬ್ಬಳು! ಬಹುಕಾಲದಿಂದಗಲಿ ಬಂದನಾಯಕನನ್ನಪ್ಪಿದವಳಂತೆ ತಮಟೆಯನ್ನಪ್ಪಿ ಮಲಗಿದವಳೊಬ್ಬಳು! ಏಕಾಂತದಲ್ಲಿ ತನ್ನ ಪ್ರಿಯನನ್ನಪ್ಪಿಕೊಂಡು ಮಲಗಿದ ಕಾಮಿನಿಯಂತೆ ಕೊಳಲನ್ನು ಕಟ್ಟಿಕೊಂಡು ಮಲಗಿದವಳೊಬ್ಬಳು! ಪತಿಯ ಪಾರ್ಶ್ವದಲ್ಲಿ ಮಲಗಿದವಳಂತೆ ಏಳುತಂತಿಯ ವೀಣೆಯನ್ನು ಪಕ್ಕದಲ್ಲಿಟ್ಟು ಮಲಗಿದವಳೊಬ್ಬಳು! ಹಾಗೆಯೇ ಹೊಂಬಣ್ಣವುಳ್ಳ ಕೋಮಲವಾದ ತನ್ನ ಮೈಯಿಂದ ಮದ್ದಲೆಯನ್ನಪ್ಪಿ ಮೈಮರೆತು ಮಲಗಿದವಳೊಬ್ಬಳು! ಪಣವವೆಂಬ ತನ್ನ ವಾದ್ಯವನ್ನು ಕಕ್ಷದಲ್ಲಿಟ್ಟು ಮದದಿಂದ ಮೈಮರೆತು ಮಲಗಿದವಳೊಬ್ಬಳು! ಒಂದುಕಡೆಯಲ್ಲಿ ಪತಿಯನ್ನೂ, ಮತ್ತೊಂದುಕಡೆಯಲ್ಲಿ ತನ್ನ ಮಗುವನ್ನೂ ಮಲಗಿಸಿ ತಟ್ಟುವಂತೆ, ತನ್ನ ಎರಡು

ಕೈಗಳಿಂದಲೂ ಎರಡು ಡಿಂಡಿಮವಾದ್ಯಗಳನ್ನು ಹಿಡಿದು ಮಲಗಿದವಳೊಬ್ಬಳು! ಕಾಮ ರಾತ್ರಿಯಲ್ಲಿ ನುಡಿಸುತಿದ್ದ ಅಡಂಬರವೆಂಬ ವಾದ್ಯವನ್ನು ಸ್ತನದ ಮೇಲಿಟ್ಟು ಪಾನಮದದಿಂದ ಮೈಮರೆತು ಮಲಗಿದವಳೊಬ್ಬಳು! ನಿದ್ರೆಯಲ್ಲಿ ಮೈಮರೆತು ಕೈಯಲ್ಲಿ ಹಿಡಿದಿದ್ದ ಜಲಕುಂಭವನ್ನು ಮೇಲೆ ಕವುಚಿಕೊಂಡು, ಅದರಿಂದ ಕದಲಿದ ಕುಂಕುಮಾನುಲೇಪನವುಳ್ಳವಳಾಗಿ, ವಸಂತಕಾಲದಲ್ಲಿ ವಿಚಿತ್ರವರ್ಣವುಳ್ಳ ಪುಷ್ಪಗಳಿಂದ ತುಂಬಿದ ಲತೆಗೆ ನೀರೆರೆದಂತೆ ಮಲಗಿದ್ದವಳೊಬ್ಬಳು! ಸುವರ್ಣಕುಂಭಗಳಿಗೆ ಸಮಾನವಾದ ತನ್ನ ಸ್ತನಗಳನ್ನು ತನ್ನ ಕೈಯಿಂದಲೇ ಅಪ್ಪಿ ಮಲಗಿದ್ದವಳೊಬ್ಬಳು! ಸಮೀಪದಲ್ಲಿದ್ದ ತನ್ನ ಸಖಿಯನ್ನೇ ಆಲಿಂಗಿಸಿ ಮದದಿಂದ ಮೈತಿಳಿಯದೆ ಮಲಗಿದ್ದವಳೊಬ್ಬಳು! ಹೀಗೆ ಅಲ್ಲಿ ಅನೇಕ ಸ್ತ್ರೀಯರು ಕಾಮುಕರನ್ನಪ್ಪಿದ ಕಾಮಿನಿಯರಂತೆ, ತಮ್ಮ ತಮ್ಮ ವಿಚಿತ್ರವಾದ್ಯಗಳನ್ನು ತಮ್ಮ ಸ್ತನಾಗ್ರದ ಮೇಲಿಟ್ಟು ಮಲಗಿದ್ದರು. ಆಂಜನೇಯನು ಈ ಸ್ತ್ರೀಯರೆಲ್ಲರನ್ನೂ ನೋಡುತ್ತಿರುವಾಗ, ಆ ಮಂಟಪದ ಒಂದು ಕಡೆಯಲ್ಲಿ ಪ್ರತ್ಯೇಕವಾದ ಹಾಸಿಗೆಯ ಮೇಲೆ ಏಕಾಂತಸ್ಥಳದಲ್ಲಿ ಮಲಗಿದ್ದ ದಿವ್ಯರೂಪವುಳ್ಳ ಒಂದು ಸ್ತ್ರೀವ್ಯಕ್ತಿಯನ್ನು ಕಂಡನು. ಅವಳು ತನ್ನ ದೇಹಕಾಂತಿಯಿಂದಲೇ ಆ ವಿಮಾನಕ್ಕೆ ಒಂದು ಅಸಾಧಾರಣಕಾಂತಿಯನ್ನು ಉಂಟುಮಾಡುವಂತಿದ್ದಳು. ಗೌರವರ್ಣವುಳ್ಳ ಆಕೆಯ ದೇಹಕಾಂತಿಯು ಸುವರ್ಣಚ್ಛಾಯೆಯಿಂದ ಹೊಳೆಯುತಿತ್ತು. ರಾವಣನಿಗೆ ಆಕೆಯೇ ಪ್ರಾಣಪ್ರಿಯೆಯಂತೆಯೂ, ಆ ಅಂತಃಪುರಕ್ಕೆ ಆಕೆಯೇ ಅಧಿದೇವತೆಯಂತೆಯೂ ತೋರುತಿದ್ದಳು. ಸಣ್ಣನಡುವಿನಿಂದಲೂ, ಅಂದವಾದ ರೂಪದಿಂದಲೂ ಕೂಡಿ ಸರ್ವಾಲಂಕಾರಭೂಷಿತೆಯಾಗಿ ಹಾಸಿಗೆಯಮೇಲೆ ಮಲಗಿದ್ದ ಆ ಸ್ತ್ರೀಯ ರೂಪವನ್ನೂ, ಯೌವನದ ಮೇಲ್ಮೆಯನ್ನೂ ನೋಡಿದಾಗ, ಹನುಮಂತನಿಗೆ ಅವಳೇ ಸೀತೆಯೆಂಬ ಶಂಕೆಯುಂಟಾಯಿತು. ಅವನ ಮನಸ್ಸಿನಲ್ಲಿ ಮಿತಿಮೀರಿದ ಸಂತೋಷವೂ ಹುಟ್ಟಿತು. ಅವನಿಗೆ ಮೈತಿಳಿಯದಷ್ಟು ಆನಂದವುಂಟಾಯಿತು. ಆಗ ಅವನಿಗುಂಟಾದ ಆ ಆನಂದಕ್ಕೆ ಪಾರವೇ ಇರಲಿಲ್ಲ. ಹಾಗೆ ಹರ್ಷಪರವಶನಾದ ಆಂಜನೇಯನು, ಒಮ್ಮೆ ಕೈತಟ್ಟುವನು! ಒಮ್ಮೆ ತನ್ನ ಬಾಲವನ್ನೆತ್ತಿ ಮುತ್ತಿಕ್ಕುವನು! ತನ್ನಲ್ಲಿಯೇ ತಾನು ಹಿಗ್ಗುವನು! ಒಮ್ಮೆ ಹಾಡುವನು! ಒಮ್ಮೆ ಕುಣಿಯುವನು! ನಿಂತಕಡೆಯಲ್ಲಿ ನಿಲ್ಲದೆ ಸುತ್ತುವನು! ಅಲ್ಲಿನ ಕಂಬಗಳನ್ನೇರಿ ಧುಮುಕುವನು! ಹೀಗೆ ಹನುಮಂತನು ಸಂತೋಷಪರವಶನಾಗಿ, ತನ್ನ ಜಾತಿಸ್ವಭಾವಕ್ಕೆ ತಕ್ಕ ಕಪಿಚೇಷ್ಟೆಗಳೆಲ್ಲವನ್ನೂ ಕ್ಷಣಮಾತ್ರದಲ್ಲಿ ಚೆನ್ನಾಗಿ ತೋರಿಸಿಬಿಟ್ಟನು.

ಇಲ್ಲಿಗೆ ಹತ್ತನೆಯ ಸರ್ಗವು.

ಹನುಮಂತನು ಅಲ್ಲಿದ್ದ ಮಂಡೋದರಿಯನ್ನು ಸೀತೆಯಲ್ಲವೆಂದು ನಿಶ್ಚಯಿಸಿ, ಸಮೀಪದಲ್ಲಿದ್ದ ಪಾನಭೂಮಿಯಲ್ಲಿ ಹುಡುಕಿದುದು. ಅಲ್ಲಿಂದ ಪುನಃ ಅಂತಃಪುರಕ್ಕೆ ಬಂದುದು. ಪಾನಭೂಮಿ ವರ್ಣನವು.

ಆಮೇಲೆ ಹನುಮಂತನು ತನ್ನಲ್ಲಿ ತಾನು ಚೆನ್ನಾಗಿ ಚಿಂತಿಸಿ, ಛೀ! ಇವಳನ್ನು ಸೀತೆಯೆಂದೆಣಿಸುವುದೇ ಅನುಚಿತವು! ಆ ಸೀತೆಯ ಗುಣವೆಲ್ಲಿ! ಇವಳೆಲ್ಲಿ!" ಎಂದು ಆ ಭ್ರಾಂತಿಯನ್ನು ಬಿಟ್ಟು, ಮನಸ್ಸಿಗೆ ನಿರ್ಧರಮಾಡಿಕೊಂಡನು. ಸೂಕ್ಷ್ಮಬುದ್ಧಿಯುಳ್ಳ ಈ ಹನುಮಂತನಿಗೆ ಆ ಸೀತೆಯ ವಿಷಯವಾಗಿ ಬೇರೆ ಚಿಂತೆಯುಂಟಾಯಿತು. ಅವನು ಆ ಸೀತಾದೇವಿಯ ಗುಣವನ್ನೇ ಮನಸ್ಸಿನಲ್ಲಿ ಭಾವಿಸುತ್ತ, "ಮಹಾಪತಿವ್ರತೆಯಾದ ಆ ಸೀತೆಯು ಪತಿಯಾದ ರಾಮನನ್ನಗಲಿರುವಾಗಲೂ ಹೀಗೆ ಸುಖವಾಗಿ ನಿದ್ರಿಸುವಳೆ! ಎಂದಿಗೂ ಇರದು! ಮೊದಲು ಆಹಾರವನ್ನೇ ಬಿಟ್ಟುಬಿಡುವಳು. ಹೀಗೆ ಅಲಂಕರಿಸಿಕೊಳ್ಳುವುದೆಂದರೇನು? ಅವಳಿಗೆ ಮದ್ಯಪಾನವೆಂದರೇನು? ರಾಮನನ್ನು ಹೊರತು ದೇವೇಂದ್ರನನ್ನಾದರೂ ಅವಳು ಸೇವಿಸತಕ್ಕವಳಲ್ಲ. ದೇವತೆಗಳಲ್ಲಿಯೂ ರಾಮನಿಗೆಣೆಯಾದ ಬೇರೊಬ್ಬ ಪುರುಷನಿಲ್ಲ. ಎಂದಿಗೂ ಇವಳು ಸೀತೆಯಲ್ಲ! ಇವಳು ಯಾರೋ ಬೇರೆಯಾಗಿರಬೇಕು," ಎಂದು ನಿಶ್ಚಯಿಸಿಕೊಂಡು, ಆಗಲೇ ಆ ಹನುಮಂತನು ಅಂತಃಪುರವನ್ನು ಬಿಟ್ಟುಹೊರಟು, ಅದರ ಸಮೀಪದಲ್ಲಿದ್ದ ಪಾನಭೂಮಿಗೆ ಬಂದು, ಅಲ್ಲಿ ಸುತ್ತಿ ನೋಡಿದನು. ಅಲ್ಲಿಯೂ ಕೆಲವು ಸ್ತ್ರೀಯರು ಮಲಗಿದ್ದುದನ್ನು ಕಂಡನು. ಅವರಲ್ಲಿಯೂ ಮನ್ಮಥಕ್ರೀಡೆಯಿಂದ ಬಳಲಿದವರು ಕೆಲವರು. ಮದ್ಯಪಾನದಿಂದ ಮೈಮರೆತು ಮಲಗಿದ್ದವರು ಕೆಲವರು. ಹಾಡಿಹಾಡಿ ಶ್ರಮಪಟ್ಟು ನಿದ್ರಿಸಿದವರು ಕೆಲವರು. ಮೈತಿಳಿಯದೆ ರಾತ್ರಿಯೆಲ್ಲವೂ ಕುಣಿದಾಡಿ ಆಯಾಸಪಟ್ಟು ಮಲಗಿದ್ದವರು ಕೆಲವರು. ಹಾಗೆಯೇ ತಾವು ಹಿಡಿದಿದ್ದ ಮದ್ದಲೆಗಳನ್ನೂ, ಮೃದಂಗಗಳನ್ನೂ, ತಾವು ಕುಳಿತಿದ್ದ ಪೀಠಗಳನ್ನೂ ತಲೆಗಿಟ್ಟು ಮಲಗಿದವರು ಕೆಲವರು. ಕ್ರಮವಾಗಿ ಹಾಸಿಗೆಯನ್ನು ಹಾಸಿ ಮಲಗಿದ್ದವರು ಕೆಲವರು. ಹೀಗೆ ನಾನಾರೀತಿಯಲ್ಲಿ ನಿದ್ರಾವಶರಾದ ಸ್ತ್ರೀಯರಿಂದ ತುಂಬಿದ ಆ ಪಾನಭೂಮಿಯನ್ನು ಹನುಮಂತನು ಒಂದಾವರ್ತಿ ಆಪಾತದಿಂದ ಕಣ್ಣಿಟ್ಟುನೋಡಿ, ಅಲ್ಲಿಯೂ ಸೀತೆಯನ್ನು ಕಾಣದೆ, ಅಲ್ಲಿಂದ ಹಿಂತಿರುಗಿ ಪುನಃ ರಾವಣನ ಶಯನಗೃಹಕ್ಕೇ ಬಂದನು. ಅಲ್ಲಿ ರಾವಣನ ಸುತ್ತಲೂ ಉತ್ತಮಸ್ತ್ರೀಯರು ಸಾವಿರಾರುಸಂಖ್ಯೆಯಿಂದ ಮಲಗಿರುವುದನ್ನು

ಕಂಡು, ಆ ಸ್ತ್ರೀಯರಲ್ಲಿ ಒಬ್ಬೊಬ್ಬರನ್ನೂ ಚೆನ್ನಾಗಿ ಗಮನಿಸಿ ನೋಡತೊಡಗಿದನು. ಅವರಲ್ಲಿ ಒಬ್ಬೊಬ್ಬರೂ ಸರ್ವಾಭರಣಭೂಷಿತರು! ಒಬ್ಬೊಬ್ಬರೂ ತಮ್ಮ ಪ್ರಿಯನಾದ ರಾವಣನ ರೂಪಸಂಪತ್ತಿಯನ್ನೇ ಹೇಳಿಹೇಳಿ ಹಿಗ್ಗುವ ಸ್ವಭಾವವುಳ್ಳವರು! ಒಬ್ಬೊಬ್ಬರೂ ಭರತಶಾಸ್ತ್ರಾನುಸಾರವಾಗಿ ಗಾನಗಳ ಅರ್ಥವನ್ನು ವಿವರಿಸುವ ಬುದ್ಧಿಚಾತುರ್ಯವುಳ್ಳವರು! ಒಬ್ಬೊಬ್ಬರೂ ದೇಶಕಾಲಗಳನ್ನು ಬಲ್ಲವರು. ಒಬ್ಬೊಬ್ಬರೂ ಕಾಲೋಚಿತವಾಗಿ ಮಾತಾಡತಕ್ಕವರು. ಇಂತಹ ಸ್ತ್ರೀಯರೊಡನೆ ರಾವಣನು ಯಥೇಚ್ಛವಾಗಿ ಬಾಹ್ಯಸುರತಗಳಿಂದಲೂ, ಬಂಧನವೈಚಿತ್ರ್ಯಗಳಿಂದಲೂ ರಮಿಸಿ, ಆಯಾಸದಿಂದ ಅವರ ನಡುವೆ ಮಲಗಿರುವುದನ್ನೂ ಕಂಡನು. ಈ ಸ್ತ್ರೀಯರನಡುವೆ ಮಲಗಿದ್ದ ಮಹಾಬಾಹುವಾದ ರಾವಣನು, ದನಗಳ ಮಂದೆಯ ನಡುವೆ ಶೋಭಿಸುವ ದೊಡ್ಡಗೂಳಿಯಂತಿದ್ದನು. ಮತ್ತು ಆ ಸ್ತ್ರೀಯರಿಂದ ಪರಿವೃತನಾದ ರಾಕ್ಷಸೇಶ್ವರನು, ಕಾಡಿನಲ್ಲಿ ಹೆಣ್ಣಾನೆಗಳ ಗುಂಪಿನಲ್ಲಿರುವ ಆನೆಯ ಸಲಗದಂತೆ ಕಾಣುತಿದ್ದನು. ಹನುಮಂತನು ಎಷ್ಟಾವರ್ತಿ ನೋಡಿದರೇನು? ಅವನಿಗೆ ಸೀತೆಯು ಗೋಚರಿಸಲಿಲ್ಲ. ಅಲ್ಲಿಂದ ಹಿಂತಿರುಗಿ ಪುನಃ ಪಾನಭೂಮಿಗೆ ಬಂದು ಅಲ್ಲಿಯೂ ಚೆನ್ನಾಗಿ ಹುಡುಕುವುದಕ್ಕಾರಂಭಿಸಿದನು. ಆ ಪ್ರದೇಶವಾದರೋ ರಾಕ್ಷಸರಿಗೆ ಬೇಕಾದ ಸಮಸ್ತ ವಸ್ತುಗಳಿಂದಲೂ ತುಂಬಿರುವುದು. ಒಂದು ಕಡೆಯಲ್ಲಿ ಜಿಂಕೆಗಳ ಮಾಂಸವೂ, ಮತ್ತೊಂದು ಕಡೆಯಲ್ಲಿ ಎಮ್ಮೆಗಳ ಮಾಂಸವೂ, ಮತ್ತೊಂದು ಕಡೆಯಲ್ಲಿ ಹಂದಿಗಳ ಮಾಂಸವೂ, ಬೇರೆಬೇರೆ ರಾಶಿಹಾಕಲ್ಪಟ್ಟಿರುವುವು. ಅಲ್ಲಲ್ಲಿ ವಿಸ್ತಾರವಾದ ಚಿನ್ನದ ತಟ್ಟೆಗಳಲ್ಲಿ ಅರ್ಧಕಚ್ಚಿ ಮಡಗಿದ ನವಿಲುಗಳೂ, ಕೋಳಿಗಳೂ ಕಾಣುತ್ತಿರುವುವು. ಒಂದು ಕಡೆಯಲ್ಲಿ ಹಂದಿಗಳನ್ನೂ, [1] ವಾರ್ಧ್ರಾಣಸವೆಂಬ

---

1. ವಾರ್ಧ್ರಾಣಸವೆಂದರೆ “ಕೃಷ್ಣಗ್ರೀವೋ ರಕ್ತಶಿರಾಶ್ಶ್ವೇತಪಕ್ಷೋ ವಿಹಂಗಮಃ” ಎಂಬಂತೆ ಕಪ್ಪಾದ ಕಂಠದಿಂದಲೂ, ಕೆಂಪಾದ ತಲೆಯಿಂದಲೂ, ಬಿಳೀ ರೆಕ್ಕೆಗಳಿಂದಲೂ ಕೂಡಿದ ಒಂದು ಬಗೆಯ ಹಕ್ಕಿಯೆಂದು ವಿಷ್ಣುಧರ್ಮದಲ್ಲಿ ಹೇಳಲ್ಪಟ್ಟಿರುವುದು. ಅಥವಾ “ತ್ರಿಪಿಬಂ ತ್ವಿಂದ್ರಿಯಕ್ಷೀಣಂ ಶ್ವೇತಂ ವೃದ್ಧಮಜಾಪತಿಂ। ವಾರ್ಧ್ರಾಣಸಂ ಚ ತಂ ಪ್ರಾಹುರ್ಯಾಜ್ಞಿಕಾಶ್ಶ್ರಾದ್ಧಕರ್ಮಣಿ॥” ಎಂಬುದಾಗಿ ಬಾಯಿ, ಕಿವಿ, ಮೂಗು ಈ ಮೂರವಯವಗಳಿಂದ ಪಾನಮಾಡುವ ಸ್ವಭಾವವುಳ್ಳುದಾಗಿ, ಇಂದ್ರಿಯಶೂನ್ಯವಾಗಿರುವ ಬಿಳೀಬಣ್ಣದ ಮುದುಮೇಕೆಯೆಂದು ಯಜ್ಞಶಾಸ್ತ್ರಜ್ಞರು ಹೇಳುವರು. ಮೇಲೆ ಹೇಳಿದ ಲಕ್ಷಣಗಳಿಂದಲೇ ಕೂಡಿ, ಯೂಪದ ಬಳಿಗೆ ಬಂದ ಕೆಂಪುಬಣ್ಣದ ಮೇಕೆಯೆಂದು ಮತ್ತೆ ಕೆಲವರು ಹೇಳುವರು. ಹಲಾಯುಧ ;ನಿಘಂಟುವಿನಲ್ಲಿ “ವಾರ್ಧ್ರಾಣಸಃ ಖಡ್ಗಮೃಗಃ” ಎಂಬುದಾಗಿ ಹೇಳಿರುವಂತೆ ಖಡ್ಗಮೃಗವೆಂಬ ಅರ್ಥವನ್ನೂ ಗ್ರಹಿಸಬಹುದು.

ಜಂತುಗಳನ್ನೂ ಪಕ್ವಮಾಡಿ ಉಪ್ಪುಹಾಕಿದ ಮೊಸರಿನಲ್ಲಿ ನೆನೆಸಿದ ಉಪ್ಪೇರಿಗಳು! ಮತ್ತೊಂದು ಕಡೆಯಲ್ಲಿ ಮುಳ್ಳುಹಂದಿಯ ಮಾಂಸಗಳು! ಬೇರೊಂದು ಕಡೆಯಲ್ಲಿ ಜಿಂಕೆಯ ಮಾಂಸಗಳು! ಇನ್ನೊಂದು ಕಡೆಯಲ್ಲಿ ನವಿಲಿನ ಮಾಂಸಗಳು! ಇವೆಲ್ಲವನ್ನೂ ನೋಡುತ್ತ ಬಂದನು. ಮತ್ತು ಅಲ್ಲಲ್ಲಿ ಚೆನ್ನಾಗಿ ಪಕ್ವಮಾಡಿ ಸಿದ್ಧಪಡಿಸಿದ ಕೃಕರಪಕ್ಷಿಯ ಮಾಂಸಗಳನ್ನೂ, ಅರ್ಧಭಕ್ಷಿತಗಳಾದ ಚಕೋರಗಳನ್ನೂ, ಚೆನ್ನಾಗಿ ಬೇಯಿಸಿದ ಎಮ್ಮೆಯ ಮಾಂಸಗಳನ್ನೂ, ಮೀನುಗಳನ್ನೂ, ಮೇಕೆಯ ಮಾಂಸಗಳನ್ನೂ ಕಂಡನು. ಇದಲ್ಲದೆ ಅಲ್ಲಲ್ಲಿ ಉತ್ತಮವಾದ ಲೇಹ್ಯವಸ್ತುಗಳನ್ನೂ, ಪಾನದ್ರವ್ಯಗಳನ್ನೂ, ಬಗೆಬಗೆಯ ಭೋಜನಪದಾರ್ಥಗಳನ್ನೂ ಕಂಡನು. ಉಪ್ಪುಹುಳಿಗಳನ್ನು ಮಾತ್ರ ಚೆನ್ನಾಗಿ ಎತ್ತಿ ತೋರಿಸುವಂತೆ ಪಕ್ವಮಾಡಿದ [1] ರಾಗಷಾಡಬಗಳೆಂಬ ಷಡ್ರಸೋಪೇತಗಳಾದ ಭಕ್ಷ್ಯವಿಶೇಷಗಳನ್ನು ಕಂಡನು. ಆ ಪಾನಭೂಮಿಯು ರಕ್ತಮಾಂಸಗಳಿಂದ ಭಯಂಕರವಾಗಿದ್ದರೂ, ಅಲ್ಲಲ್ಲಿ ಕಿತ್ತುಬಿದ್ದ ರಾಕ್ಷಸ ಸ್ತ್ರೀಯರ ಕಂಠಾಭರಣಗಳಿಂದಲೂ, ಕಾಲಂದುಗೆಗಳಿಂದಲೂ, ತೋಳ್ಬಳೆಗಳಿಂದಲೂ, ಪಾನಪಾತ್ರೆಗಳಿಂದಲೂ, ಬಗೆಬಗೆಯ ಹಣ್ಣುಗಳಿಂದಲೂ, ಅಲ್ಲಲ್ಲಿ ಚೆಲ್ಲಿದ ಹೂಗಳಿಂದಲೂ, ಒಂದು ವಿಶೇಷ ಕಾಂತಿಯಿಂದ ಕೂಡಿದಂತೆ ಪ್ರಕಾಶಿಸುತ್ತಿತ್ತು. ಅಲ್ಲಲ್ಲಿ ಚದರಿದ ರತ್ನಮಯಗಳಾದ ಶಯನಾಸನಗಳಿಂದ ಆ ಪಾನಭೂಮಿಯು ಬೆಂಕಿಯಿಲ್ಲದೆಯೇ ಉರಿಯುವಂತೆ ಕಾಣುತಿತ್ತು. ಮತ್ತು ಅಲ್ಲಿ ಚತುರರಾದ ಅಡಿಗೆಯವರಿಂದ ಬೇರೆಬೇರೆ ವಿಧದಲ್ಲಿ ಸಂಸ್ಕರಿಸಿಡಲ್ಪಟ್ಟ ಬಗೆಬಗೆಯ ಮಾಂಸಗಳು ರಾಶಿಹಾಕಲ್ಪಟ್ಟಿದ್ದುವು. ಹನುಮಂತನು ಇವೆಲ್ಲವನ್ನೂ ನೋಡುತ್ತ ಬಂದು, ಮುಂದೆ ಬಗೆಬಗೆಯ ಮದ್ಯವಿಶೇಷಗಳಿಂದ ತುಂಬಿದ ಪಾತ್ರೆಗಳ ಸಾಲನ್ನು ಕಂಡನು. ಆ ಮದ್ಯಗಳಲ್ಲಿ ಅಮೃತಮಥನ ಕಾಲದಿಂದಲೂ ಸಂಗ್ರಹಿಸಲ್ಪಟ್ಟ ದೇವಯೋಗ್ಯವಾದ ಮದ್ಯಗಳು ಕೆಲವು. ಶರ್ಕರೆಯಿಂದ ತೆಗೆದ

---

1. ರಾಗವೆಂದರೆ ಬಿಳೀಸಾಸುವೆಯೆಂದೂ, ಷಾಡಬವೆಂದರೆ ಷಡ್ರಸಮಿಶ್ರವಾದ ಒಂದು ಬಗೆಯ ಭಕ್ಷ್ಯವೆಂದೂ ಸೂಪಶಾಸ್ತ್ರವು. ಆದರೆ ಪ್ರದೀಪವೆಂಬ ಗ್ರಂಥದಲ್ಲಿ "ಸಿತಾಮಧ್ವಾದಿ ಮಧುರಾ ರಾಗಾಸ್ತೇ ಸ್ವಚ್ಛತಾಂ ಗತಾಃ । ತೇ ಸಾನ್ದ್ರಾಃ ಷಾಡಬಾ ಲೇಹ್ಯಾಸ್ತೇ ವಸ್ತ್ರಗಳಿತಾ ಇತಿ ॥ ಸಿತಾಮಧ್ವಾದಿಮಧುರೋ ದ್ರಾಕ್ಷಾ ದಾಡಿಮಜೋ ರಸಃ । ವಿರಳಶ್ಚೇತ್ಕೃತೋ ರಾಗಸ್ಸಾಂದ್ರಶ್ಚೇತ್ ಷಾಡಬಸ್ಸ್ಮೃತಃ ॥" ಎಂಬುದಾಗಿ, ಸಕ್ಕರೆ, ಜೇನು, ದ್ರಾಕ್ಷೆ, ದಾಳಿಂಬ, ಇವುಗಳ ರಸದಿಂದ ಮಾಡಿದ ಪಾಕವು ರಾಗವೆಂದೂ, ಅದನ್ನೇ ಬಟ್ಟೆಯಲ್ಲಿ ಶೋಧಿಸಿದ ರಸವು ಷಾಡಬವೆಂದೂ ಕರೆಯಲ್ಪಡುವುದಾಗಿ ಹೇಳಿದ,

ಮದ್ಯಗಳು ಕೆಲವು. ಜೇನಿನಿಂದ ಮಾಡಿದ ಮದ್ಯಗಳು ಕೆಲವು ಪುಷ್ಪರಸ ದಿಂದ ತೆಗೆದ ಮದ್ಯಗಳು ಕೆಲವು. ಹಣ್ಣುಗಳ ರಸದಿಂದ ತೆಗೆದ ಮದ್ಯಗಳು ಕೆಲವು. ಹೀಗೆ ನಾನಾಬಗೆಯ ಮದ್ಯಗಳನ್ನು ಕಂಡನು. ಮತ್ತು ಈ ಮದ್ಯ ಮಾಂಸಗಳ ಮೇಲೆ ವಾಸನಾರ್ಥವಾಗಿ ಚೆಲ್ಲಿದ ಸಾಂಬಾರದ ಪುಡಿಗಳನ್ನೂ ಕಂಡನು. ಹೀಗೆ ಬೇರೆಬೇರೆ ವಿಧದಿಂದ ಸಂಸ್ಕರಿಸಿಡಲ್ಪಟ್ಟ ಮದ್ಯಮಾಂಸ ಗಳಿಂದಲೂ, ಚಿತ್ರವಿಚಿತ್ರಗಳಾದ ಪುಷ್ಪಮಾಲಿಕೆಗಳಿಂದಲೂ, ಬಂಗಾರದ ಗಿಂಡಿ ಗಳಿಂದಲೂ, ಅತಿಮನೋಹರವಾಗಿದ್ದ ಆ ಪಾನಭೂಮಿಯೆಲ್ಲವನ್ನೂ ಆಂಜ ನೇಯನು ಸುತ್ತಿನೋಡಿದನು. ನಡುನಡುವೆ ಬೆಳ್ಳಿಬಂಗಾರದ ಪಾತ್ರೆಗಳಲ್ಲಿ ಪೂರ್ಣವಾಗಿ ತುಂಬಿಟ್ಟ ಮೇಲಾದ ರಸಾಯನಗಳನ್ನೂ, ಮತ್ತು ಅಲ್ಲಲ್ಲಿ ಇನ್ನೂ ಬೇರೆಬೇರೆ ರಸದ್ರವ್ಯಗಳಿಂದ ತುಂಬಿದ ಬೆಳ್ಳಿ ಬಂಗಾರದ ಪಾತ್ರೆಗಳನ್ನೂ, ರತ್ನಮಯವಾದ ಪಾತ್ರೆಗಳನ್ನೂ ಕಂಡನು. ಅವುಗಳಲ್ಲಿ ಅರ್ಧಕುಡಿದು ಮಿಗಿಸಿದ ಪಾತ್ರೆಗಳು ಕೆಲವು. ನಿಶ್ಶೇಷವಾಗಿ ಕುಡಿ ದಿಟ್ಟ ಬರೀಪಾತ್ರೆಗಳು ಕೆಲವು. ಕುಡಿಯದೆ ತುಂಬಿಟ್ಟಿದ್ದ ಪಾತ್ರೆಗಳು ಕೆಲವು! ಇವೆಲ್ಲವನ್ನೂ ನೋಡುತ್ತ ಬಂದನು. ಹೀಗೆ ಒಂದು ಕಡೆಯಲ್ಲಿ ಬಗೆ ಬಗೆಯ ಭಕ್ಷ್ಯದ ಸಾಲುಗಳನ್ನೂ, ಮತ್ತೊಂದು ಕಡೆಯಲ್ಲಿ ಅವರವರಿಗಾಗಿ ವಿಭಾಗಿಸಿಡಲ್ಪಟ್ಟ ಮದ್ಯಗಳನ್ನೂ, ಬೇರೊಂದು ಕಡೆಯಲ್ಲಿ ಅರ್ಧತಿಂದು ಮಿಗಿಸಿದ ಅನ್ನದ ಸಾಲುಗಳನ್ನೂ ನೋಡುತ್ತ ಬಂದನು. ಮತ್ತು ಅಲ್ಲಲ್ಲಿ ಒಡೆದು ಬಿದ್ದ ಕರಗಗಳನ್ನೂ, ಉರುಳಾಡುತಿದ್ದ ಗಡಿಗೆಗಳನ್ನೂ, ಕಿತ್ತೆಸೆದ ಪುಷ್ಪಹಾರಗಳನ್ನೂ, ಉದಿರಿದ ಹಣ್ಣುಗಳನ್ನೂ, ನಾನಾರೀತಿಯಲ್ಲಿ ಕೆದರಿದ ಹಾಸಿಗೆಗಳನ್ನೂ, ಅಲ್ಲಲ್ಲಿ ಚೆಲ್ಲಿದ ಮದ್ಯಗಳನ್ನೂ ನೋಡಿದನು. ಅಲ್ಲಿನ ಸ್ತ್ರೀಯರಲ್ಲಿ ಒಬ್ಬರನ್ನೊಬ್ಬರು ಆಲಿಂಗಿಸಿ ಮಲಗಿದ್ದವರು ಕೆಲವರು! ನಿದ್ರೆಯಲ್ಲಿ ಮೈತಿಳಿಯದೆ ಮತ್ತೊಬ್ಬರ ಸೀರೆಯನ್ನು ಸೆಳೆದು ತಮ್ಮ ಮೈಗೆ ಸುತ್ತಿಕೊಂಡು ಮಲಗಿದ್ದವರು ಕೆಲವರು! ಈ ಬಗೆಯ ವೈಚಿತ್ರ್ಯಗಳನ್ನೂ ನೋಡುತ್ತ ಬಂದನು. ಅವರ ಉಸಿರಿನ ಗಾಳಿ ಯಿಂದ ಅವರ ಮೇಲೆ ಹಾಕಿದ್ದ ಬಟ್ಟೆಯೂ, ಧರಿಸಿದ್ದ ಪುಷ್ಪಹಾರವೂ, ಮಂದ ಮಾರುತದಿಂದ ಅಲುಗುವಂತೆ ಮೆಲ್ಲಗೆ ಅಲುಗುತಿದ್ದುವು. ಅಲ್ಲಲ್ಲಿ ಶೀತಲವಾದ ಚಂದನವನ್ನೂ, ರುಚಿಯಾದ ಮದ್ಯವನ್ನೂ, ಬಗೆಬಗೆಯ ಪುಷ್ಪಮಾಲಿಕೆಗಳನ್ನೂ, ಅನೇಕವಿಧದ ಧೂಪಗಳನ್ನೂ, ನಾನಾರಸಾದಿಗಳನ್ನೂ, ಸ್ನಾನಾರ್ಹಗಳಾದ ಚಂದನಗಳನ್ನೂ, ತಲೆಗೆ ಕಾಯಿಸುವ ಉತ್ತಮಧೂಪಗಳನ್ನೂ ಸ್ಪರ್ಶಿಸಿ, ಅವುಗಳ ಗಂಧವನ್ನು ಹೊತ್ತು ಬೀಸುತಿದ್ದ ಸುಗಂಧವಾಯುವು ಆ ಪುಷ್ಪಕವಿಮಾನ

ವನ್ನೆಲ್ಲಾ ತುಂಬುವಂತೆ ವ್ಯಾಪಿಸಿತು. ಅಲ್ಲಿದ್ದ ಸ್ತ್ರೀಯರಲ್ಲಿ ಶ್ಯಾಮವರ್ಣವುಳ್ಳವರು ಕೆಲವರು. ಬಿಳುಪಾದ ದೇಹಕಾಂತಿಯುಳ್ಳವರು ಕೆಲವರು. ಕಪ್ಪುಮೈಯುಳ್ಳವರು ಕೆಲವರು. ಹೊಂಬಣ್ಣದ ಮೈಯುಳ್ಳವರು ಕೆಲವರು. ಹೀಗೆ ಆ ನಿವೇಶನದಲ್ಲಿ ಮಲಗಿದ್ದ ನಾನಾಬಣ್ಣದ ಸ್ತ್ರೀಯರನ್ನೂ ಕಂಡನು. ನಿದ್ರೆಯಿಂದಲೂ, ಮದ್ಯಪಾನದಿಂದಲೂ ಮತ್ತೇರಿ ಮಲಗಿದ್ದ ಆ ಸ್ತ್ರೀಯರು ರಾತ್ರಿಯಲ್ಲಿ ಮುಕುಳಿತವಾಗಿ ಮಲಗಿದಂತಿದ್ದ ಕಮಲದ ಬಳ್ಳಿಗಳಂತೆ ತೋರುತಿದ್ದರು. ಮಹಾತೇಜಸ್ವಿಯಾದ ಆ ಕಪಿವೀರನು, ಹೀಗೆ ರಾವಣನ ಅಂತಃಪುರಪ್ರದೇಶವೆಲ್ಲವನ್ನೂ ಚೆನ್ನಾಗಿ ಸುತ್ತಿ ನೋಡಿದರೂ ಎಲ್ಲಿಯೂ ಸೀತೆಯನ್ನು ಕಾಣಲಿಲ್ಲ. ಅಲ್ಲಿ ಮಲಗಿದ್ದ ಸ್ತ್ರೀಯರನ್ನು ನೋಡಿದಮೇಲೆ ಅವನಿಗೆ ಪರಸ್ತ್ರೀಯರನ್ನು ನೋಡುವುದರಿಂದ ಧರ್ಮಕ್ಕೆ ಹಾನಿಯುಂಟಾಗುವುದೆಂಬ ಭಯವು ಮನಸ್ಸಿನಲ್ಲಿ ನೆಲೆಗೊಂಡಿತು. ಆದರಿಂದ ಅವನಿಗೆ ಮಿತಿಮೀರಿದ ಚಿಂತೆಯೂ ಉಂಟಾಯಿತು. ಆದರಿಂದ ಅವನು ಮನಸ್ಸಿನಲ್ಲಿ ಕಳವಳಿಸುತ್ತ "ಆಃ! ಹೀಗೆ ಅಂತಃಪುರದಲ್ಲಿ ಮಲಗಿರುವ ಪರಸ್ತ್ರೀಯರನ್ನು ನೋಡುವುದು ಕೇವಲ ಧರ್ಮವಿರುದ್ಧವು. ನಾನು ಇದುವರೆಗೆ ಎಂದಿಗೂ ಪರಸ್ತ್ರೀಯರನ್ನು ಕಣ್ಣೆಟ್ಟು ನೋಡಿದವನಲ್ಲ. ಛೀ! ಈಗ ನಾನು ಮಾಡಿದುದೇನೋ ಬಹಳ ತಪ್ಪು ಕೆಲಸವು. ಹೀಗೆ ಪರಸ್ತ್ರೀಯರನ್ನು ನೋಡಿದ ಮಹಾದೋಷಕ್ಕೆ ಪಾತ್ರನಾದೆನಲ್ಲಾ!" ಎಂದು ಚಿಂತಾಕ್ರಾಂತನಾಗಿ ಕೊರಗುತಿದ್ದನು. ಆ ಹನುಮಂತನ ಮನಸ್ಸಾದರೋ ಬಹಳ ಉದಾರವಾದುದು. ಯಾವಾಗಲೂ, ಯಾವ ಕಾರಣದಿಂದಲೂ ವಿಕಾರವನ್ನು ಹೊಂದದೆ ಸ್ಥಿರವಾಗಿರುವುದು. ಆದುದರಿಂದ ಆಗಲೂ ಅವನಿಗೆ ಮುಂದಿನ ಕಾರ್ಯಕ್ಕೆ ಉತ್ಸಾಹವನ್ನು ತಗ್ಗಿಸದಂತೆ ಒಂದಾಲೋಚನೆಯು ತೋರಿತು. "ಇಲ್ಲಿಗೆ ಪರಪುರುಷರ ಪ್ರವೇಶಕ್ಕೆ ಸ್ವಲ್ಪವೂ ಅವಕಾಶವಿಲ್ಲವೆಂಬ ದೃಢವಾದ ನಂಬಿಕೆಯಿಂದಲೇ ಈ ರಾವಣಸ್ತ್ರೀಯರೆಲ್ಲರೂ ನಿರ್ಲಜ್ಜರಾಗಿ ಮೈಮರೆತು ನಿದ್ರಿಸುತ್ತಿರುವರು. ಈ ಸ್ಥಿತಿಯಲ್ಲಿ ಇವರನ್ನು ನಾನು ನೋಡುತ್ತಿರುವುದು ತಪ್ಪು! ಅದರೇನು! ಹೀಗೆ ನಿರ್ವಾಣದಲ್ಲಿರುವ ಸ್ತ್ರೀಯರನ್ನು ನೋಡಿದರೂ, ನನ್ನ ಮನಸ್ಸಿಗೆ ಸ್ವಲ್ಪವಾದರೂ ವಿಕಾರವುಂಟಾಗಿಲ್ಲ. ನೋಡಿದರೂ ಇದರಿಂದ ನನಗೆ ಯಾವ ದೋಷವೂ ಇರದು. ಎಲ್ಲಾ ಇಂದ್ರಿಯಗಳ ಪ್ರವರ್ತನೆಗೂ ಮನಸ್ಸೇ ಕಾರಣವು. ಸದ್ವಿಷಯಗಳಿಗಾಗಲಿ, ದುರ್ವಿಷಯಗಳಿಗಾಗಲಿ, ಮನಸ್ಸೇ ಮಾರ್ಗದರ್ಶಿಯಾಗಿರುವುದು. ಆ ಮನಸ್ಸೇ ನನ್ನ ಅಧೀನವಾಗಿ ಸ್ಥಿರವಾಗಿರುವಾಗ ಇನ್ನು ಬೇರೆ ದೋಷಗಳಿಗೆ ಅವಕಾಶವೇನುಂಟು? ಆದರೆ ಈಗ ನಾನು ಸೀತೆಯನ್ನು ಕಾಣುವುದೆಲ್ಲಿ? ಆ ಸೀತೆಯನ್ನು ಬೇರೆ ಕಡೆಯಲ್ಲಿ ಹುಡುಕುವುದರಿಂದ ಪ್ರಯೋ

ಜನವಿಲ್ಲ. ಹೆಂಗಸು ಹೆಂಗಸರ ಗುಂಪಿನಲ್ಲಿಯೇ ಇರಬೇಕೆಂಬುದು ಸಿದ್ಧವು. ಅದು ದರಿಂದ ಈ ಗುಂಪಿನಲ್ಲಿಯೇ ಆ ಸೀತೆಯನ್ನು ಕಂಡುಹಿಡಿಯಬೇಕೇ ಹೊರತು ಬೇರೆ ದಾರಿಯಿಲ್ಲ. ಯಾವಜಂತುವು ಯಾವಜಾತಿಗೆ ಸೇರಿದುದೋ ಆ ಜಾತಿಯನ್ನು ಬಿಟ್ಟುಬೇರೆ ಕಡೆಗಳಲ್ಲಿ ಸುತ್ತುವುದರಿಂದ ಫಲವಿಲ್ಲ. ನಷ್ಟಳಾದ ಹೆಂಗಸನ್ನು ಮೃಗಗಳ ಗುಂಪಿನಲ್ಲಿ ಹುಡುಕುವುದರಿಂದ ಫಲವೇನು ? ಹಾಗೆಮಾಡಿ ಪ್ರಯೋಜನ ವಿಲ್ಲ. ನಾನಾದರೋ ಶುದ್ಧವಾದ ಮನಸ್ಸಿನಿಂದ ಈ ರಾವಣಾಂತಃಪುರವೆಲ್ಲವನ್ನೂ ಹುಡುಕಿದೆನು. ಇಷ್ಟಾದರೂ ಸೀತೆಯನ್ನು ಕಾಣಲಿಲ್ಲ. ಇನ್ನೇನುಮಾಡಲಿ?' ಎಂದು ಬಹಳವಾಗಿ ಚಿಂತಿಸುತಿದ್ದನು. ಅಸಾಧಾರಣವೀರ್ಯವುಳ್ಳ ಆ ಹನುಮಂತನು ರಾವ ಣಾಂತಃಪುರದಲ್ಲಿ ಎಷ್ಟೋ ದೇವಕನ್ಯೆಯರನ್ನೂ, ನಾಗಕನ್ಯೆಯರನ್ನೂ, ಗಂಧರ್ವ ಕನ್ಯೆಯರನ್ನೂ ಕಂಡನು. ಸೀತೆಯನ್ನು ಮಾತ್ರಕಾಣಲಿಲ್ಲ. ಹಾಗೆಯೇ ಆ ಕಪಿ ವೀರನು ಸುತ್ತಿಸುತ್ತಿ ಬಂದು, ಅಲ್ಲಿದ್ದ ಸ್ತ್ರೀಯರಲ್ಲಿ ಒಬ್ಬೊಬ್ಬರನ್ನೂ ನೋಡಿ, ಸೀತೆಯನ್ನು ಕಾಣದೆ, ಅಲ್ಲಿಂದ ಹಿಂತಿರುಗಿ, ತನ್ನಲ್ಲಿ ತಾನು ನಾನಾವಿಧವಾಗಿ ಚಿಂತಿಸುತಿದ್ದನು. ಪಾನಭೂಮಿಯೆಲ್ಲವನ್ನೂ ಚೆನ್ನಾಗಿ ನೋಡಿ, ಪುನಃ ಅಂತಃ ಪುರಕ್ಕೆ ಬಂದು ಅಲ್ಲಿಯೇ ತಿರುಗಿ ಹುಡುಕುವುದಕ್ಕಾರಂಭಿಸಿದನು.

ಇಲ್ಲಿಗೆ ಹನ್ನೊಂದನೆಯ ಸರ್ಗವು.

---

ಹನುಮಂತನು ಸೀತೆಯನ್ನು ಕಾಣದುದಕ್ಕಾಗಿ ಶೋಕಿಸುತ್ತ, ತಿರುಗಿ ರಾವಣಾಂತಃಪುರಕ್ಕೆ ಬಂದು ಹುಡುಕಿದುದು.

ಆ ಮೇಲೆ ವಾಯುಪುತ್ರನಾದ ಅಂಜನೇಯನು ಆ ರಾಕ್ಷಸಗೃಹದ ನಡುವೆ ಅಲಂಕಾರಾರ್ಥವಾಗಿ ರಚಿಸಿದ ಬಳ್ಳಿಮನೆಗಳನ್ನೂ, ಚಿತ್ರಶಾಲೆಗಳನ್ನೂ, ಚಂದ್ರ ಶಾಲೆಗಳನ್ನೂ ಸುತ್ತಿನೋಡಿ, ಎಲ್ಲಿಯೂ ಸೀತೆಯನ್ನು ಕಾಣದೆ ಚಿಂತೆಯಿಂದ ಕಳವಳಿಸುತಿದ್ದನು. ಪ್ರಿಯದರ್ಶನೆಯಾದ ಆ ಸೀತೆಯನ್ನು ಕಾಣಬೇಕೆಂಬ ಆಶೆಯು ಈತನಿಗೆ ಮೇಲೆಮೇಲೆ ಹೆಚ್ಚಿತು. ಇವನ ಮನಸ್ಸಿನಲ್ಲಿ ನಾನಾವಿಧವಾದ ಚಿಂತೆ ಯುಂಟಾಯಿತು. ಆಗ ತನ್ನಲ್ಲಿ ತಾನು "ಆಃ! ನಾನು ಎಷ್ಟು ಹುಡುಕಿದರೂ ರಾಮನ ಪ್ರಿಯಪತ್ನಿಯಾದ ಸೀತೆಯು ಸಿಕ್ಕಲಿಲ್ಲವಲ್ಲಾ ! ಇದರಿಂದ ಆ ಸೀತೆಯು ನಿಶ್ಚಯವಾಗಿ ಮರಣವನ್ನೇ ಹೊಂದಿರಬೇಕು. ಜನಕಪುತ್ರಿಯಾದ ಆ ಸೀತೆಯು

ಪಾತಿವ್ರತ್ಯವೆಂಬ ತನ್ನ ಸ್ತ್ರೀಉತ್ತಮಧರ್ಮವನ್ನೂ, ಸದಾಚಾರವನ್ನೂ ಎಂದಿಗೂ ತಪ್ಪುವವಳಲ್ಲ. ಈ ಪ್ರಯತ್ನದಲ್ಲಿ ರಾವಣನ ಕೋಪಕ್ಕೆ ಪಾತ್ರಳಾಗಿ, ಆ ನೀಚನ ದುರ್ವಾಕ್ಯಕ್ಕೆ ಕಿವಿಗುಡದೆ ಅತನಿಂದ ಸಂಹೃತಳಾಗಿರಬಹುದೆ? ಅಯ್ಯೋ! ನೀಚನಾದ ಆ ರಾವಣನಾದರೋ ದುಷ್ಕಾರ್ಯಗಳನ್ನು ನಡೆಸತಕ್ಕ ವಿಷಯದಲ್ಲಿ ಹಿಂದುಮುಂದು ನೋಡುವವನಲ್ಲ. ಹಾಗಿಲ್ಲವೇ ಒಂದುವೇಳೆ ಸೀತೆಯು ಇಲ್ಲಿನ ರಾಕ್ಷಸಸ್ತ್ರೀಯರ ಘೋರಾಕೃತಿಗಳನ್ನು ನೋಡಿ ಭಯದಿಂದ ತಾನಾಗಿಯೇ ಪ್ರಾಣವನ್ನು ಬಿಟ್ಟಿರಬೇಕು! ಇಲ್ಲಿನ ರಾಕ್ಷಸ ಸ್ತ್ರೀಯರೋ ಅತಿಘೋರವಾದ ರೂಪವುಳ್ಳವರು. ಮುಖದಲ್ಲಿ ಸ್ವಲ್ಪವಾದರೂ ವರ್ಚಸ್ಸಿಲ್ಲದವರು! ಅವರ ವೇಷವೂ ಅತಿವಿಕಾರವಾಗಿರುವುದು. ಇವರ ದೊಡ್ಡ ಮೂತಿಗಳನ್ನೂ, ಇವರ ಬಿಚ್ಚಿದ ಕಣ್ಣುಗಳನ್ನೂ ನೋಡಿದಮಾತ್ರಕ್ಕೆ ಭಯದಿಂದ ಎದೆಯೊಡೆದು ಸಾಯುವಂತಿರುವುದು. ಸಹಜವಾಗಿಯೇ ಭೀರುಸ್ವಭಾವವುಳ್ಳ ಸೀತೆಯು ಇವರನ್ನು ನೋಡಿ ಹೇಗೆ ಸಹಿಸಬಲ್ಲಳು! ಅಯ್ಯೋ! ನಾನು ಇಲ್ಲಿಗೆ ಬಂದು ಸೀತೆಯನ್ನೂ ನೋಡದೆ, ನನ್ನ ಪರಾಕ್ರಮವನ್ನೂ ತೋರಿಸದೆ, ನನ್ನ ಮಿತ್ರರಾದ ವಾನರರೊಡನೆ ವ್ಯರ್ಥವಾಗಿ ಬಹುಕಾಲವನ್ನೂ ಕಳೆದು, ಹೇಗೆ ಹಿಂತಿರುಗಿ ಸುಗ್ರೀವನಬಳಿಗೆ ಹೋಗಲಿ? ನಾನು ಅಲ್ಲಿಗೆ ಹೋದರೂ ಸುಗ್ರೀವನು ನನ್ನನ್ನು ಸುಮ್ಮನೆ ಬಿಡಲಾರನು. ಅತನೋ ಬಹಳಕ್ರೂರವಾಗಿ ದಂಡಿಸತಕ್ಕವನು. ಬಹಳ ಬಲಾಢ್ಯನು. ಅವನು ನನ್ನನ್ನು ಕೊಲ್ಲುವುದೇ ನಿಜವು. ಇಲ್ಲಿನ ಅಂತಃಪುರವೆಲ್ಲವನ್ನೂ ನೋಡಿದೆನು. ರಾವಣಪತ್ನಿಯರೆಲ್ಲರನ್ನೂ ನೋಡಿದುದಾಯಿತು. ಪತಿವ್ರತೆಯಾದ ಸೀತೆಯುಮಾತ್ರ ನನ್ನ ಕಣ್ಣಿಗೆ ಬೀಳಲಿಲ್ಲ. ಅಯ್ಯೋ! ನಾನು ಇಷ್ಟು ಶ್ರಮಪಟ್ಟುದೂ ವ್ಯರ್ಥವಾಯಿತಲ್ಲಾ! ನಾನು ಸುಮ್ಮನೆ ಹಿಂತಿರುಗಿಹೋದರೆ ಮಹೇಂದ್ರಪರ್ವತದಲ್ಲಿ ನನಗಾಗಿ ಕಾದಿರುವ ವಾನರರಾದರೂ ನನ್ನನ್ನು ಏನೆಂದು ಹೇಳುವರು? ನಾನು ಅವರಮುಂದೆ ನಿಂತೊಡನೆಯೇ, ಅವರೆಲ್ಲರೂ ಆತುರದಿಂದ ಒಟ್ಟಾಗಿ ಬಂದು “ನೀನು ಲಂಕೆಗೆ ಹೋಗಿ ಏನುಮಾಡಿ ಬಂದೆ? ಬೇಗನೆ ಹೇಳು” ಎಂದು ಕೇಳುವರಲ್ಲವೆ! ಜನಕಪುತ್ರಿಯನ್ನು ಕಾಣದೆ ಅಲ್ಲಿಗೆ ನಾನು ಹೋದರೆ ಅವರಿಗೆ ಯಾವ ಪ್ರತ್ಯುತ್ತರವನ್ನು ಕೊಡಲಿ? ಸುಗ್ರೀವನು ನಿರ್ಣಯಿಸಿದ್ದ ಕಾಲವೂ ಮೀರಿಹೋಯಿತು! ಆಗಲೇ ಅಂಗದಾದಿಗಳೆಲ್ಲರೂ ಭಯಪಟ್ಟು ಪ್ರಾಯೋಪವೇಶಕ್ಕೆ ಪ್ರಯತ್ನಿಸಿದ್ದರು. ನಾನು ಇನ್ನೂ ಇಲ್ಲಿಯೇ ಸಾವಕಾಶ ಮಾಡಿನಿಂತರೆ ಅವರು ಮೊದಲಿನಂತೆಯೇ ಪ್ರಾಯೋಪವೇಶದಿಂದ ಸಾಯುವುದರಲ್ಲಿ ಸಂದೇಹವಿಲ್ಲ! ನಾನು ಅಲ್ಲಿಗೆ ಹೋದರೆ, ವೃದ್ಧನಾದ ಜಾಂಬವಂತನೂ, ಯುವರಾಜನಾದ ಅಂಗದನೂ, ನನ್ನನ್ನು ಕುರಿತು ಏನೆಂದು ಹೇಳುವರು? ಇಷ್ಟು

ಪ್ರಯತ್ನಮಾಡಿ ಸಮುದ್ರವನ್ನು ದಾಟಿ, ಕೊನೆಗೂ ಸೀತೆಯನ್ನು ಕಾಣದೆ ಬಂದ ನನ್ನನ್ನು ಅವರೆಲ್ಲರೂ ಸೇರಿ ಹೀಗಳೆಯದೆ ಬಿಡುವರೆ? ಛೀ! ಹೀಗೆ ಧೈರ್ಯಗೆಡಬಾರದು! ಉತ್ಸಾಹವೇ ಸಮಸ್ತಸಂಪತ್ತಿಗೂ ಮೂಲವು. ಉತ್ಸಾಹವೇ ಮೇಲಾದ ಸುಖವು. ಉತ್ಸಾಹವೆಂಬುದೇ ಯಾವಾಗಲೂ ಸಮಸ್ತ ಕಾರ್ಯಗಳನ್ನೂ ನಡೆಸುವುದು. ಉತ್ಸಾಹವಿಲ್ಲದಿದ್ದರೆ ಯಾವ ಕೆಲಸವೂ ನಡೆಯದು. ಯಾವಕಾರ್ಯವನ್ನು ಹಿಡಿದರೂ ಉತ್ಸಾಹವೇ ಅದನ್ನು ಕೊನೆಮುಟ್ಟಿಸುವುದು. ಆದುದರಿಂದ ನಾನೂ ಈಗ ಅಧೈರ್ಯವನ್ನು ಬಿಟ್ಟು ಉತ್ಸಾಹವನ್ನೇ ಅವಲಂಬಿಸಿ, ಆ ಉತ್ಸಾಹದಿಂದಲೇ ಮತ್ತೊಮ್ಮೆ ಸೀತೆಯನ್ನು ಹುಡುಕುವುದಕ್ಕೆ ಪ್ರಯತ್ನಿಸುವೆನು. ಇಲ್ಲಿ ರಾವಣನ ಅಳ್ವಿಕೆಗೊಳಪಟ್ಟ ಸಮಸ್ತ ಭಾಗಗಳನ್ನೂ ಹುಡುಕಿಬರುವೆನು. ಇದುವರೆಗೆ ಪಾನಭೂಮಿಯನ್ನು ಹುಡುಕಿದುದಾಯಿತು. ಪುಷ್ಪಗೃಹಗಳನ್ನು ನೋಡಿದುದಾಯಿತು. ಚಿತ್ರಶಾಲೆಗಳನ್ನೂ ಹುಡುಕಿದೆನು. ಕ್ರೀಡಾಗೃಹಗಳನ್ನೂ ಸುತ್ತಿಬಂದೆನು. ಗೃಹೋದ್ಯಾನಗಳಲ್ಲಿರುವ ಬೀದಿಗಳನ್ನೂ ಹುಡುಕಿದೆನು. ವಿಮಾನಗಳನ್ನೂ ಒಳಹೊಕ್ಕು ನೋಡಿದೆನು. ಎಲ್ಲವನ್ನೂ ಎಲ್ಲಾವಿಧದಿಂದಲೂ ಹುಡುಕಿದುದಾಯಿತಲ್ಲಾ! ಇನ್ನು ನೋಡಬೇಕಾದ ಸ್ಥಳವಾವುದು? ಆದರೇನು? ಮತ್ತೊಂದಾವರ್ತಿ ಅವುಗಳನ್ನೇ ನೋಡಿಬರುವೆನು" ಎಂದು ನಿಶ್ಚಯಿಸಿಕೊಂಡನು. ಹೀಗೆ ನಿಶ್ಚಯಮಾಡಿಕೊಂಡು ಹೊರಟು, ತಿರುಗಿ ಆ ಪಟ್ಟಣಪ್ರದೇಶಗಳನ್ನೆಲ್ಲಾ ಹುಡುಕುವುದಕ್ಕಾರಂಭಿಸಿದನು. ಅಲ್ಲಲ್ಲಿ ನೆಲಮಾಳಿಗೆಗಳನ್ನೂ, ನಾಲ್ಕುಬೀದಿಗಳ ಚೌಕದಲ್ಲಿರುವ ಮಂಟಪಗಳನ್ನೂ, ಮನೆಗಳನ್ನೂ, ತೋಟದ ಮನೆಗಳನ್ನೂ ಹುಡುಕಲಾರಂಭಿಸಿದನು. ಇವನು ಹೀಗೆ ಹುಡುಕುತ್ತಬರುವಾಗ ಹಾರುವ ಕಡೆಗಳಲ್ಲಿ ಹಾರುವನು! ಧುಮುಕುವ ಕಡೆಗಳಲ್ಲಿ ಧುಮುಕುವನು! ನಿಲ್ಲಬೇಕಾದ ಕಡೆಗಳಲ್ಲಿ ನಿಲ್ಲುವನು. ನಡೆಯಬೇಕಾದ ಕಡೆಗಳಲ್ಲಿ ನಡೆಯುವನು. ಮುಚ್ಚಿದ ಬಾಗಿಲುಗಳನ್ನು ತೆಗೆಯುವನು. ಕದಗಳನ್ನು ತಿಕ್ತಿಸೆಯುವನು. ಒಂದೊಂದು ಮನೆಗೂ ಪ್ರವೇಶಿಸುವನು. ಅಲ್ಲಲ್ಲಿ ನೋಡಿ ಹಿಂತಿರುಗಿ ಬರುವನು. ಹೀಗೆ ಆ ಮಹಾವೀರನು ಆ ಪಟ್ಟಣದ ಒಂದೊಂದು ಮೂಲೆಯನ್ನೂ ಸುತ್ತಿನೋಡಿದನು. ಆ ರಾವಣಾಂತಃಪುರದಲ್ಲಿ ಈತನು ಹೋಗಿ ನೋಡದ ಒಂದು ಸ್ಥಳವಾದರೂ ಇರಲಿಲ್ಲ. ಅಲ್ಲಿ ನಾಲ್ಕಂಗುಲಗಳ ಸ್ಥಳಮಾತ್ರವಾದರೂ ಉಳಿಯದ ಹಾಗೆ ನೋಡಿಬಂದನು. ಅಲ್ಲಲ್ಲಿ ಪ್ರಾಕಾರದೊಳಗಿನ ಬೀದಿಗಳನ್ನೂ, ಚತುಷ್ಪಥಮಂಟಪದ ವೇದಿಕೆಗಳನ್ನೂ, ನಡೆಬಾವಿಗಳನ್ನೂ, ಪುಷ್ಕರಿಣಿಗಳನ್ನೂ, ಸಾಕಲ್ಯವಾಗಿ

ಹುಡುಕಿಬಿಟ್ಟನು. ಎಲ್ಲಿ ನೋಡಿದರೂ ಇವನ ಕಣ್ಣಿಗೆ ವಿಕಾರರೂಪವುಳ್ಳ ಬಗೆಬಗೆಯ ರಾಕ್ಷಸಸ್ತ್ರೀಯರು ಗೋಚರಿಸುತಿದ್ದರೇ ಹೊರತು ಸೀತೆಯು ಸಿಕ್ಕಲಿಲ್ಲ. ಅಲ್ಲಲ್ಲಿ ಎಣೆಯಿಲ್ಲದ ರೂಪವುಳ್ಳ ವಿದ್ಯಾಧರಸ್ತ್ರೀಯರನ್ನು ಕಂಡನೇ ಹೊರತು ಸೀತೆಯನ್ನು ಕಾಣಲಿಲ್ಲ! ಅಲ್ಲಿ ರಾವಣನು ಬಲಾತ್ಕಾರದಿಂದ ಸೆರೆಹಿಡಿದು ತಂದ ಅನೇಕ ನಾಗಕನ್ನಿಕೆಯರನ್ನು ಕಂಡನು. ತಾನಾಗಿಯೇ ಮೋಹಿಸಿ ಬಂದು ರಾವಣನನ್ನು ಕೈಹಿಡಿದ ಇನ್ನೂ ಎಷ್ಟೋಮಂದಿ ನಾಗಕನ್ಯೆಯರನ್ನೂ ಕಂಡನು. ಚಂದ್ರಾನನೆಯಾಗಿಯೂ, ಜನಕಪುತ್ರಿಯಾಗಿಯೂ ಇರುವ ಆ ಸೀತೆಯನ್ನು ಮಾತ್ರ ಕಾಣಲಿಲ್ಲ. ಮಹಾಬಾಹುವಾದ ಆ ಕಪಿವೀರನು, ಬೇರೆ ಎಷ್ಟೋಮಂದಿ ಸ್ತ್ರೀಯರನ್ನು ಕಂಡರೂ ಸೀತೆಯನ್ನು ಮಾತ್ರಕಾಣದೆ ಬಹಳವಾಗಿ ಕೊರಗುತಿದ್ದನು. ಇದುವರೆಗೆ ಮಾಡಿದ ವಾನರರ ಪ್ರಯತ್ನವೂ, ತಾನು ಆ ಮಹಾಸಮುದ್ರವನ್ನು ದಾಟಿ ಬಂದುದೂ ವ್ಯರ್ಥವಾಯಿತೆಂಬ ದುಃಖದಿಂದ, ಹಿಂದುಮುಂದುತೋರದೆ ಕಳವಳಿಸುತ್ತ ಆಗಲೇ ಆ ವಿಮಾನದಿಂದಿಳಿದು ಚಿಂತಾಕ್ರಾಂತನಾಗಿ ನಿಂತಿದ್ದನು.

ಇಲ್ಲಿಗೆ ಹನ್ನೆರಡನೆಯ ಸರ್ಗವು.

---

{ ಹನುಮಂತನು ಅಶೋಕವನದ ಪ್ರಾಕಾರವನ್ನೇರಿದುದು. ಸೀತೆಯನ್ನೂ, ರಾವಣಾದಿಗಳನ್ನೂ ಕುರಿತು ನಾನಾವಿಧದಲ್ಲಿ ಚಿಂತಿಸಿ, ಅಶೋಕವನವನ್ನು ಹುಡುಕಬೇಕೆಂದು ಪ್ರಯತ್ನಿಸಿ, ಅದಕ್ಕಾಗಿ ಮೊದಲು ದೇವತೆಗಳಿಗೆ ನಮಸ್ಕರಿಸಿದುದು. }

ಆಮೇಲೆ ವಾನರೋತ್ತಮನಾದ ಹನುಮಂತನು ಆಗಲೇ ವಿಮಾನದಿಂದ ಕೆಳಕ್ಕಿಳಿದು ಪ್ರಾಕಾರಕ್ಕೆ ಬಂದನು. ಮೇಘದಿಂದ ಬರುವ ಮಿಂಚಿನಂತೆ ಅತಿವೇಗವನ್ನವಲಂಬಿಸಿ ಹೊರಟು, ಆ ರಾವಣನ ಮನೆಯ ಒಂದೊಂದು ಪ್ರಾಕಾರವನ್ನೂ ಸುತ್ತಿಸುತ್ತಿ ಬಂದರೂ, ಸೀತೆಯನ್ನು ಕಾಣದುದಕ್ಕಾಗಿ ಬಹಳ ಚಿಂತೆಗೊಂಡು, ತನ್ನಲ್ಲಿ ತಾನು "ರಾಮನಿಗೆ ಪ್ರಿಯವನ್ನು ಕೋರಿ, ನಾನು ಈ ಲಂಕೆಯೆಲ್ಲವನ್ನೂ ಸಂಪೂರ್ಣವಾಗಿ ಹುಡುಕಿದೆನು. ಎಲ್ಲೆಲ್ಲಿ ಹುಡುಕಿದರೂ ಸರ್ವಾಂಗಸುಂದರಿಯಾದ ಸೀತೆಯು ಸಿಕ್ಕಲಿಲ್ಲ. ಇಲ್ಲಿನ ಮಡುಗಳನ್ನೂ, ಕೆರೆಗಳನ್ನೂ, ಕೊಳಗಳನ್ನೂ, ಮಹಾನದಿಗಳನ್ನೂ, ಸಣ್ಣಹೊಳೆಗಳನ್ನೂ, ಜಲ

ಪ್ರಾಯಪ್ರದೇಶಗಳನ್ನೂ, ಅರಣ್ಯಗಳನ್ನೂ, ದುರ್ಗಮಗಳಾದ ಪರ್ವತಗಳನ್ನೂ, ಸುತ್ತಿಸುತ್ತಿ ಬಂದೆನು! ಈ ಸಮಸ್ತಭೂಮಿಯನ್ನೂ ಹುಡುಕಿದುದಾಯಿತು. ಇಷ್ಟಾದರೂ ಜನಕಪುತ್ರಿಯನ್ನು ಕಾಣಲಿಲ್ಲ. ಗೃಧ್ರರಾಜನಾದ ಸಂಪಾತಿಯು ಈ ರಾವಣನ ಮನೆಯಲ್ಲಿಯೇ ಸೀತೆಯಿರುವಳೆಂದು ಎಷ್ಟೋ ದೃಢವಾಗಿ ಹೇಳಿದನು. ಎಷ್ಟು ಹುಡುಕಿದರೂ ಸೀತೆಯು ಕಣ್ಣಿಗೆ ಬೀಳಲಿಲ್ಲವಲ್ಲಾ! ಆ ಸೀತೆಯಲ್ಲಿಯೋ, ಸ್ವಲ್ಪವಾದರೂ ದೋಷವನ್ನೆಣಿಸುವುದಕ್ಕಿಲ್ಲ. ಲೋಕಪೂಜ್ಯವಾದ ವಿದೇಹದೇಶದಲ್ಲಿ ಹುಟ್ಟಿ ಬೆಳೆದವಳು! ಅದರಲ್ಲಿಯೂ ಸತ್ಪುರುಷರಿಗೆ ಇಷ್ಟನಿವಾಸವಾದ ಮಿಥಿಲಾನಗರದಲ್ಲಿದ್ದವಳು! ಕರ್ಮನಿಷ್ಠನೆಂದು ಖ್ಯಾತಿಹೊಂದಿದ ಜನಕರಾಜನಿಗೆ ಮಗಳೆನಿಸಿಕೊಂಡಿರುವಳು! ಅಯೋನಿಜೆಯಾಗಿ ಹುಟ್ಟಿರುವಳು! ಇಂತಹ ಸತ್ಕುಲಪ್ರಸೂತೆಯಾದ ಸೀತಾದೇವಿಯು ಕೂಡ ತನ್ನ ಶೀಲವನ್ನು ತಪ್ಪಿ ದುಶ್ಚರಿತನಾದ ರಾವಣನಲ್ಲಿ ಸ್ನೇಹವನ್ನು ತೋರಿಸುವಳೆ? ಛಿ! ಎಷ್ಟುಮಾತ್ರಕ್ಕೂ ಇರದು! ಹಾಗೆಣಿಸುವುದೇ ಮಹಾಪಾತಕವು! ಒಂದು ವೇಳೆ ರಾವಣನು ಸೀತೆಯನ್ನೆತ್ತಿಕೊಂಡು ರಾಮಬಾಣಕ್ಕೆ ಭಯಪಟ್ಟು ನಡುಗುತ್ತ, ಓಡಿಬರುವಾಗ ಅವನ ಕೈಸಡಿಲಿ, ಆಕೆಯು ಕೆಳಗೆ ಬಿದ್ದು ಪ್ರಾಣವನ್ನು ಬಿಟ್ಟಿರಬೇಕು! ಹಾಗಿಲ್ಲದಿದ್ದರೆ, ಆ ರಾಕ್ಷಸನು ಅಂತರಿಕ್ಷದಲ್ಲಿ ಸೀತೆಯನ್ನೆತ್ತಿಕೊಂಡು ಹೋಗುವಾಗ, ಅವಳು ತನ್ನ ಕೆಳಗಿದ್ದ ಮಹಾಸಾಗರವನ್ನು ನೋಡಿ ಆಗಲೇ ಭಯದಿಂದ ಎದೆಯೊಡೆದು ಸತ್ತಿರಬೇಕು! ಅದೂ ಇಲ್ಲದಿದ್ದರೆ ರಾವಣನು ಸೀತೆಯನ್ನು ಕೆಳಗೆ ಬೀಳದಂತೆ ತನ್ನ ಭುಜಗಳಿಂದ ಬಿಗಿಯಾಗಿ ಹಿಡಿದು, ಎತ್ತಿಕೊಂಡು ಹೋಗುವಾಗ ಪೂಜ್ಯಳಾದ ಆ ಸೀತೆಯು, ಆ ರಾಕ್ಷಸನ ಮುಷ್ಟಿಯ ಹಿಡಿತಕ್ಕೂ, ತೊಡೆಗಳ ವೇಗಕ್ಕೂ ತಡೆಯಲಾರದೆ ಪ್ರಾಣವನ್ನು ಬಿಟ್ಟಿರಬೇಕು! ಇಲ್ಲವೇ, ರಾವಣನು ಸಮುದ್ರದಮೇಲೆ ಆಕಾಶದಲ್ಲಿ ಹೋಗುವಾಗ, ಸೀತೆಯು ಅವನ ಕೈಯಿಂದ ಬಿಡಿಸಿಕೊಳ್ಳುವ ಪ್ರಯತ್ನದಲ್ಲಿ ಕೈತಪ್ಪಿ ಸಮುದ್ರದಲ್ಲಿ ಬಿದ್ದಿರಬೇಕು! ಅಥವಾ ಕ್ಷುದ್ರಬುದ್ಧಿಯುಳ್ಳ ಆ ರಾವಣನು, ಸೀತೆಯು ತನ್ನ ದಾರಿಗೆ ಬಾರದಿರುವುದನ್ನು ನೋಡಿ ಕೋಪಗೊಂಡು, ದಿಕ್ಕಿಲ್ಲದ ಆಕೆಯನ್ನು ಭಕ್ಷಿಸಿ ಬಿಟ್ಟಿರಬಹುದೆ? ಹಾಗಿಲ್ಲದಿದ್ದರೆ ರಾಕ್ಷಸನ ಪತ್ನಿಯರು ಸೀತೆಯಲ್ಲಿ ಸವತಿತನವನ್ನು ಭಾವಿಸಿ, ದುರ್ಬುದ್ಧಿಯಿಂದ ನಿರ್ದೋಷಿಯಾದ ಆಕೆಯನ್ನು ಭಕ್ಷಿಸಿ ಬಿಟ್ಟಿರಬಹುದೆ? ಅಥವಾ ಚಂದ್ರಮುಖಿಯಾದ ಸೀತೆಯು ಪೂರ್ಣಚಂದ್ರನಿಗೆಣೆಯಾಗಿಯೂ, ಕಮಲದಳದಂತಿರುವ ಕಣ್ಣುಗಳಿಂದ ಶೋಭಿತವಾಗಿಯೂ ಇರುವ ತನ್ನ ಪ್ರಿಯಪತಿಯಾದ ರಾಮನ ಮುಖವನ್ನೇ ಧ್ಯಾನಿಸುತ್ತ, ಅದೇ

ಚಿಂತೆಯಿಂದ ಕೊರಗಿ ಪ್ರಾಣವನ್ನು ಬಿಟ್ಟಿರಬಹುದೆ? ಆ ಸೀತೆಯು ಒಂದು ವೇಳೆ ಪ್ರಾಣವನ್ನು ಬಿಟ್ಟಿದ್ದರೂ ಆಗಲೂ "ಹಾ ರಾಮಾ! ಹಾ ಲಕ್ಷ್ಮಣಾ! ಹಾ ಅಯೋಧ್ಯೇ!" ಎಂದು ಬಾರಿಬಾರಿಗೂ ಪ್ರಲಾಪಿಸಿ, ದಿಕ್ಕುಗಾಣದೆ, ಸಂಕಟ ಪಟ್ಟು ಕೊರಗಿಯೇ ಸುಮ್ಮನಾಗಿರಬಹುದು. ಒಂದುವೇಳೆ ಸೀತೆಯು ಈಗಲೂ ರಾವಣನ ಮನೆಯಲ್ಲಿ ಪಂಜರದಲ್ಲಿರುವ ಗಿಳಿಯಂತೆ ಪ್ರೇಮದಿಂದ ಪೋಷಿಸಲ್ಪಡು ತ್ತಿದ್ದರೂ ಇರಬಹುದು. ಹಾಗಿದ್ದರೂ ಅವಳು ರಾಮನನ್ನು ಹಂಬಲಿಸಿ ಎಷ್ಟು ಮಟ್ಟಿಗೆ ಗೋಳಾಡುತ್ತಿರುವಳೋ? ಆಕೆಯೋ ಸಾಮಾನ್ಯಸ್ತ್ರೀಯಲ್ಲ! ಜನಕ ರಾಜನ ಮಗಳು! ಸೀತೆಯೆಂದು ಪ್ರಸಿದ್ಧಳಾದ ಅಯೋನಿಜೆಯು! ಶ್ರೀರಾಮನ ಕೈಹಿಡಿದ ಪತ್ನಿಯು! ಹೀಗೆ ಲೋಕೋತ್ತರವಾದ ಪಾರಿಶುದ್ಧ್ಯವನ್ನು ಹೊಂದಿದ ಆಕೆಯು, ರಾವಣನು ಎಷ್ಟೇ ನಿರ್ಬಂಧಿಸಿದರೂ ಅವನಿಗೆ ಕೈವಶಳಾಗು ವಳೆ? ಎಂದಿಗೂ ಆಗಳು! ಇಷ್ಟು ಚಿಂತೆಯೇಕೆ? ಇಲ್ಲಿಂದ ಹೋಗಿ ಇದ್ದ ಸ್ಥಿತಿಯನ್ನು ರಾಮನಿಗೆ ತಿಳಿಸಿಬಿಡಲೆ? ಆ ರಾಮನೋ ಸೀತೆಯನ್ನೇ ಪ್ರಾಣ ದಂತೆ ಭಾವಿಸಿರುವನು. ಆ ಸೀತೆಯು ಈಗ ರಹಸ್ಯಪ್ರದೇಶದಲ್ಲಿ ಬಚ್ಚಿಡಲ್ಪಟ್ಟಿ ರುವಳೋ! ಅಥವಾ ರಾಮವಿರಹವನ್ನು ಸಹಿಸಲಾರದೆ ತಾನೇ ಪ್ರಾಣತ್ಯಾಗ ವನ್ನು ಮಾಡಿಕೊಂಡಿರುವಳೋ! ಹೇಗಿದ್ದರೂ ಈ ವಿಷಯವನ್ನು ರಾಮನಿಗೆ ತಿಳಿಸುವುದೇ ಯುಕ್ತವಲ್ಲ. ತಿಳಿಸಿದರೂ ಕಷ್ಟವು. ತಿಳಿಸದಿದ್ದರೂ ಕಷ್ಟವು. ಸೀತೆಯು ಸಿಕ್ಕಲಿಲ್ಲವೆಂದು ಹೇಳಿದೊಡನೆಯೇ ರಾಮನು ಪ್ರಾಣವನ್ನು ಬಿಡುವನು. ಆಗ ರಾಮನನ್ನು ಕೊಂದ ಪಾಪಕ್ಕೆ ನಾನೇ ಭಾಗಿಯಾಗಬೇಕಾಗುವುದು. ಹಾಗಿಲ್ಲದೆ ನಾನು ಸುಮ್ಮನಿದ್ದುಬಿಟ್ಟರೂ ಸ್ವಾಮಿಯನ್ನು ವಂಚಿಸಿದ ದೋಷವು ಮೇಲೆ ಬೀಳುವುದು. ಈಗ ಮಾಡಬೇಕಾದುದೇನು? ಧರ್ಮಸಂಕಟವು ಬಂದೊದಗಿರುವು ದಲ್ಲಾ! ಇನ್ನೇನುಮಾಡಲಿ!" ಎಂದು ಸುಮ್ಮನೆ ಕೊರಗುತಿದ್ದನು. ಹೀಗೆ ನಾನಾ ವಿಧದಲ್ಲಿ ಕದಲಿದ ಮನಸ್ಸುಳ್ಳ ಆ ಹನುಮಂತನಿಗೆ, ಇನ್ನೂ ಬೇರೆಬೇರೆ ಚಿಂತೆಯು ಹುಟ್ಟಿತು. ತಿರುಗಿ ಅವನು ತನ್ನಲ್ಲಿ ತಾನು "ಇಲ್ಲಿಂದ ನಾನು 'ಹೀಗೆಯೇ ಹಿಂತಿರುಗಿ ಕಿಷ್ಕಿಂಧೆಗೆ ಹೋದರೂ ಏನು ಮಾಡಿದಂತಾಯಿತು! ಯಾವ ಪುರುಷಾರ್ಥವು ಸಿದ್ಧಿಸಿ ದಂತಾಗುವುದು! ನಾನು ಇಷ್ಟು ಶ್ರಮಪಟ್ಟು ಈ ಮಹಾಸಮುದ್ರವನ್ನು ದಾಟಿ ಬಂದುದಕ್ಕೂ ಫಲವಿಲ್ಲದೆ ಹೋಯಿತು! ದುರ್ಗಮವಾದ ಈ ಲಂಕೆಗೆ ಪ್ರವೇ ಶಿಸಿದುದೂ ವ್ಯರ್ಥವಾಯಿತು. ಮನೆಮನೆಗೂ ನುಗ್ಗಿ ರಾಕ್ಷಸರನ್ನು ನೋಡಿ ಬಂದುದೂ ನಿರರ್ಥಕವಾಯಿತು. ನಾನು ಸೀತೆಯನ್ನು ನೋಡದೆ ಕಿಷ್ಕಿಂಧೆಗೆ ಹೋದರೆ ನನ್ನನ್ನು ನೋಡಿ ಸುಗ್ರೀವನು ಏನು ಹೇಳುವನು! ವಾನರರೆಲ್ಲರೂ

ಸೇರಿ ನನ್ನನ್ನು ಏನೆಂದು ಹೇಳುವರು! ದಶರಥಪುತ್ರರಾದ ರಾಮಲಕ್ಷ್ಮಣ ರಾದರೂ ನನ್ನನ್ನು ನೋಡಿ ಏನು ಹೇಳುವರು! ಅವರಿಗೆ ನಾನು ಏನುತ್ತರವನ್ನು ಕೊಡಲಿ? ನಾನು ಅಲ್ಲಿಗೆ ಹೋಗಿ ರಾಮನೊಡನೆ ಸೀತೆಯು ಸಿಕ್ಕಲಿಲ್ಲವೆಂಬ ಅಪ್ರಿಯವಾದ ಮಾತನ್ನು ಹೇಳಿದೊಡನೆ, ಆ ರಾಮನು ಪ್ರಾಣವನ್ನೇ ಬಿಟ್ಟು ಬಿಡುವನು. ಕರ್ಣಕಠೋರವಾಗಿಯೂ, ಕ್ರೂರವಾಗಿಯೂ, ಅಸಹ್ಯವಾಗಿಯೂ, ಇಂದ್ರಿಯಗಳನ್ನೇ ಕಲಗಿಸತಕ್ಕದಾಗಿಯೂ ಇರುವ ಆ ಮಾತನ್ನು ಕೇಳಿದಮೇಲೆ ರಾಮನು ಬದುಕುವುದೆಂದರೇನು? ರಾಮನು ಹಾಗೆ ಮನಸ್ಸಿನಲ್ಲಿ ಸಂಕಟಪಟ್ಟು ಮರಣಕ್ಕೆ ನಿಶ್ಚಯಿಸಿದುದನ್ನು ನೋಡಿದಾಗಲೇ, ಆತನಲ್ಲಿ ಅಸಾಧಾರಣ ಸ್ನೇಹ ವುಳ್ಳ ಲಕ್ಷ್ಮಣನೂ ಆ ಕ್ಷಣವೇ ಪ್ರಾಣವನ್ನು ಬಿಟ್ಟುಬಿಡುವನು. ಹೀಗೆ ತನ್ನ ಒಡಹುಟ್ಟಿದವರಾದ ರಾಮಲಕ್ಷ್ಮಣರಿಬ್ಬರೂ ಸತ್ತಸುದ್ದಿಯನ್ನು ಕೇಳಿದ ಕ್ಷಣವೇ ಭರತನೂ ಪ್ರಾಣತ್ಯಾಗವನ್ನು ಮಾಡುವನು. ಆ ಭರತನ ಸಾವನ್ನು ನೋಡಿದ ಮೇಲೆ ಶತ್ರುಘ್ನನೂ ಬದುಕಲಾರನು. ಲೋಕೈಕವೀರರಾದ ಈ ನಾಲ್ಕುಮಕ್ಕಳೂ ಸತ್ತುದನ್ನು ನೋಡಿದರೆ, ಇವರ ಜನನಿಯರಾದ ಕೌಸಲ್ಯೆ, ಸುಮಿತ್ರೆ, ಕೈಕೇಯಿಯೆಂಬವರು ಪ್ರಾಣದಿಂದಿರುವರೆ? ಎಂದಿಗೂ ಬದುಕಲಾರರು! ಇದರಲ್ಲಿ ಸಂದೇಹವಿಲ್ಲ. ಆ ಅಯೋಧ್ಯೆಯ ಅನರ್ಥಗಳೂ ಹಾಗಿರಲಿ! ನಮ್ಮ ವಾನರರಿಗೂ ಉಳಿಗಾಲವಿಲ್ಲ! ರಾಮನು ಸತ್ತುದನ್ನು ಕೇಳಿದೊಡನೆ ಅವನಲ್ಲಿ ವಿಶೇಷ ಕೃತಜ್ಞತೆ ಯುಳ್ಳವನಾಗಿಯೂ, ಸತ್ಯಸಂಧನಾಗಿಯೂ, ಇರುವ ನಮ್ಮರಾಜನಾದ ಸುಗ್ರೀ ವನು, ರಾಮನು ತನಗೆ ಮಾಡಿದ ಉಪಕಾರಕ್ಕೆ ತಕ್ಕ ಪ್ರತ್ಯುಪಕಾರವನ್ನು ಮಾಡ ಲಾರದುದಕ್ಕಾಗಿ ಸಂಕಟಪಟ್ಟು ಕೊರಗಿ ಪ್ರಾಣವನ್ನು ಬಿಡುವನು. ಪತಿಯಾದ ಸುಗ್ರೀವನು ಮರಣಹೊಂದಿದುದನ್ನು ನೋಡಿದಮೇಲೆ ಆತನಲ್ಲಿ ಪರಮಪ್ರೇಮ ವುಳ್ಳ ರುಮೆಯೂ, ಅವನ ದುಃಖದಿಂದಲೇ ಸಾಯುವಳು. ತಾರೆಯಾದರೋ ಮೊದಲೇ ವಾಲಿಯ ಮರಣದಿಂದ ಕೊರಗಿಕೊರಗಿ ಕೃಶಳಾಗಿ ಪ್ರಾಣವನ್ನು ಮಾತ್ರ ಧರಿಸಿಕೊಂಡಿರುವಳು. ಈಗ ಸುಗ್ರೀವನೂ ಮೃತನಾದುದನ್ನೂ ನೋಡಿದರೆ, ಆ ದುಃಖವನ್ನು ತಡೆಯಲಾರದೆ ಆಗಲೇ ಸಾಯುವಳು. ತಂದೆ ತಾಯಿಗಳಿಬ್ಬರೂ ಹೋದಮೇಲೆ ಅಂಗದನು ಪ್ರಾಣವನ್ನಿಟ್ಟುಕೊಂಡಿರುವನೆ? ಅವನೂ ಸಾಯುವನು. ಇದಲ್ಲದೆ ಸುಗ್ರೀವನು ಮೃತಿಹೊಂದಿದುದನ್ನು ಕೇಳಿದೊಡನೆ, ವಾನರರೆಲ್ಲರೂ ದುಃಖದಿಂದ ಕೊರಗಿ ಸಾಯುವರು. ಕೀರ್ತಿಮಂತನಾದ ಸುಗ್ರೀವರಾಜನು ಸಮಸ್ತವಾನರರನ್ನೂ, ಸಾಮದಿಂದಲೂ, ದಾನದಿಂದಲೂ, ಗೌರವದಿಂದಲೂ ಮನ್ನಿಸುತ್ತ, ಎಷ್ಟೋಪ್ರೀತಿಯಿಂದ ಕಾಪಾಡುತ್ತಿರುವನು. ಅಂತಹ ಪ್ರಭುವೇ

ಸತ್ತಮೇಲೆ ವಾನರರು ಆ ದುಃಖವನ್ನು ತಡೆಯಬಲ್ಲರೆ? ಅವರೆಲ್ಲರೂ ತಲೆಯೊಡೆದು ಕೊಂಡು ಪ್ರಾಣವನ್ನು ಬಿಡುವುದೇ ನಿಜವು. ಇನ್ನುಮೇಲೆ ನಮ್ಮ ವಾನರರು ಕಾಡಿನಲ್ಲಿಯಾಗಲಿ, ಬೆಟ್ಟಗುಡ್ಡಗಳಲ್ಲಿಯಾಗಲಿ, ಒಟ್ಟಾಗಿ ಸೇರಿ, ವಿನೋದದಿಂದ ಕ್ರೀಡಿಸುವ ಆಸೆಯೇ ಹೋಯಿತು. ಸುಗ್ರೀವನ ಮರಣವಾರ್ತೆಯಿಂದ ಪೀಡಿತರಾದ ವಾನರರು, ಆ ದುಃಖವನ್ನು ಸಹಿಸಲಾರದೆ, ಕುಟುಂಬಸಹಿತವಾಗಿ, ತಮ್ಮ ಹೆಂಡಿರು ಮಕ್ಕಳೊಡನೆ ಹೊರಟು, ಬೆಟ್ಟದಿಂದ ಬಿದ್ದು ಪ್ರಾಣವನ್ನು ಬಿಡುವುದೇ ನಿಜವು. ಹಾಗೆಯೇ ನಮ್ಮ ಜಾತಿಯ ಒಬ್ಬೊಬ್ಬ ವಾನರನೂ, ವಿಷವನ್ನು ಕುಡಿದೋ, ನೇಣುಹಾಕಿಕೊಂಡೋ, ಬೆಂಕಿಯಲ್ಲಿ ಬಿದ್ದೋ, ಪ್ರಾಯೋಪವೇಶವನ್ನು ಮಾಡಿಯೋ, ಆಯುಧಗಳಿಂದ ಛೇದಿಸಿಕೊಂಡೋ ಪ್ರಾಣವನ್ನು ಬಿಡುವರು. ನಾನು ಕಿಷ್ಕಿಂಧೆಗೆ ಕಾಲಿಟ್ಟೊಡನೆ, ಎಲ್ಲಿ ನೋಡಿದರೂ ಭಯಂಕರವಾದ ರೋದನ ಧ್ವನಿಗಳುಂಟಾಗುವುವಲ್ಲದೆ, ಇಕ್ಷ್ವಾಕುವಂಶಕ್ಕೂ ವಾನರವಂಶಕ್ಕೂ, ಅದೇ ಮೂಲ ನಾಶವೆಂದೂ ನನಗೆ ತೋರುವುದು. ನಾನು ಇಲ್ಲಿಂದ ಹೋದಮಾತ್ರದಲ್ಲಿಯೇ ಇಷ್ಟು ಮಹಾನರ್ಥಗಳನ್ನೂ ತಂದಿಟ್ಟಂತಾಗುವುದು. ಆದುದರಿಂದ ನಾನು ಇಲ್ಲಿಂದ ಕಿಷ್ಕಿಂಧೆಗೆ ಹೋಗುವುದೇ ಇಲ್ಲ! ಸೀತೆಯನ್ನು ನೋಡದಮೇಲೆ ಸುಗ್ರೀವನನ್ನು ನೋಡುವುದೂ ನನ್ನಿಂದ ಸಾಧ್ಯವಲ್ಲ. ನಾನು ಎಲ್ಲಿಗೂ ಕದಲದೆ ಇಲ್ಲಿಯೇ ಇದ್ದು ಬಿಟ್ಟರೆ, ಧರ್ಮಾತ್ಮರಾಗಿಯೂ, ಮಹಾರಥರಾಗಿಯೂ ಇರುವ ಆ ರಾಮಲಕ್ಷ್ಮಣರು ನಾನು ಸೀತೆಯನ್ನು ನೋಡಿ ಬರುವೆನೆಂಬ ಆಸೆಯಿಂದಲಾದರೂ ಪ್ರಾಣವನ್ನುಳಿಸಿ ಕೊಂಡಿರುವರು. ಹಾಗೆಯೇ ಅವರಲ್ಲಿ ಸೌಹಾರ್ದವುಳ್ಳ ನಮ್ಮ ವಾನರರೂ ಈ ಆಶೋತ್ತರದಿಂದಲೇ ಪ್ರಾಣವನ್ನು ಧರಿಸಿಕೊಂಡಿರಬಹುದು. ಆದುದರಿಂದ ನಾನು ಇಲ್ಲಿಯೇ ಇದ್ದು, ಕೈಗೆ ಬಂದುದನ್ನೂ, ಬಾಯಿಗೆ ಬಿದ್ದುದನ್ನೂ ತಿಂದು ತೃಪ್ತಿ ಪಡುತ್ತ, ಒಂದು ಮರದಡಿಯನ್ನಾಶ್ರಯಿಸಿ, ನಿಯತಾಹಾರನಾಗಿ, ವಾನಪ್ರಸ್ಥ ಧರ್ಮವನ್ನು ಹಿಡಿದು ಕಾಲವನ್ನು ಕಳೆದುಬಿಡುವೆನು. ಸೀತೆಯನ್ನು ಕಾಣದ ಮೇಲೆ ನಾನು ಅಲ್ಲಿಗೆ ಹೋಗಲಾರೆನು. ಹಾಗಿಲ್ಲವೇ, ಇದೋ! ಸಮೃದ್ಧವಾದ ನೀರಿನಿಂದಲೂ, ಫಲಮೂಲಗಳಿಂದಲೂ ತುಂಬಿದ, ಈ ಸಮುದ್ರತೀರದ ಜೌಗು ಪ್ರದೇಶದಲ್ಲಿಯೇ, ಈಗಲೇ ಒಂದು ಚಿತೆಯನ್ನೊಡ್ಡಿ, ಅರಣಿಯನ್ನುಜ್ಜಿ, ಅಗ್ನಿ ಯನ್ನುಹುಟ್ಟಿಸಿ, ಆ ಚಿತೆಗಿಟ್ಟು, ಅದರಮೇಲೆ ಮಲಗಿಬಿಡುವೆನು. ಹಾಗೂ ಇಲ್ಲದಿದ್ದರೆ ಅನ್ನಪಾನಾದಿಗಳನ್ನು ಬಿಟ್ಟು ಪ್ರಾಯೋಪವೇಶವನ್ನು ಮಾಡಿ ಜೀವವನ್ನು ಬಿಡುವೆನು. ಆಗ ನನ್ನ ಈ ದೇಹವನ್ನು ನರಿಕಾಗೆಗಳಾದರೂ ಸಂತೋಷದಿಂದ ತಿಂದು ತೃಪ್ತಿಪಡುವುವು. ಹೀಗೆ ನಿರರ್ಥಕವಾಗಿ ಹೋದ ನನ್ನ

ದೇಹವಾದರೂ ಅದೊಂದುವಿಧದಿಂದ ಸಾರ್ಥಕವಾಗುವುದು. ಹೀಗೆ ಆತ್ಮತ್ಯಾಗವನ್ನು ಮಾಡುವುದರಿಂದ ದೋಷವೇನೂ ಇಲ್ಲ. ಈ ಪ್ರಾಯೋಪವೇಶವನ್ನು ಮಹರ್ಷಿಗಳೂ ಅನುಮೋದಿಸಿರುವಂತಿದೆ. ಮುಖ್ಯವಾಗಿ ನಾನುಮಾತ್ರ ಸೀತೆಯನ್ನು ಕಾಣದಿದ್ದರೆ ನೀರಿನಲ್ಲಿಯಾದರೂ ಬಿದ್ದು ಪ್ರಾಣವನ್ನು ಬಿಡುವುದೇ ನಿಜವು'' ಎಂದು ನಿಶ್ಚಯಿಸಿಕೊಂಡನು. ಅಷ್ಟರಲ್ಲಿಯೇ ಅವನಿಗೆ ಈ ಉದ್ದೇಶವನ್ನು ತಪ್ಪಿಸುವಂತೆ ಬೇರೊಂದು ಚಿಂತೆಯು ಹುಟ್ಟಿತು. ಅದರಿಂದ ಅವನು ಪುನಃ ತನ್ನ ಮನಸ್ಸಿನಲ್ಲಿ “ಆಃ ಇದೇನಾಶ್ಚರ್ಯವು! ನಾನು ಇಲ್ಲಿಗೆ ಬಂದಾಗ ಈ ರಾತ್ರಿಯು ನನಗೆ ಶುಭಾರಂಭವಾಗಿಯೇ ತೋರಿತು. ಶುಭ ನಿಮಿತ್ತಗಳೇ ತೋರಿದುವು. ನಾನು ಬಂದಾಗ ಮೊದಲು ಲಂಕಾಧಿದೇವತೆಯೇ ತಾನಾಗಿ ಬಂದು ನನ್ನನ್ನು ತಡೆದರೂ ಅವಳನ್ನೂ ನಿಮಿಷಮಾತ್ರದಲ್ಲಿ ಜಯಿಸಿ ಬಂದೆನು. ಸೀತೆಯನ್ನು ಎಲ್ಲಿದ್ದರೂ ತೋರಿಸಿ ಕೊಡುವಂತೆ ಈಗಲೂ ಅತಿಪ್ರಕಾಶದೊಡನೆ ಬೆಳದಿಂಗಳು ಕಾಯುತ್ತಿರುವುದರಿಂದ, ಮನಸ್ಸಿಗೆ ಒಂದು ಉಲ್ಲಾಸವನ್ನೂ ಹುಟ್ಟಿಸುತ್ತಿರುವುದು. ಈ ರಾತ್ರಿಯು ತಾನಾಗಿಯೇ ನನ್ನ ಕೀರ್ತಿಮಯವಾದ ಮಾಲಿಕೆಯನ್ನು ತಳೆದಂತೆ ಸ್ವಚ್ಛವಾಗಿ, ನನ್ನ ಲಂಕಾಪ್ರವೇಶಕ್ಕೂ ಅನುಕೂಲಿಸಿದುದರಿಂದ ಯಶಸ್ವಿನಿಯೆಂಬ ಖ್ಯಾತಿಗೆ ಇದೇ ಪಾತ್ರವಾಗಿರುವುದು. ಏನಾದರೇನು! ಜಾಗರಣದಿಂದ ಅತಿ ದೀರ್ಘವಾಗಿ ಕಂಡುಬಂದ ಈ ರಾತ್ರಿಯೂ ಕೂಡ ಈಗ ವ್ಯರ್ಥವಾಗಿ ಕಳೆದು ಹೋಗುತ್ತಿರುವುದು. ಹೇಗಾದರೂ ಆಗಲಿ! ಸಾಯುವುದಕ್ಕಿಂತಲೂ ಬದುಕಿರುವುದೇ ಮೇಲು! ಆದುದರಿಂದ, ನಾನು ನಿಯಮವನ್ನವಲಂಬಿಸಿ, ತಾಪಸವೃತ್ತಿಯಿಂದ ಒಂದು ಮರದಡಿಯಲ್ಲಿದ್ದು ಬಿಡುವೆನು. ಸೀತೆಯನ್ನು ಕಾಣದೆ ಇಲ್ಲಿಂದ ಹಿಂತಿರುಗಿ ಹೋಗುವುದೇನೋ ಯುಕ್ತವಲ್ಲ. ಒಂದುವೇಳೆ ನಾನು ಸುಗ್ರೀವನಬಳಿಗೆ ಹೋಗದೆ, ನನಗಾಗಿ ಮಹೇಂದ್ರಪರ್ವತದಲ್ಲಿ ಕಾದಿರುವ ಅಂಗದಾದಿಗಳ ಬಳಿಗೆ ಹೋದರೂ ಆಗಲೂ ಅನರ್ಥಗಳುಂಟು. ಸೀತೆಯು ಸಿಕ್ಕಲಿಲ್ಲವೆಂಬ ಮಾತನ್ನು ಕೇಳಿದರೆ, ಅಂಗದನೂ, ಇತರವಾನರರೂ ಆ ಕ್ಷಣವೇ ಪ್ರಾಣವನ್ನು ಬಿಡುವರು. ಹೇಗಾದರೂ ಇದಕ್ಕಾಗಿ ಇಲ್ಲಿ ನಾನು ಪ್ರಾಣವನ್ನು ಬಿಡುವುದುಚಿತವಲ್ಲ. ಆತ್ಮಹತ್ಯೆಯಲ್ಲಿ ಅನೇಕದೋಷಗಳುಂಟು! ಬದುಕಿದ್ದವನು ಎಂದಾದರೂ ಒಮ್ಮೆ ಶುಭವನ್ನು ಕಾಣಬಹುದು. ಆದುದರಿಂದ ನಾನು ಹೇಗಾದರೂ ಪ್ರಾಣದೊಡನೆ ಬದುಕಿರುವೆನು! ಪ್ರಾಣದಿಂದಿದ್ದರೆ ನಿಶ್ಚಯವಾಗಿ ಎಂದಾದರೂ ಶ್ರೇಯಸ್ಸುಂಟಾಗದಿರದು'' ಎಂದು ನಿರ್ಧರಿಸಿಕೊಂಡನು. ಹೀಗೆ ಹನುಮಂತನು ನಾನಾವಿಧದಿಂದ ದುಃಖಿಸಿ ಕೊರಗುತ್ತ, ಎಷ್ಟುಹೊತ್ತಾದರೂ ಮನಸ್ಸಿಗೆ ನೆಮ್ಮದಿಯಿಲ್ಲದೆ, ತಿರುಗಿ ತನ್ನಲ್ಲಿ

ತಾನು, "ಒಂದುವೇಳೆ ಸೀತೆಯು ಸಿಕ್ಕದಿದ್ದಮಾತ್ರಕ್ಕೆ ಸುಮ್ಮನೆಹೋಗಬಹುದೆ? ಯಾವುದಾದರೂ ಒಂದುವಿಧದಿಂದ ರಾವಣನಲ್ಲಿ ಹಗೆತೀರಿಸಿಕೊಳ್ಳದೆ ಬಿಡಬಾರದು! ಕೊನೆಗೆ ಆ ರಾವಣನನ್ನಾದರೂ ಕೊಲ್ಲದೆ ಬಿಡುವುದಿಲ್ಲ. ಆ ರಾವಣನು ಎಷ್ಟು ಬಲಾಢ್ಯನಾದರೇನು? ನಾನಂತೂ ಅವನನ್ನು ಕೊಲ್ಲದೆ ಬಿಡುವವನಲ್ಲ. ಸೀತೆಯು ಸಿಕ್ಕದಿದ್ದರೂ ಹೋಗಲಿ! ಅವನು ಮಾಡಿದ ದುಷ್ಕೃತ್ಯಕ್ಕೆ ತಕ್ಕ ಫಲವನ್ನು ತೋರಿಸಿಯೇ ಬಿಡಬೇಕು. ಇಲ್ಲವೇ ಆ ರಾವಣನನ್ನೇ ಹಿಂಗಟ್ಟುಕಟ್ಟಿ ಎತ್ತಿ ಕೊಂಡು, ನಾನು ಬಂದಂತೆಯೇ ಸಮುದ್ರದ ಮೇಲೆ ಹಾರಿ ಹೋಗಿ ಯಾಗದಲ್ಲಿ ಅಗ್ನಿಹೋತ್ರನಿಗೆ ಪಶುವನ್ನೊಪ್ಪಿಸುವಂತೆ ಅವನನ್ನು ರಾಮನ ಪಾದಗಳಿಗೊಪ್ಪಿಸಿ ಬಿಡುವೆನು" ಎಂದು ಚಿಂತಿಸುತ್ತ ಸೀತೆಯನ್ನು ಕಾಣದುದಕ್ಕಾಗಿ ಬಹಳದುಃಖಿತನಾಗಿ ಇನ್ನೂ ನಾನಾವಿಧದಿಂದ ಕೊರಗುತಿದ್ದನು. ಆಗಲೂ ಅವನ ಚಿಂತೆಯು ಮುಗಿಯಲಿಲ್ಲ. ಅವನಿಗೆ ಬೇರೊಂದಾಲೋಚನೆಯು ತೋರಿತು. "ಈಗ ನಾನು ಇಷ್ಟರಲ್ಲಿಯೇ ಬಿಡುವುದೂ ಉಚಿತವಲ್ಲ. ಯಶಸ್ವಿನಿಯಾದ ಆ ಸೀತೆಯ ಕಣ್ಣಿಗೆ ಬೀಳುವವರೆಗೂ ಈ ಪಟ್ಟಣವನ್ನು ತಿರುತಿರುಗಿ ಸುತ್ತುತ್ತಲೇ ಇರುವೆನು. ಇಲ್ಲಿ ನನಗೆ ಸೀತೆಯು ಸಿಕ್ಕದೆಹೋದರೂ, ಸಂಪಾತಿಯ ಮಾತಿನಲ್ಲಿಯೇ ನಂಬಿಕೆಯಿಟ್ಟು ರಾಮನನ್ನೇ ನನ್ನೊಡನೆ ಇಲ್ಲಿಗೆ ಕರೆತಂದಪಕ್ಷದಲ್ಲಿ, ಇಲ್ಲಿ ತನ್ನ ಪತ್ನಿಯನ್ನು ಕಾಣದುದಕ್ಕಾಗಿ ರಾಮನು ಕೋಪಗೊಂಡು ಸಮಸ್ತವಾನರರನ್ನೂ ತನ್ನ ಬಾಣದಿಂದ ಸುಟ್ಟುಬಿಡುವನು. ಆದುದರಿಂದ ನಾನು ಇಲ್ಲಿಂದ ಹಿಂತಿರುಗುವುದೇ ನ್ಯಾಯವಲ್ಲ! ಆಹಾರನಿಯಮದಿಂದ ಇಂದ್ರಿಯಗಳನ್ನು ನಿಗ್ರಹಿಸಿ ಇಲ್ಲಿಯೇ ಇದ್ದು ಬಿಡುವೆನು. ನನಗೊಬ್ಬನಿಗಾಗಿ ಆ ವಾನರರೆಲ್ಲರೂ ಸಾಯುವುದೇಕೆ! ಅವರಾದರೂ ಬದುಕಿಕೊಳ್ಳಲಿ! ಓಹೋ! ಇದೊಂದು ವಿಷಯವನ್ನು ಮರೆತೆನು. ಅದೋ! ಅಲ್ಲಿ ಗಿಡಗಳಿಂದ ದಟ್ಟವಾಗಿ ತುಂಬಿದ ಅಶೋಕವನವು ಕಾಣುವುದು. ಅಲ್ಲಿಯೂ ಹೋಗಿ ನೋಡಬೇಕು. ಅದನ್ನುಮಾತ್ರ ಇದುವರೆಗೆ ನಾನು ನೋಡಿಬರಲಿಲ್ಲ. ಅದೊಂದು ಸ್ಥಳಮಾತ್ರವೇ ಉಳಿದಿರುವುದು. ದೇವತಾನುಗ್ರಹದಿಂದ ಅಲ್ಲಿಯಾದರೂ ಸೀತೆಯು ಸಿಕ್ಕುವಳೋ ನೋಡುವೆನು. ಹೊರಡುವುದಕ್ಕೆ ಮೊದಲೇ ಅಷ್ಟವಸುಗಳಿಗೂ, ಏಕಾದಶರುದ್ರರಿಗೂ, ದ್ವಾದಶಾದಿತ್ಯರಿಗೂ, ಅಶ್ವಿನೀದೇವತೆಗಳಿಗೂ ಸಿದ್ಧರಿಗೂ ನಮಸ್ಕರಿಸುವೆನು. ತಪಸ್ವಿಗೆ ತಪಃಫಲವು ಸಿದ್ಧವಾಗಿ ಲಭಿಸುವಂತೆ, ಈಗಲಾದರೂ ನಾನು ರಾಕ್ಷಸರೆಲ್ಲರನ್ನೂ ಜಯಿಸಿ ಇಕ್ಷ್ವಾಕುಕುಲವರ್ಧನೆಯಾದ ಸೀತೆಯು ರಾಮನಿಗೆ ಲಭಿಸುವಂತೆ ಮಾಡಬೇಕು." ಎಂದು ಮನಸ್ಸಿನಲ್ಲಿ ಒಂದು ಮುಹೂರ್ತಕಾಲದವರೆಗೆ ಧ್ಯಾನಿಸಿ, ಆಮೇಲೆ ತಟ್ಟನೆ ಅಲ್ಲಿಂದೆದ್ದು ಹೊರಡುವು

ಪಕ್ಕೆ ಸಿದ್ಧನಾದನು. ಆಗಲೇ ಆ ಹನುಮಂತನು ಬದ್ಧಾಂಜಲಿಯಾಗಿ ನಿಂತು “ಇದೋ ಲಕ್ಷ್ಮಣಸಹಿತನಾದ ರಾಮನಿಗೆ ನಮಸ್ಕಾರವು. ಇದೋ! ಜನಕಪುತ್ರಿಯಾದ ಸೀತೆಗೆ ನಮಸ್ಕಾರವು. ರುದ್ರನಿಗೂ, ಇಂದ್ರನಿಗೂ, ಯಮನಿಗೂ, ವಾಯುದೇವನಿಗೂ ನಮಸ್ಕಾರವು. ಚಂದ್ರಸೂರ್ಯರಿಗೂ, ಮರುದ್ಗಣಗಳಿಗೂ ನಮಸ್ಕಾರವು.” ಎಂದು ಆ ದೇವತೆಗಳೆಲ್ಲರಿಗೂ ನಮಸ್ಕರಿಸಿ, ತನ್ನ ಪ್ರಭುವಾದ ಸುಗ್ರೀವನಿಗೂ ಕೈಮುಗಿದು ನಾಲ್ಕುದಿಕ್ಕುಗಳನ್ನೂ ನೋಡಿ, ತನಗೆ ಇಷ್ಟಸಿದ್ಧಿಕರವಾದ ಅಶೋಕವನವನ್ನು ಮನಸ್ಸಿನಲ್ಲಿ ನೆನೆಸಿಕೊಂಡು, ಆಮೇಲೆ ತಾನು ಅಲ್ಲಿಗೆ ಹೋಗಿ ಮಾಡಬೇಕಾದ ಕಾರ್ಯವೇನೆಂಬುದನ್ನು ಕುರಿತು ಯೋಚಿಸತೊಡಗಿದನು. “ಆ ಅಶೋಕವನದಲ್ಲಿಯೂ ಬಹಳಮಂದಿ ರಾಕ್ಷಸರಿರುವುದರಲ್ಲಿ ಸಂದೇಹವಿಲ್ಲ! ಅನೇಕವನಗಳಿಂದ ಕೂಡಿದ ಆ ತೋಟವು ಸರ್ವವಿಧವಾದ ಸಂಸ್ಕಾರಗಳಿಂದಲೂ ಶೋಭಿಸುತ್ತಿರಬೇಕು. ಅದನ್ನೂ ಚೆನ್ನಾಗಿ ಹುಡುಕಿ ಬರಬೇಕಾದುದೇ ಆವಶ್ಯವು. ಅಲ್ಲಿನ ವೃಕ್ಷಗಳೆಲ್ಲವನ್ನೂ ಬಹಳ ಎಚ್ಚರಿಕೆಯಿಂದ ಎಷ್ಟೋಮಂದಿ ಕಾವಲುಗಾರರು ಕಾಯುತ್ತಿರುವರು. ವಾಯುವೂ ಕೂಡ ರಾವಣನ ಭಯಕ್ಕಾಗಿ ಅಲ್ಲಿನ ಗಿಡಗಳಮೇಲೆ ವೇಗದಿಂದ ಬೀಸಲಾರನು. ನಾನು ಮೊದಲೇ ರಾಮನ ಕಾರ್ಯಸಿದ್ಧಿಗಾಗಿಯೂ, ರಾವಣನನ್ನು ವಂಚಿಸುವುದಕ್ಕಾಗಿಯೂ, ಈ ಸೂಕ್ಷ್ಮಾಕಾರವನ್ನು ತಾಳಿರುವೆನು. ಇದುವರೆಗೆ ನನ್ನಿಂದ ಸಾಧ್ಯವಾದಷ್ಟು ಪ್ರಯತ್ನಮಾಡಿದೆನು. ಇನ್ನು ಮೇಲೆ ದೇವತೆಗಳೂ, ಋಷಿಗಣಗಳೂ, ನನ್ನ ಕಾರ್ಯವು ಕೈಗೂಡುವಂತೆ ಅನುಗ್ರಹಿಸಬೇಕೇ ಹೊರತು ಬೇರೆಯಲ್ಲ. ಪೂಜ್ಯವಾದ ಸ್ವಯಂಭುವಾದ ಬ್ರಹ್ಮನೂ, ಇತರದೇವತೆಗಳೂ, ಅಗ್ನಿಯೂ, ವಾಯುವೂ, ವಜ್ರಧರನಾದ ಇಂದ್ರನೂ, ಪಾಶಹಸ್ತನಾದ ವರುಣನೂ, ಚಂದ್ರಾದಿತ್ಯರೂ, ಮಹಾತ್ಮರಾದ ಅಶ್ವಿನಿದೇವತೆಗಳೂ, ಸಪ್ತಮರುತ್ತುಗಳೂ, ರುದ್ರನೂ, ನನಗೆ ಕಾರ್ಯಸಿದ್ಧಿಯನ್ನುಂಟುಮಾಡಲಿ! ಸಮಸ್ತಭೂತಗಳೂ, ನನಗೆ ಕಾರ್ಯಸಿದ್ಧಿಯಾಗುವಂತೆ ಅನುಗ್ರಹಿಸಲಿ! ಸಮಸ್ತಭೂತಗಳಿಗೂ ಪ್ರಭುವಾದ ಶ್ರೀಮಹಾವಿಷ್ಣುವು ನನಗೆ ಕಾರ್ಯಸಿದ್ಧಿಯನ್ನು ಕೊಡಲಿ! ಇನ್ನೂ ಕಣ್ಣಿಗೆ ಅಗೋಚರರಾಗಿರುವವರೂ, ದಾರಿಯಲ್ಲಿ ಗೋಚರಿಸುವವರೂ ನನಗೆ ಕಾರ್ಯಸಿದ್ಧಿಯನ್ನನುಗ್ರಹಿಸಲಿ! ಆಹಾ! ಉಬ್ಬಿ ಎಸಳಾದ ಮೂಗಿನಿಂದಲೂ, ಬಿಳುಪಾದ ಹಲ್ಲುಗಳಿಂದಲೂ, ಶುಭ್ರವಾದ ಮಂದಹಾಸದಿಂದಲೂ, ಕಮಲದಳಗಳಂತಿರುವ ಕಣ್ಣುಗಳಿಂದಲೂ ಕೂಡಿ, ಚಂದ್ರನಿಗೆಣೆಯಾದ ಕಾಂತಿಯುಳ್ಳ ಆ ಸೀತೆಯ ಮುಖವನ್ನು ನಾನು ಇನ್ನೆಂದಿಗೆ ನೋಡುವೆನು? ಅಯ್ಯೋ! ಅತಿನೀಚನಾಗಿ, ಮಹಾಪಾಪಿಯಾಗಿ, ಘಾತುಕನಾಗಿ,

ಘೋರವೇಷವುಳ್ಳವನಾದ ಆ ರಾವಣನು ಬಲಾತ್ಕಾರದಿಂದ ಕದ್ದು ತಂದಿಟ್ಟಿರುವ ಅಬಲೆಯಾದ ಆ ಸೀತೆಯು ತನ್ನ ಕಣ್ಣಿಗೆ ಬೀಳುವ ಬಗೆಯೇನು ?" ಎಂದು ನಾನಾವಿಧದಿಂದ ಚಿಂತಿಸುತಿದ್ದನು.

ಇಲ್ಲಿಗೆ ಹದಿಮೂರನೆಯ ಸರ್ಗವು.

---

 ಹನುಮಂತನು ಅಶೋಕವನವನ್ನು ಪ್ರವೇಶಿಸಿ ಶಿಂಶುಪಾವೃಕ್ಷವನ್ನು ನೋಡಿದುದು. 

ಮಹಾತೇಜಸ್ವಿಯಾದ ಹನುಮಂತನು ಹೀಗೆ ಮುಹೂರ್ತಕಾಲಪರ್ಯಂತರ ಧ್ಯಾನಿಸುತಿದ್ದು, ಅಶೋಕವನಕ್ಕೆ ಹೋಗಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿ ಕೊಂಡು, ಆಗಲೇ ಆ ಅರಮನೆಯ ಪ್ರಾಕಾರದಿಂದಿಳಿದು ಅಶೋಕವನಪ್ರಾಕಾರಕ್ಕೆ ಹಾರಿ ಕುಳಿತನು, ಆ ಪ್ರಾಕಾರದ ಮೇಲೆ ಕುಳಿತಹಾಗೆಯೇ, ಆ ತೋಟದಮೇಲೆ ಕಣ್ಣಿಟ್ಟು, [1] ವಸಂತಕಾಲದ ಪ್ರಾರಂಭವಾದುದರಿಂದ, ಚೆನ್ನಾಗಿ ಪುಷ್ಪಿಸಿದ ಅಲ್ಲಿನ ನಾನಾಬಗೆಯ ಗಿಡಗಳನ್ನು ನೋಡಿದನು. ಅಲ್ಲಿ ಪುಷ್ಪಭರಿತಗಳಾದ ಸಾಲೆ, ಆಸುಗೆ, ಉದ್ದಾಲಕ, ನಾಗಕೇಸರ, ಮಾವು, ಮರ್ಕಟ, ಮೊದಲಾದ ವೃಕ್ಷಗಳೆಲ್ಲವನ್ನೂ ಕಂಡನು. ಅವುಗಳನ್ನು ನೋಡಿದೊಡನೆ, ಅವನು ನಾಣೆಸಿಂದ ಹೊರಟ ಬಾಣದಂತೆ, ಅತಿವೇಗದಿಂದ ಹಾರಿಬಂದು, ಅನೇಕ ಲತೆಗಳಿಂದ ತುಂಬಿರುವುದಾಗಿಯೂ, ಮಾವಿನ ತೋಪುಗಳಿಂದ ನಿಬಿಡವಾಗಿಯೂ ಇದ್ದ ಒಂದು ಮರದ ಗುಂಪಿನಲ್ಲಿಳಿದನು. ಆ ತೋಟದಲ್ಲಿಯೋ ಚಿತ್ರವಿಚಿತ್ರಗಳಾದ ಗಿಡಗಳು ರೇಖೆಕಟ್ಟಿದಂತೆ ಬೆಳೆದಿರುವುವು. ಅಲ್ಲಲ್ಲಿ ಪಕ್ಷಿಗಳು ಕಿವಿಗಿಂಪಾಗಿ ಕೂಗುತ್ತಿರುವುವು. ಬೆಳ್ಳಿಯಂತೆಯೂ, ಬಂಗಾರದಂತೆಯೂ ಬಣ್ಣವುಳ್ಳ ನಾನಾಜಾತಿಯ ವೃಕ್ಷಗಳು ತುಂಬಿರುವುವು. ಪಕ್ಷಿಗಳಿಂದಲೂ, ಮೃಗಸಮೂಹಗಳಿಂದಲೂ ವಿಚಿತ್ರವಾದ ಆ ತೋಪಿನಲ್ಲಿ ಬೇರೆಬೇರೆ ಜಾತಿಯ ಗಿಡಗಳುಳ್ಳ ಸಣ್ಣ ತೋಟಗಳೂ ಅನೇಕವಾಗಿರುವುವು. ಈ ವೃಕ್ಷಸಮೂಹಗಳಿಂದ ಚಿತ್ರಿತವಾದ ಆ ತೋಟವು ಉದಯಕಾಲದ ಸೂರ್ಯನಂತೆಯೇ ಪ್ರಕಾಶಿಸುವುದು. ಬಗೆಬಗೆಯ ಹೂಗಿಡಗಳೂ, ಹಣ್ಣು

---

1. ಇಲ್ಲಿ ವಸಂತಪ್ರಾರಂಭವೆಂದರೆ "ಪೌರ್ಣಮಾಸ್ಯಾ ಮಾಸಾನ್ ಸಂಪಾದ್ಯ" ಎಂಬಂತೆ, ಹುಣ್ಣಿಮೆಯಿಂದ ಮಾಸವನ್ನೆಣಿಸುವ ಪಕ್ಷವನ್ನನುಸರಿಸಿ, ಫಾಲ್ಗುಣಪೂರ್ಣಿಮೆಗೆ ಮೊನ್ನೆಯದಿನವೆಂದು ಗ್ರಾಹ್ಯವು.

ಗಿಡಗಳೂ, ಸುತ್ತಲೂ ಹಬ್ಬಿಬೆಳೆದಿರುವುವು. ಮದಿಸಿದ ಕೋಗಿಲೆಗಳೂ, ಭ್ರಮರಗಳೂ ಎಡೆಬಿಡದೆ ಅದನ್ನಾಶ್ರಯಿಸಿರುವುವು. ಸಮಸ್ತಜನಗಳಿಗೂ ಸಂತೋಷಕರವಾಗಿ, ಅನೇಕ ಮೃಗಪಕ್ಷಿಗಳನ್ನು ಉಲ್ಲಾಸಗೊಳಿಸುತ್ತಿರುವ ಆ ವಸಂತಕಾಲದಲ್ಲಿ, ಆಂಜನೇಯನು ಆ ತೋಟಕ್ಕೆ ಪ್ರವೇಶಿಸಿ, ಸೀತೆಯನ್ನು ಹುಡುಕುವುದಕ್ಕಾಗಿ ಅಲ್ಲಲ್ಲಿ ಸುತ್ತಿ ಬರುತಿದ್ದನು. ಎಲ್ಲಿ ನೋಡಿದರೂ ಮದಿಸಿದ ನವಿಲುಗಳು ಕೇಕಾಧ್ವನಿಯಿಂದ ಕೂಗುತಿದ್ದುವು. ನಾನಾಜಾತಿಯ ಪಕ್ಷಿಸಮೂಹಗಳು ಅಸಂಖ್ಯಾತವಾಗಿ ತಿರುಗುತಿದ್ದುವು. ಹನುಮಂತನು ಅಲ್ಲಿ ರಾಜಪುತ್ರಿಯಾದ ಸೀತೆಯನ್ನು ಹುಡುಕುತ್ತಿರುವಾಗ, ಅವನ ಸಂಚಾರದಿಂದಲೇ ಅಲ್ಲಿನ ಮರಗಳು ಕದಲುತಿದ್ದುದರಿಂದ, ಆ ಮರಗಳಮೇಲೆ ಅಲ್ಲಲ್ಲಿ ಸುಖವಾಗಿ ನಿದ್ರಿಸುತಿದ್ದ ಹಕ್ಕಿಗಳು ತಟ್ಟನೆ ಎಚ್ಚರಗೊಂಡು ಮೇಲೆ ಹಾರುತಿದ್ದುವು. ಆ ಹಕ್ಕಿಗಳ ಹಾರಾಟದಲ್ಲಿ ಅವುಗಳ ರೆಕ್ಕೆಯ ಗಾಳಿಗೆ ಅಲ್ಲಿನ ಗಿಡಗಳು ಬಹಳವಾಗಿ ಅಲುಗಿ ನಾನಾಬಣ್ಣದ ಹೂಗಳನ್ನು ಚೆಲ್ಲುತಿದ್ದುವು. ಹೀಗೆ ಮರಗಳಿಂದುದಿರಿದ ಪುಷ್ಪವರ್ಷದಿಂದ ಮುಚ್ಚಿದ ಮೈಯುಳ್ಳ ಹನುಮಂತನು, ಆ ಅಶೋಕವನಮಧ್ಯದಲ್ಲಿ ಅಲಂಕಾರಾರ್ಥವಾಗಿ ಮಾಡಿಟ್ಟಿರುವ ಒಂದು ಹೂವಿನ ಬೆಟ್ಟದಂತೆ ಕಾಣುತಿದ್ದನು. ಮರಗಳ ನಡುವೆ ನುಗ್ಗಿನುಗ್ಗಿ ಸಮಸ್ತದಿಕ್ಕುಗಳನ್ನೂ ಸುತ್ತಿ ಬರುತಿದ್ದ ಈ ಆಂಜನೇಯನನ್ನು ನೋಡಿ ಸಮಸ್ತಭೂತಗಳೂ, ಆ ವನವನ್ನು ಪ್ರವೇಶಿಸಿರುವ ಮೂರ್ತಿಮಂತನಾದ ವಸಂತನೆಂದೇ ಭಾವಿಸಿದುವು. ಮರಗಳಿಂದುದಿರಿಬಿದ್ದ ಬಗೆಬಗೆಯ ಹೂಗಳಿಂದ ವ್ಯಾಪ್ತವಾದ ಆ ವನಭೂಮಿಯು, ವಿಚಿತ್ರಾಭರಣಭೂಷಿತೆಯಾದ ಒಂದುಸ್ತ್ರೀಯಂತೆ ಕಾಣುತಿತ್ತು. ಮಹಾಬಲಾಢ್ಯನಾದ ಹನುಮಂತನು, ಅಲ್ಲಲ್ಲಿ ವೃಕ್ಷಗಳನ್ನು ಕೈಯಿಂದ ಹಿಡಿದಾಡಿಸುತ್ತಿರಲು, ಆ ಗಿಡಗಳಲ್ಲಿ ಒಂದೆಲೆಯಾಗಲಿ, ಒಂದುಹೂವಾಗಲಿ, ಒಂದುಹಣ್ಣಾಗಲಿ ಇಲ್ಲದೆ, ಅವೆಲ್ಲವೂ ಮೋಟುಮರಗಳಂತಾಗಿ, ಜೂಜಿನಲ್ಲಿ ತಮ್ಮ ಬಟ್ಟೆಬರೆಗಳನ್ನೂ, ಒಡವೆವಸ್ತುಗಳನ್ನೂ ಸೋತು ನಿಂತಿರುವ ಧೂರ್ತರಂತೆ ಕಾಣುತಿದ್ದುವು. ಮಹಾವೇಗಶಾಲಿಯಾದ ಹನುಮಂತನಿಂದ ಕದಲಿಸಲ್ಪಟ್ಟ ಗಿಡಗಳೆಲ್ಲವೂ, ಹಣ್ಣು, ಹೂ, ಎಲೆ, ಮುಂತಾದುವುಗಳೊಂದೂ ಇಲ್ಲದೆ ಒಣಗಿದ ಮರಗಳಂತಾದುವು. ಮತ್ತು ಅವು ಬಿರುಗಾಳಿಯ ಬಡಿತಕ್ಕೆ ಸಿಕ್ಕಿದಂತೆ ಕೇವಲಸ್ಕಂಧಮಾತ್ರವನ್ನೇ ನೆಮ್ಮಿ ನಿಂತಿದ್ದುವು. ಮೇಲಿದ್ದ ಪಕ್ಷಿಗಳೆಲ್ಲವೂ ಚೆಲ್ಲಾಚೆದರಾಗಿ ಹಾರಿದುವು. ಈ ಆಂಜನೇಯನು ಮುಟ್ಟಿದ ಒಂದೊಂದು ಮರವೂ ಯಾವ ಕೆಲಸಕ್ಕೂ ಬಾರದಂತಾಯಿತು. ಹೀಗೆ ಹನುಮಂತನು ತನ್ನ ಬಾಲದಿಂದಲೂ, ಕೈಗಳಿಂದಲೂ,

ಕಾಲುಗಳಿಂದಲೂ ಅಲ್ಲಲ್ಲಿ ಮರಗಳನ್ನು ಹಿಡಿದು ಕದಲಿಸುತ್ತಿರಲು, ಮುರಿದು ಬಿದ್ದ ಆಮರದ ತುಂಡುಗಳಿಂದ ಅಶೋಕವನಿಕೆಯು, ರತಿಕ್ರೀಡೆಯ ಸಂಭ್ರಮದಲ್ಲಿ ಬಿಚ್ಚಿದ ತಲೆಕೂದಲುಗಳಿಂದಲೂ ಕದಲಿದ ಕುಂಕುಮದಿಂದಲೂ, ಕಂದಿದ ತುಟಿಯಿಂದಲೂ, ಉಗುರಿನ ಗಾಯಗಳಿಂದಲೂ, ಹಲ್ಲಿನ ಗುರುತುಗಳಿಂದಲೂ ಕೂಡಿ ಶೋಭಿಸುವ ಯೌವನಸ್ತ್ರೀಯಂತೆ ಕಾಣುತಿತ್ತು. ವಿಂಧ್ಯಪರ್ವತದಮೇಲೆ ಮಲಗಿದ ಮೇಘಸಮೂಹವನ್ನು ಸುಳಿಗಾಳಿಯು ಅಪ್ಪಳಿಸಿ ಚದರಿಸುವಂತೆ ಹನುಮಂತನು ತನ್ನ ಬಲದಿಂದ ಆ ವನದ ಗಿಡಬಳ್ಳಿಗಳೆಲ್ಲವನ್ನೂ ಕಿತ್ತೆಸೆಯುತಿದ್ದನು. ಮತ್ತು ಆ ವನದ ನಡುನಡುವೆ ಹನುಮಂತನು ಅಲ್ಲಲ್ಲಿ ರತ್ನದ ನೆಲಗಟ್ಟುಗಳನ್ನೂ, ಚಿನ್ನಬೆಳ್ಳಿಯ ಮೈದಾನಗಳನ್ನೂ, ವಿವಿಧಾಕಾರವುಳ್ಳ ಬಾವಿಗಳನ್ನೂ ಕಂಡನು. ಅವೆಲ್ಲವೂ ತಿಳಿನೀರಿನಿಂದ ತುಂಬಿ ಅತಿರಮಣೀಯವಾಗಿದ್ದುವಲ್ಲದೆ ಒಂದೊಂದುಬಾವಿಯೂ, ರತ್ನದ ಸೋಪಾನಗಳಿಂದಲೂ, ಮುತ್ತು ಹವಳಗಳ ಮಳಲುದಿಣ್ಣೆಗಳಿಂದಲೂ, ಸ್ಫಟಿಕದ ನೆಲಗಟ್ಟುಗಳಿಂದಲೂ, ಚಿತ್ರವಿಚಿತ್ರಗಳಾದ ಬಂಗಾರದ ತೀರವೃಕ್ಷಗಳಿಂದಲೂ ಶೋಭಿಸುತಿದ್ದುವು. ಆ ಬಾವಿಗಳೆಲ್ಲವೂ ಅರಳಿದ ತಾವರೆಗಳಿಂದಲೂ, ನೈದಿಲೆಗಳಿಂದಲೂ ತುಂಬಿದ್ದುವು. ಚಕ್ರವಾಕಗಳೂ, ನೀರ್ಕೋಳಿಗಳೂ, ಹಂಸಸಾರಸಾದಿಪಕ್ಷಿಗಳೂ, ಕಿವಿಗಿಂಪಾಗಿ ಕೂಗುತಿದ್ದುವು. ಅಲ್ಲಲ್ಲಿ ಅನೇಕತೀರವೃಕ್ಷಗಳಿಂದ ತುಂಬಿ, ವಿಸ್ತಾರವಾಗಿ ಪ್ರವಹಿಸುತಿದ್ದ ನದಿಗಳು ಕಾಣುತಿದ್ದುವು. ಅಲ್ಲಿನ ಒಂದೊಂದು ನದಿಯೂ ಅಮೃತದಂತೆ ರುಚಿಯಾದ ನೀರಿನಿಂದ ತುಂಬಿ ನೂರಾರುಲತೆಗಳಿಂದ ಪರಿವೃತವಾಗಿರುವುದು. ಒಂದೊಂದು ನದಿಯೂ, ಕಲ್ಪವೃಕ್ಷದ ಹೂಗಳಿಂದ ಹೊದಿಸಲ್ಪಟ್ಟಿರುವುದು. ಅವುಗಳ ಸುತ್ತಲೂ ಬಗೆಬಗೆಯ ಪೊದೆಗಳು ದಟ್ಟವಾಗಿ ತುಂಬಿ ಬೆಳೆದಿರುವುವು. ನಡುನಡುವೆ ಕಣಿಗಿಲೆಗಿಡಗಳು ಪುಷ್ಪಭರಿತಗಳಾಗಿ ಶೋಭಿಸುವುವು. ಇವೆಲ್ಲವನ್ನೂ ನೋಡುತ್ತ ಆಂಜನೇಯನು ಮುಂದೆ ಬಂದಾಗ ಉನ್ನತವಾದ ಶಿಖರವುಳ್ಳುದಾಗಿ, ಮೇಘಕ್ಕೆ ಸಮಾನವಾಗಿ, ಅತಿರಮಣೀಯವಾಗಿದ್ದ ಜಗತಿಪರ್ವತವೆಂಬ ಒಂದು ಮಣ್ಣಿನ ಬೆಟ್ಟವನ್ನು ಕಂಡನು. ಆ ಪರ್ವತಶಿಖರವೋ ಮಹೋನ್ನತವಾಗಿ, ಅತಿವಿಚಿತ್ರವಾಗಿ, ನಾಲ್ಕುಕಡೆಗೂ ಹಬ್ಬಿಬೆಳೆದಿರುವುದು. ಅಲ್ಲಲ್ಲಿ ಕಲ್ಲಿನ ಮಂಟಪಗಳೂ ಬಗೆಬಗೆಯ ವೃಕ್ಷಗಳೂ, ಕಾಣುತ್ತಿರುವುವು. ಆಂಜನೇಯನು ಆ ಪರ್ವತದ ಸೊಗಸನ್ನು ಸುತ್ತಲೂ ಕಣ್ಣಿಟ್ಟು ನೋಡುವಾಗ, ಪ್ರಣಯಕಲಹದಲ್ಲಿ ನಾಯಕನ ತೊಡೆಯಿಂದ ನೂಕಲ್ಪಡುವ ಯುವತಿಯಂತೆ ಆ ಬೆಟ್ಟದಿಂದಿಳಿಯುವ ಒಂದು ನದಿಯನ್ನು ನೋಡಿದನು. ಹಣ್ಣುಗಳ

ಭಾರದಿಂದ ಆ ನದಿಯ ನೀರನ್ನು ಮುಟ್ಟುವಂತೆ ಬಗ್ಗಿದ ಕೊಂಬೆಗಳುಳ್ಳ ಅಲ್ಲಿನ ತೀರವೃಕ್ಷಗಳೆಲ್ಲವೂ, ಪ್ರಣಯಕುಪಿತೆಯಾಗಿ ನಾಯಕನನ್ನು ಧಿಕ್ಕರಿಸಿ ವೇಗದಿಂದ ಹೋಗುತ್ತಿರುವ ಯುವತಿಯನ್ನು ಆಕೆಯ ಪ್ರಿಯಬಂಧುಗಳು ಕೈಯಿಡ್ಡಗಟ್ಟಿ ಸಮಾಧಾನಪಡಿಸುವಂತೆ ಕಾಣುತಿದ್ದುವು. ಹಾಗೆಯೇ ಆ ನದೀಪ್ರವಾಹವೂ ಆ ಕೊಂಬೆಗಳಿಗೆ ಬಡಿದು, ಸ್ವಲ್ಪವಾಗಿ ಹಿಂದಕ್ಕೆ ಸರಿಯುತ್ತಿರಲು, ಬಂಧುಗಳ ಮಾತನ್ನು ಮೀರಲಾರದೆ ಕೋಪವನ್ನು ಬಿಟ್ಟು, ಸಮಾಧಾನಹೊಂದಿ ತನ್ನ ಪ್ರಿಯನ ಸಮೀಪಕ್ಕೆ ಹಿಂತಿರುಗುವ ನಾಯಕಿಯಂತೆ ಕಾಣುತಿತ್ತು. ಮತ್ತು ಹನುಮಂತನು ಅಲ್ಲಲ್ಲಿ ಅನೇಕಪಕ್ಷಿಗಳಿಂದ ತುಂಬಿದ ತಾವರೆಕೊಳಗಳನ್ನೂ, ತಿಳಿನೀರಿನಿಂದ ತುಂಬಿದ ಕೃತ್ರಿಮಸರೋವರಗಳನ್ನೂ ನೋಡಿದನು. ಆ ಕೊಳಗಳೆಲ್ಲವೂ ಮುತ್ತಿನ ಮರಗಳಿಂದಲೂ, ರತ್ನದ ಸೋಪಾನಗಳಿಂದಲೂ ಶೋಭಿಸುತಿದ್ದುವು. ಆ ಪ್ರದೇಶಗಳೆಲ್ಲವೂ ಅನೇಕ ಮೃಗಸಮೂಹಗಳಿಂದಲೂ, ವಿಚಿತ್ರವನಗಳಿಂದಲೂ, ಅತಿಮನೋಹರವಾಗಿದ್ದುವು. ವಿಶ್ವಕರ್ಮನಿರ್ಮಿತಗಳಾದ ಮಹೋನ್ನತ ಸೌಧಗಳಿಂದಲೂ, ಕೃತ್ರಿಮವನಗಳಿಂದಲೂ, ಆ ಅಶೋಕವನವು ಸುತ್ತಲೂ ಅಲಂಕರಿಸಲ್ಪಟ್ಟಂತೆ ಕಾಣುತಿತ್ತು. ಅಲ್ಲಿ ಯಾವ ಹೂಗಿಡಗಳಾಗಲಿ, ಹಣ್ಣುಗಿಡಗಳಾಗಲಿ, ಅಂದವಾದ ಮೇಲ್ಕಟ್ಟುಗಳಿಂದಲೂ, ವಿಸ್ತಾರವಾದ ಜಗುಲಿಗಳಿಂದಲೂ, ಆ ಜಗುಲಿಯನ್ನು ಹತ್ತುವುದಕ್ಕೆ ತಕ್ಕ ಸುವರ್ಣಸೋಪಾನಗಳಿಂದಲೂ ಶೋಭಿಸುತಿದ್ದುವು. ಹೀಗೆ ಸರ್ವೋತ್ತಮ ಸೌಭಾಗ್ಯವುಳ್ಳ ಆ ವನದ ಸೊಬಗನ್ನು ಆಂಜನೇಯನು ಸುತ್ತಿಸುತ್ತಿನೋಡುತ್ತ, ಮುಂದೆ ಬರುವಾಗ, ಅನೇಕ ಲತೆಗಳಿಂದ ಪರಿವೃತವಾಗಿಯೂ, ಎಲೆಗಳಿಂದ ನಿಬಿಡವಾಗಿಯೂ, ಸುತ್ತಲೂ ಚಿನ್ನದ ಜಗತಿಕಟ್ಟೆನಿಂದ ಶೋಭಿತವಾಗಿಯೂ ಇದ್ದ ಸುವರ್ಣಮಯವಾದ ಒಂದು ಶಿಂಶುಪಾವೃಕ್ಷವನ್ನು ಕಂಡನು. ಮತ್ತು ಆ ಮರದಸುತ್ತಲೂ ಚಿತ್ರವಿಚಿತ್ರವಾಗಿ ಮಾಡಿದ ನೆಲಗಟ್ಟುಗಳನ್ನೂ, ತೊಟ್ಟಿಗಳನ್ನೂ, ನೀರುಕಟ್ಟುವ ಕಾಲುವೆಗಳನ್ನೂ, ಅಗ್ನಿಯಂತೆ ಥಗಥಗಿಸುವ ಇನ್ನೂ ಕೆಲವುಬೇರೆ ಸುವರ್ಣವೃಕ್ಷಗಳನ್ನೂ ಕಂಡನು. ಸುಮೇರುಪರ್ವತದ ಕಾಂತಿಯಿಂದ ತುಂಬಿದ ಸೂರ್ಯನಂತೆ, ಆ ಸುವರ್ಣವೃಕ್ಷಗಳ ಕಾಂತಿಯಿಂದ ಮುಚ್ಚಿದ ಮೈಯುಳ್ಳ ಈತನು, ತನ್ನನ್ನೇ ತಾನು ನೋಡಿಕೊಳ್ಳುತ್ತ, “ಭಲೆ! ಈಗ ನಾನೊಂದು ಚಿನ್ನದ ಕಪಿಯಾದೆನು!” ಎಂದು ಹರ್ಷಿಸುತಿದ್ದನು. ಹೀಗೆ ಅನೇಕ ಸುವರ್ಣಲತೆಗಳಿಂದ ಪರಿವೃತವಾಗಿಯೂ ಮಂದಮಾರುತದಿಂದ ಚಾಲಿತವಾಗಿಯೂ, ಅಲ್ಲಲ್ಲಿ ಕಟ್ಟಿದ ಕಿರುಗೆಜ್ಜೆಗಳ ಧ್ವನಿಯಿಂದ ಶೋಭಿತವಾಗಿಯೂ ಇದ್ದ

ಶಿಂಶುಪಾವೃಕ್ಷವನ್ನು ನೋಡಿನೋಡಿ ವಿಸ್ಮಯಪಡುತ್ತ, ಪುಷ್ಪಿಸಿದ ಕೊನೆಗಳಿಂದಲೂ, ಎಳೇ ಚಿಗುರುಗಳಿಂದಲೂ, ಅಂದವಾದ ಎಲೆಗಳಿಂದಲೂ ತುಂಬಿ, ಅತಿ ಮನೋಹರವಾದ ಆ ಶಿಂಶುಪಾವೃಕ್ಷದ ಒಂದು ಶಾಖೆಯಮೇಲೆ ಹತ್ತಿಕುಳಿತು, ತನ್ನಲ್ಲಿ ತಾನು “ನಾನು ಇಲ್ಲಿಯೇ ಕುಳಿತು ಸೀತೆಯನ್ನು ಹುಡುಕುವೆನು. ಆ ಸೀತೆಯಂತೂ ರಾಮನನ್ನು ಕಾಣದೆ ಕುದಿಯುತ್ತಿರುವಳು. ಆ ದುಃಖೋಪಶಮನಾರ್ಥವಾಗಿ ಇಲ್ಲಿಗೆ ಬಂದು ಅತ್ತಿತ್ತ ಸಂಚರಿಸಬಹುದು. ಸೀತೆಯನ್ನು ಕಂಡು ಹಿಡಿಯಬೇಕಾದರೆ ಇದೇ ಸರಿಯಾದ ಸ್ಥಳವು. ದುರಾತ್ಮನಾದ ರಾವಣನಿಗೆ ಸೇರಿದ್ದರೂ ಈ ತೋಟವು ರಮ್ಯವಾಗಿಯೇ ಇರುವುದು. ಅಲ್ಲಲ್ಲಿ ಸಂಪಗೆಗಿಡಗಳೂ, ಚಂದನವೃಕ್ಷಗಳೂ; ವಕುಳವೃಕ್ಷಗಳೂ, ಈ ವನಕ್ಕೆ ಅಲಂಕಾರಪ್ರಾಯವಾಗಿರುವುವು. ಅನೇಕಪಕ್ಷಿಗಳಿಗಾಶ್ರಯವಾದ ಈ ತಾವರೆಕೊಳವು ಕೂಡ ಅತಿಮನೋಹರವಾಗಿರುವುದು. ಸೀತೆಯು ದುಃಖಶಾಂತಿಗಾಗಿ ಇಲ್ಲಿಗೆ ಬಂದೇಬರುವಳು. ಆಕೆಗೆ ವನವನ್ನು ಸುತ್ತಿ ಬಳಕೆಯುಂಟು. ಆದುದರಿಂದ ರಾಮನ ಪ್ರಿಯಪತ್ನಿಯಾದ ಆ ಜನಕಪುತ್ರಿಯು ಇಲ್ಲಿಗೆ ಬಾರದಿರಳು. ಹಾಗಿಲ್ಲವೇ ಜಿಂಕೆಯ ಕಣ್ಣಿನಂತೆ ಕಣ್ಣುಳ್ಳ, ಅತಿಚತುರಳಾದ, ಮತ್ತು ಲೋಕಪೂಜ್ಯಳಾದ ಆ ಸೀತೆಯು, ರಾಮವಿಯೋಗದಿಂದುಂಟಾದ ದುಃಖವನ್ನು ತಡೆಯಲಾರದೆ ಈ ಸಮೀಪದ ವನಕ್ಕಾದರೂ ಬರಬಹುದು. ಆಕೆಗೆ ವನವಾಸದಲ್ಲಿಯೂ ವಿಶೇಷಪ್ರೀತಿಯುಂಟು. ವನದಲ್ಲಿಯೂ ಸುತ್ತಿಬಳಕೆಯುಳ್ಳವಳು. ಆದುದರಿಂದ ರಾಮವಿಷಯವಾದ ದುಃಖದಿಂದ ತಪಿಸುತ್ತಿರುವ ಆಕೆಯು ಇಲ್ಲಿಗಾದರೂ ಅವಶ್ಯವಾಗಿ ಬಾರದೆ ಬಿಡಳು. ರಾಮನಿಗೆ ಪ್ರಿಯಪತ್ನಿಯಾಗಿಯೂ, ಜನಕಪುತ್ರಿಯಾಗಿಯೂ, ಪತಿವ್ರತೆಯಾಗಿಯೂ ಇರುವ ಆ ಸೀತೆಯು, ವನಮೃಗಗಳಲ್ಲಿ ಬಹಳ ಆಸೆಯುಳ್ಳವಳು. ಅವುಗಳ ಕ್ಷೇಮವನ್ನು ವಿಚಾರಿಸುವುದಕ್ಕಾದರೂ ಇಲ್ಲಿಗೆ ಬರಬಹುದು. ಮತ್ತು ಆಕೆಯು ಸಂಧ್ಯೋಪಾಸನೆಯಲ್ಲಿಯೂ ಬಹಳ ಶ್ರದ್ಧೆಯುಳ್ಳವಳಾದುದರಿಂದ, ಆ ಕಾರ್ಯಕ್ಕಾದರೂ ಈ ನದಿಗೆ ಬಂದೇಬರುವಳು. ಇದರಲ್ಲಿ ಸಂದೇಹವಿಲ್ಲ. ಈ ಅಶೋಕವನವು ಅವಳ ಗುಣಕ್ಕೂ ಸೌಭಾಗ್ಯಕ್ಕೂ ಅನುರೂಪವಾಗಿರುವುದು. ರಾಜಾಧಿರಾಜನಾದ ಶ್ರೀರಾಮನ ಪತ್ನಿಯಾಗಿಯೂ, ಚಂದ್ರನಂತೆ ಪ್ರಸನ್ನಮುಖವುಳ್ಳವಳಾಗಿಯೂ ಇರುವ ಆ ಸೀತೆಯು ಬದುಕಿರುವುದೇ ನಿಜವಾದರೆ, ಪುಣ್ಯಜಲವುಳ್ಳ ಈ ನದಿಗಂತೂ ಅವಶ್ಯವಾಗಿ ಬಂದೇಬರಬೇಕು.” ಎಂದು ಮಹಾತ್ಮನಾದ ಆ ಹನುಮಂತನು ಅನುಮಾನದಿಂದ ನಿಶ್ಚಯಮಾಡಿಕೊಂಡು, ಆ ಸೀತೆಯನ್ನೇ ನಿರೀಕ್ಷಿಸುತ್ತ, ಸುತ್ತಲೂ ಚೆನ್ನಾಗಿ ಪುಷ್ಪಿಸಿದ ಆ ಶಿಂಶುಪಾವೃಕ್ಷದ

ಎಲೆಗಳ ನಡುವೆ ಮರೆಯಾಗಿ ಕುಳಿತು, ಅಲ್ಲಿಂದಲೇ ಆ ತೋಟದ ವಿಶೇಷಗಳೆಲ್ಲ ವನ್ನೂ ನೋಡುತಿದ್ದನು.

ಇಲ್ಲಿಗೆ ಹದಿನಾಲ್ಕನೆಯ ಸರ್ಗವು.

---

## ಹನುಮಂತನು ಸೀತೆಯನ್ನು ಕಂಡುದು.

ಹೀಗೆ ಹನುಮಂತನು ಆ ಶಿಂಶುಪಾವೃಕ್ಷದಮೇಲೆ ಕುಳಿತು, ಸುತ್ತಲೂ ಕಣ್ಣಿಟ್ಟು ಸೀತೆಯನ್ನು ಹುಡುಕುತ್ತ ಆ ವನವೆಲ್ಲವನ್ನೂ ಚೆನ್ನಾಗಿ ನೋಡಿದನು. ಆ ವನದಲ್ಲಿಯಾದರೋ ಒಂದುಕಡೆಯಲ್ಲಿ ಕಲ್ಪಲತೆಗಳೂ, ಮತ್ತೊಂದು ಕಡೆ ಯಲ್ಲಿ ಸಾಮಾನ್ಯವೃಕ್ಷಗಳೂ ಶೋಭಿಸುತ್ತಿರುವುವು. ಎಲ್ಲಿ ನೋಡಿದರೂ ದಿವ್ಯ ಗಂಧವುಳ್ಳ ಪುಷ್ಪರಸಗಳು ಸುರಿಯುತ್ತಿರುವುವು. ಸುತ್ತಲೂ ವಿಚಿತ್ರಾಲಂಕಾರ ಗಳಿಂದ ಶೋಭಿತವಾಗಿರುವುದು. ಸಾಕ್ಷಾದ್ದೇವೇಂದ್ರನ ನಂದನವನಕ್ಕೆಣೆಯಾಗಿರು ವುದು. ಎಲ್ಲಿ ನೋಡಿದರೂ ಮೃಗಪಕ್ಷಿಗಳು ಉಲ್ಲಾಸದಿಂದ ಸಂಚರಿಸುತ್ತಿರುವುವು. ಅಲ್ಲಲ್ಲಿ ಉಪ್ಪರಿಗೆಗಳೂ ಗೋಪುರಗಳೂ ನಿಬಿಡವಾಗಿರುವುವು. ನಾಲ್ಕು ಕಡೆಗ ಳಲ್ಲಿಯೂ ಕೋಗಿಲೆಗಳು ಕಿವಿಗಿಂಪಾಗಿ ಕೂಗುತ್ತಿರುವುವು. ಸುವರ್ಣಮಯ ಗಳಾದ ಪದ್ಮೋತ್ಪಲಗಳಿಂದ ತುಂಬಿದ ಬಾವಿಗಳು ಅದರ ನಾಲ್ಕುಕಡೆಗಳಲ್ಲಿಯೂ ಕೆಂಗೊಳಿಸುತ್ತಿರುವುವು. ಅಲ್ಲಲ್ಲಿ ಚಿತ್ರವಿಚಿತ್ರಗಳಾದ ಆಸನಗಳೂ, ರತ್ನಗಂಬಳಿ ಗಳೂ ಹಾಸಲ್ಪಟ್ಟಿರುವುವು. ಅಲ್ಲಲ್ಲಿ ಅಸಂಖ್ಯಾತಗಳಾದ ನೆಲಮಾಳಿಗೆಗಳು ಕಾಣುತ್ತಿರುವುವು. ಯಾವಾಗಲೂ ಆ ವನವು ಸಾರ್ವರ್ತುಕಗಳಾದ ಫಲಪುಷ್ಪ ಗಳಿಂದ ಮನೋಹರವಾಗಿರುವುದು. ಎಲ್ಲಿ ನೋಡಿದರೂ ಫಲಭರಿತಗಳಾದ ವೃಕ್ಷಗಳೇ ಕಾಣಿಸುವುವು. ಅಲ್ಲಲ್ಲಿ ಚೆನ್ನಾಗಿ ಪುಷ್ಪಿಸಿದ ಅಶೋಕವೃಕ್ಷಗಳಿಂದ, ಆ ವನವೆಲ್ಲವೂ ಸೂರ್ಯೋದಯಕಾಂತಿಯಿಂದೊಪ್ಪುತಿದ್ದುದಲ್ಲದೆ, ಅದರಿಂದ ಆ ಪ್ರದೇಶವೆಲ್ಲವೂ ಅಗ್ನಿಜ್ವಾಲೆಯಲ್ಲಿ ಸಿಕ್ಕಿ ಉರಿಯುವಂತೆಯೂ ಕಾಣುತ್ತಿತ್ತು. ಅಲ್ಲಿನ ಹಕ್ಕಿಗಳ ಹಾರಾಟದ ಸಂಭ್ರಮವೇ ಅಲ್ಲಿನ ಮರಗಳಲ್ಲಿ ಎಲೆಗಳೂ, ಕೊಂಬೆಗಳೂ ಇಲ್ಲದಹಾಗೆ ಮಾಡಿಬಿಡುವುವೋ ಎಂಬಂತೆ ಕಾಣುತಿದ್ದುವು. ನೋಡಿದಾಗಲೇ ಮನಸ್ಸಿನ ಸಮಸ್ತದುಃಖಗಳನ್ನೂ ನೀಗಿಸುವಂತೆ ಅಮೂಲಾಗ್ರ ವಾಗಿ ಪುಷ್ಪಿಸಿದ್ದ ಅಲ್ಲಿನ ಅಶೋಕವೃಕ್ಷಗಳು, ಹೂಗಳ ಭಾರದಿಂದ ಭೂಮಿ

ಯನ್ನು ಮುಟ್ಟುವಂತೆ ಬಾಗಿದ್ದುವು. ಅಲ್ಲಲ್ಲಿ, ಸುರಹೊನ್ನೆ, ಏಳಿಲೆಬಾಳೆ, ಸಂಪಗೆ, ಮುತ್ತುಗ, ಮುಂತಾದ ಗಿಡಗಳೆಲ್ಲವೂ ಚೆನ್ನಾಗಿ ಉಲ್ಲಾಸದಿಂದ ಬೆಳೆದು ಪುಷ್ಪಭಾರದಿಂದ ಶೋಭಿಸುತಿದ್ದುವು. ಪುಷ್ಪಿತಗಳಾದ ಕರ್ಣಿಕಾರಗಳಿಂದಲೂ, ಕಿಂಶುಕವೃಕ್ಷಗಳಿಂದಲೂ ಆ ವನವು ಜ್ವಲಿಸುವಂತೆ ತೋರುತಿತ್ತು. ಅಲ್ಲಿನ ಅಶೋಕವೃಕ್ಷಗಳಲ್ಲಿ ಬಂಗಾರದ ಬಣ್ಣವುಳ್ಳವು ಕೆಲವು! ಅಗ್ನಿಜ್ವಾಲೆಗೆ ಸಮಾನವಾದುವು ಕೆಲವು! ನೀಲಾಂಜನಪರ್ವತಗಳಿಗೆ ಸಮಾನವಾದುವು ಕೆಲವು! ಹೀಗೆ ನಾನಾವರ್ಣವುಳ್ಳ ಅಶೋಕವೃಕ್ಷಗಳು ಅಲ್ಲಿ ಸಾವಿರಾರು ಸಂಖ್ಯೆಯಿಂದ ಶೋಭಿಸುತಿದ್ದುವು. ಅದು ಅನೇಕ ವೃಕ್ಷಸಮೂಹವುಳ್ಳ, ನಂದನವನವನ್ನು ಮೀರಿರುವಂತೆ ಕಾಣುತಿತ್ತು. ಮತ್ತು ಅದು ಕುಬೇರನ ಚೈತ್ರರಥವೆಂಬ ಉದ್ಯಾನದಂತೆ ಚಿತ್ರವಾಗಿಯೂ, ಹೀಗೆಂದೂಹಿಸುವುದಕ್ಕೂ ಸಾಧ್ಯವಲ್ಲದ ಸೊಬಗುಳ್ಳುದಾಗಿಯೂ, ದಿವ್ಯವಾಗಿಯೂ, ಅತಿ ರಮಣೀಯವಾಗಿಯೂ ಪ್ರಕಾಶಿಸುತಿತ್ತು. ಪುಷ್ಪಗಳೆಂಬ ನಕ್ಷತ್ರದಿಂದ ತುಂಬಿದ ಬೇರೊಂದು ಆಕಾಶವೋ ಎಂಬಂತೆಯೂ, ಪುಷ್ಪರೂಪಗಳಾದ ರತ್ನಗಳಿಂದ ತುಂಬಿದ ಐದನೆಯ ಸಾಗರವೋ ಎಂಬಂತೆಯೂ ಒಪ್ಪುತ್ತಿತ್ತು. ಸಮಸ್ತ ಋತುಗಳಲ್ಲಿರತಕ್ಕ ಪುಷ್ಪಗಳೆಲ್ಲವೂ ಅಲ್ಲಲ್ಲಿ ಕಾಣಿಸುತಿದ್ದುವು ನಾಲ್ಕುಕಡೆಗಳಿಂದಲೂ ಮಕರಂದಗಂಧವು ಘಮಘಮಿಸಿ ಹೊರಟುಬರುತ್ತಿತ್ತು. ಪುಷ್ಪರಸದ ಸುವಾಸನೆಯಿಂದ ತುಂಬಿದ ಒಂದೊಂದು ಮರದಮೇಲೆಯೂ, ಪಕ್ಷಿಗಳು ಉಲ್ಲಾಸಗೊಂಡು ಕಿವಿಗಿಂಪಾಗಿ ಕೂಗುತಿದ್ದುವು, ಒಂದೊಂದು ಮರದಡಿಯಲ್ಲಿಯೂ ಮೃಗಗಳು ವಿನೋದದಿಂದ ವಿಹರಿಸುತ್ತಿದ್ದುವು. ಈ ಮೃಗಪಕ್ಷಿಗಳ ವಿವಿಧಧ್ವನಿಗಳೇ ಆ ವನವೆಲ್ಲವನ್ನೂ ವ್ಯಾಪಿಸುತಿದ್ದುವು. ದಿವ್ಯಗಂಧವನ್ನು ಹರಡುತ್ತಿರುವ ಮಂದಮಾರುತವು ನಾಲ್ಕುಕಡೆಗಳಿಂದಲೂ ಬೀಸುತ್ತಿರಲು, ಆ ಅಶೋಕವನವು ಬೇರೊಂದು ಗಂಧಮಾದನಪರ್ವತವೋ ಎಂಬಂತೆ ತೋರುತ್ತಿತ್ತು. ಹೀಗೆ ಅತಿ ರಮಣೀಯವಾದ ಅಶೋಕವನವನ್ನು ಆ ಅಂಜನೇಯನು ಸುತ್ತಲೂ ಕಣ್ಣಿಟ್ಟು ನೋಡುತ್ತಿರುವಾಗ, ಮುಂದೆ ಸ್ವಲ್ಪದೂರದಲ್ಲಿ ಚೈತ್ಯಾಲಯದಂತೆ ಮಹೋನ್ನತವಾಗಿಯೂ, ವಿಸ್ತಾರವಾಗಿಯೂ ಇರುವ ಒಂದು ಪ್ರಾಸಾದವನ್ನು ಕಂಡನು. ಸುತ್ತಲೂ ಸಾವಿರಾರು ಕಂಬಗಳನ್ನು ನಿಲ್ಲಿಸಿ ಕಟ್ಟಿದ್ದ ಆ ಉಪ್ಪರಿಗೆಯು ಕೈಲಾಸದಂತೆ ಬಿಳುಪಾಗಿ ಶೋಭಿಸುತ್ತಿತ್ತು. ಆ ಮನೆಯ ಮುಂದೆ ಹವಳದ ಸೋಪಾನಗಳೂ, ಚಿನ್ನದ ಜಗುಲಿಗಳೂ ಕಾಣುತಿದ್ದುವು. ಮತ್ತು ಅದು, ಕಾಂತಿಯಿಂದ ಕಣ್ಣುಗಳನ್ನು ಕೋರೈಸುವಂತೆಯೂ ಮಹೋನ್ನತವಾದುದರಿಂದ ಆಕಾಶವನ್ನು

ಮುಚ್ಚುವಂತೆಯೂ ಕಾಣಿಸುತ್ತಿತ್ತು. ಇವೆಲ್ಲವನ್ನೂ ನೋಡುತ್ತಿರುವಾಗಲೇ ಹನುಮಂತನು, ಅಲ್ಲಿ ಸರ್ವಾಂಗಸುಂದರಿಯಾದ ಒಬ್ಬ ಹೆಂಗಸನ್ನೂ ಕಂಡನು. ಅವಳಾದರೋ ಕೇವಲ ಮಲಿನವಸ್ತ್ರವನ್ನುಟ್ಟಿರುವಳು! ಸುತ್ತಲೂ ರಾಕ್ಷಸ ಸ್ತ್ರೀಯರು ಆವರಿಸಿಕೊಂಡಿರುವರು. [1] ಆಹಾರವಿಲ್ಲದೆ ಬಹಳವಾಗಿ ಕೃಶಿಸಿರುವಳು. ದೈನ್ಯದಿಂದ ಬಾರಿಬಾರಿಗೂ ನಿಟ್ಟುಸಿರನ್ನು ಬಿಡುವಳು. ಶುಕ್ಲಪಕ್ಷಾರಂಭದಲ್ಲಿ ಕಾಣುವ ಚಂದ್ರರೇಖೆಯಂತೆ ಅವಳ ರೂಪವು ಬಹಳವಾಗಿ ಮಾರ್ಪಟ್ಟು ಹೋಗಿದ್ದುದರಿಂದ, ಬಹುಕಷ್ಟಪಟ್ಟು ಅವಳ ಗುರುತನ್ನು ತಿಳಿಯಬೇಕಾಗಿರುವುದು. ಹೊಗೆಯಿಂದ ಮರೆಸಲ್ಪಟ್ಟ ಅಗ್ನಿಜ್ವಾಲೆಯಂತಿರುವಳು. ಅಂತರೀಯೋತ್ತರೀಯಗಳೆಂಬ ವಿಭಾಗಗಳಿಲ್ಲದೆ, ಮಾಸಿದ ಒಂದೇ ಪಟ್ಟೆಮಡಿಯನ್ನು ಸುತ್ತಿಕೊಂಡಿರುವಳು. ದೇಹದ ಮೇಲೆ ಯಾವುದೊಂದಾಭರಣವೂ ಇಲ್ಲದುದರಿಂದ, ಕಮಲಗಳಿಲ್ಲದ ತಾವರೆಕೊಳದಂತಿರುವಳು. ಪರಪುರುಷನಿಂದ ತನಗೆ ಸಂಭವಿಸಿದ ತಿರಸ್ಕಾರಕ್ಕಾಗಿ ತನಗೆ ತಾನೇ ನಾಚಿಕೊಳ್ಳುತ್ತಿರುವಳು. ದುಃಖದಿಂದ ಬೆಂದು ಬಾಡಿ, ಬಹಳ ಶೋಚನೀಯಾವಸ್ಥೆಯನ್ನು ಹೊಂದಿ, ಅಂಗಾರಕಗ್ರಹದಿಂದ ಪೀಡಿತವಾದ ರೋಹಿಣಿಯಂತೆ ಕಾಣುವಳು. ಅವಳ ಕಣ್ಣುಗಳಲ್ಲಿ ಯಾವಾಗಲೂ ಧಾರೆಧಾರೆಯಾಗಿ ನೀರು ಸುರಿಯುತ್ತಿರುವುದು. ಯಾವಾಗಲೂ ದುಃಖದಿಂದ ಚಿಂತಿಸುತ್ತಿರುವಳು. ನಿಮಿಷಮಾತ್ರವಾದರೂ ಅವಳ ಮನಸ್ಸಿಗೆ ನೆಮ್ಮದಿಯಿಲ್ಲ. ಎತ್ತ ತಿರುಗಿದರೂ ತನ್ನ ಮುಂದೆ ತನಗೆ ಬೇಕಾದ ಇಷ್ಟಜನವನ್ನು ಕಾಣದೆ ತತ್ತಳಿಸುವಳು. ಯಾವಾಗ ನೋಡಿದರೂ ಘೋರರಾಕ್ಷಸಿಯರು ಮುಂದೆ ನಿಂತಿರುವರು. ಇದರಿಂದ ಆಕೆಯು ತನ್ನ ಗುಂಪಿನಿಂದ ತಪ್ಪಿ ಬಂದು ನಾಯಿಗಳ ಗುಂಪಿನಲ್ಲಿ ಸಿಕ್ಕಿದ ಜಿಂಕೆಯ ಮರಿಯಂತೆ ಕಾಣುವಳು. ಮತ್ತು ಕಾಳಸರ್ಪದಂತೆ ಕಾಂತಿವಿಶಿಷ್ಟವಾಗಿ, ಜಘನಪ್ರದೇಶವನ್ನು ಮುಟ್ಟುವಂತೆ ಉದ್ದವಾಗಿ, ಒಂದೇಜಡೆಯಾಗಿ ಕಪ್ಪಾಗಿರುವ ತಲೆಕೂದಲುಳ್ಳ ಆಕೆಯು, ಮಳೆಗಾಲವು ಕಳೆದಮೇಲೆ ಉಲ್ಲಾಸಗೊಂಡ ವನರಾಜಿಯಿಂದ ಶೋಭಿಸುವ ಭೂಮಿಯಂತಿರುವಳು. ಯಾವಾಗಲೂ ಸುಖಾರ್ಹಳಾಗಿ ಎಂದಿಗೂ ವ್ಯಸನವನ್ನು

---

1. ಇಲ್ಲಿ ದೀನತೆ, ಕಾರ್ಶ್ಯ, ಮುಂತಾದುವುಗಳನ್ನು ಪುನಃಪುನಃ ಹೇಳುತ್ತಿರುವುದು ಅವುಗಳ ಅತಿಶಯವನ್ನು ಸೂಚಿಸುವುದಕ್ಕಾಗಿಯೇ ಹೊರತು ದೋಷವಲ್ಲವೆಂದು ಗ್ರಾಹ್ಯವು. ಮತ್ತು "ಉಪವಾಸಕೃಶಾಂ ದೀನಾಂ, ಕೃಶಾಮನಶನೇನಚ" ಎಂಬುದಾಗಿ ಅಲ್ಲಲ್ಲಿ ನಿರಾಹಾರಳಾಗಿರುವಂತೆ ಹೇಳಿರುವುದರಿಂದ, ಮೊದಲು ಇಂದ್ರದತ್ತವಾದ ಪಾಯಸವನ್ನು ಭುಜಿಸಿದಳೆಂಬ ವೃತ್ತಾಂತವು ಕಲ್ಪಿತವಾಗಿರಬಹುದೆಂದೂಹ್ಯವು.

ಕಾಣದವಳಾದರೂ, ದುಃಖದಿಂದ ತಪಿಸುತ್ತಿರುವಳು. ಹೀಗೆ ಮಾಸಿದ ರೂಪವುಳ್ಳವಳಾಗಿಯೂ, ಕೃಶಳಾಗಿಯೂ ಇದ್ದರೂ ವಿಶಾಲಾಕ್ಷಿಯಾಗಿದ್ದ ಆಕೆಯನ್ನು, ಆಂಜನೇಯನು ಚೆನ್ನಾಗಿ ಗಮನಿಸಿ ನೋಡಿ, ಮುಂದೆ ಹೇಳುವ ಕೆಲವು ಕಾರಣಗಳಿಂದ, ಅವಳೇ ಸೀತೆಯಾಗಿರಬಹುದೆಂದು ನಿಶ್ಚಯಿಸಿಕೊಂಡನು. ಆಗಲೇ ಅವನಿಗೆ ಅತ್ಯಾಹ್ಲಾದವುಂಟಾಯಿತು. "ಓಹೋ! ಇವಳ ರೂಪವು, ಆಗ ಕಾಮರೂಪಿಯಾದ ಆ ರಾಕ್ಷಸನು ಆಕಾಶದಲ್ಲಿ ಎತ್ತಿಕೊಂಡು ಹೋಗುತಿದ್ದ ಸ್ತ್ರೀ ರೂಪವನ್ನೇ ಹೋಲುತ್ತಿರುವುದು," ಎಂದು ಮನಸ್ಸಿನಲ್ಲಿ ಅನುಮಾನಿಸಿಕೊಂಡು, ಆಕೆಯನ್ನೇ ಚೆನ್ನಾಗಿ ನೋಡುತಿದ್ದನು. ಆಕೆಯಾದರೋ ಪೂರ್ಣಚಂದ್ರನಂತೆ ಮುಖವುಳ್ಳವಳು. ಅಂದವಾದ ಹುಬ್ಬುಗಳುಳ್ಳವಳು. ದುಂಡಗೆ ಅಂದವಾದ ಸ್ತನಗಳುಳ್ಳವಳು. ತನ್ನ ದೇಹಕಾಂತಿಯಿಂದಲೇ ಸಮಸ್ತದಿಕ್ಕುಗಳನ್ನೂ ಬೆಳಗುವಂತಿರುವಳು. ಮತ್ತು ಆಕೆಯ ಕಪ್ಪಾದ ಕಲೆಗೂದಲೂ ತೊಂಡೆಹಣ್ಣಿನಂತಿರುವ ತುಟಿಯೂ, ಸಣ್ಣನಡುವೂ, ದಟ್ಟವಾದ ಕಾಲುಗಳೂ, ತಾವರೆಯೆಸಳಿನಂತಿರುವ ಕಣ್ಣುಗಳೂ, ಅವಳ ಸೌಂದರ್ಯವನ್ನು ಚೆನ್ನಾಗಿ ವ್ಯಕ್ತಪಡಿಸುತ್ತ, ಆಕೆಯೇ ಮನ್ಮಥಪತ್ನಿಯಾದ ರತಿಯೆಂಬ ಭಾವವನ್ನು ಹುಟ್ಟಿಸುತ್ತಿದ್ದುವು. ಪೂರ್ಣಚಂದ್ರನ ಪ್ರಭೆಯಂತೆ ಸಮಸ್ತಜಗತ್ತಿಗೂ ಇಷ್ಟಳಾಗಿ, ಸುಕುಮಾರಾಂಗಿಯಾದ ಆಕೆಯು, ಕಠಿನವಾದ ವ್ರತನಿಯಮವನ್ನು ಹಿಡಿದಿರುವ ತಾಪಸಿಯಂತೆ ಬರೀ ನೆಲದಲ್ಲಿ ಕುಳಿತಿರುವಳು. ಕ್ಷಣಕ್ಷಣಕ್ಕೂ ನಿಟ್ಟುಸಿರನ್ನು ಬಿಡುವಳು. ಇದ್ದಕ್ಕಿದ್ದಹಾಗೆ ಬೆಚ್ಚಿಬೀಳುವಳು. ನಾಗಕನ್ನಿಕೆಯಂತೆ ಕಾಂತಿವಿಶೇಷದಿಂದ ಶೋಭಿಸುತ್ತಿರುವಳು. ಮತ್ತು ಹೊಗೆಯಲ್ಲಿ ಮರೆಸಿದ ಅಗ್ನಿಜ್ವಾಲೆಯಂತೆ ವಿಶೇಷ ದುಃಖಾತಿಶಯದಿಂದ ಮಾಸಿದ ದೇಹಕಾಂತಿಯುಳ್ಳ ಆ ಸೀತೆಯು, ಸಂದಿಗ್ಧಾರ್ಥವುಳ್ಳ ಸ್ಮೃತಿಯಂತೆಯೂ, ಕ್ಷೀಣಿಸಿದ ಸಂಪತ್ತಿನಂತೆಯೂ, ನಂಬಿಕೆಯಿಲ್ಲದ ಶ್ರದ್ಧೆಯಂತೆಯೂ, ಭಗ್ನವಾದ ಆಶೆಯಂತೆಯೂ, ವಿಘ್ನಹೊಂದಿದ ಕಾರ್ಯಸಿದ್ಧಿಯಂತೆಯೂ, ಕದಲಿದ ಬುದ್ಧಿಯಂತೆಯೂ, ಮಿಥ್ಯಾಪವಾದಕ್ಕೊಳಗಾಗಿ ಕಂದಿದ ಕೀರ್ತಿಯಂತೆಯೂ ಕಾಣುತ್ತಿರುವಳು. ತನ್ನ ಪ್ರಿಯಪತ್ನಿಯಾದ ರಾಮನ ಅಗಲಿಕೆಯಿಂದ ಎಡೆಬಿಡದೆ ಕೊರಗುತ್ತಿರುವಳು. ರಾವಣನಲ್ಲಿ ಸೆರೆಸಿಕ್ಕಿ ಕೃಶಳಾಗಿರುವಳು. ಜಿಂಕೆಯ ಮರಿಯಂತೆ ಚಂಚಲದೃಷ್ಟಿಯುಳ್ಳವಳಾಗಿ ನಾಲ್ಕುಕಡೆಯನ್ನೂ ನೋಡುತ್ತಿರುವಳು. ಕಣ್ಣಿನಲ್ಲಿ ಎಡೆಬಿಡದೆ ನೀರನ್ನು ಸುರಿಸುತ್ತಿರುವಳು. ಕಪ್ಪಗೆ ಬಾಗಿದ ಕಣ್ಣೆವೆಗಳಿಂದ ಕೂಡಿದ ಆಕೆಯ ಮುಖದಲ್ಲಿ ಸ್ವಲ್ಪವಾದರೂ ತಿಳಿವೆಂಬುದೇ ಕಾಣುವುದಿಲ್ಲ. ಬಾರಿಬಾರಿಗೂ ನಿಟ್ಟುಸಿರು ಬಿಡುತ್ತಿರುವಳು. ಅವಳ ಕೋಮಲದೇಹವೆಲ್ಲವೂ ಕೊಳೆಯಿಂದ

ಮಾಸಿರುವುದು. ಅವಳ ದುಃಖಕ್ಕೆ ಪಾರವೇ ಇಲ್ಲದಂತಿರುವುದು. ಸರ್ವಾಲಂಕಾರಗಳಿಗೂ ತಕ್ಕವಳಾದರೂ, ಪತಿವಿಯೋಗದುಃಖದಿಂದ ಭೂಷಣಗಳನ್ನೆಲ್ಲಾ ತ್ಯಜಿಸಿ ಮೇಘಗಳಲ್ಲಿ ಮರೆಯಾದ ಚಂದ್ರಕಲೆಯಂತಿರುವಳು. ಇಷ್ಟು ದುಸ್ಥಿತಿಗಳನ್ನೆಲ್ಲಾ ನೋಡಿದ ಮೇಲೆ ಆಂಜನೇಯನಿಗೆ ಮೊದಲಿದ್ದ ನಿಶ್ಚಯವು ಸಡಿಲಿಹೋಯಿತು. "ಇವಳು ಸೀತೆಯೋ ಅಲ್ಲವೋ" ಎಂಬ ಸಂದೇಹವುಂಟಾಯಿತು. ತಿರುಗಿತಿರುಗಿ ಅವಳನ್ನೇ ನೋಡುತಿದ್ದನು. ಶಾಸ್ತ್ರಜ್ಞಾನದ ಬಲವಿಲ್ಲದೆ ಓದಿದ ವಿದ್ಯೆಯು ಬಿಗಿತಪ್ಪುವಂತೆ, ಪತಿವಿರಹದುಃಖದಿಂದ ರೂಪುಗೆಟ್ಟಿದ್ದ ಆಕೆಯು, ಸೀತೆಯೋ ಅಲ್ಲವೋ ಎಂಬುದನ್ನು ನಿರ್ಣಯಿಸುವುದೇ ಬಹಳ ಕಷ್ಟವಾಯಿತು. ಸಂಸ್ಕಾರವಿಲ್ಲದ ಮಾತು ಅರ್ಥಾಂತರವನ್ನು ಕೊಡುವಂತೆ, ಅಂಗಸಂಸ್ಕಾರವಾಗಲಿ, ಆಭರಣವಾಗಲಿ ಇಲ್ಲದ ಆ ಸೀತೆಯ ರೂಪವು ಇವನಿಗೆ ಸಂದೇಹವನ್ನೇ ಹೆಚ್ಚಿಸುತ್ತಿತ್ತು. ಕೊನೆಗೆ ಆಂಜನೇಯನು, ವಿಶಾಲಾಕ್ಷಿಯಾಗಿಯೂ ನಿರ್ದೋಷಿಯಾಗಿಯೂ ಇದ್ದ ಆ ರಾಜಕುಮಾರಿಯನ್ನು ಚೆನ್ನಾಗಿ ಕಣ್ಣಿಟ್ಟು ನೋಡಿ, ಬೇರೆಕೆಲವು ಕಾರಣಗಳಿಂದ ಅವಳೇ ಸೀತೆಯೆಂದೂಹಿಸಿದನು. ತಾನು ಸೀತಾನ್ವೇಷಣಾರ್ಥವಾಗಿ ಹೊರಟಾಗ ಸೀತೆಯ ಮೈಮೇಲೆ ಯಾವ ಯಾವ ಆಭರಣಗಳಿರುವುವೆಂದು ರಾಮನು ಹೇಳಿದ್ದನೋ, ಆ ಆಭರಣಗಳೆಲ್ಲವೂ ಆ ಸೀತೆಯು ಕುಳಿತಿದ್ದ ಮರದ ಮೇಲಿನ ಕೊಂಬೆಗೆ ತಗುಲಿಟ್ಟಿರುವುದನ್ನು ನೋಡಿದನು. ಅದರಿಂದ ಅವೆಲ್ಲವನ್ನೂ ಸೀತೆಯೇ ಜಿರಾಶೆಯಿಂದ ತೆಗೆದಿಟ್ಟಿರಬಹುದೆಂದು ತೋರಿತು. ಅದರಲ್ಲಿ ಅಂದವಾದ ಕುಂಡಲಗಳನ್ನೂ, ಕರ್ಣಪುಷ್ಪಗಳನ್ನೂ, ರತ್ನಪುಷ್ಪಗಳಿಂದಲೂ, ಹವಳಗಳಿಂದಲೂ ವಿಚಿತ್ರಗಳಾದ ಹಸ್ತಾಭರಣಗಳನ್ನೂ ನೋಡಿದನು. ಆ ಆಭರಣಗಳೆಲ್ಲವೂ ಬಹುಕಾಲದಿಂದ ಉಪಯೋಗಿಸಲ್ಪಟ್ಟು ಮಿರುಗಿಲ್ಲದೆ ದೇಹತಾಪದಿಂದ ಕಪ್ಪೇರಿರುವುದನ್ನೂ, ಆ ಸೀತೆಯ ಕೈಯಲ್ಲಿಯೂ ಈ ಆಭರಣಗಳ ರೇಖೆಯನ್ನು ಹೋಲುವ ಗುರುತುಗಳೇ ಕಾಣಬರುವುದನ್ನೂ ನೋಡಿ ಮನಸ್ಸಿನಲ್ಲಿ, "ಇವು ರಾಮನು ಹೇಳಿದ ಆಭರಣಗಳೇ ಹೊರತು ಬೇರೆಯಲ್ಲವೆಂದೇ ತೋರುವುದು. ಮತ್ತು ರಾಮನು ಹೇಳಿದ್ದ ಆಭರಣಗಳಲ್ಲಿ ನಮಗೆ ಋಷ್ಯಮೂಕದಲ್ಲಿ, ಸಿಕ್ಕಿದ ಆಭರಣವೊಂದೂ ಇಲ್ಲಿ ಕಾಣುವುದಿಲ್ಲ. ಮಿಕ್ಕ ಒಡವೆಗಳೆಲ್ಲವೂ ಇಲ್ಲಿರುವುದರಿಂದ ಇದು ಸೀತೆಯ ಆಭರಣಗಳೆಂಬುದರಲ್ಲಿ ಸಂದೇಹವಿಲ್ಲ. ಮತ್ತು ಆಗ ಆ ಋಷ್ಯಮೂಕಪರ್ವತದ ಮೇಲೆ ಮರದ ಕೊಂಬೆಯಲ್ಲಿ ಸಿಕ್ಕಿಕೊಂಡಿದ್ದ ಹೊಂಬಣ್ಣದ ಪಟ್ಟೆಮಡಿಯೊಂದನ್ನು ವಾನರರೆಲ್ಲರೂ ತೆಗೆದು ನೋಡಿದರಲ್ಲವೆ! ಆಗಲೇ ಘಲ್ಘಲನೆ ಆಕಾಶದಿಂದ ಉದುರಿಬಿದ್ದ ಮಹಾಭರಣಗಳನ್ನೂ ನಮ್ಮ ವಾನರರು ತೆಗೆದಿಟ್ಟಿದ್ದರು. ನಮಗೆ ಅಲ್ಲಿ ಸಿಕ್ಕಿದ

ಪಟ್ಟೆಮಡಿಯೂ, ಒಂದು ಉತ್ತರೀಯಮಾತ್ರವೇ ಆಗಿದ್ದುದರಿಂದ, ಇವಳೇ ಆ ತನ್ನ ಉತ್ತರೀಯವನ್ನೂ, ಆಭರಣಗಳನ್ನೂ ಬಿಸುಟಿರುವುದರಲ್ಲಿ ಸಂದೇಹವಿಲ್ಲ. ಇವಳು ಧರಿಸಿರುವ ಈ ಬಟ್ಟೆಯು ಬಹಳವಾಗಿ ಮಾಸಿದ್ದರೂ, ಬಣ್ಣದಲ್ಲಿಯೂ ಆಕಾರದಲ್ಲಿಯೂ ನಮಗೆ ಅಲ್ಲಿ ಸಿಕ್ಕಿದ ಬಟ್ಟೆಯನ್ನೇ ಹೋಲುತ್ತಿರುವುದು. ಆ ರಾಮನು ಕಣ್ಣಿಗೆ ಮರೆಯಾಗಿದ್ದರೂ, ಈಗಲೂ ಅವನ ಮನಸ್ಸಿನಲ್ಲಿ ಸ್ಥಿರವಾಗಿ ನೆಲಸಿರುವ ಮಹಾಪತಿವ್ರತೆಯಾದ ಸೀತೆಯೇ ಇವಳೆಂಬುದರಲ್ಲಿ ಸಂದೇಹವಿಲ್ಲ. ಬಂಗಾರದಂತಿರುವ ಇವಳ ಮೈಬಣ್ಣವೇ ಇವಳು ರಾಮನ ಪ್ರಿಯಪತ್ನಿಯೆಂಬುದನ್ನು ಸೂಚಿಸುವುದು. ಆಃ! ಅಬಲೆಯಾದ ಹೆಂಗಸು ರಾಕ್ಷಸನ ಕೈಗೆ ಸಿಕ್ಕಿಬಿದ್ದು ದಿಕ್ಕಿಲ್ಲದೆ ಗೋಳಿಡುವಳೆಂಬ ಕಾರುಣ್ಯವೊಂದು! ತನ್ನೊಬ್ಬನನ್ನೇ ಮರೆಹೊಕ್ಕು ಬಂದವಳನ್ನೂ ತಾನು ಕಾಪಾಡುವುದಕ್ಕಿಲ್ಲದೆ ಹೋಯಿತೆಂಬ ಪಶ್ಚಾತ್ತಾಪವೊಂದು! ಕೈಹಿಡಿದ ಹೆಂಡತಿಯೆಂಬ ಅಭಿಮಾನವೊಂದು; ತನಗೆ ಪ್ರಾಣಕ್ಕಿಂತಲೂ ಪ್ರಿಯಳೆಂಬ ಮೋಹವೊಂದು. ಈ ನಾಲ್ಕುವಿಧದಿಂದಲೂ ಯಾವಳಿಗಾಗಿ ರಾಮನು ಅನವರತವೂ ಕೊರಗಿ ಸಂಕಟಪಡುತ್ತಿರುವನೋ ಆ ಸೀತೆಯೇ ಇವಳು! ಈ ದೇವಿಯ ರೂಪವೂ, ಅವಯವ ಸೌಷ್ಠವವೂ, ದೇಹಕಾಂತಿಯೂ, ಎಂತಹುದೋ, ಅದೇ ರೂಪವೂ, ಅದೇ ಅಂಗಸೌಷ್ಠವವೂ ಅದೇ ದೇಹಕಾಂತಿಯೂ ರಾಮನಲ್ಲಿಯೂ ಇರುವುವು. ಆ ರಾಮನಲ್ಲಿರುವ ರೂಪಲಾವಣ್ಯಾದಿಗಳೇ ಈಕೆಯಲ್ಲಿಯೂ ಇರುವುವು. ಆದುದರಿಂದ ಈಕೆಯು ಆ ರಾಮನ ಪತ್ನಿಯೇ ಆಗಿರಬೇಕು. ಈ ದೇವಿಯ ಮನಸ್ಸು ಆ ರಾಮನಲ್ಲಿಯೂ, ಅವನ ಮನಸ್ಸು ಈಕೆಯಲ್ಲಿಯೂ ಸ್ಥಿರವಾಗಿ ನೆಲೆಗೊಂಡಿರುವುದು. ಆದುದರಿಂದಲೇ ಈಕೆಯೂ, ಧರ್ಮಾತ್ಮನಾದ ಆ ರಾಮನೂ ಪರಸ್ಪರವಾಗಿ ಆಶೋತ್ತರವನ್ನಿಟ್ಟುಕೊಂಡು ಒಂದು ಮುಹೂರ್ತಮಾತ್ರವಾದರೂ ಜೀವಿಸಬಲ್ಲರು. ಆ ಆಶೋತ್ತರದಿಂದಲೇ ಈಗಲೂ ಪ್ರಾಣವನ್ನಿಟ್ಟುಕೊಂಡಿರುವರು. ಏನಾದರೇನು? [1] ಇಂತಹ

---

1. ಇಲ್ಲಿ "ದುಷ್ಕರಂ ಕುರುತೇ ರಾಮೋ ಹೀನೋ ಯದನಯಾ ಪ್ರಭುಃ ॥ ಧಾರಯತ್ಯಾತ್ಮನೋ ದೇಹಂ ನ ಶೋಕೇನಾವಸೀದತಿ" ಎಂದು ಮೂಲವು. "ಅನ್ಯತ್ರ ಭೀಷ್ಮಾದ್ಗಾಂಗೇಯಾದನ್ಯತ್ರ ಚ ಹನೂಮತಃ । ಹರಿಣೀಖುರಮಾತ್ರೇಣ ಚರ್ಮಣಾ ಮೋಹಿತಂ ಜಗತ್" ಗಂಗಾಪುತ್ರನಾದ ಭೀಷ್ಮನೊಬ್ಬನು, ಹನುಮಂತನೊಬ್ಬನು; ಇವರಿಬ್ಬರು ಹೊರತು ಈ ಸಮಸ್ತಲೋಕವೂ ಕಾಮವಶವಾಗಿರುವುದು" ಎಂಬಂತೆ, ಬಾಲ್ಯದಿಂದಲೂ ವೀರಬ್ರಹ್ಮಚಾರಿಯಾಗಿ, ಸ್ತ್ರೀಮೋಹವೆಂಬುದನ್ನು ಕನಸಿನಲ್ಲಿಯೂ ಕಾಣದೆ, ಕೇವಲ ವಿರಕ್ತನಾದ ಈ ಆಂಜನೇಯನು ಹಿಂದೆ ಮಾಲ್ಯವತ್ಪರ್ವತದಲ್ಲಿ ಸೀತೆಗಾಗಿ ದುಃಖಿಸುತ್ತಿದ್ದ

ತ್ರಿಲೋಕಸುಂದರಿಯಾದ ಪ್ರಿಯಪತ್ನಿಯನ್ನಗಲಿಯೂ, ರಾಮನು ದುಃಖದಿಂದ ಕುಂದದೆ ದೇಹವನ್ನಿಟ್ಟುಕೊಂಡಿರುವನಲ್ಲಾ! ಹೀಗಿರುವುದಕ್ಕೆ

---

ರಾಮನ ಶೋಕಾತಿಶಯವನ್ನು ನೋಡಿ, ಆಶ್ಚರ್ಯಗೊಂಡು "ಅಯ್ಯೋ! ವಸಿಷ್ಠರಲ್ಲಿ ಎಷ್ಟೋ ದಿನಗಳಿಂದ ಶಿಷ್ಯವೃತ್ತಿಯನ್ನು ಮಾಡಿದ ಈತನೂ ಕೂಡ ಒಬ್ಬ ಹೆಂಗಸಿಗಾಗಿ ಇಷ್ಟು ಕೊರಗುತ್ತಿರುವನಲ್ಲಾ!" ಎಂದು ಹೀಗಳೆದು ನಗುತ್ತಿದ್ದನು. ಇಷ್ಟು ವಿರಕ್ತನಾಗಿ, ವಿರಹ ದುಃಖವೆಂಬುದರ ಕಲಾಮಾತ್ರವನ್ನೂ ಕಂಡರಿಯದ ಆ ಆಂಜನೇಯನು ಈಗ ಸೀತೆಯನ್ನು ನೋಡಿದಮೇಲೆ "ರಾಮನು ಇವಳಿಗಾಗಿ ಅಷ್ಟು ಚಿಂತಿಸಿದುದೂ ಹಾಗಿರಲಿ! ಇವಳನ್ನಗಲಿ ಅವನು ಬದುಕಿರುವುದೇ ಹೆಚ್ಚು" ಎಂದು ತನಗೆ ತಾನೇ ಆಶ್ಚರ್ಯಪಡುವನೆಂದು ಈಮೇಲಿನ ಶ್ಲೋಕದ ಮುಖಾರ್ಥವು. ಇಲ್ಲಿನ ಪದಸ್ವಾರಸ್ಯಗಳಿಂದ ಸೀತೆಯಲ್ಲಿರುವ ಅಸಾಧಾರಣಗುಣಗಳೂ, ಆ ಸೀತೆಯನ್ನು ಕಂಡಾಗ ಆಂಜನೇಯನ ಮನಸ್ಸಿನಲ್ಲಿ ಉಂಟಾದ ಪಶ್ಚಾತ್ತಾಪವೂ. ಆದರಿಂದ ರಾಮನ ಮೇಲೆ ಹನುಮಂತನು ಮಾಡುವ ದೋಷಾರೋಪಣವೂ ವ್ಯಕ್ತವಾಗುವಂತೆ ತನಿಶ್ಲೋಕಿಯಲ್ಲಿ ಕೆಲವು ವಿಶೇಷಾರ್ಥಗಳು ಕಾಣಿಸಲ್ಪಟ್ಟಿರುವುವು. ಹೇಗೆಂದರೆ—(ದುಷ್ಕರಂ ಕೃತವಾನ್ ರಾಮಃ) ನಾನು ಸಮುದ್ರಲಂಘನವನ್ನು ಮಾಡಿದುದು ಬಹಳ ದುಷ್ಕರವೆಂದು ತಿಳಿದಿದ್ದೆನು. ರಾಮನು ಈಗ ಅದಕ್ಕಿಂತಲೂ ದುಷ್ಕರಕಾರ್ಯವನ್ನು ಮಾಡಿರುವನು! (ರಾಮಃ) ಏಕಪತ್ನೀವ್ರತದಲ್ಲಿ ಖ್ಯಾತಿಹೊಂದಿ, ಈ ಸೀತೆಯನ್ನು ಬಿಟ್ಟು ಬೇರೊಬ್ಬ ಸ್ತ್ರೀಯನ್ನು ಮನಸ್ಸಿನಲ್ಲಿಯೂ ಸ್ಮರಿಸದ ಆ ರಾಮನೇ, ಹೀಗೆ ತನಗಿದ್ದ ಒಬ್ಬ ಹೆಂಡತಿಯನ್ನೂ ಅಗಲಿರುವುದು ಇನ್ನೂ ಅತಿದುಷ್ಕರವು. ದೈವಿಕವಾಗಿ ಸಂಭವಿಸಿದುದಕ್ಕೆ ರಾಮನು ಮಾಡುವುದೇನು? ಎಂದರೆ (ಕೃತವಾನ್ ರಾಮಃ) ರಾಮನು ತನ್ನ ಕೈಯಿಂದ ತಾನೇ ಮಾಡಿರುವನು! ಹೇಗೆ? (ರಾಮಃ) ಅವನ ಸ್ವರೂಪವೇ ತಿಳಿಸುವುದು. ಇಂತಹ ಸೀತೆಯನ್ನಗಲಿಯೂ ವಿರಹಾವಸ್ಥೆಯಲ್ಲಿರಬೇಕಾದ ಕಂದುಕುಂದುಗಳೊಂದೂ ಇಲ್ಲದೆ ಲೋಕಾಭಿರಾಮನಾಗಿರುವನಲ್ಲವೆ? ಇದರಿಂದಲೇ ಅವನು ಈಕೆಯಲ್ಲಿ ನಿಜವಾದ ಪ್ರೇಮವುಳ್ಳವನಲ್ಲವೆಂದೂಹಿಸಬಹುದು. ಈ ಭಾವದಿಂದಲೇ ಸೀತೆಯೂ ಕೂಡ ರಾಮನ ಸ್ಥಿತಿಯನ್ನು ಕುರಿತು ಕೇಳುವಾಗ "ಕಚ್ಚಿನ್ನ ತದ್ಧೇಮಸಮಾನವರ್ಣಂ ... ಮಯಾವಿನಾ ಶುಷ್ಯತಿ!" ಎಂದು ಕೇಳಿರುವಳು. ತಾನಿಲ್ಲದ ವೇಳೆಯಲ್ಲಿ ರಾವಣನು ಕದ್ದುತಂದರೆ ರಾಮನೇನು ಮಾಡಬಲ್ಲನು? ಎಂದರೆ (ಹೀನೋ ಯದನಯಾ) ಇವಳನ್ನು ಕಾಡಿನಲ್ಲಿ ಬಿಟ್ಟು ಜಿಂಕೆಯನ್ನು ಹಿಂಬಾಲಿಸಿ ಹೋದುದೇ ತಪ್ಪು! ಅವನು ನಿಜವಾಗಿಯೂ ಈಕೆಯಲ್ಲಿ ಪ್ರೇಮವುಳ್ಳವನಾಗಿಯೂ ದಯಾಸ್ವಭಾವವುಳ್ಳವನಾಗಿಯೂ ಇದ್ದ ಪಕ್ಷದಲ್ಲಿ ಕ್ಷಣಮಾತ್ರವಾದರೂ ಇವಳನ್ನು ಬಿಟ್ಟಿರುತಿದ್ದನೆ? ಅದೂ ಹಾಗಿರಲಿ! (ಅನಯಾಹೀನಃ) "ಅನನ್ಯಭಾವಾಮನುರಕ್ತಚೇತನಾಂ ತ್ವಯಾ ವಿಹೀನಾಂ ಮರಣಾಯಂ ನಿಶ್ಚಿತಾಮ್" ಎಂಬಂತೆ ಪತಿಯನ್ನು ಕಾಣದ ಕ್ಷಣದಲ್ಲಿಯೇ ಮರಣಕ್ಕೆ ನಿಶ್ಚಯಿಸತಕ್ಕ ಈಕೆಯನ್ನೇ ಬಿಟ್ಟು ಹೋಗಬಹುದೆ? (ಅನಯಾ) "ಅಪ್ರಮೇಯಂ ಹಿ ತತ್ತೇಜೋ ಯಸ್ಯ ಸಾ ಜನಕಾತ್ಮಜಾ" "ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾ ಯಥಾ" ಎಂಬಂತೆ

ಬೇರೆಯಾರಿಂದ ಸಾಧ್ಯವು? ರಾಮನಂತೂ ಬಹಳ ದುಷ್ಕರಕಾರ್ಯವನ್ನು ಮಾಡು ತ್ತಿರುವನು ಈ ಸೀತೆಯು ಯಾವವಿಧದಲ್ಲಿಯೂ ಸ್ವತಂತ್ರಳಲ್ಲದ ಹೆಂಗಸಾದು ದರಿಂದ, ಎಷ್ಟೇ ಜಿಹಾಸೆಯಿದ್ದರೂ ಇವಳು ದೇಹವನ್ನು ಬಿಡಲಾರಳು. ರಾಮನು

---

ತನಗೆ ಸರ್ವಾತಿಶಯಕ್ಕೂ ಹೇತುವಾಗಿ, ತನ್ನೊಡನೆ ಎಡೆಬಿಡದೆ ಸೇರಿರಬೇಕಾದ ಇವಳ ಯನ್ನೇ ಬಿಟ್ಟು ಹೋಗಬಹುದೆ? ಯಾರೇನು ಮಾಡಬಲ್ಲರು? ಆತನಾದರೋ (ಪ್ರಭುಃ) ಸ್ವತಂತ್ರನಾದುದರಿಂದ ಯುಕ್ತಾಯುಕ್ತವನ್ನರಿಯದವನು. ವಿವೇಕಶೂನ್ಯ ತೆಯೇ ಪ್ರಭುತ್ವದ ಲಕ್ಷಣವಲ್ಲವೆ? (ಪ್ರಭುಃ) ಅಧಿಕಾರವನ್ನು ಬಲ್ಲನೇ ಹೊರತು ಪ್ರೇಮ ವನ್ನರಿಯನು. (ಪ್ರಭುಃ) ರಾಷ್ಟ್ರಕೋಶದುರ್ಗಬಲಾದಿಗಳ ನಿರ್ಣಯದಲ್ಲಿ ಚತುರನೇ ಹೊರತು ಪ್ರಣಯಧಾರೆಯ ಕಲಾಮಾತ್ರವನ್ನೂ ತಿಳಿದವನಲ್ಲ. (ಪ್ರಭುಃ) "ಅಜಾಯ ಮಾನೋ ಬಹುಧಾ ವಿಜಾಯತೇ" ಎಂಬುದಾಗಿ, ಇದುವರೆಗೆ ಅನೇಕಾವತಾರಗಳನ್ನೆತ್ತಿದ ವನಾದರೂ, ಒಂದು ಜನ್ಮದಲ್ಲಿಯೊದರೂ ಹೆಂಗಸಾಗಿ ಹುಟ್ಟಿದವನಲ್ಲ. ಒಮ್ಮೆಯಾದರೂ ಹೆಂಗಸಾಗಿ ಹುಟ್ಟಿದ್ದ ಪಕ್ಷದಲ್ಲಿ ಇಂತಹ ಸಂದರ್ಭಗಳಲ್ಲಿ ಸ್ತ್ರೀಯರನ್ನು ಭರಿಸುವ ಕಷ್ಟ ವೆಂತಹದೆಂಬುದನ್ನು ಚೆನ್ನಾಗಿ ತಿಳಿಯುತ್ತಿದ್ದನು. ಆದರೆ ಅವನು ಹೀಗೆ ಪ್ರಭುವೆನಿಸಿಕೊಂಡು ಸ್ವತಂತ್ರನಾದ ಮಾತ್ರಕ್ಕೆ ದೋಷವೇನು? ಎಂದರೆ, (ಧಾರಯತ್ಯಾತ್ಮನೋ ದೇಹವ್) ಇಂತಹ ಪತ್ನಿಯನ್ನಗಲಿಯೂ ತನ್ನ ದೇಹವನ್ನು ಧರಿಸಿರುವನಲ್ಲವೆ? ಸಮುದ್ರದಲ್ಲಿ ಯಾದರೂ ಬಿದ್ದು ತನ್ನ ದೇಹವನ್ನು ಬಿಡಬೇಕಾದುದುಚಿತವು. ದೇಹವನ್ನು ಬಿಟ್ಟ ಮಾತ್ರಕ್ಕೆ ಆತನ ನಿತ್ಯಸ್ವರೂಪವು ನಶಿಸುವುದೇ? ಎಂದರೆ (ಆತ್ಮನೋದೇಹಂ) ನಿತ್ಯ ಸ್ವರೂಪವು ನಶಿಸಬೇಕಾದುದಿಲ್ಲ. "ಇಚ್ಛಾಗೃಹೀತಾಭಿಮತೋರುದೇಹಃ" ಎಂಬಂತೆ ಇಷ್ಟಬಂದಂತೆ ಯಾವ ದೇಹವನ್ನಾದರೂ ಧರಿಸಬಲ್ಲವನಾದುದರಿಂದ, ತಾನಾಗಿ ತಂದಿರಿಸಿ ಕೊಂಡಿರುವ ಈ ದೇಹವನ್ನಾದರೂ ಬಿಡಬಾರದೆ? ಆದರೂ, "ನಿತ್ಯಂ ನಿತ್ಯಾಕೃತಿಧರಂ" ಎಂದಿರುವುದರಿಂದ, ಸ್ವರೂಪದಂತೆ ಅವನ ರೂಪವೂ ನಿತ್ಯವಾಗಿರುವಾಗ, ಅದನ್ನು ತಾನೇ ಹೇಗೆ ಬಿಡುವುದಕ್ಕಾದೀತು? ಎಂದರೆ, (ರಾಮಃ ಆತ್ಮನೋದೇಹಂ) ಅಪ್ರಾಕೃತದೇಹವನ್ನು ಬಿಡದಿದ್ದರೂ ಹೋಗಲಿ! ಈಗ ರಾಮಸ್ವರೂಪದಿಂದಿರುವ ಈ ಪ್ರಾಕೃತದೇಹವನ್ನಾ ದರೂ ಬಿಡುವುದಕ್ಕೇನು? (ಆತ್ಮನೋದೇಹಂ) ಈ ಸೀತೆಯಂತೆ ಅವನೂ ಸ್ತ್ರೀಯಾಗಿದ್ದರೆ, ಆ ದೇಹವನ್ನೂ ಪರತಂತ್ರವೆಂದೆಣಿಸಬಹುದು. ಪುರುಷನಾಗಿ ಹುಟ್ಟಿ ತನ್ನ ದೇಹಕ್ಕೆ ತಾನೇ ಸ್ವತಂತ್ರನಾಗಿರುವಾಗಲೂ ಆ ತನ್ನ ದೇಹವನ್ನೇಕೆ ಬಿಡಬಾರದು? ಆದರೆ, "ಭಕ್ತಾನಾಂ ತ್ವಂ ಪ್ರಕಾಶಸೇ" ಎಂಬಂತೆ ಭಕ್ತಜನರಿಗಧೀನವಾದ ಆ ದೇಹವನ್ನು ಬಿಡುವುದಕ್ಕಾದರೂ ಅವನಿಗೆ ಸ್ವಾತಂತ್ರ್ಯವೆಲ್ಲಿ? ಹೀಗೆ ಸ್ವತಂತ್ರವಲ್ಲದ ದೇಹವನ್ನು ಬಿಡುವುದಕ್ಕೆ ಸಾಧನವೇನು? ಎಂದರೆ, (ನಶೋಕೇನಾವಸೀದತಿ) ಶೋಕವೊಂದಿರುವಾಗ ಬೇರೆ ಸಾಧನವು ಬೇಕೆ? ಆ ಶೋಕಕ್ಕಾದರೂ ತಕ್ಕಷ್ಟು ಅವಕಾಶವನ್ನು ಕೊಟ್ಟಿದ್ದರೆ

ಸರ್ವವಿಧದಲ್ಲಿಯೂ ಸ್ವಾತಂತ್ರ್ಯವುಳ್ಳ ಪುರುಷನಾದರೂ, ಯಾರಿಗೂ ಮಾಡ ಲಾಗದ ಈ ಕಾರ್ಯವನ್ನು ಮಾಡುತ್ತಿರುವನು. ಈ ಉತ್ತಮಕಾಂತೆಯನ್ನಗಲಿಯೂ ಆ ರಾಮನು ಮುಹೂರ್ತಕಾಲವಾದರೂ ಬದುಕಿರುವುದು ಬಹಳ ಅಸಾಧ್ಯ ಕಾರ್ಯವು" ಎಂದು ತನ್ನಲ್ಲಿ ತಾನೇ ಚಿಂತಿಸಿ ಆಶ್ಚರ್ಯಪಡುತ್ತಿದ್ದನು. ಹೀಗೆ ವಾಯುಪುತ್ರನಾದ ಹನುಮಂತನು ಸೀತೆಯನ್ನು ಕಂಡು ಸಂತೋಷದಿಂದುಕ್ಕುತ್ತ, ಮನಸ್ಸಿನಲ್ಲಿ ರಾಮನನ್ನೂ ಧ್ಯಾನಿಸುತ್ತ, ಸತೀಮಣಿಯಾದ ಈ ಸೀತೆಯನ್ನು ಕೈಹಿಡಿದ ರಾಮನ ಭಾಗ್ಯವೇ ಭಾಗ್ಯವೆಂದು ತನ್ನಲ್ಲಿ ತಾನೇ ಕೊಂಡಾಡುತಿದ್ದನು.

ಇಲ್ಲಿಗೆ ಹದಿನೈದನೆಯ ಸರ್ಗವು.

---

ಹನುಮಂತನು ಸೀತೆಯ ದುರ್ದಶೆಯನ್ನು ನೋಡಿ ಬಹಳವಾಗಿ ದುಃಖಿಸಿದುದು.

ಹೀಗೆ ವಾನರೋತ್ತಮನಾದ ಹನುಮಂತನು, ಇತ್ತಲಾಗಿ ಲೋಕಸ್ತುತ್ಯ ಳಾದ ಸೀತೆಯನ್ನೂ, ಅತ್ತಲಾಗಿ ಗುಣಾಭಿರಾಮನಾದ ರಾಮನನ್ನೂ ಕೊಂಡಾಡಿ ಹಿಗ್ಗುತ್ತ, ತಿರುಗಿ ತನ್ನಲ್ಲಿ ತಾನು ಸೀತೆಯ ದುರವಸ್ಥೆಯನ್ನು ಕುರಿತು ಚಿಂತಿಸು ವನು. ಆ ಸೀತೆಯ ಸ್ಥಿತಿಯನ್ನು ನೋಡಿನೋಡಿ ಕಣ್ಣೀರುಬಿಡುವನು. ಹಾಗೆಯೇ ಮುಹೂರ್ತಕಾಲದ ವರೆಗೆ ಧ್ಯಾನಿಸಿ ವಿಲಪಿಸುವನು. ಹೀಗೆ ಸೀತೆಯನ್ನು ನೋಡಿ ದುಃಖಿಸುತ್ತ, "ಆಹಾ! ಈ ಸೀತೆಯು ಭ್ರಾತೃವತ್ಸಲನಾದ ಲಕ್ಷ್ಮಣನಿಗೆ ಪರಮ ಪೂಜಾರ್ಹಳು, ಲೋಕಗುರುವೆನಿಸಿಕೊಂಡ ರಾಮನಿಗೆ ಪ್ರಾಣಪ್ರಿಯೆಯು! ಇಂತಹ ಸೀತೆಯೂ ಕೂಡ ದುಃಖಪೀಡಿತೆಯಾಗಿ ಈ ದುರ್ದಶೆಯನ್ನನುಭವಿಸುವ ಳೆಂದರೆ, ಇನ್ನು ಕಾಲಗತಿಯನ್ನು ಯಾರು ತಾನೇ ವಿಾರಬಲ್ಲರು? ಆದರೇನು? ಈ ಸೀತೆಯು ರಾಮನು ತನಗಾಗಿ ಮಾಡುವ ವ್ಯವಸಾಯವೆಂತದೆಂಬುದನ್ನು ಬಲ್ಲಳು. ಲಕ್ಷ್ಮಣನ ಪ್ರಯತ್ನವನ್ನೂ ಚೆನ್ನಾಗಿ ಬಲ್ಲಳು. ಆದುದರಿಂದಲೇ ತನ್ನ ಸ್ಥಿತಿಯನ್ನು ಕುರಿತು ಅಷ್ಟಾಗಿ ಮನಸ್ಸು ಕಲಗದೆ, ತಾನಾಗಿ ಇದಕ್ಕೆ ಬೇರೆ ಪ್ರಯತ್ನವನ್ನೂ ಮಾಡದೆ, ಮಳೆಗಾಲದಲ್ಲಿಯೂ ಮರ್ಯಾದೆಯನ್ನು ತಪ್ಪದೆ

---

"ಶೋಕಾಗ್ನಿಃ ಪ್ರಧಕ್ಷ್ಯತಿ" ಎಂಬಂತೆ, ಆ ಶೋಕವೇ ದೇಹವನ್ನು ದಹಿಸಿಬಿಡುತ್ತಿತ್ತು. ಅದಕ್ಕೂ ಅವಕಾಶಕೊಡದಿರುವುದರಿಂದ ಈಗ ರಾಮನು ಮಾಡುತ್ತಿರುವುದು ಅತಿ ದುಷ್ಕರವೆಂದು ಭಾವವು.

ಸಮುಸ್ಥಿತಿಯಲ್ಲಿರುವ ಗಂಗಾನದಿಯಂತೆ ಕಾಳ್ಕೆಯಿಂದಿರುವಳು! [1] ಸ್ವಭಾವದಲ್ಲಿಯಾಗಲಿ, ವಯಸ್ಸಿನಲ್ಲಿಯಾಗಲಿ, ನಡತೆಯಲ್ಲಿಯಾಗಲಿ, ಕುಲೋನ್ನತಿಯಲ್ಲಿಯಾಗಲಿ, ಶುಭಲಕ್ಷಣಗಳಲ್ಲಿಯಾಗಲಿ, ಈ ಸೀತೆಗೆ ರಾಮನೇ ತಕ್ಕ ಪತಿಯು! ಅವನಿಗೂ ಈಕೆಯೇ ತಕ್ಕ ಪತ್ನಿಯು!" ಎಂದು ಚಿಂತಿಸುತ್ತಿದ್ದನು. ಹೀಗೆ ಹನುಮಂತನು ಬಂಗಾರದಂತೆ ಮೈಬಣ್ಣವುಳ್ಳವಳಾಗಿ, ಲೋಕನಾಯಿಕೆಯಾದ ಲಕ್ಷ್ಮಿಯನ್ನು ಹೋಲುತ್ತಿದ್ದ ಆ ಸೀತೆಯನ್ನು ನೋಡಿನೋಡಿ, ಮನಸ್ಸಿನಲ್ಲಿ ರಾಮನನ್ನೂ ಚಿಂತಿಸುತ್ತ "ಆಹಾ! ರಾಮನು ಇವಳಿಗಾಗಿಯೇ ಅಲ್ಲವೆ ಮಹಾಬಲಾಢ್ಯನಾದ ಆ ವಾಲಿಯನ್ನು ಕೊಂದನು! ವೀರ್ಯದಲ್ಲಿ ರಾವಣನಿಗೆಣೆಯಾದ ಕಬಂಧನನ್ನೂ ಇವಳಿಗಾಗಿಯೇ ಸಂಹರಿಸಿದನು. ಯುದ್ಧದಲ್ಲಿ ಇಂದ್ರನು ಶಂಬರಾಸುರನನ್ನು ಕೊಂದಂತೆ, ಇವಳಿಗಾಗಿಯೇ ರಾಮನು ಕಾಡಿನಲ್ಲಿ ಘೋರಪರಾಕ್ರಮವುಳ್ಳ ಆ ವಿರಾಧನನ್ನು ತನ್ನ ಪರಾಕ್ರಮದಿಂದ ಕೊಂದು ಕೆಡಹಿದನು. ಇವಳಿಗಾಗಿಯೇ ಜನಸ್ಥಾನದಲ್ಲಿದ್ದ ಹದಿನಾಲ್ಕುಸಾವಿರಮಂದಿ ಘೋರರಾಕ್ಷಸರನ್ನೂ ಅಗ್ನಿಜ್ವಾಲೆಗೆ ಸಮಾನವಾದ ತನ್ನ ಬಾಣಗಳಿಂದ ನಿರ್ಮೂಲಮಾಡಿದನು. ಇವಳಿಗಾಗಿಯೇ ಖರನೂ ಹತನಾದನು! ತ್ರಿಶಿರಸ್ಸೂ ಸಂಹೃತನಾದನು! ಮಹಾವೀರ್ಯವುಳ್ಳ ದೂಷಣನೂ ಕೊಲ್ಲಲ್ಪಟ್ಟನು! ಇದುವರೆಗೆ ವಾಲಿಗೆ ಸೇರಿದ್ದ ದುರ್ಲಭವಾದ ವಾನರರಾಜ್ಯಾಧಿಪತ್ಯವೂ ಕೂಡ ಇವಳಿಗಾಗಿಯೇ ಸುಗ್ರೀವನಿಗೆ ಕೈವಶವಾಯಿತು. ನದೀಪತಿಯಾದ ಈ ಮಹಾಸಾಗರವನ್ನು ನಾನು ದಾಟಿ ಬಂದುದೂ ಇವಳಿಗಾಗಿಯೇ! ಈ ವಿಶಾಲಾಕ್ಷಿಗಾಗಿಯೇ ನಾನು ದುರ್ಗಮವಾದ ಈ ಲಂಕೆಗೂ

---

1. ಇಲ್ಲಿ "ತುಲ್ಯಶೀಲವಯೋವೃತ್ತಾಂ ತುಲ್ಯಾಭಿಜನಲಕ್ಷಣಾಮ್" ಎಂದು ಮೂಲವು. ಶೀಲವೆಂದರೆ ಸ್ವಭಾವವು. ಸೀತಾರಾಮರ ಸ್ವಭಾವಾದಿಗಳಲ್ಲಿ ಸಾಮ್ಯವು ಹೇಗೆಂದರೆ "ಅಸ್ಯಾ ದೇವ್ಯಾ ಮನಸ್ತಸ್ಮಿಂಸ್ತಸ್ಯ ಚಾಸ್ಯಾಂ ಪ್ರತಿಷ್ಠಿತಮ್" ಎಂಬುದಾಗಿ ಇಬ್ಬರ ಪ್ರೇಮ ಸ್ವಭಾವವೂ ಒಂದೇವಿಧವೆಂದು ಭಾವವು. ವಯಸ್ಸಿನಲ್ಲಿ ಸಮಾನವೆಂದರೆ ಒಂದೇ ವಯಸ್ಸುಳ್ಳವರೆಂಬುದಲ್ಲ! ಪತಿಪತ್ನಿಯರಿಗಿರಬೇಕಾದ ಅನುರೂಪವಯಸ್ಸುಳ್ಳವರೆಂದು ಭಾವವು. ಸಮಾನವಾದ ನಡತೆಯುಳ್ಳವರೆಂದರೆ "ದೋಷೋ ಯದ್ಯಪಿ ತಸ್ಯ ಸ್ಯಾತ್ಸತಾಮೇತದಗರ್ಹಿತಂ" ಎಂದು ರಾಮನು ಹೇಳಿದಂತೆ "ಪಾಪಾನಾಂ ವಾ ಶುಭಾನಾಂ ವಾ ವಧಾರ್ಹಾಣಾಂ ಪ್ಲವಂಗಮ। ಕಾರ್ಯಂ ಕರುಣಮಾರ್ಯೇಣ ನಕಶ್ಚಿನ್ನಾಪರಾಧ್ಯತಿ" ಎಂದು ಸೀತೆಯೂ ಹೇಳಿರುವುದರಿಂದ, ಇಬ್ಬರೂ ಸಮಾನವಾದ ದಯಾಗುಣವುಳ್ಳವರೆಂದು ಭಾವವು. ಹೀಗೆಯೇ ವಂಶೋನ್ನತಿಯಲ್ಲಿಯೂ, ಸಾಮುದ್ರಿಕಲಕ್ಷಣಗಳಲ್ಲಿಯೂ ಇವರಿಬ್ಬರೂ ಸಮಾನರಾಗಿರುವುದರಿಂದ, ರಾಮನಿಗೆ ಸೀತೆಯೇ ತಕ್ಕವಳೆಂದೂ, ಸೀತೆಗೆ ರಾಮನೇ ತಕ್ಕಪತಿಯೆಂದೂ ಭಾವವು.

ಪ್ರವೇಶಿಸಿ, ಇದೆಲ್ಲವನ್ನೂ ಸುತ್ತಿ ನೋಡಿದೆನು! ಇನ್ನು ಹೆಚ್ಚಾಗಿ ಹೇಳಿದುದರಿಂದೇನು? ಇಷ್ಟೇ ಸಾಲದು! ಇವಳಿಗಾಗಿ ರಾಮನು ಸಮುದ್ರಾಂತವಾದ ಈ ಸಮಸ್ತಭೂಮಿಯನ್ನೂ, ಕೊನೆಗೆ ಈ ಸಮಸ್ತಲೋಕಗಳನ್ನೂ ತಲೆಕೆಳಗಾಗಿ ಮಾಡಿಬಿಟ್ಟರೂ ಯುಕ್ತವೆಂದೇ ನನ್ನ ಬುದ್ಧಿಗೆ ತೋರಿರುವುದು! ಒಂದು ವೇಳೆ ತ್ರೈಲೋಕ್ಯಾಧಿಪತ್ಯವನ್ನೂ, ಜನಕಪುತ್ರಿಯಾದ ಈ ಸೀತೆಯನ್ನೂ ಹೋಲಿಸಿ, ಯಾವುದು ಮೇಲೆಂದು ಪರೀಕ್ಷಿಸುವ ಪಕ್ಷದಲ್ಲಿ, ತ್ರೈಲೋಕ್ಯರಾಜ್ಯವು ಈ ಸೀತೆಯ ಕಲಾಮಾತ್ರಕ್ಕೂ ಸಾಟಿಯಾಗಲಾರದು. ಇವಳೇ ಧರ್ಮಶೀಲನಾಗಿಯೂ, ಮಹಾತ್ಮನಾಗಿಯೂ ಇರುವ ಮಿಥಿಲಾಧಿಪತಿಯಾದ ಜನಕರಾಜನ ಮಗಳು! ಇವಳೇ ದೃಢವಾದ ಪಾತಿವ್ರತ್ಯವುಳ್ಳ ಆ ಸೀತೆಯು! ಇವಳೇ ಯಾಗಭೂಮಿಯನ್ನು ಳುವಾಗ ಭೂಮಿಯನ್ನು ಭೇದಿಸಿಕೊಂಡು, ಕಮಲಧೂಳಿಗೆಣೆಯಾದ ಮತ್ತು ಪರಿಶುದ್ಧವಾದ ಯಾವ ಕ್ಷೇತ್ರದ ಮಣ್ಣಿನಿಂದ ತುಂಬಿದ ಮೈಯುಳ್ಳವಳಾಗಿ ನೇಗಿಲಿನ ಬಾಯಿಗೆ ಸಿಕ್ಕಿಬಂದ ಅಯೋನಿಜೆಯಾದ ಆ ಸೀತೆಯು! ಇವಳೇ ಮಹಾಪರಾಕ್ರಮಿಯಾಗಿಯೂ, ಪುಣ್ಯಶೀಲನಾಗಿಯೂ, ಯುದ್ಧದಲ್ಲಿ ಹಿಂಜರಿಯದವನಾಗಿಯೂ ಇದ್ದ ದಶರಥರಾಜನ ಸೊಸೆಯರಲ್ಲಿ ಹಿರಿಯಳೆನಿಸಿಕೊಂಡ ಯಶಸ್ವಿನಿಯಾದ ಆ ಸೀತೆಯು! ಇವಳೇ ಧರ್ಮಜ್ಞನಾಗಿಯೂ, ಆತ್ಮಜ್ಞನಾಗಿಯೂ ಇರುವ ಆ ರಾಮನ ಪ್ರಿಯಪತ್ನಿಯು! ಅಯ್ಯೋ! ಅಂತಹ ಪರಮಪಾವನೆಯಾದ ಈಕೆಯು, ಈ ರಾಕ್ಷಸಸ್ತ್ರೀಯರ ಕೈಗೆ ಸಿಕ್ಕಿರುವಳಲ್ಲಾ! ಪತಿಯಲ್ಲಿರುವ ಸ್ನೇಹದಿಂದ ಸಮಸ್ತರಾಜಭೋಗಗಳನ್ನೂ ಬಿಟ್ಟು, ವನವಾಸದ ಕಷ್ಟಗಳನ್ನೂ ಲಕ್ಷಿಸದೆ, ನಿರ್ಜನವಾದ ಈ ಕಾಡಿಗೆ ಹೊರಟುಬಂದಳು! ಕಾಡಿನಲ್ಲಿ ಸಿಕ್ಕಿದ ಹಣ್ಣುಗಡ್ಡೆಗಳಿಂದಲೇ ಎಷ್ಟೋ ತೃಪ್ತಿಪಡುತಿದ್ದಳು! ಪತಿಶುಶ್ರೂಷೆಯೊಂದರಲ್ಲಿಯೇ ನಿರತಳಾಗಿದ್ದಳು! ಪತಿಸಾಹಚರ್ಯದಿಂದ ಅರಮನೆಯಲ್ಲಿರುವಂತೆಯೇ, ಅಡವಿಗಳಲ್ಲಿಯೂ ಸಂತೋಷಪಡುತಿದ್ದಳು! ಹೊಂಬಣ್ಣದ ಮೈಯುಳ್ಳವಳಾಗಿ, ಯಾವಾಗಲೂ ಮುಗುಳ್ನಗೆಯೊಡಗೂಡಿದ ಮಾತುಗಳುಳ್ಳವಳಾಗಿ, ಯಾವ ಕಷ್ಟಕ್ಕೂ ಅರ್ಹಳಲ್ಲದ ಸೀತೆಯು, ಈಗ ರಾಕ್ಷಸರಿಂದುಂಟಾದ ಈ ಯಾತನೆಗಳೆಲ್ಲವನ್ನೂ ಸಹಿಸಿಕೊಂಡಿರುವಳಲ್ಲಾ! ರಾವಣನಿಂದ ಪೀಡಿತಳಾಗಿದ್ದರೂ ಸದಾಚಾರಸಂಪನ್ನೆಯಾದ ಈಕೆಯನ್ನು, ದಾಹಪಟ್ಟವನು ಅರವಟಿಗೆಯನ್ನು ಕಂಡಂತೆ ಶ್ರೀರಾಮನು ನೋಡಲಾತುರಪಡುವುದೇ ಯುಕ್ತವು. ರಾಜ್ಯಭ್ರಷ್ಟನಾದ ರಾಜನು ತಿರುಗಿ ತನ್ನ ರಾಜ್ಯವನ್ನು ಪಡೆದಂತೆ, ರಾಮನು ಇವಳನ್ನು ತಿರುಗಿ ಪಡೆದಮೇಲೆ ಅವನ ಸಂತೋಷಕ್ಕೆ ಪಾರವುಂಟೆ? ಈಕೆಯೂ ಕೂಡ, ಸಮಸ್ತ ಕಾಮಭೋಗ

ಗಳನ್ನೂ ಬಿಟ್ಟು, ಬಂಧುಜನಗಳನ್ನೂ ಕಳೆದುಕೊಂಡು, ಇಷ್ಟು ದುಃಖವನ್ನನುಭವಿಸುತಿದ್ದರೂ, ಪುನಃ ರಾಮನೊಡನೆ ಸೇರಬಹುದೆಂಬ ಆಶೋತ್ತರದಿಂದಲೇ ಈಗಲೂ ಪ್ರಾಣವನ್ನು ಧರಿಸಿರುವಳು. ಇವಳು ಮುಂದೆ ನಿಂತಿರುವ ಈ ರಾಕ್ಷಸಸ್ತ್ರೀಯರನ್ನೂ ಕಾಣಳು! ಇಲ್ಲಿನ ಫಲವೃಕ್ಷಗಳನ್ನಾಗಲಿ, ಹೂಗಿಡಗಳನ್ನಾಗಲೀ ಕಣ್ಣೆತ್ತಿಯೂ ನೋಡಳು! ರಾಮನೊಬ್ಬನನ್ನೇ ಧ್ಯಾನಿಸುತ್ತ ಅವನಲ್ಲಿಯೇ ಕಣ್ಣಿಟ್ಟು ಕಾದಿರುವಳು. ಸ್ತ್ರೀಯರಿಗೆ ಸಮಸ್ತಭೂಷಣಗಳಿಗಿಂತಲೂ ಪತಿಯೇ ಪರಮಭೂಷಣವು. ಈಗ ಇವಳಿಗೆ ಆ ಭೂಷಣವೂ ಇಲ್ಲದುದರಿಂದ, ಇವಳ ಕಾಂತಿಯೇ ಕಂದಿದಂತಿರುವುದು. ಮುಖ್ಯವಾಗಿ ಪ್ರಭುವಾದ ರಾಮನು ಈಕೆಯನ್ನಗಲಿಯೂ, ದುಃಖದಿಂದ ಕುಂದದೆ, ತನ್ನ ಪ್ರಾಣವನ್ನು ಧರಿಸಿರುವುದೇ ಅತಿದುಷ್ಕರಕಾರ್ಯವು. ಕಪ್ಪಾದ ಕುರುಳುಗಳಿಂದಲೂ. ಕಮಲದಂತಿರುವ ಕಣ್ಣುಗಳಿಂದಲೂ ಕೂಡಿ, ಯಾವಾಗಲೂ ಸುಖಾರ್ಹಳಾದ ಈಕೆಯು, ಹೀಗೆ ದುಃಖಿಸುತ್ತಿರುವುದನ್ನು ನೋಡಿ, ಕಾಡುಕಪಿಯಾದ ನನಗೇ ಮನಸ್ಸು ತತ್ತಳಿಸುತ್ತಿರುವುದಲ್ಲಾ! ಇನ್ನು ಇವಳಿಗೆ ಪ್ರಿಯನಾಗಿ, ಪರಮದಯಾಳುವೆನಿಸಿಕೊಂಡ ರಾಮನಿಗೆ ಇನ್ನೆಷ್ಟು ಸಂಕಟವಿರಬಹುದು! ಭೂದೇವಿಯಂತೆ ತಾಳ್ಮೆಯುಳ್ಳವಳಾಗಿಯೂ ಕಮಲದಂತೆ ಕಣ್ಣುಳ್ಳವಳಾಗಿಯೂ ಇರುವ ಯಾವ ಈ ಸೀತೆಯು, ಮೊದಲು ರಾಮಲಕ್ಷ್ಮಣರಿಂದ ರಕ್ಷಿಸಲ್ಪಡುತಿದ್ದಳೋ, ಆಕೆಯೇ ಈಗ ಮರದಡಿಯಲ್ಲಿ ಘೋರನೇತ್ರವುಳ್ಳ ರಾಕ್ಷಸಸ್ತ್ರೀಯರಿಂದ ಕಾಯಲ್ಪಡುತ್ತಿರುವಳು. ಹಿಮಬಾಧೆಗೆ ಸಿಕ್ಕಿದ ತಾವರೆಬಳ್ಳಿಯಂತೆ ವ್ಯಸನಪರಂಪರೆಯಿಂದ ಪೀಡಿತಳಾಗಿ ಕಳೆಗುಂದಿದ ಈ ಜನಕಪುತ್ರಿಯು, ಗಂಡುಹಕ್ಕಿಯನ್ನಗಲಿದ ಚಕ್ರವಾಕಿಯಂತೆ ಅತಿದೀನದಶೆಯನ್ನು ಹೊಂದಿರುವಳು! ಮೊದಲೇ ದುಃಖಪೀಡಿತೆಯಾದ ಈಕೆಗೆ, ಮುಂದೆ ಪುಷ್ಪಭಾರದಿಂದ ಬಗ್ಗಿದ ಈ ಅಶೋಕವೃಕ್ಷಗಳು ಮತ್ತಷ್ಟು ದುಃಖೋದ್ರೇಕವನ್ನುಂಟುಮಾಡುವುವು. ಹಾಗೆಯೇ ಈ ವಸಂತಕಾಲದಲ್ಲಿ ತಂಪಾದ ಕಿರಣಗಳಿಂದ ಆಕಾಶದಲ್ಲಿ ಉದಿಸಿಬರುವ ಈ ಚಂದ್ರನೂ ಇವಳ ದುಃಖವನ್ನು ಹೆಚ್ಚಿಸುತ್ತಿರುವನಲ್ಲಾ!'' ಎಂದು ನಾನಾವಿಧದಿಂದ ಚಿಂತಿಸಿ, ಮಹಾಬಲಾಢ್ಯನಾಗಿಯೂ, ವಾನರೋತ್ತಮನಾಗಿಯೂ, ವೇಗಶಾಲಿಯಾಗಿಯೂ ಇರುವ ಆ ಹನುಮಂತನು ಆಕೆಯನ್ನು ನೋಡಿ ಅವಳೇ ಸೀತೆಯೆಂದು ಚೆನ್ನಾಗಿ ನಿಶ್ಚಯಿಸಿಕೊಂಡು, ಆ ಶಿಂಶುಪಾವೃಕ್ಷದಲ್ಲಿಯೇ ಕುಳಿತಿದ್ದನು.

ಇಲ್ಲಿಗೆ ಹದಿನಾರನೆಯ ಸರ್ಗವು.

---



## ಹನುಮಂತನು ಸೀತೆಯ ಸುತ್ತಲೂ ಕಾವಲಿದ್ದ ಘೋರರಾಕ್ಷಸಿಯನ್ನು ಕಂಡು, ಶಿಂಶುಪಾವೃಕ್ಷದ ಮರೆಯಲ್ಲಿ ಕುಳಿತಿದ್ದುದು.



ಇಷ್ಟರಲ್ಲಿ ಬಿಳೀನೈದಿಲೆಯಂತೆ ಶುಭ್ರನಾಗಿಯೂ, ನಿರ್ಮಲನಾಗಿಯೂ ಇರುವ ಚಂದ್ರನು, ಕಪ್ಪಾದ ಜಲಪ್ರವಾಹದಲ್ಲಿ ಈಜಿಬರುವ ಹಂಸದಂತೆ, ನಿರ್ಮಲವಾದ ಆಕಾಶದ ಕೊನೆಯನ್ನು ಮುಟ್ಟಿದನು. ಶುದ್ಧಕಾಂತಿಯುಳ್ಳ ಆ ಚಂದ್ರನೂ, ಹನುಮಂತನಿಗೆ ಸಹಾಯವನ್ನು ಮಾಡುವಂತೆ, ಶೀತಲವಾದ ತನ್ನ ಕಿರಣಗಳನ್ನು ಹರಡಿ ಆ ಆಂಜನೇಯನನ್ನು ಸೇವಿಸುತಿದ್ದನು. ಹನುಮಂತನೂ ಆ ಮರದಲ್ಲಿ ಕುಳಿತಂತೆಯೇ ಸೀತೆಯನ್ನು ನೋಡುತಿದ್ದನು. ಪೂರ್ಣಚಂದ್ರನಂತೆ ಮುಖವುಳ್ಳವಳಾಗಿಯೂ, ನೀರಿನಲ್ಲಿ ಭಾರದಿಂದ ಕುಗ್ಗಿದ ಹಡಗಿನಂತೆ ದುಃಖ ಭಾರದಿಂದ ಕುಗ್ಗಿದವಳಾಗಿಯೂ ಇರುವ ಆ ಸೀತೆಯನ್ನು ನೋಡುತ್ತಿರುವಾಗ, ಅವಳ ಸುತ್ತಲೂ, ಸ್ವಲ್ಪದೂರದಲ್ಲಿ ಕಾವಲಿದ್ದ ಘೋರಾಕೃತಿಯುಳ್ಳ ರಾಕ್ಷಸಿಯರನ್ನು ಕಂಡನು. ಅವರಲ್ಲಿ ಕೆಲವರಿಗೆ ಒಂದೇ ಕಣ್ಣು! ಕೆಲವರಿಗೆ ಒಂದೇ ಕಿವಿ! ಕೆಲವರಿಗೆ ಮೇಲೆ ಮುಸುಕು ಹಾಕಿದಂತಿರುವ ಕಿವಿ! ಕಿವಿಯೇ ಇಲ್ಲದವರು ಕೆಲವರು! ಕೆಲವರಿಗೆ ಶಂಕ್ವಾಕೃತಿಯುಳ್ಳ ಕಿವಿ! ಕೆಲವರಿಗೆ ತಲೆಯ ಮೇಲೆ ಮೂಗು! ಕೆಲವರಿಗೆ ಪರ್ವತದಂತೆ ತಲೆ! ಕೆಲವರಿಗೆ ಕೋಲಿನಂತೆ ಸಣ್ಣನಾಗಿ ಉದ್ದವಾದ ಕೊರಳು! ಕೆದರಿದ ಕೂದಲುಳ್ಳವರು ಕೆಲವರು! ಕೂದಲಿಲ್ಲದವರು ಕೆಲವರು! ಕೂದಲಿನಿಂದ ಹೆಣೆದ ಕಂಬಳಿಯನ್ನು ಹೊದ್ದವರು ಕೆಲವರು! ಹಣೆಯಲ್ಲಿ ಜೋಲುವ ಮೊಲೆಗಳು! ಜೋಲುವ ತುಟಿಯುಳ್ಳವರು ಕೆಲವರು! ಕೆಲವರಿಗೆ ಗಡ್ಡದಲ್ಲಿ ಜೋಲುವ ತುಟಿ! ಜೋಲುವ ಮುಖವುಳ್ಳವರು ಕೆಲವರು! ಜೋಲುವ ಮೊಳಕಾಲುಳ್ಳವರು ಕೆಲವರು! ಬಹಳ ಕುಳ್ಳಾದವರು ಕೆಲವರು! ಬಹಳ ಉದ್ದವಾದವರು ಕೆಲವರು! ಗೂನುಮೈಯುಳ್ಳವರು ಕೆಲವರು! ವಿಕಾರರೂಪವುಳ್ಳವರು ಕೆಲವರು! ಗಿಡ್ಡಮೈಯುಳ್ಳವರು ಕೆಲವರು! ಕರಾಳರೂಪವುಳ್ಳವರು ಕೆಲವರು! ಕೆಲವರಿಗೆ ಚಪ್ಪಟೆಯಾಗಿರುವ ಮೂತಿ! ಕೆಲವರಿಗೆ ಪಿಂಗಳವಾದ ಕಣ್ಣು! ಕೆಲವರಿಗೆ ವಿಕಾರವಾದ ಮೋರೆ! ವಕ್ರರೂಪವುಳ್ಳವರು ಕೆಲವರು! ಪಿಂಗಳ ವರ್ಣದ ಮೈಯುಳ್ಳವರು ಕೆಲವರು! ಕಾಳವರ್ಣವುಳ್ಳವರು ಕೆಲವರು! ಯಾವಾಗಲೂ ಕೋಪಸ್ವಭಾವವುಳ್ಳವರು ಕೆಲವರು! ಯಾವಾಗಲೂ ಕಲಹವಾಡುವ ಸ್ವಭಾವವುಳ್ಳವರು ಕೆಲವರು! ಉಕ್ಕಿನ ಶೂಲವನ್ನು ಹಿಡಿದವರು ಕೆಲವರು! ಕೂಟಮುದ್ಗರಗಳೆಂಬ ಒನಕೆಗಳನ್ನು ಹಿಡಿದು ನಿಂತವರು ಕೆಲವರು! ಕೆಲವರಿಗೆ

ಹಂದಿಯಮೂತಿ ! ಜಿಂಕೆಯಂತೆ ಮುಖವುಳ್ಳವರು ಕೆಲವರು ! ಹುಲಿಯ ಮುಖವುಳ್ಳವರು ಕೆಲವರು! ಎಮ್ಮೆಯ ಮುಖವುಳ್ಳವರು ಕೆಲವರು! ಆಡಿನ ಮೋರೆಯುಳ್ಳವರು ಕೆಲವರು ! ನರಿಯ ಮುಖವುಳ್ಳವರು ಕೆಲವರು ! ಕೆಲವರಿಗೆ ಆನೆಯ ಕಾಲು ! ಕೆಲವರಿಗೆ ಒಂಟೆಯ ಕಾಲು ! ಕೆಲವರಿಗೆ ಕುದುರೆಯ ಕಾಲು ! ಕೆಲವರಿಗೆ ಹೊಟ್ಟೆಯಲ್ಲಿ ಹುದುಗಿದ ತಲೆ! ಕೆಲವರಿಗೆ ಒಂದೇ ಕೈ! ಕೆಲವರಿಗೆ ಒಂದೇ ಕಾಲು! ಕತ್ತೆಯಂತೆಯೂ, ಕುದುರೆಯಂತೆಯೂ ಕಿವಿಯುಳ್ಳವರು ಕೆಲವರು ! ಕೆಲವರಿಗೆ ಹಸುವಿನ ಕಿವಿ! ಆನೆಯ ಕಿವಿಯುಳ್ಳವರು ಕೆಲವರು! ಕುದುರೆಯ ಕಿವಿಯುಳ್ಳವರು ಕೆಲವರು ! ಮೂಗಿಲ್ಲದವರು ಕೆಲವರು ! ತಲೆಯನ್ನು ಮೀರಿದ ಮೂಗುಳ್ಳವರು ಕೆಲವರು ! ಅಡ್ಡ ಮೂಗುಳ್ಳವರು ಕೆಲವರು ! ವಕ್ರವಾದ ಮೂಗುಳ್ಳವರು ಕೆಲವರು ! ಆನೆಯ ಮೂಗಿನಂತೆ ಮೂಗುಳ್ಳವರು ಕೆಲವರು ! ಹಣೆಯಲ್ಲಿ ಮೂಗುಳ್ಳವರು ಕೆಲವರು ! ದಪ್ಪ ಕಾಲುಳ್ಳವರು ಕೆಲವರು ! ಕಾಲಲ್ಲಿ ಜುಟ್ಟುಳ್ಳವರು ಕೆಲವರು ! ಕೆಲವರಿಗೆ ದೊಡ್ಡ ತಲೆ ! ಕೆಲವರಿಗೆ ದೊಡ್ಡ ಕೊರಳು ! ಕೆಲವರಿಗೆ ದೊಡ್ಡ ಮೊಲೆ ! ದೊಡ್ಡ ಹೊಟ್ಟೆಯವರು ಕೆಲವರು ! ಕೆಲವರಿಗೆ ಬಹಳ ದೊಡ್ಡ ಮೂತಿ ! ಕೆಲವರಿಗೆ ಮೊರದಂತೆ ಅಗಲವಾದ ಕಣ್ಣು ! ಕೆಲವರಿಗೆ ಉದ್ದವಾದ ನಾಲಿಗೆ ! ಕೆಲವರಿಗೆ ಉದ್ದವಾದ ಉಗುರುಗಳು ! ಆಡಿನ ಮೂತಿಯುಳ್ಳವರು ಕೆಲವರು ! ಆನೆಯ ಮೂತಿಯುಳ್ಳವರು ಕೆಲವರು ! ಹಸುವಿನ ಮೂತಿಯುಳ್ಳವರು ಕೆಲವರು ! ಹಂದಿ ಮೊಗದವರು ಕೆಲವರು ! ಕುದುರೆ, ಒಂಟೆ, ಕತ್ತೆ ಮೊದಲಾದ ಮೃಗಗಳಂತೆ ಮೂತಿಯುಳ್ಳವರು ಕೆಲವರು ! ಒಂದು ಕೈಯಲ್ಲಿ ಶೂಲವನ್ನೂ, ಮತ್ತೊಂದುಕೈಯಲ್ಲಿ ಮುದ್ಗರವನ್ನೂ ಹಿಡಿದು ನಿಂತವರು ಕೆಲವರು ! ಕೆಂಪು ಕೂದಲುಳ್ಳವರು ಕೆಲವರು ! ಯಾವಾಗಲೂ ಮದ್ಯಪಾನಮಾಡುತಿದ್ದವರು ಕೆಲವರು ! ಯಾವಾಗಲೂ ಮಾಂಸವನ್ನು ಕಚ್ಚಿತಿನ್ನುತಿದ್ದವರು ಕೆಲವರು ! ರಕ್ತಮಾಂಸಗಳಿಂದ ತೊಯ್ದಮೈಯುಳ್ಳವರು ಕೆಲವರು ! ರಕ್ತಮಾಂಸಗಳಿಂದಲೇ ಜೀವಿಸುವವರು ಕೆಲವರು ! ಹೀಗೆ ಮೈಯಲ್ಲಿ ರೋಮಾಂಚವನ್ನು ಹುಟ್ಟಿಸುವಂತೆ ಮಹಾಭಯಂಕರಸ್ವರೂಪವುಳ್ಳ ಆ ರಾಕ್ಷಸಸ್ತ್ರೀಯರೆಲ್ಲರನ್ನೂ ಹನುಮಂತನು ನೋಡಿದನು. ಅವರೆಲ್ಲರೂ, ವಿಸ್ತಾರವಾದ ಆ ಮರದ ಸುತ್ತಲೂ ಆವರಿಸಿ ಕುಳಿತಿರುವುದನ್ನೂ, ಅವರ ನಡುವೆ ಆ ಮರದಡಿಯಲ್ಲಿ ನಿರ್ದೋಷವಾದ ನಡತೆಯುಳ್ಳ, ರಾಜಪುತ್ರಿಯಾದ ಸೀತೆಯು ದೈನ್ಯದಿಂದ ಕುಳಿತಿರುವುದನ್ನೂ ಕಂಡನು. ಮುಖದಲ್ಲಿ ಸ್ವಲ್ಪವೂ ಕಳೆಯಿಲ್ಲದೆ ಸಂಕಟದಿಂದ ಬೇಯುತ್ತ, ಮಾಸಿದ ತಲೆಕೂದಲುಳ್ಳವಳಾಗಿ ಕುಳಿತಿದ್ದ ಆ ಸೀತೆಯು, ಪುಣ್ಯವು

ಕ್ಷಯಿಸಿದಮೇಲೆ ಆಕಾಶದಿಂದ ನೆಲಕ್ಕೆ ಬಿದ್ದ ನಕ್ಷತ್ರವೋ ಎಂಬಂತಿದ್ದಳು. ಪಾತಿವ್ರತ್ಯವೆಂಬ ಧರ್ಮದಿಂದ ಲೋಕವಿಖ್ಯಾತಳಾಗಿದ್ದರೂ, ಪತಿದರ್ಶನವೆಂಬ ಮಹಾಭಾಗ್ಯವಿಲ್ಲದವಳಾಗಿಯೂ, ಉತ್ತಮಾಭರಣಗಳೆಲ್ಲವನ್ನೂ ಬಿಟ್ಟು ಪತಿಭಕ್ತಿಯೆಂಬ ಪ್ರಧಾನಭೂಷಣವೊಂದನ್ನುಮಾತ್ರ ತೊಟ್ಟವಳಾಗಿಯೂ ಇದ್ದ ಆ ಸೀತೆಯನ್ನು ನೋಡಿ ಹನುಮಂತನು ದುಃಖದಿಂದ ತಪಿಸುತಿದ್ದನು. ತನ್ನ ಗುಂಪಿನಿಂದಗಲಿ ಸಿಂಹಗಳ ನಡುವೆ ಸಿಕ್ಕಿಬಿದ್ದ ಹೆಣ್ಣಾನೆಯಂತೆ, ಬಂಧುಗಳನ್ನಗಲಿ ರಾಕ್ಷಸರಲ್ಲಿ ಸೆರೆಸಿಕ್ಕಿದ್ದ ಆ ಸೀತೆಯು, ಮಳೆಗಾಲವು ಮುಗಿದಮೇಲೆ ಶರನ್ಮೇಘಗಳ ನಡುವೆ ಕಾಣುವ ಚಂದ್ರಲೇಖೆಯಂತೆ ಸ್ಪಷ್ಟಾಸ್ಪಷ್ಟವಾದ ದೇಹಕಾಂತಿಯುಳ್ಳವಳಾಗಿಯೂ, ಬಹುಕಾಲದಿಂದ ಕೊಳೆಯೇರಿ ಕಿತ್ತ ತಂತಿಯುಳ್ಳ ವೀಣೆಯಂತೆ ಶೋಚನೀಯಳಾಗಿಯೂ ಇದ್ದಳು. ಆಕೆಯು ಯಾವಾಗಲೂ ತನ್ನ ಪತಿಯಾದ ರಾಮನ ಸಮೀಪದಲ್ಲಿಯೇ ಇರುವುದಕ್ಕರ್ಹಳಾಗಿದ್ದರೂ, ಕ್ರೂರಗ್ರಹಗಳ ನಡುವೆ ಸಿಕ್ಕಿದ ರೋಹಿಣಿಯಂತೆ, ರಾಕ್ಷಸಿಯರ ನಡುವೆ ಸಿಕ್ಕಿ ತತ್ತಳಿಸುತ್ತ, ಅಶೋಕವನಮಧ್ಯದಲ್ಲಿದ್ದರೂ ಶೋಕಸಾಗರದಲ್ಲಿ ಮುಳುಗಿದಂತಿದ್ದಳು. ಹೂವಿಲ್ಲದ ಬಳ್ಳಿಯಂತೆ ಭೂಷಣಾದಿಗಳೊಂದೂ ಇಲ್ಲದೆ ದೀನದಶೆಯಲ್ಲಿದ್ದ ಆ ಸೀತಾದೇವಿಯನ್ನು ನೋಡಿನೋಡಿ ಹನುಮಂತನು ಸಂಕಟಪಡುತಿದ್ದನು. ಅವಳ ದೇಹವೇ ಅವಳಿಗೆ ಮೇಲಾದ ಅಲಂಕಾರವಾಗಿದ್ದರೂ, ಕೊಳೆಮುಚ್ಚಿದ ಮೈಯುಳ್ಳವಳಾಗಿ ಕೆಸರಿನಲ್ಲಿ ಬಿದ್ದಕಮಲದಂತೆ, ಕಂಡೂ ಕಾಣದ ದೇಹಕಾಂತಿಯುಳ್ಳವಳಾಗಿದ್ದಳು. ಮಾಸಿ ಮುದಿರಿದ ಮಲಿನವಸ್ತ್ರವನ್ನುಟ್ಟು, ಕಂದಿದ ಮುಖವುಳ್ಳವಳಾಗಿದ್ದರೂ, ಪತಿಯಾದ ರಾಮನ ಸ್ಮರಣೆಯಿಂದ ಆಗಾಗ ಕಳೆಯೇರಿದ ಮುಖವುಳ್ಳವಳಾಗಿ, ಜಿಂಕೆಯ ಕಣ್ಣಿನಂತೆ ಚಂಚಲವಾದ ದೃಷ್ಟಿಯಿಂದ ನೋಡುತ್ತಿದ್ದಳು. ಸಮೀಪದಲ್ಲಿ ಬೇರೆ ರಕ್ಷಕರಿಲ್ಲದಿದ್ದರೂ ತನ್ನ ಪಾತಿವ್ರತ್ಯವೇ ತನಗೆ ರಕ್ಷಕವೆಂದೆಣಿಸಿ ಭಯಪಟ್ಟ ಹೆಣ್ಣು ಜಿಂಕೆಯಂತೆ, ದೈನ್ಯದಿಂದ ನಾಲ್ಕುಕಡೆಗಳನ್ನೂ ನೋಡುತ್ತಿದ್ದಳು. ಚೆನ್ನಾಗಿ ಚಿಗುರಿದ ಅಲ್ಲಿನ ಮರಗಳೆಲ್ಲವನ್ನೂ ಸುಟ್ಟುಬಿಡುವಂತೆ ಆಗಾಗ ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತ, ಮೂರ್ತಿಗೊಂಡ ದುಃಖಪರಂಪರೆಯೋ ಎಂಬಂತಿದ್ದಳು. ದುಃಖವೆಂಬ ಅಲೆಗಳ ಪರಂಪರೆಯೇ ಉಕ್ಕಿಬಂದಂತೆ ಕಾಣುತಿದ್ದಳು. ಭೂಮಿಯಂತೆ ತಾಳ್ಮೆಯುಳ್ಳವಳಾಗಿಯೂ, ಅಂದವಾದ ಅಂಗವಿಭಾಗವುಳ್ಳವಳಾಗಿಯೂ, ಯಾವ ಆಭರಣವೂ ಇಲ್ಲದಿದ್ದರೂ ತನ್ನ ಸಹಜಸೌಂದರ್ಯದಿಂದಲೇ ಶೋಭಿಸುವವಳಾಗಿಯೂ ಇದ್ದ ಆ ಸೀತೆಯ ದುಸ್ಥಿತಿಗಾಗಿ ಹನುಮಂತನು ಮನಸ್ಸಿನಲ್ಲಿ ಸಂಕಟಪಡುತಿದ್ದರೂ, ಅವಳನ್ನು ಕಂಡುದರಿಂದ ಅವನಿ

ಗುಂಟಾದ ಸಂತೋಷಕ್ಕೆ ಮಿತಿಯೇ ಇರಲಿಲ್ಲ. ಅವನ ಕಣ್ಣುಗಳಲ್ಲಿ ಆನಂದ ಬಾಷ್ಪವು ಉಕ್ಕಿಬರುತಿತ್ತು. ಹೀಗೆ ಹನುಮಂತನು, ಸೀತೆಯನ್ನು ಕಂಡ ಸಂತೋಷದಿಂದ, ಮೊದಲು ರಾಮನಿಗೂ, ಆಮೇಲೆ ಲಕ್ಷ್ಮಣನಿಗೂ ಮನಸ್ಸಿನಿಂದಲೇ ನಮಸ್ಕರಿಸಿ, ಸೀತೆಯನ್ನು ನೋಡಿನೋಡಿ ಹಿಗ್ಗುತ್ತ, ಅಲ್ಲಿದ್ದ ರಾಕ್ಷಸಸ್ತ್ರೀಯರಿಗೆ ತಾನು ಕಾಣಿಸಿಕೊಳ್ಳಬಾರದೆಂದು ಆ ಮರದ ಕೊನೆಯಲ್ಲಿಯೇ ಮರೆಯಾಗಿದ್ದನು.

ಇಲ್ಲಿಗೆ ಹದಿನೇಳನೆಯ ಸರ್ಗವು.

---

ರಾವಣನು ಬೆಳಗಿನ ಜಾವದಲ್ಲಿ ಕೆಲವು ರಾಕ್ಷಸಸ್ತ್ರೀಯರೊಡನೆ ಹೊರಟು, ಸೀತೆಯನ್ನು ನೋಡುವುದಕ್ಕಾಗಿ ಅಶೋಕವನಕ್ಕೆ ಬಂದುದು.

ಹೀಗೆ ಹನುಮಂತನು ಮರದಮೇಲೆ ಕುಳಿತು, ಪುಷ್ಪಿತವಾದ ಆ ತೋಟದಲ್ಲಿ ಸೀತೆಯನ್ನು ಕಂಡುಹಿಡಿಯುವಷ್ಟರಲ್ಲಿಯೇ ಆ ರಾತ್ರಿಯು ಬಹಳ ಮಟ್ಟಿಗೆ ಕಳೆದು ಬೆಳಗಾಗುವ ಸಮಯವಾಯಿತು. ಆ ಕಾಲಕ್ಕೆ ಸರಿಯಾಗಿ, ಅಲ್ಲಲ್ಲಿ ಸಾಂಗವಾಗಿ ವೇದಾಧ್ಯಯನಮಾಡಿದ ಬ್ರಹ್ಮರಾಕ್ಷಸರು ಪಠನಮಾಡುವ ವೇದಘೋಷಗಳೂ, ಅಲ್ಲಲ್ಲಿ ಮಂಗಳವಾದ್ಯಧ್ವನಿಗಳೂ ಕೇಳಿ ಬರುತಿದ್ದುವು. ಈ ಧ್ವನಿಯು ಕಿವಿಗೆ ಬಿದ್ದೊಡನೆ ಅತ್ತಲಾಗಿ ನಿದ್ರೆಯಲ್ಲಿದ್ದ ರಾವಣನಿಗೆ ಸಕಾಲಕ್ಕೆ ಎಚ್ಚರವುಂಟಾಯಿತು. ಮಹಾಬಲಾಢ್ಯನಾದ ದಶಗ್ರೀವನು ನಿದ್ರೆಯಲ್ಲಿ ಕಪಲಿದ ವಸ್ತ್ರಾಭರಣಗಳೊಡನೆಯೇ ಎದ್ದು ಕುಳಿತನು. ಆಗಲೇ ಅವನಿಗೆ ಸೀತೆಯ ನೆನಪು ಬಂದಿತು. 1 ಮದ್ಯಪಾನದಿಂದಲೂ, ಮನ್ಮಥವಿಕಾರದಿಂದಲೂ, ಪರವಶನಾಗಿ

---

1. ಇಲ್ಲಿ "ಭೃಶಂ ನಿಯುಕ್ತಸ್ತಸ್ಯಾಂಚ ಮದನೇನ ಮದೋತ್ಕಟಃ। ನಸತಂ ರಾಕ್ಷಸಃ ಕಾಮಂ ಶಶಾಕಾತ್ಮನಿ ಗೂಹಿತುಂ" ಎಂಬ ಮೂಲವು. ರಾವಣನ ವಿಷಯವಾದ ಈ ಮಾತು ಹೊರಕ್ಕೆ ದೋಷಯುಕ್ತವಾಗಿ ತೋರಿದರೂ, ಆತನು ಲಕ್ಷ್ಮೀಸ್ವರೂಪೆಯಾದ ಸೀತೆಗೆ ಭಕ್ತನೇ ಆಗಿರುವುದರಿಂದ, ಅದಕ್ಕನುಕೂಲವಾಗಿ ಈ ವಾಕ್ಯದ ವಾಸ್ತವಾರ್ಥವೂ ಭಕ್ತಿರೂಪವಾಗಿಯೇ ಇರುವುದೆಂದು ಗ್ರಾಹ್ಯವು. ಹೇಗೆಂದರೆ; (ಸರಾಕ್ಷಸಃಮದನೇನ ಮದೋತ್ಕಟೋಪಿ ತಸ್ಯಾಂ ಭೃಶಂ ನಿಯುಕ್ತಃ) ರಾಕ್ಷಸನು ಸ್ವಾಭಾವಿಕವಾಗಿಯೇ ಮನ್ಮಥತಾಪದಿಂದಲೂ, ಮದ್ಯಪಾನದಿಂದಲೂ ಪರವಶನಾಗಿದ್ದರೂ, ಸೀತೆಯವಿಷಯದಲ್ಲಿಮಾತ್ರ ವಿಶೇಷಭಕ್ತಿಯುಳ್ಳವನಾಗಿಯೇ ಇದ್ದನು. ಆದುದರಿಂದಲೇ ಆ ಭಕ್ತಿರೂಪ

ಆ ನೀಚನು, ಸೀತೆಯಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ, ಯಾವವಿಧದಿಂದಲೂ ಆ ಕಾಮಾತುರವನ್ನಡಗಿಸಿಕೊಳ್ಳಲಾರದೆ ಮನಸ್ಸಿನಲ್ಲಿ ಕುದಿಯುತಿದ್ದನು. ಆಗಲೇ ಸರ್ವಾಭರಣಗಳಿಂದಲಂಕೃತನಾಗಿ, ಎಣೆಯಿಲ್ಲದ ಸೊಬಗನ್ನು ತೋರಿಸುತ್ತ ಸೀತೆಯನ್ನು ನೋಡುವುದಕ್ಕಾಗಿ ಅಶೋಕವನದಕಡೆಗೆ ಹೊರಟು, ದೂರದಿಂದಲೇ ಆ ತೋಟದ ಅಂದವನ್ನು ನೋಡಿ ಆನಂದಿಸುತ್ತ ಬಂದನು. ಆ ತೋಟವಾದರೋ ಸುತ್ತಲೂ ಪುಷ್ಪಫಲಗಳಿಂದ ತುಂಬಿದ ನಾನಾವೃಕ್ಷಗಳಿಂದೊಪ್ಪುತ್ತಿರುವುದು. ಎಲ್ಲೆಲ್ಲಿ ನೋಡಿದರೂ ತಾವರೆಕೊಳಗಳು ರಮಣೀಯವಾಗಿರುವುವು. ಮದಿಸಿ ಕೂಗುತ್ತಿರುವ ಪಕ್ಷಿಗಳಿಂದ ವಿಚಿತ್ರವಾಗಿರುವುದು. ಆಶ್ಚರ್ಯದ್ಭುತವಾಗಿ ನೇತ್ರಾನಂದವನ್ನುಂಟುಮಾಡುವುದು. ಚಿತ್ರವಿಚಿತ್ರಗಳಾದ ತೋಳಗಳು ಅಲ್ಲಲ್ಲಿ ನೇತ್ರಾನಂದಕರಗಳಾಗಿ ಸಂಚರಿಸುತ್ತಿರುವುವು. ಅಲ್ಲಲ್ಲಿ ಚಿನ್ನದ ಮತ್ತು ರತ್ನದ ತೋರಣಗಳು ಸಾಲುಸಾಲಾಗಿ ಕಂಗೊಳಿಸುತ್ತಿರುವುವು. ಸಮಸ್ತಜಾತಿಯ ಮೃಗಗಳೂ ತುಂಬಿರುವುವು. ಎಲ್ಲಿ ನೋಡಿದರೂ ಬಗೆಬಗೆಯ ಮರಗಳ ಸಾಲು ದಟ್ಟವಾಗಿ ಬೆಳೆದಿರುವುವು. ಹೀಗಿದ್ದ ಅಶೋಕವನಕ್ಕೆ ರಾವಣನು ಹೊರಟುಬಂದಾಗ, ನೂರುಮಂದಿ ಹೆಂಗಸರು ಮಾತ್ರ, ದೇವೇಂದ್ರನನ್ನು ಹಿಂಬಾಲಿಸಿ ಬರುವ ದೇವಗಂಧರ್ವಸ್ತ್ರೀಯರಂತೆ ಅವನೊಡನೆ ಬರುತಿದ್ದರು. ಅವರಲ್ಲಿ ಕೆಲವರು ಚಿನ್ನದ ದೀಪಸ್ತಂಭಗಳನ್ನು ಹಿಡಿದು ಮುಂದೆ ಬರುತಿದ್ದರು. ಕೆಲವರು ಪಕ್ಕದಲ್ಲಿ ಚಾಮರವನ್ನು ಹಾಕುತಿದ್ದರು, ಮತ್ತೆ ಕೆಲವರು ಬೀಸುತ್ತಿದ್ದರು. ಮುಂದೆ ಕೆಲವರು ಸುವರ್ಣಕುಂಭಗಳಲ್ಲಿ ನೀರನ್ನು ಹೊತ್ತು ತರುತ್ತಿದ್ದರು. ಅವನ ಹಿಂದೆ ಕೆಲವರು ಕತ್ತಿಯನ್ನೂ, ಆಸನವನ್ನೂ ಧರಿಸಿ ಬರುತಿದ್ದರು. ಅವನ ಪಕ್ಕದಲ್ಲಿ ಒಬ್ಬಳು ರತ್ನಮಯವಾದ ಮದ್ಯಪಾತ್ರೆಯನ್ನು ಬಲಗೈಯಲ್ಲಿ ಹಿಡಿದುಕೊಂಡು ಬರುತಿದ್ದಳು. ಮತ್ತೊಬ್ಬಳು ಅವನಹಿಂದೆ ಹಂಸದಂತೆ ಬಿಳುಪಾಗಿಯೂ, ಪೂರ್ಣಚಂದ್ರನಂತೆ ವರ್ತುಲಾಕಾರವಾಗಿಯೂ, ಸುವರ್ಣದಂಡವುಳ್ಳದಾಗಿಯೂ ಇರುವ ಶ್ವೇತಚ್ಛತ್ರವನ್ನು ಹಿಡಿದು ಬರುತಿದ್ದಳು. ಇವರಲ್ಲದೆ ರಾವಣನ ಪ್ರಧಾನಪತ್ನಿಯರಲ್ಲಿಯೂ ಕೆಲವರು ಮೇಘವನ್ನು ಹಿಂಬಾಲಿಸುವ ಮಿಂಚುಗಳಂತೆ, ಪತಿಯಾದ ಆ ರಾವಣನ ಹಿಂದೆ ಬರುತಿದ್ದರು. ಅವರಿಗಾದರೋ ಇನ್ನೂ ಚೆನ್ನಾಗಿ ನಿದ್ರೆ ತಿಳಿಯದುದರಿಂದಲೂ, ಮತ್ತಿಳಿಯದುದರಿಂದಲೂ, ಕಣ್ಣಾಲಿಗಳು ತೊಳಲುತ್ತಿರುವುವು. ನಿದ್ರೆಯ ಹೊರಳಾಟದಿಂದ ಅವರ ಕಂಠಾಭರಣಗಳು ಕದಲಿರುವುವು. ಅವರ ತೋಳ್ಬಳೆ

---

ವಾದ ಕೋರಿಕೆಯನ್ನು ಯಾವವಿಧದಿಂದಲೂ, ಮರೆಸಲ್ಪಟ್ಟುಕೊಳ್ಳಲಾರದ, ಆ ಸೀತಾದೇವಿಯಲ್ಲಿ ಪೂಜ್ಯಭಾವದಿಂದ ನಟ್ಟ ಮನಸ್ಸುಳ್ಳವನಾಗಿದ್ದನೆಂದು ಇಲ್ಲಿನ ವಾಸ್ತವಾರ್ಥವು. (ಮಹೇಶ್ವರತೀ.)

ಗಳು ಜಾರಿರುವುವು. ಅವರ ಗಂಧಾನುಲೇಪನಗಳೆಲ್ಲವೂ ಕದಲಿ ಹೋಗಿರುವುವು. ಮುಂಗುರುಳು ಕೆದರಿರುವುದು. ಮುಖದಲ್ಲಿ ಬೆವರು ಸುರಿಯುತ್ತಿರುವುದು. ಕಣ್ಣುಗಳು ಕೆಂಪೇರಿರುವುವು. ಮೈಮೇಲಿನ ಹೂಗಳೆಲ್ಲವೂ ಬೆವರಿನಿಂದ ಬಾಡಿರುವುವು. ಹೂಮುಡಿಗಳು ಕೆಳಗೆ ಜೋಲುತ್ತಿರುವುವು. ಈ ಸ್ಥಿತಿಯಲ್ಲಿಯೂ, ಅವರು ತಮಗೆ ಪರಮ ಪ್ರಿಯನಾದ ಆ ರಾಕ್ಷಸೇಂದ್ರನಲ್ಲಿ ಗೌರವದಿಂದಲೂ, ಅವನಲ್ಲಿರುವ ಮೋಹದಿಂದಲೂ, ಅವನನ್ನು ಕ್ಷಣಮಾತ್ರವೂ ಬಿಟ್ಟಿರಲಾರದೆ ಅವನನ್ನು ಹಿಂಬಾಲಿಸಿ ಬರುತಿದ್ದರು. ಕೇವಲ ಕಾಮಾಸಕ್ತನಾದ ರಾವಣನಾದರೋ ಈ ಲೋಕವ್ಯಾಪಾರವನ್ನೇ ಮರೆತು ಸೀತೆಯೊಬ್ಬಳಲ್ಲಿಯೇ ನಟ್ಟಮನಸ್ಸುಳ್ಳವನಾಗಿ ಮೆಲ್ನಡೆಯಿಂದ ಮುಂದೆ ಸಾಗಿಬರುತಿದ್ದನು. ಹೀಗೆ ಪರಿವಾರಸಮೇತನಾಗಿ ರಾವಣನು ಬರುತ್ತಿರುವಾಗ, ಆ ಸ್ತ್ರೀಯರ ಕಾಂಚೀಧ್ವನಿಯೂ, ಅವರಕಾಲಂದುಗೆಗಳ ಶಬ್ದವೂ ದೂರದಿಂದಲೇ ಹನುಮಂತನ ಕಿವಿಗೆ ಕೇಳಿಸಿತು. ಆಗ ಹನುಮಂತನು ಇದೇನೆಂಬ ಕುತೂಹಲದಿಂದ ಆ ಶಬ್ದವು ಹೊರಟುಬಂದ ದಾರಿಯನ್ನು ನೋಡುತ್ತಿರುವಷ್ಟರಲ್ಲಿಯೇ, ಎಣೆಯಿಲ್ಲದ ಸಾಹಸಕಾರ್ಯವುಳ್ಳವನಾಗಿಯೂ, ಅಸಾಧ್ಯ ವೀರ್ಯವುಳ್ಳವನಾಗಿಯೂ ಇದ್ದ ರಾವಣನು, ಕೋಟೆದ ಬಾಗಿಲನ್ನು ದಾಟಿ ಬರುತ್ತಿದ್ದನು. ಈ ರಾಕ್ಷಸನಮುಂದೆ ಕೆಲವು ಸ್ತ್ರೀಯರು ಗಂಧದೆಣ್ಣೆಯಿಂದಲೇ ಉರಿಸಲ್ಪಡುವ ದೊಡ್ಡ ದೀವಟಿಗೆಗಳನ್ನು ಹಿಡಿದು ಬರುತಿದ್ದರು. ಈ ದೀವಟಿಗೆಗಳ ಬೆಳಕಿನಿಂದ ಅಲ್ಲಿ ನಡೆಯುವ ಸನ್ನಿವೇಶಗಳೆಲ್ಲವೂ ಹನುಮಂತನಿಗೆ ಸ್ಪಷ್ಟವಾಗಿ ತಿಳಿಯುತಿದ್ದುವು. ಇತ್ತಲಾಗಿ ರಾವಣನಾದರೋ ಕಾಮಾತುರದಿಂದಲೂ, ವೀರ್ಯದ ಕೊಬ್ಬಿನಿಂದಲೂ, ಮದ್ಯಪಾನದ ಮದದಿಂದಲೂ ಮೈತಿಳಿಯದೆ, ಕೆಂಪೇರಿದ ಕಣ್ಣುಗಳುಳ್ಳವನಾಗಿ, ಪುಷ್ಪಬಾಣವನ್ನು ಹಿಡಿದು ಬರುವ ಮನ್ಮಥನಂತೆ ಠೀವಿಯಿಂದ ಬರುತ್ತಿದ್ದನು. ಮತ್ತು ಸ್ವಲ್ಪವೂ ಕೊಳೆಯಿಲ್ಲದೆ ಬೆಣ್ಣೆಯ ಮುದ್ದೆಯಂತೆ ಶುಭ್ರವಾದ, ಒಂದು ಬಿಳಿದುಕೂಲವನ್ನು ಉತ್ತರೀಯವಾಗಿ ಭುಜದಮೇಲೆ ಹಾಕಿಕೊಂಡು, ತಪ್ಪು ಹೆಜ್ಜೆಯನ್ನಿಟ್ಟು ನಡೆದುಬರುವಾಗ ಆಗಾಗ ಜಾರಿ ತೋಳ್ಬಳೆಗಳಲ್ಲಿ ಸಿಕ್ಕಿಕೊಳ್ಳುವ ಆ ದುಕೂಲವನ್ನು ಠೀವಿಯಿಂದ ಮೇಲಕ್ಕೆತ್ತಿ ಸರಿಮಾಡಿಕೊಳ್ಳುತ್ತ ವಿಲಾಸದಿಂದ ನಡೆದು ಬರುತ್ತಿರುವ ರಾವಣನನ್ನು ಕಂಡೊಡನೆ ಹನುಮಂತನು, ಮರದ ಮರೆಯಲ್ಲಿ ಚೆನ್ನಾಗಿ ಮರೆಸಿಕೊಂಡು ಅಲ್ಲಿಂದಲೇ ಕಣ್ಣಿಟ್ಟು ನೋಡುತಿದ್ದನು. ಈ ರಾವಣನ ಇನ್ನೂ ಬಹುದೂರದಲ್ಲಿ ಬರುತ್ತಿದ್ದರೂ ಅವನ ತೇಜಸ್ಸಿನಿಂದ ಸಮೀಪದಲ್ಲಿರುವಂತೆಯೇ ಕಾಣುತ್ತಿದ್ದನು. ಹೀಗೆ ಹನುಮಂತನು ರಾವಣನನ್ನೂ, ಅತನನ್ನು ಹಿಂಬಾಲಿಸಿ ಬರುತ್ತಿರುವ ಸರ್ವೋತ್ತಮವಾದ

ರೂಪಯೌವನವುಳ್ಳ ರಾಕ್ಷಸಸ್ತ್ರೀಯರನ್ನೂ ಕಣ್ಣಿಟ್ಟು ನೋಡುತ್ತಿರುವಾಗಲೇ ಆ ಸ್ತ್ರೀಯರೊಡನೆ ಅತನು ಅಶೋಕವನಕ್ಕೆ ಪ್ರವೇಶಿಸಿಬಿಟ್ಟನು. ಕೇವಲ ಮದೋನ್ಮತ್ತನಾಗಿಯೂ, ವಿಚಿತ್ರಾಭರಣವನ್ನು ತೊಟ್ಟವನಾಗಿಯೂ ಮಹಾಬಲಾಢ್ಯನಾಗಿಯೂ, ಗರ್ವದಿಂದ ನಟ್ಟ ಕಿವಿಯುಳ್ಳವನಾಗಿಯೂ, ನಕ್ಷತ್ರಗಳಿಂದ ಪರಿವೃತನಾದ ಚಂದ್ರನಂತೆ ಸ್ತ್ರೀಯರಿಂದ ಪರಿವೃತನಾಗಿಯೂ ಬರುವ ಮಹಾತೇಜಸ್ವಿಯಾದ ಆ ರಾಕ್ಷಸನನ್ನು ನೋಡಿದೊಡನೆ, ಹನುಮಂತನಿಗೆ ಅವನೇ ರಾವಣನೆಂಬ ನಿಶ್ಚಯವುಂಟಾಯಿತು. ಆಗ ಹನುಮಂತನು ಆ ರಾಕ್ಷಸನ ಮುಂದಿನ ವ್ಯಾಪಾರಗಳನ್ನು ಚೆನ್ನಾಗಿ ನೋಡಬೇಕೆಂದು, ತಾನಿದ್ದ ಕೊಂಬೆಯಿಂದ ಕೆಳಗಿಳಿದು ಮತ್ತೊಂದು ಕೊನೆಯಲ್ಲಿ ಮರೆಯಾಗಿ ಕುಳಿತನು. ಮಹಾತೇಜಸ್ವಿಯಾಗಿದ್ದ ಈ ಹನುಮಂತನೂ ಕೂಡ ರಾವಣನ ತೇಜಸ್ಸಿನಿಂದ ತಿರಸ್ಕೃತನಾದಂತೆ, ಎಲೆಗಳ ಮರೆಯಲ್ಲಿ ಚೆನ್ನಾಗಿ ಮರೆಸಿಕೊಂಡು ಕುಳಿತಿರಲು, ಇಷ್ಟರಲ್ಲಿ ರಾವಣನು ತನ್ನ ಮನಸ್ಸಿನಲ್ಲಿ ಆ ಸೀತೆಯ ಕಪ್ಪಾದ ಕುರುಳುಗಳ ಸೊಗಸನ್ನೂ, ಅವಳ ಅವಯವಸೌಂದರ್ಯವನ್ನೂ, ಅಂದವಾದ ಕಡೆಗಣ್ಣಿನ ನೋಟವನ್ನೂ, ಭಾವಿಸಿ ಕಾಮಾತುರದಿಂದ ಕಳವಳಿಸುತ್ತಾ ಅವಳನ್ನು ನೋಡುವುದಕ್ಕಾಗಿ ಸಮೀಪಕ್ಕೆ ಬಂದನು.

ಇಲ್ಲಿಗೆ ಹದಿನೆಂಟನೆಯ ಸರ್ಗವು

---


ರಾವಣನು ಸೀತೆಯ ಬಳಿಗೆ ಬಂದು, ಅವಳಿಗೆ ಆಸೆಹುಟ್ಟಿಸುವ ಮಾತುಗಳನ್ನು ಹೇಳತೊಡಗಿದುದು.


ಇಷ್ಟರಲ್ಲಿ ಇತ್ತಲಾಗಿ ಮರದಡಿಯಲ್ಲಿ ಕುಳಿತಿದ್ದ ನಿರ್ದುಷ್ಟವಾದ ನಡತೆಯುಳ್ಳ ಆ ಸೀತೆಯಾದರೋ ದೂರದಿಂದಲೇ ಆ ರಾವಣನು ಬರುವುದನ್ನು ಕಂಡಳು, ರೂಪಯೌವನಗಳಿಂದ ಕೂಡಿ ಉತ್ತಮಾಭರಣಗಳನ್ನು ಧರಿಸಿ ತನ್ನ ಕಡೆಗೆ ಬರುತ್ತಿರುವ ಆ ರಾಕ್ಷಸರಾಜನನ್ನು ಕಂಡೊಡನೆ ಬಿರುಗಾಳಿಗೆ ಸಿಕ್ಕಿದ ಬಾಳೆಯ ಗಿಡದಂತೆ ಭಯದಿಂದ ದಿಗ್ಗನೆ ನಡುಗಿದಳು. ವಿಶಾಲಾಕ್ಷಿಯಾದ ಆ ಸೀತೆಯು ತೊಡೆಗಳಿಂದ ತನ್ನ ಉದರಪ್ರದೇಶವನ್ನೂ, ತೋಳುಗಳಿಂದ ಸ್ತನಗಳನ್ನೂ ಚೆನ್ನಾಗಿ ಮುಚ್ಚಿಟ್ಟುಕೊಂಡು, ಆ ಮರದಡಿಯಲ್ಲಿಯೇ ಕುಳಿತು ಧಾರೆಧಾರೆಯಾಗಿ ಕಣ್ಣೀರುಬಿಟ್ಟು ಅಳುತಿದ್ದಳು. ಸಮುದ್ರಮಧ್ಯದಲ್ಲಿ ಭಾರದಿಂದ ಕುಗ್ಗುತ್ತಿರುವ ಹಡಗಿನಂತೆ, ರಾಕ್ಷಸಸ್ತ್ರೀಯರ ನಡುವೆ ದುಃಖದಿಂದ ಕುಗ್ಗಿ

ಕುಳಿತಿರುವ ಆ ಸೀತೆಯನ್ನೇ ನೋಡುತ್ತ ರಾವಣನೂ ಮುಂದೆ ಬಂದನು. ಆಕೆಯಾದರೋ ಮರದಿಂದ ಮುರಿದು ಕೆಡಹಿದ ಶಾಖೆಯಂತೆ ಆಸನವಿಲ್ಲದ ಬರೀ ನೆಲದ ಮೇಲೆ ಬಹಳದೈನ್ಯದಿಂದ ಕುಳಿತಿರುವಳು. ಸರ್ವಾಲಂಕಾರಭೂಷಿತೆಯಾಗಿರಬೇಕಾಗಿದ್ದರೂ, ಯಾವ ಆಭರಣವೂ ಇಲ್ಲದೆ ಕೊಳೆಯೇರಿದ ತನ್ನ ಮೈಯಿಂದಲೇ ಒಂದು ವಿಚಿತ್ರಶೋಭೆಯನ್ನು ಬೀರುತ್ತ ಕೆಸರಂಟಿದ ತಾವರೆಯ ಹೂವಿನಂತೆ ಕಂಡೂಕಾಣದ ದೇಹಕಾಂತಿಯುಳ್ಳವಳಾಗಿರುವಳು. ಮತ್ತು ಆಕೆಯು ತನ್ನ ಮನೋರಥಗಳೆಂಬ ರಥಗಳಲ್ಲಿ ಸಂಕಲ್ಪಗಳೆಂಬ ಕುದುರೆಗಳನ್ನು ಕಟ್ಟಿ ಅದರಮೇಲೆ ಕುಳಿತು ರಾಜಸಿಹ್ಮನಾದ ಶ್ರೀರಾಮನಬಳಿಗೆ ಓಡಿಸುತ್ತಿರುವಳೋ ಎಂಬಂತೆ ಆತ್ಯಾತುರದಿಂದ ರಾಮನನ್ನೇ ಧ್ಯಾನಿಸುತ್ತಿರುವಳು. ದುಃಖದಿಂದ ಕಂದಿಕಂದಿ ಕೃಶವಾಗುತ್ತಿರುವಳು. ಅನಾಥೆಯಾಗಿ ಒಬ್ಬಳೇ ಕುಳಿತು ಅಳುತ್ತಿರುವಳು. ಚಿಂತೆ, ಮತ್ತು ದುಃಖವೆಂಬ ಈ ಎರಡರಲ್ಲಿಯೇ ಮುಳುಗಿರುವಳು. ಆ ದುಃಖಕ್ಕೆ ಕೊನೆಯನ್ನು ಕಾಣದೆ ತತ್ತಳಿಸುತ್ತಿರುವಳು. ಮಣಿಮಂತ್ರಾದಿಗಳ ಶಕ್ತಿಯಿಂದಡಗಿಸಲ್ಪಟ್ಟ ಹಾವಿನಂತೆ ಹೊರಳುತ್ತಿರುವಳು. ಕೇತುಗ್ರಹಕ್ಕೆ ಸಿಕ್ಕಿದ ರೋಹಿಣಿಯಂತೆ ಸಂಕಟಪಟ್ಟು ಕುದಿಯುತ್ತಿರುವಳು. ನಡತೆಯಲ್ಲಿಯೂ ಸದಾಚಾರದಲ್ಲಿಯೂ ಮೇಲೆನಿಸಿಕೊಂಡ ಧಾರ್ಮಿಕವಾದ ಒಂದು ಸರ್ವೋತ್ತಮಕುಲದಲ್ಲಿ ಹುಟ್ಟಿ, ಅದರಂತೆಯೇ ಪವಿತ್ರವಾದ ಮತ್ತೊಂದು ಕುಲವನ್ನು ಸೇರಿ, 1 ಜನ್ಮಸಂಸ್ಕಾರಹೊಂದಿದವಳಾಗಿದ್ದರೂ, ಕೇವಲ ದುಷ್ಕುಲದಲ್ಲಿ ಹುಟ್ಟಿದವಳಂತೆ ದೈನ್ಯದಿಂದಿರುವಳು. ಮತ್ತು ವ್ಯಥಾಪವಾದಕ್ಕೊಳಗಾಗಿ ಮಾಸಿದ ಕೀರ್ತಿಯಂತೆಯೂ, ಶಾಸ್ತ್ರಸಂಸ್ಕಾರವಿಲ್ಲದುದರಿಂದ ಸಡಲಿದ ವಿದ್ಯೆಯಂತೆಯೂ, ಕ್ಷಯಿಸಿಹೋದ ಖ್ಯಾತಿಯಂತೆಯೂ ತಿರಸ್ಕೃತವಾದ ಶ್ರದ್ಧೆಯಂತೆಯೂ, ಕ್ಷೀಣವಾದ ಪೂಜೆಯಂತೆಯೂ, ಭಂಗಹೊಂದಿದ ಆಶೆಯಂತೆಯೂ, ತಗ್ಗಿಬರುತ್ತಿರುವ ಆದಾಯದಂತೆಯೂ, ತಿರಸ್ಕೃತವಾದ ರಾಜಾಜ್ಞೆಯಂತೆಯೂ, ಉತ್ಪಾತಕಾಲದಲ್ಲಿ ಹತ್ತಿಕೊಂಡು ಉರಿಯುತ್ತಿರುವ ದಿಕ್ಕಿನಂತೆಯೂ, ಕದ್ದುತಂದ ಪೂಜಾದ್ರವ್ಯದಂತೆಯೂ, ಕಿತ್ತೆಸೆದ ಕಮಲಿನಿಯಂತೆಯೂ, ಒಣಗಿದ ನದಿಯಂತೆಯೂ, ಶೂದ್ರಾದಿಗಳಿಂದ ಸ್ಪರ್ಶಿಸಲ್ಪಟ್ಟ ಯಜ್ಞವೇದಿಕೆಯಂತೆಯೂ, ನಂದಿದ ಅಗ್ನಿಜ್ವಾಲೆಯಂತೆಯೂ,

---

1. “ಪುನಸ್ಸಂಸ್ಕಾರಮಾಪನ್ನಾಂ” ಎಂದು ಇದಕ್ಕೆ ಮೂಲವು. “ಕುಮಾರಾಣಾಮುಪನಯನಮಿವ ಕುಮಾರೀಣಾಂ ವಿವಾಹೋ ದ್ವಿತೀಯಂ ಜನ್ಮ” ಪುರುಷರಿಗೆ ಉಪನಯನದಂತೆ ಸ್ತ್ರೀಯರಿಗೆ ವಿವಾಹವೆಂಬುದು ಎರಡನೆಯ ಜನ್ಮವೆಂದೂ, ಇದರಿಂದ ಅವರು ಸಂಸ್ಕೃತರಾಗಿ ಜನ್ಮಶುದ್ಧಿಹೊಂದಿದಂತೆಯೂ ಗ್ರಾಹ್ಯವು.

ಗ್ರಹಣಹಿಡಿದ ಹುಣ್ಣಿಮೆಯ ರಾತ್ರಿಯಂತೆಯೂ ತೋರುತ್ತಿರುವಳು. ಕೊಬ್ಬಿದ
ಕಾಡಾನೆಯು ಒಳನುಗ್ಗಿ ಸೊಂಡಲಿಟ್ಟು ಕಲಕಿದಾಗ ಉದಿರಿದ ಕಮಲದಳಗಳಿಂ
ದಲೂ, ಭಯಪಟ್ಟು ಚದರಿಹೋದ ಪಕ್ಷಿಗಳಿಂದಲೂ ಕಳೆಗೆಟ್ಟ ಕಮಲ ಸರೋ
ವರದಂತಿರುವಳು. ನೀರೆಲ್ಲವನ್ನೂ ಬಿಟ್ಟುಮೇಲೆ ಒಣಗಿದ ನದಿಯಂತೆ ಅತಿಶೋಕ
ದಿಂದ ಬಾಡಿರುವಳು. ಕೃಷ್ಣಪಕ್ಷರಾತ್ರಿಯಂತೆ ವಿರಹದುಃಖದಿಂದ ದೇಹಕ್ಕೆ
ಮಾಡಬೇಕಾದ ಸಂಸ್ಕಾರಗಳೆಲ್ಲವನ್ನೂ ಬಿಟ್ಟು ಕಳೆಗುಂದಿರುವಳು. ಸುಕುಮಾರಿ
ಯಾಗಿಯೂ, ಸುಂದರಾಂಗವುಳ್ಳವಳಾಗಿಯೂ, ರತ್ನಗೃಹಗಳಲ್ಲಿರುವುದಕ್ಕರ್ಹೆ
ಳಾಗಿಯೂ, ಇದ್ದ ಆ ಸೀತೆಯು, ಹೀಗೆ ದುಃಖದಿಂದ ಕೊರಗುತ್ತ, ಆಗಲೇ ಕಿತ್ತ
ತಾವರೆಬಳ್ಳಿಯನ್ನು ಕುದಿಯುವ ನೀರಿನಲ್ಲಿ ಹಾಕಿದಂತೆ ಕಂದಿದ ದೇಹವುಳ್ಳವಳಾಗಿ,
ಗುಂಪನ್ನು ತಪ್ಪಿಬಂದು ಬೇಡನಕೈಯಲ್ಲಿ ಸಿಕ್ಕಿಬಿದ್ದು, ಕಂಬದಲ್ಲಿ ಕಟ್ಟಲ್ಪಟ್ಟ
ಹೆಣ್ಣಾನೆಯಂತೆ ಆಗಾಗ ದುಃಖದಿಂದ ನಿಟ್ಟುಸಿರುಬಿಡುತ್ತಿರುವಳು. ಯಾವ
ಸಂಸ್ಕಾರವೂ ಇಲ್ಲದೆ ಒಂದೇ ಜಡೆಯಾದ ಕೂದಲಿನಿಂದ ಕೂಡಿದ್ದ ಆ ಸೀತೆಯು,
ಶರದೃತುವಿನಲ್ಲಿ ಕಪ್ಪಾದ ವನರಾಜಿಯಿಂದ ಕೂಡಿದ ಭೂಮಿಯಂತೆ ಶೋಭಿಸು
ತ್ತಿರುವಳು. ಉಪವಾಸದಿಂದಲೂ, ದುಃಖದಿಂದಲೂ, ಚಿಂತೆಯಿಂದಲೂ ಕೇವಲ
ಕೃಶಳಾಗಿ, ದೀನಳಾಗಿ, ಪಾತಿವ್ರತ್ಯವೆಂಬ ಒಂದೇತಪಸ್ಸನ್ನು ಹಿಡಿದು, ಜಲಾಹಾರ
ವುಳ್ಳವಳಾಗಿ, ಉತ್ತಮಸ್ತ್ರೀಲಕ್ಷಣಗಳಿಂದ ಕೂಡಿ, ಆಗಾಗ ದುಃಖದಿಂದ
ಕೈಗಳನ್ನು ಹಿಸುಕುತ್ತಿರಲು, ಶ್ರೀರಾಮನಿಂದ ರಾವಣನಿಗೆ ಪರಾಭವವುಂಟಾಗ
ಬೇಕೆಂದು ದೇವತೆಗಳಿಗೆ ಕೈಜೋಡಿಸಿ ಪ್ರಾರ್ಥಿಸುವಳೋ ಎಂಬಂತೆ ಕಾಣುತ್ತಿರು
ವಳು. ಹೀಗೆ ಅನಾಥೆಯಾಗಿ ದಿಕ್ಕುದಿಕ್ಕುಗಳನ್ನು ಕಣ್ಣಿಟ್ಟುನೋಡುತ್ತ, ಆಗಾಗ
ರೋದನವನ್ನು ಮಾಡುತ್ತ ದುಃಖದಿಂದ ಕುಳಿತಿದ್ದ ನಿರ್ದುಷ್ಟೆಯಾದ, ಮಹಾ
ಪತಿವ್ರತೆಯಾದ ಆ ಜನಕಪುತ್ರಿಯನ್ನು ನೋಡಿ ರಾವಣನು, ತನ್ನ ಸಾವಿಗಾಗಿಯೋ
ಅವಳೊಡನೆ ಪ್ರಲೋಭನವಾಕ್ಯಗಳನ್ನು ಹೇಳುವುದಕ್ಕೆ ತೊಡಗಿದನು.

ಇಲ್ಲಿಗೆ ಹತ್ತೊಂಭತ್ತನೆಯ ಸರ್ಗವು.

---

ರಾವಣನು ಸೀತೆಗೆ ಆಸೆಹುಟ್ಟಿಸುವ ಮಾತುಗಳನ್ನು ಹೇಳಿ ತನ್ನನ್ನು ವರಿಸುವಂತೆ ಪ್ರಾರ್ಥಿಸಿದುದು.

ಹೀಗೆ ಮನಸ್ಸಿನಲ್ಲಿ ಸ್ವಲ್ಪವಾದರೂ ಹರ್ಷವಿಲ್ಲದೆ, ದುಃಖದಿಂದ ಕೊರಗಿ ಕೃಶಳಾಗಿ ಕುಳಿತಿರುವ ಸೀತೆಯನ್ನು ನೋಡಿ, ರಾವಣನು ಅಭಿಪ್ರಾಯಗರ್ಭವಾದ ಪ್ರಿಯವಾಕ್ಯಗಳಿಂದ ಆಸೆಹುಟ್ಟಿಸುವುದಕ್ಕೆ ಪ್ರಯತ್ನಿಸಿ ಅವಳನ್ನು ಕುರಿತು ಹೇಳುವನು, "ಎಲೆ ಸುಂದರಾಂಗಿ! ನನ್ನನ್ನು ನೋಡಿ ನಿನಗೆ ಈ ಭಯವೇಕೆ? ನಿನ್ನ [1] ಸರ್ವಾವಯವಗಳನ್ನೂ ಹೀಗೇಕೆ ಮುಚ್ಚಿಟ್ಟು ಸಂಕೋಚಪಡಿಸಿ ಕೊಳ್ಳುವೆ? ಭಯದಿಂದ ನನ್ನ ಕಣ್ಣಿಗೇ ಬೀಳದಿರಬೇಕೆಂದೆಣಿಸುವೆಯಾ? ಎಲೆ ವಿಶಾಲಾಕ್ಷಿ! ನನ್ನ ಮನಸ್ಸು ನಿನ್ನನ್ನೇ [2] ಕಾಮಿಸುತ್ತಿರುವುದು. ನನ್ನ ವಿಷಯದಲ್ಲಿ ಅನುಗ್ರಹಿಸು! ನೀನಾದರೋ ಯಾವ ಅವಯವಗಳಲ್ಲಿಯೂ ಸ್ವಲ್ಪವಾದರೂ ಕಂದುಕುಂದಿಲ್ಲದವಳು! ಸಮಸ್ತಜನರ ಮನಸ್ಸನ್ನೂ ಆಕರ್ಷಿಸತಕ್ಕ ದಿವ್ಯಸೌಂದರ್ಯವುಳ್ಳವಳು! ನೀನು ಇಲ್ಲಿ ಯಾರಿಗಾಗಿ ಭಯಪಡ ಬೇಕಾಗಿರುವುದು? ಇಲ್ಲಿ ಬೇರೆ ಮನುಷ್ಯರಾಗಲಿ, ಕಾಮರೂಪಿಗಳಾದ ರಾಕ್ಷಸ ರಾಗಲಿ ಯಾರೂ ಇಲ್ಲವಲ್ಲಾ! ನನ್ನಿಂದ ಭಯವನ್ನು ಬಿಡು! ನಿನ್ನನ್ನು ಅಪಹರಿಸಿ ತಂದಮಾತ್ರಕ್ಕೆ ನಾನು ದ್ರೋಹಿಯೆಂದಾಗಲಿ, ಧೂರ್ತನೆಂದಾಗಲಿ ಎಣಿಸಬೇಡ! ಪರಸ್ತ್ರೀಗಮನವೂ, ಪರಸ್ತ್ರೀಯರನ್ನು ಬಲಾತ್ಕಾರದಿಂದ ಅಪ ಹರಿಸಿ ತರುವುದೂ ರಾಕ್ಷಸರಾದ ನಮಗೆ ಕುಲಧರ್ಮವು. ಇದರಲ್ಲಿ ಸಂದೇಹ

1. ರಾವಣನು ತನ್ನ ಪೂರ್ವಜನ್ಮವಾಸನೆಯಿಂದ, ಲಕ್ಷ್ಮೀಸ್ವರೂಪೆಯಾದ ಸೀತಾದೇವಿ ಯಲ್ಲಿ ಭಕ್ತಿಯನ್ನೇ ಇಟ್ಟು, ಈ ವಾಕ್ಯಗಳಿಂದ ಅವಳಲ್ಲಿ ಶರಣಾಗತಿಯನ್ನು ಮಾಡಿಪ್ರಾರ್ಥಿಸು ವನೆಂದೂಹ್ಯವು. ಈ ವಾಕ್ಯಗಳು ಹೊರಗೆ ದೋಷಯುಕ್ತವಾಗಿ ತೋರಿದರೂ ತತ್ವಾರ್ಥ ವನ್ನು ವಿಚಾರಿಸುವಪಕ್ಷದಲ್ಲಿ, ಆ ರಾವಣನಿಗೆ ಸೀತೆಯಲ್ಲಿರುವ ಭಕ್ತ್ಯತಿಶಯವನ್ನೇ ತೋರಿಸುವುವು, ಹೇಗೆಂದರೆ, ಇಲ್ಲಿ ರಾವಣನು ಈ ವಾಕ್ಯದಿಂದ ಸೀತೆಯನ್ನು ಕುರಿತು "ಎಲೆ ದೇವಿ! ಮಾತೃಪ್ರಾಯಳಾದ ನೀನು, ನಿನಗೆ ಭಕ್ತನಾಗಿ ಶಿಶುವಿನಂತಿರುವ ನನ್ನನ್ನು ನೋಡಿ ಹೀಗೆ ನಾಚಿಕೆ ಪಡುವುದುಂಟೆ? ಎಂದು ವಾಸ್ತವಾರ್ಥವು. (ಮ. ತೀ.)

2. ಇಲ್ಲಿ "ಕಾಮಯೇ ತ್ವಾಂ ವಿಶಾಲಾಕ್ಷಿ" ಎಂದು ಮೂಲವು. ಕಾಮಯೇ, ಎಂಬುದಕ್ಕೆ ನಿನ್ನನ್ನೇ ಪರದೇವತೆಯನ್ನಾಗಿ ಕೋರುವೆನೆಂದು ವಾಸ್ತವಾರ್ಥವು.

ವಿಲ್ಲ. [1] ಆದರೂ ನಾನುಮಾತ್ರ ನೀನಾಗಿ ಕಾಮಿಸದಹೊರತು ನಿನ್ನನ್ನು ಮುಟ್ಟುವವನಲ್ಲ! ಅದುವರೆಗೆ ಮನ್ಮಥನು ನನ್ನ ದೇಹದಲ್ಲಿ ಪ್ರವರ್ತಿಸಿ ಎಷ್ಟಾದರೂ ಪೀಡಿಸಲಿ! ಎಲೆ ದೇವಿ! ನೀನು ಇಲ್ಲಿ ಭಯಪಡಬೇಕಾದುದೇನೂ ಇಲ್ಲ! ನನ್ನಲ್ಲಿ ನಂಬಿಕೆಯನ್ನಿಡು! ನನ್ನಲ್ಲಿ ನಿಜವಾದ ಸ್ನೇಹವನ್ನು ಬೆಳೆಸು! ಹೀಗೆ ದುಃಖದಿಂದ ಕೊರಗಬೇಡ! ಬಹಳ ಸುಕುಮಾರಾಂಗಿಯಾದ ನಿನಗೆ ಹೀಗೆ ಕೂದಲನ್ನು ಸಂಸ್ಕರಿಸದೆ ಜಡೆಬಿಡುವುದೂ, ಹೀಗೆ ನೆಲದಮೇಲೆ ಮಲಗುವುದೂ, ಹೀಗೆ ಚಿಂತಿಸಿ ಕೊರಗುವುದೂ, ಈ ಮಲಿನವಸ್ತ್ರವೂ, ನಿಷ್ಕಾರಣವಾಗಿ ಆಹಾರವನ್ನು ಬಿಟ್ಟು ಉಪವಾಸವಿರುವುದೂ ಉಚಿತವೇ ಅಲ್ಲ! ನೀನು ನನ್ನನ್ನು [2] ವರಿಸು! ನನ್ನ ಅರಮನೆಯಲ್ಲಿ ಚಿತ್ರವಿಚಿತ್ರಗಳಾದ ಪುಷ್ಪಮಾಲಿಕೆಗಳುಂಟು! ಅಗುರುಚಂದನಗಳುಂಟು! ಬಗೆಬಗೆಯ ಉತ್ತಮವಸ್ತ್ರಗಳುಂಟು! ದಿವ್ಯಾಭರಣಗಳುಂಟು! ಸರ್ವೋತ್ತಮಗಳಾದ ಪಾನದ್ರವ್ಯಗಳುಂಟು! ಮೇಲಾದ ಶಯನಾಸನಗಳುಂಟು! ಇಲ್ಲಿ ಕಿವಿಗೆ ಬೇಕಾದ ಗಾನಗಳನ್ನು ಕೇಳಬಹುದು! ಕಣ್ಣಿಗೆ ಬೇಕಾದ ನರ್ತನಗಳನ್ನು ನೋಡಬಹುದು! ಇಂಪಾದ ವಾದ್ಯಗಳನ್ನು ಕೇಳಬಹುದು! [3] ನನ್ನನ್ನು ಸೇರಿ ನೀನು ಇವೆಲ್ಲವನ್ನೂ ಅನುಭವಿಸು! ಎಲೆ ಸೀತೇ! ನೀನು ಸ್ತ್ರೀಯರಲ್ಲಿ ರತ್ನಪ್ರಾಯಳಾದವಳು! ನೀನು ಹೀಗಿರಲೇ ಬಾರದು! ನಿನ್ನ ದೇಹವನ್ನು ಆಭರಣಗಳಿಂದಲಂಕರಿಸು! ಎಲೆ ಕೋಮಲಾಂಗಿ! ನೀನು ನನ್ನಲ್ಲಿ ಬಂದು ಸೇರಿಯೂ ಈ ಸ್ಥಿತಿಯಲ್ಲಿರಬಹುದೆ! [4] ನಿನಗೆ ಚೆನ್ನಾಗಿ ತಲೆದೋರಿರುವ ಈ ಯೌವನವೆಲ್ಲವೂ

---

1. ಇಲ್ಲಿ "ಅಕಾಮಾಂ ನತ್ವಾಂ ಸ್ಪ್ರಕ್ಷ್ಯಾಮಿ" ಎಂದು ಮೂಲವು. ನೀನತಿ ಮನಃಪೂರ್ವಕವಾಗಿ ಅನುಗ್ರಹಿಸದಿದ್ದ ಪಕ್ಷದಲ್ಲಿ, ನಾನು ನಿನ್ನ ಪಾದವನ್ನು ಸೇರಲಾರೆನೆಂದು ವಾಸ್ತವಾರ್ಥವು. ಅಥವಾ (ಅಕಾಮಾಂ) ಎಂಬುದಕ್ಕೆ (ಅ+ಕಾಮಾಂ) ವಿಷ್ಣುವನ್ನು ಕಾಮಿಸುವ ಲಕ್ಷ್ಮೀಸ್ವರೂಪಿಣಿಯಾದ ನಿನ್ನನ್ನು ನಾನು ಸೇರಲಾರೆನೆಂದೂ ಗ್ರಹಿಸಬಹುದು.

2. ಇಲ್ಲಿ "ಪ್ರಣಯಸ್ವ" ಎಂಬುದಕ್ಕೆ ನನ್ನಲ್ಲಿ ಪ್ರಸನ್ನೆಯಾಗು ಎಂದು ವಾಸ್ತವಾರ್ಥವು.

3. ಇಲ್ಲಿ "ಮಾಂಪ್ರಾಪ್ಯ" ಎಂದು ಮೂಲವು. ಇದಕ್ಕೆ ನನ್ನನ್ನು ಭೃತ್ಯನನ್ನಾಗಿ ಸೇರಿಸಿಕೊಂಡು ಅನುಗ್ರಹಿಸೆಂದು ವಾಸ್ತವಾರ್ಥವು.

4. ಇಲ್ಲಿ "ಇದಂತೇ ಚಾರುಸಂಜಾತಂ ಯೌವನಂ ವ್ಯತಿವರ್ತತೇ" ಎಂದು ಮೂಲವು. ನಿನಗಾಗಿಯೇ ಎಂದರೆ ನಿನ್ನ ಸೇವೆಗಾಗಿಯೇ ನಾನು ಪಡೆದಿರುವ ಈ ನನ್ನ ಯೌವನವೆಲ್ಲವೂ ವ್ಯರ್ಥವಾಗಿ ಕಳೆದು ಹೋಗುತ್ತಿರುವುದು. ಅದುದರಿಂದ ಹೀಗೆ ಅವಯವಪಟುತ್ವವಿರುವಾಗಲೇ ನನ್ನನ್ನು ನಿನ್ನ ಸೇವಕನನ್ನಾಗಿ ಸ್ವೀಕರಿಸು" ಎಂದು ವಾಸ್ತವಾರ್ಥವು.

ವ್ಯರ್ಥವಾಗಿ ಕಳೆದು ಹೋಗುತ್ತಿರುವುದನ್ನು ಕಾಣೆಯೊ? ನೀರಿನ ಪ್ರವಾಹದಂತೆ ಮುಂದೆ ಹೋದುದು ಹಿಂದಕ್ಕೆ ಬರಲಾರದು! ಎಲೆ ಸುಂದರಿ! ಸೃಷ್ಟಿಕರ್ತನಾದ ಬ್ರಹ್ಮನು ನಿನ್ನರೂಪವನ್ನು ಸೃಷ್ಟಿಸಿದಮೇಲೆ, ಮುಂದೆ ಯಾವ ರೂಪವನ್ನೂ ಸೃಷ್ಟಿಸಲಾರದೆ, ಅಷ್ಟರಲ್ಲಿಯೇ ಬಳಲಿ ಹೋಗಿರಬಹುದೆಂದು ತೋರುವುದು! ರೂಪದಲ್ಲಿ ನಿನಗೆಣೆಯಾದವಳು ಈ ಲೋಕದಲ್ಲಿ ಬೇರೊಬ್ಬಳೂ ಇಲ್ಲ! ಎಲೆ ವೈದೇಹಿ! ಇಷ್ಟು ಸರ್ವೋತ್ತಮವಾದ ರೂಪಯೌವನಗಳಿಂದೊಪ್ಪುತ್ತಿರುವ ನಿನ್ನನ್ನು ಕಂಡಮೇಲೆ, ಲೋಕದಲ್ಲಿ ಯಾವ ಪುರುಷನು ತಾನೇ ತನ್ನಮನಸ್ಸನ್ನು ಜಯಿಸಿಕೊಂಡು ಹೋಗಬಲ್ಲನು? [1] ಸಾಕ್ಷಾತ್ಪಿತಾಮಹನಿಗೂ ಸಾಧ್ಯವಿಲ್ಲ! ಎಲೆ ಚಂದ್ರಮುಖಿ! ನಿನ್ನ ಅವಯವಗಳಲ್ಲಿ ಯಾವಯಾವುದನ್ನು ನೋಡು ವೆನೋ, ಅಲ್ಲಲ್ಲಿಯೇ ನನ್ನ ಕಣ್ಣು ನಿಶ್ಚಲವಾಗಿ [2] ನಾಟಿ ಹೊಗುತ್ತಿರು ವುದು! ಎಲೆ ಮೈಥಿಲಿ! ನನಗೆ [3] ಭಾರ್ಯೆಯಾಗು! ವ್ಯರ್ಥವಾದ ಬೇರೆ ಮೋಹ ವನ್ನು ಬಿಟ್ಟುಬಿಡು. ನಿನ್ನಶ್ರೇಯಸ್ಸಿಗಾಗಿಯೇ ನಾನು ಹೇಳುವೆನು! ನಾನು ಅಲ್ಲಲ್ಲಿಂದ ಎಷ್ಟೋಮಂದಿ ಉತ್ತಮಸ್ತ್ರೀಯರನ್ನು ತಂದಿಟ್ಟಿರುವೆನು. ಅವರೆಲ್ಲರಿಗೂ ನೀನೇಮೇಲಾಗಿ, ನನಗೆ [4] ಪಟ್ಟದರಾಣಿಯಾಗಿರು! ನಾನು ಸಮಸ್ತಲೋಕಗಳನ್ನೂ ಜಯಿಸಿ, ಅಲ್ಲಲ್ಲಿ ಸಿಕ್ಕಿದ ರತ್ನಪ್ರಾಯಗಳಾದ ಉತ್ತಮವಸ್ತುಗಳನ್ನು ಲೆಕ್ಕವಿಲ್ಲ ದಷ್ಟು ತಂದಿಟ್ಟಿರುವೆನು. [5] ಇನ್ನುಮೇಲೆ ಅವೆಲ್ಲವೂ ನಿನ್ನದು! ನನ್ನ ರಾಜ್ಯವೂ

---

1. ಇಲ್ಲಿ "ಸಾಕ್ಷಾತ್ಪಿತಾಮಹನಾದರೂ ಲಕ್ಷ್ಮೀಸ್ವರೂಪೆಯಾದ ನಿನ್ನನ್ನು ನೋಡಿ ಭಕ್ತಿಪರನಾಗದಿರನು. ಹೀಗಿರುವಾಗ ಪ್ರಾಕೃತರಾದ ನಮ್ಮಂತವರ ಪಾಡೇನು?" ಎಂದು ವಾಸ್ತವಾರ್ಥವು.

2. ನಿನ್ನ ಒಂದೊಂದವಯವದ ಸೌಂದರ್ಯವೂ ನನಗೆ ಭಕ್ತಿಯನ್ನು ಹೆಚ್ಚಿಸುತ್ತಿರುವು ದೆಂದು ಭಾವವು.

3. ಇಲ್ಲಿ "ನನಗೆ ಭಾರ್ಯೆಯಾಗು" ಎಂದರೆ "ನನಗೆ ನೀನು (ಭಾ + ಅರ್ಕೆ) ನಿನ್ನ ದಿವ್ಯತೇಜಸ್ಸಿನಿಂದ ಪೂಜ್ಯಳಾಗು" ಎಂದು ಭಾವವು.

4. ಇಲ್ಲಿ "ಸರ್ವಾಸಾಮೇವ ಭದ್ರಂತೇ ಮಮಾಗ್ರಮಹಿಷೀಭವ" ಎಂದು ಮೂಲವು. "ನಾನು ತಂದಿಟ್ಟಿರುವ ಸಮಸ್ತ ಸ್ತ್ರೀಯರಿಗೂ ನನಗೂ, ನೀನೇ ಅಧೀಶ್ವರಿ ಯಾಗಿರು" ಎಂದು ವಾಸ್ತವಾರ್ಥವು.

5. ಇಲ್ಲಿ ತಾನು ತಂದಿಟ್ಟಿರುವ ಸಮಸ್ತರತ್ನರಾಶಿಗಳನ್ನೂ, ತನ್ನನ್ನೂ ಸೀತಾ ದೇವಿಗೆ ಒಪ್ಪಿಸುವುದಾಗಿ ಹೇಳುವುದರಿಂದ, ರಾವಣನು ಆಕೆಯಲ್ಲಿ ಶರಣಾಗತಿಯನ್ನು ಮಾಡಿ ಅವಳಲ್ಲಿ ಆತ್ಮಾತ್ಮೀಯಭರಸಮಾರೋಪಣವನ್ನು ಮಾಡುವುದಾಗಿ ವಾಸ್ತವಾರ್ಥವು.

ನಿನ್ನದು! ಕೊನೆಗೆ ನಾನೂ ನಿನ್ನವನೇಂದೇ ತಿಳಿ! ಎಲೆ ಭಾಮಿನಿ! ಬೇಕಾದರೆ ನಿನ ಗಾಗಿ ನಾನು ಸಮಸ್ತನಗರಗಳಿಂದ ತುಂಬಿದ ಈ ಭೂಮಿಯೆಲ್ಲವನ್ನೂ ಸಾಕಲ್ಯ ವಾಗಿ ಜಯಿಸಿ ನಿನ್ನ ತಂದೆಯಾದ ಜನಕನಿಗೊಪ್ಪಿಸಿಬಿಡುವೆನು! ಈ ಲೋಕದಲ್ಲಿ ನನಗೆ ಸಮಾನವಾದ ಬಲವುಳ್ಳ ಬೇರೊಬ್ಬ ಪುರುಷನನ್ನು ನಾನು ಕಂಡುದಿಲ್ಲ! ಯಾವ ಯುದ್ಧದಲ್ಲಿಯೂ ತಡೆಯಿಲ್ಲದ ನನ್ನ ಮಹಾವೀರ್ಯವೂ ಎಷ್ಟೆಂಬುದನ್ನು ಹೇಳುವೆನು ಕೇಳು. ನಾನು ಅನೇಕಾವರ್ತಿ ಅನೇಕ ಯುದ್ಧಗಳಲ್ಲಿ ದೇವಾಸುರರನ್ನು ಭಂಗಪಡಿಸಿರುವೆನು. ಅವರ ಧ್ವಜರಥಾದಿಗಳೆಲ್ಲವನ್ನೂ ಮುರಿದಿರುವೆನು. ಅವರಲ್ಲಿ ಯಾರೂ ನನ್ನ ಮುಂದೆ ನಿಲ್ಲಲಾರದೆ ಪಲಾಯನ ಮಾಡಿರುವರು. ಎಲೆಸೀತೆ! ನಿನ ಗಿಷ್ಟಬಂದಂತೆ ಅರಮನೆಯಲ್ಲಿರುವ ಸರ್ವೋತ್ತಮವಾದ ಅಲಂಕಾರಗಳನ್ನು ಈಗಲೇ ಧರಿಸು! ನಿನ್ನ ಸುಕುಮಾರವಾದ ಈ ಅವಯವಗಳಿಗೆ ತಕ್ಕಂತೆ ಕಾಂತಿ ವಿಶಿಷ್ಟವಾದ ಭೂಷಣಗಳನ್ನಿಡು! ಸ್ವಭಾವಸುಂದರವಾದ ನಿನ್ನರೂಪವು ಆಭರ ಣಾಲಂಕಾರಗಳಿಂದ ಮತ್ತಷ್ಟು ಸೊಗಸುಬೀರುವುದನ್ನು ನೋಡಲಪೇಕ್ಷಿಸುವೆನು. ಎಲೆ ಕಮಲಾನನೆ! ನೀನು ಸ್ವಲ್ಪವೂ ಸಂಕೋಚಪಡದೆ, ನನ್ನಲ್ಲಿ ಸಂಪೂರ್ಣ ವಾದ ಸಲಿಗೆಯನ್ನು ತೋರಿಸುತ್ತ, ಸರ್ವಾಲಂಕಾರಭೂಷಿತೆಯಾಗಿ ಸಮಸ್ತಭೋಗ ಗಳನ್ನೂ ಯಥೇಚ್ಛವಾಗಿ ಅನುಭವಿಸು! ಬೇಕಾದ ಪಾನದ್ರವ್ಯಗಳನ್ನು ಕುಡಿದು ಸಂತೋಷಿಸು! ಇಷ್ಟಬಂದಹಾಗೆ ವಿಹರಿಸು! ಬೇಕಾದವರಿಗೆ ನಿನಗಿಷ್ಟಬಂದು ದನ್ನು ಕೊಡು! ಭೂಮಿಯನ್ನಾಗಲಿ, ಧನವನ್ನಾಗಲಿ, ನಿನಗೆ ತೋರಿದಂತೆ ದಾನಮಾಡು! ನಂಬಿಕೆಯಿಂದ ನನ್ನಲ್ಲಿ ಪ್ರೀತಿಯನ್ನಿಡು! ಭಯಪಡದೆ ನಿನಗೆ ಬೇಕಾದುದನ್ನು ನನಗೆ ಆಜ್ಞಾಪಿಸು! 1 ನನ್ನ ಅನುಗ್ರಹದಿಂದ ನಿನ್ನೊಡನೆ ಇಲ್ಲಿ ನಿನ್ನ ಬಂಧುಗಳೂ ಬೇಕಾದ ಸುಖವನ್ನನುಭವಿಸಲಿ! 2 ಎಲೆ ಭದ್ರೆ! ನನ್ನ ಪದವಿಯನ್ನು ನೋಡು! ನನ್ನ ಮಹಾಭಾಗ್ಯವನ್ನು ನೋಡು! ನನ್ನ ಖ್ಯಾತಿಯನ್ನು ನೋಡು! ಉಡುವ ಬಟ್ಟೆಗೂ ಗತಿಯಿಲ್ಲದೆ ನಾರುಬಟ್ಟೆಯಿಂ

---

1. ಇಲ್ಲಿ "ಮತ್ಪ್ರಸಾದಾಲ್ಲಲಂತ್ಯಾಃ" ಎಂದು ಮೂಲವು. "ನನ್ನಮೇಲೆ ಅನು ಗ್ರಹವಿಟ್ಟು ಸಂತೋಷಿಸುತ್ತಿರೆಂದು ವಾಸ್ತವಾರ್ಥವು.

2. ಹಿಂದೆ ಸೀತೆಯು ರಾವಣನನ್ನು ಕುರಿತು "ರಾಮನನ್ನು ತಂದು ನನ್ನೊಡನೆ ಸೇರಿಸಿದರೆ ನಿನಗೆ ಸಮಸ್ತಸಂಪತ್ಸಮೃದ್ಧಿಗಳನ್ನೂ ಕೊಡುವೆನು. ನಿನಗೆ ಕ್ಷೇಮವುಂಟು" ಎಂದು ಹಿತವಾದವನ್ನು ಹೇಳಲು, ಅದಕ್ಕೆ ರಾವಣನು "ನನಗೆ ಬೇರೆ ಯಾವ ಭಾಗ್ಯ ಗಳೂ ಬೇಕಾದುದಿಲ್ಲ. ಮೋಕ್ಷವೊಂದೇ ನನ್ನ ಉದ್ದೇಶ್ಯವು. ಅದು ಲಭಿಸುವವರೆಗೂ ನಿನ್ನ ಪಾದಾಬ್ಜಗಳನ್ನು ನಾನು ಎಂದಿಗೂ ಬಿಡುವವನಲ್ಲ. ಈ ವಿಷಯದಲ್ಲಿ ನೀನು ನನಗೆ ಪೃಥ

ದಿರುವ ರಾಮನಿಂದ ಇನ್ನು ನಿನಗೇನಾಗಬೇಕು? ಅವನ ವೀರ್ಯವೂ ತಗ್ಗಿತು! ಅವನ ಭಾಗ್ಯವೂ ಹೋಯಿತು! ಕಾಡಿನಲ್ಲಿ ಅಲೆಯುತ್ತಿರುವನು! ವ್ರತವೆಂಬ ನೆಪದಿಂದ ನೆಲದಮೇಲೆ ಮಲಗುತ್ತಿರುವನು! ಈ ದುರವಸ್ಥೆಯಲ್ಲಿ ಅವನು ಇದು ವರೆಗೆ ಬದುಕಿರುವನೋ ಇಲ್ಲವೋ ಎಂದೇ ಸಂದೇಹಿಸಬೇಕಾಗಿದೆ! ಆ ರಾಮನಿಗೆ ತಿರುಗಿ ನಿನ್ನನ್ನು ಕಣ್ಣಿನಿಂದ ನೋಡುವ ಭಾಗ್ಯವೂ ಇಲ್ಲ ವೆಂದೇ ತಿಳಿ! ನೀಲಮೇಘಗಳಿಂದ ಮರೆಸಲ್ಪಟ್ಟ ಚಂದ್ರಿಕೆಯಂತೆ, ನನ್ನಿಂದ ಬಚ್ಚಿಡಲ್ಪಟ್ಟಿರುವ ನಿನ್ನನ್ನು ಅವನು ನೋಡುವುದೆಂದರೇನು? ಹಿರಣ್ಯಕಶಿಪುವು ಇಂದ್ರನ ಕೈಗೆ ಸಿಕ್ಕಿದ ಸ್ವರ್ಗರಾಜ್ಯಕ್ಕೆ ಪ್ರಯತ್ನಿಸುವಂತೆ ನನ್ನ ಕೈಯಲ್ಲಿ ಸಿಕ್ಕಿರುವ ನಿನ್ನನ್ನು ರಾಮನು ಇನ್ನುಮೇಲೆ ಬಿಡಿಸಿಕೊಂಡು ಹೋಗುವುದೆಂದ ರೇನು? ಎಲೆ ವಿಲಾಸಿನಿ! ನಿನ್ನ ಮುಗುಳ್ನಗೆಯ ಚಂದವೋ! ನಿನ್ನ ದಂತ ಪಙ್ತಿಗಳ ಸೊಗಸೋ! ಕಣ್ಣುಗಳ ಅಂದವೋ! ನಾನೇನು ಹೇಳಲಿ! ಇವೊಂ ದೊಂದೂ ಗರುಡನು ಹಾವನ್ನೆಳೆಯುವಂತೆ ನನ್ನ ಮನಸ್ಸನ್ನು ಕಿತ್ತೆಳೆಯುತ್ತಿರು ವುದು! ಎಲೆ ಸೀತೆ! ನೀನು ಹೀಗೆ ಮಾಸಿದ ಬಟ್ಟೆಯನ್ನುಟ್ಟು, ಕೃಶವಾಗಿ

---

ವಾದ ಅಭಯಪ್ರದಾನವನ್ನು ಮಾಡಿದಹೊರತು, ನಿನ್ನನ್ನು ರಾಮನಬಳಿಗೂ ಸೇರಿಸಲಾರೆ" ನೆಂಬ ಭಾವವನ್ನು ಇಲ್ಲಿ ಸೂಚಿಸುವನು. ಇಲ್ಲಿ "ಋದ್ಧಿಂ ಮಮಾನುಪಶ್ಯ ತ್ವಂ ಶ್ರಿಯಂ ಭದ್ರೇ ಯಶಶ್ಚ ಮೇ। ಕಿಂ ಕರಿಷ್ಯಸಿ ರಾಮೇಣ ಸುಭಗೇ ಚೀರವಾಸಸಾ ॥ ನಿಕ್ಷಿಪ್ತವಿಜಯೋ ರಾಮೋ ಗತಶ್ರೀರ್ವನಗೋಚರಃ। ವ್ರತೀ ಸ್ಥಂಡಿಲಶಾಯೀ ಚ ಶಂಕೇ ಜೀವತಿ ವಾ ನ ವಾ। ನಹಿ ವೈದೇಹಿ ರಾಮಸ್ತ್ವಾಂ ದ್ರಷ್ಟುಂ ವಾಪ್ಯುಪಲಪ್ಸ್ಯತೇ ॥ ನಚಾಪಿ ಮಮ ಹಸ್ತಾತ್ತ್ವಾಂ ಪ್ರಾಪ್ತುಮರ್ಹತಿ ರಾಘವಃ" ಎಂದು ಮೂಲವು. ಇದಕ್ಕೆ (ಹೇ ಸುಭಗೇ! ಮಮ ಋದ್ಧಿಂ ಪಶ್ಯ, ಅಚೀರವಾಸಸಾ ರಾಮೇಣ ಕಿಂ ಕರಿಷ್ಯಸಿ) "ಎಲೆ ಶೋಭನಾಂಗಿ! ನನ್ನ ಐಶ್ವರ್ಯಾದಿ ಗಳನ್ನು ನೋಡು! ಇವೆಲ್ಲವೂ ನನ್ನಲ್ಲಿ ಸಂಪೂರ್ಣವಾಗಿರುವಾಗ, ಪೀತಾಂಬರಧಾರಿಯಾದ ಆ ರಾಮನೊಡನೆ ಸೇರಿ ನೀನು ಎನಗೆ ಅನುಗ್ರಹಿಸಬೇಕಾದ ಬೇರೆ ಐಹಿಲೌಕಿಕಸೌಖ್ಯ ವಾವುದುಂಟು? ಈಗ ನೀವಿಬ್ಬರೂ ನನಗೆ ಅನುಗ್ರಹಿಸ್ಬೇಕಾದುದು ಮೋಕ್ಷವೊಂದೇ ಹೊರತು ಬೇರೆಯಲ್ಲ! ನಿನ್ನ ಪತಿಯಾದ ರಾಮನಾದರೋ (ನಿಕ್ಷಿಪ್ತವಿಜಯಃ) ಎಂದಿಗೂ ಚ್ಯುತಿಯಿಲ್ಲದೆ ನಿಕ್ಷೇಪದಂತೆ ರಕ್ಷಿಸಿಟ್ಟ ವಿಜಯವುಳ್ಳವನು. (ಗತಶ್ರೀಃ) ಸಾಕ್ಷಾತ್ಲಕ್ಷ್ಮೀ ದೇವಿಯನ್ನೇ ಕೈಹಿಡಿದಿರುವವನು. (ವನಗೋಚರಃ) ಜಲಶಾಯಿಯಾದ ನಾರಾಯಣನು. (ವ್ರತೀ) ಆಶ್ರಿತರಕ್ಷಣವೆಂಬ ವ್ರತವುಳ್ಳವನು. (ಸ್ಥಂಡಿಲಶಾಯೀ) ಪಿತೃವಾಕ್ಯಪರಿಪಾಲನ ಕ್ಕಾಗಿ ಈಗಲೂ ಭೂಶಯನವನ್ನು ಮಾಡುವವನು. ಹೀಗಿರತಕ್ಕ ಆ ರಾಮನು (ಮಯಿ ಜೀವತಿ) ನಾನು ಈ ಸ್ಥಿತಿಯಲ್ಲಿ ಬದುಕಿರುವವರೆಗೆ (ತ್ವಾಂ ದ್ರಷ್ಟುಂ ನೋಪಲಪ್ಸ್ಯತೇ) ನಿನ್ನನ್ನು ನೋಡಲಾರನು. (ಮಮ ಹಸ್ತಾದ್ತ್ವಾನ ಪ್ರಾಪ್ತುಮರ್ಹತಿ) ನನ್ನಿಂದ ನಿನ್ನನ್ನು ಬಿಡಿಸಿಕೊಳ್ಳುವುದಕ್ಕೂ ಶಕ್ತನಲ್ಲ. ಎಂದರೆ, ನಾನು ಪ್ರಾಣದಿಂದಿರುವವರೆಗೆ ನಿನ್ನ ಪಾದಾಬ್ಜ

ಅಲಂಕಾರರಹಿತಳಾಗಿದ್ದರೂ, [1] ನಿನ್ನನ್ನು ನೋಡಿದಮೇಲೆ ನನ್ನ ಸ್ವಪತ್ನಿಯರಲ್ಲಿಯೂ ನನಗೆ ಪ್ರೇಮವು ತಪ್ಪಿಹೋಯಿತು. ಎಲೆ ಜಾನಕಿ! ನನ್ನ ಅಂತಃಪುರದಲ್ಲಿ ಸರ್ವಗುಣಾಢ್ಯರಾದ ಎಷ್ಟೋಮಂದಿ ಸ್ತ್ರೀಯರಿರುವರು. ಅವರೆಲ್ಲರ ಮೇಲೆಯೂ ಸಂಪೂರ್ಣವಾದ ಅಧಿಕಾರವನ್ನು ನಡೆಸು! ಎಲೆ ನೀಲವೇಣಿ! ಮೂರು ಲೋಕಗಳಲ್ಲಿಯೂ ಮೇಲಾದ ಅನೇಕಸ್ತ್ರೀಯರನ್ನು ನಾನು ತಂದಿಟ್ಟಿರುವೆನು. ಅಪ್ಸರಸ್ಸುಗಳು ಲಕ್ಷ್ಮೀದೇವಿಯನ್ನು ಹೇಗೋಹಾಗೆ, ಅವರೆಲ್ಲರೂ ನಿನ್ನನ್ನು ಉಪಚರಿಸುವರು! ಎಲೆ ಸುಶ್ರೋಣಿ! ಕುಬೇರನಲ್ಲಿದ್ದ ಸಮಸ್ತರತ್ನಗಳನ್ನೂ ಸಮಸ್ತಧನಗಳನ್ನೂ ನಾನು ಜಯಿಸಿ ತಂದಿರುವೆನು. ಅವೆಲ್ಲವನ್ನೂ ನೀನು ಸುಖವಾಗಿ ಅನುಭವಿಸು! ನನ್ನನ್ನು ಸೇರಿದಮೇಲೆ ಸಮಸ್ತಲೋಕಗಳೂ ನಿನ್ನ ವಶವೆಂದು ತಿಳಿ! [2] ನನ್ನನ್ನೂ ನೀನು ಯಥೇಚ್ಛವಾಗಿ ಸುಖದಿಂದನುಭವಿಸು! ತಪಸ್ಸಿನಿಂದಲಾಗಲಿ, ಬಲದಿಂದಲಾಗಲಿ, ವೀರ್ಯದಿಂದಲಾಗಲಿ, ಧನದಿಂದಾಗಲಿ, ತೇಜಸ್ಸಿನಿಂದಾಗಲಿ, ಯಶಸ್ಸಿನಿಂದಾಗಲಿ, [3] ಆ ರಾಮನು ನನಗೆಣೆಯಾಗಲಾರನು! ಎಲೆ ಮೋಹನಾಂಗಿ! ನೀನು, ನನ್ನನ್ನು ಸೇರಿ ಯಥೇಚ್ಛವಾಗಿ ಪಾನದ್ರವ್ಯಗಳನ್ನು ಸೇವಿಸು! ಸುಖವಾಗಿ ವಿಹರಿಸು! ಸಂತೋಷದಿಂದ ಕ್ರೀಡಿಸು! ನನ್ನಲ್ಲಿರುವ ಸಮಸ್ತಧನಗಳನ್ನೂ, ಸಮಸ್ತಭೂಮಿಗಳನ್ನೂ ನಿನಗೊಪ್ಪಿಸುವೆನು! ನನ್ನಲ್ಲಿ ಪ್ರೀತಿಯನ್ನಿಡು! ನಿನ್ನೊಡನೆ ಸೇರಿ ನಿನ್ನ ಬಂಧುಗಳೂ ಸಂತೋಷದಿಂದಿರಲಿ! ಎಲೆ ಭೀರು! ಪುಷ್ಪಿಸಿರುವ ಈ ಗಿಡಗಳನ್ನು ನೋಡು! ಇಲ್ಲಿನ ಭ್ರಮರಗಳ ಸೊಗಸನ್ನು ನೋಡು! ಈ ಸಮುದ್ರತೀರದಲ್ಲಿರುವ ತೋಟಗಳ

---

ವನ್ನು ಬಿಡತಕ್ಕವನಲ್ಲ. ಅಷ್ಟಾದರೂ ನನ್ನಲ್ಲಿ ನಿಮ್ಮಿಬ್ಬರಿಗೂ ಅನುಗ್ರಹವುಂಟಾಗದ ಪಕ್ಷದಲ್ಲಿ, ನನ್ನನ್ನು ಆ ರಾಮನು ತನ್ನ ಕೈಯಿಂದ ಕೊಂದಾದರೂ ಕೃತಾರ್ಥನನ್ನಾಗಿ ಮಾಡಿದಮೇಲೆಯೇ ನಿನ್ನೊಡನೆ ಸುಖದಿಂದಿರಬಹುದು" ಎಂದು ಇಲ್ಲಿನ ವಾಸ್ತವಾರ್ಥವು.

1. ಇಲ್ಲಿ ಇಷ್ಟದೇವತೆಯಾದ ನಿನ್ನ ದರ್ಶನಮಾತ್ರದಿಂದಲೇ ನನಗೆ ಪುತ್ರಕಳತ್ರಾದಿ ಸಂಸಾರಸಂಬಂಧದಲ್ಲಿ ವಿರಕ್ತಿಯುಂಟಾಯಿತೆಂದು ವಾಸ್ತವಾರ್ಥವು.

2. ಇಲ್ಲಿ "ಮಾಂಚ ಭುಂಕ್ಷ್ವ ಯಥಾಸುಖಂ" (ಮಾಂ) ಎಂದರೆ, ತ್ರೈಲೋಕ್ಯರಾಜ್ಯಸಮೃದ್ಧಿಯನ್ನು ಯಥೇಚ್ಛವಾಗಿ ಅನುಭವಿಸು" ಎಂದಾಗಲಿ (ಮಾಂ) ಭೃತ್ಯನಾದ ನನ್ನನ್ನು ಎಂದರೆ ಭೃತ್ಯನಾಗಿ ನಾನು ಶುಶ್ರೂಷೆಮಾಡುವುದನ್ನು ಯಥೇಚ್ಛವಾಗಿ ಅನುಭವಿಸು" ಎಂದಾಗಲಿ ವಾಸ್ತವಾರ್ಥವು.

3. ಇಲ್ಲಿ ನಿರವಧಿಕಷಡ್ಗುಣೈಶ್ವರ್ಯ ಸಂಪನ್ನನಾದ ಆ ರಾಮನು ಅತ್ಯಲ್ಪನಾದ ನನಗೆ ಯಾವವಿಷಯದಲ್ಲಿಯೂ ಎಣೆಯಲ್ಲವೆಂದು ವಾಸ್ತವಾರ್ಥವು.

ಕಾಲವನ್ನು ನೋಡು! ನೀನು 1 ಸುವರ್ಣಹಾರದಿಂದ ಶೋಭಿತಳಾಗಿ, ಈ ರಮಣೀಯ ಸ್ಥಳಗಳಲ್ಲಿ ನನ್ನೊಡಗೂಡಿ ಯಥೇಚ್ಛವಾಗಿ, ವಿಹರಿಸು !" ಎಂದನು.

ಇಲ್ಲಿಗೆ ಇಪ್ಪತ್ತನೆಯ ಸರ್ಗವು.

---

—ಪ { ಸೀತೆಯು ರಾವಣನನ್ನು ಕಣ್ಣೆತ್ತಿಯೂ ನೋಡದೆ, ನಡುವೆ ಒಂದು ಹುಲ್ಲುಕಡ್ಡಿಯನ್ನಿಟ್ಟು, ಅದರೊಡನೆ ಮಾತಾಡುವ ನೆವದಿಂದ ರಾವಣನಿಗೆ ಪ್ರತ್ಯುತ್ತರವನ್ನು ಹೇಳಿ, ಅವನಿಗೆ ಕೆಲವು ಬುದ್ಧಿವಾದಗಳನ್ನೂ ಹೇಳಿದುದು. } ಪ—

ಘೋರರೂಪಿಯಾದ ಆ ರಾಕ್ಷಸನ ಮಾತನ್ನು ಕೇಳಿ ಸೀತೆಯು, ಪರಮ ದುಃಖಿತೆಯಾಗಿ, ಬಹಳ ಸಂಕಟದೊಡನೆ, ಮೆಲ್ಲಗೆ ದೀನಸ್ವರದಿಂದ ಅವನಿಗೆ ಪ್ರತ್ಯುತ್ತರವನ್ನು ಹೇಳತೊಡಗಿದಳು. ಅವಳಿಗಾದರೋ ಆಗ ತಡೆಯಲಾರದ ದುಃಖವು ಉಕ್ಕಿ ಬರುತ್ತಿತ್ತು. ಧಾರೆಧಾರೆಯಾಗಿ ಕಣ್ಣೀರು ಸುರಿಯುತ್ತಿತ್ತು. ಆ ಸಂಕಟವನ್ನು ತಡೆಯಲಾರದೆ ಗಡಗಡನೆ ನಡುಗುತ್ತಿದ್ದಳು. ಹೀಗೆ ಶೋಚನೀಯಾವಸ್ಥೆಯನ್ನು ಹೊಂದಿದ ಮಹಾಪತಿವ್ರತೆಯಾದ ಆ ಸೀತೆಯು, ಮನಸ್ಸಿನಲ್ಲಿ ತನ್ನ ಪತಿಯಾದ ರಾಮನನ್ನೇ ಧ್ಯಾನಿಸುತ್ತ, ನೀಚನಾದ ಆ ರಾವಣನೊಡನೆ ಮುಖಕೊಟ್ಟು ಮಾತಾಡುವುದಕ್ಕೂ ಹೇಸಿದವಳಾಗಿ, 2 ನಡುವೆ ಒಂದು

---

1. ಇಲ್ಲಿ "ಮಯಿ ಲಲ ಲಲನೇ" ಎಂದು ಮೂಲವು. ನನ್ನಲ್ಲಿ ನೀನು ಪೂರ್ಣವಾದ ಅನುಗ್ರಹವನ್ನಿಡು" ಎಂದು ವಾಸ್ತವಾರ್ಥವು.

2. ಇಲ್ಲಿ "ತೃಣಮನ್ತರತಃ ಕೃತ್ವಾಪ್ರತ್ಯುವಾಚ ಶುಚಿಸ್ಮಿತಾ । ನಿವರ್ತಯ ಮನೋ ಮತ್ತಃ ಸ್ವಜನೇ ಕ್ರಿಯತಾಂ ಮನಃ" ಎಂದು ಮೂಲವು. ಅಲ್ಲಿ ಸೀತೆಯು ರಾವಣನಿಗೆ ಪ್ರತ್ಯುತ್ತರವನ್ನುಕೊಡುವಾಗ ಅಡ್ಡಲಾಗಿ ಒಂದು ಹುಲ್ಲುಕಡ್ಡಿಯನ್ನಿಟ್ಟುದಕ್ಕೂ, ಅವಳ ಮುಗುಳ್ನಗೆಗೂ ಮುಖ್ಯವಾದ ಅಭಿಪ್ರಾಯವು ಮೇಲೆ ಕಾಣಿಸಲ್ಪಟ್ಟಿದ್ದರೂ, ಇದಕ್ಕೆ ಇನ್ನೂ ಅನೇಕ ಭಾವಗಳುಂಟು. ಹೇಗೆಂದರೆ:—

ವಸಿಷ್ಠನು ಪೂರ್ವದಲ್ಲಿ ವಿಶ್ವಾಮಿತ್ರನ ಗರ್ವವನ್ನಡಗಿಸುವುದಕ್ಕಾಗಿ ನಡುವೆ ಬ್ರಹ್ಮದಂಡವನ್ನಿಟ್ಟಂತೆ, ರಾವಣನು ತನ್ನ ಸಮೀಪಕ್ಕೆ ಬರಬಾರದೆಂದೇ ತಡೆದಿಡುವುದಕ್ಕಾಗಿ ನಡುವೆ ಹುಲ್ಲನ್ನಿಟ್ಟಿದ್ದಾಗಿಯೂ, ಕೇವಲ ನೀಚನಾದ ರಾವಣನು ತನಗೆ ಸಮವಾಗಿ ನಿಂತಿರುವುದನ್ನು ನೋಡಿ, ಅಸಹ್ಯಪಟ್ಟು ಅವನ ಸಹಪಙ್ಕ್ತಿಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ "ಸ್ತಂಬೇನ

ಹುಲ್ಲುಕಡ್ಡಿಯನ್ನಿಟ್ಟು, ಅದರೊಡನೆ ಮಾತಾಡುವ ನೆವದಿಂದ ಆ ರಾಕ್ಷಸನಿಗೆ

---

ಸಲಿಲೇನವಾ ಪಙ್ಕ್ತಿಭೇದೋಽಭಿಜಾಯತೇ" ಹುಲ್ಲಿನಿಂದಾಗಲಿ, ನೀರಿನಿಂದಾಗಲಿ ಪಙ್ಕ್ತಿಭೇದ ವುಂಟಾಗುವುದೆಂಬ ನ್ಯಾಯದಿಂದ, ನಡುವೆ ತೃಣವನ್ನಿಟ್ಟದ್ದಾಗಿಯೂ, ಅಥವಾ ತನ್ನ ಕಟಾಕ್ಷಸ್ಪರ್ಶಮಾತ್ರದಿಂದಲೇ ಎಲ್ಲವೂ ಬುದ್ಧಿಸಂಪನ್ನವಾಗುವುದರಿಂದ, ತಾನು ರಾವಣನನ್ನು ಕಟಾಕ್ಷಿಸುವುದರಿಂದಲೇ ಅವನಿಗೆ ವಿವೇಕವು ಹುಟ್ಟಿಬಿಟ್ಟರೆ, ರಾಕ್ಷಸವಧರೂಪವಾದ ರಾಮಾವತಾರಪ್ರಯೋಜನವೇ ಸಿದ್ಧಿಸದೆ ಹೋಗಬಹುದೆಂಬ ಶಂಕೆಯಿಂದ ಅಚೇತನವಾದ ಹುಲ್ಲನ್ನು ನಡುವೆ ಇಟ್ಟುಕೊಂಡುದಾಗಿಯೂ, ಅಥವಾ "ನ ಪರಪುರುಷ ನಿರೀಕ್ಷಣಂ ನಾಪಿ ಸಂಭಾಷಣಮ್" ಎಂಬಂತೆ, ಸ್ತ್ರೀಯರಿಗೆ ಪರಪುರುಷದರ್ಶನಾದಿಗಳು ನಿಷಿದ್ಧವೆಂಬುದಕ್ಕಾಗಿ ನಡುವೆ ಈ ಹುಲ್ಲುಕಡ್ಡಿಯನ್ನಿಟ್ಟು ಅದನ್ನು ವ್ಯಾಜೀಕರಿಸಿ ಹೇಳುವುದಾಗಿಯೂ, ಅಥವಾ ಸೀತೆಯು ಅತ್ಯಲ್ಪನಾದ ಆ ರಾವಣನನ್ನು "ತೃಣಮಿವ ಲಘುಂ ಮೇನೇ" ಎಂಬಂತೆ, ಹುಲ್ಲಿಗಿಂತಲೂ ಕಡೆಯಾಗಿ ಭಾವಿಸಿ, ಆ ಅಭಿಪ್ರಾಯವನ್ನು ಅವನಿಗೂ ತಿಳಿಸುವುದಕ್ಕಾಗಿ, ಅವನಮುಂದೆ ಹುಲ್ಲನ್ನು ಹಾಕಿದುದಾಗಿಯೂ, ಅಥವಾ "ಜ್ಞಾನೇನ ಹೀನಃ ಪಶುಭಿಸ್ಸಮಾನಃ" ಎಂಬಂತೆ ಅಜ್ಞನಾದ ರಾವಣನನ್ನು ಪಶುವಿಗೆ ಸಮಾನವಾಗಿ ಭಾವಿಸಿ, ಹುಲ್ಲನ್ನು ತೆಗೆದು ಅವನ ಮುಂದೆ ಹಾಕಿ, ರಾವಣಾ! ನೀನು ಮನುಷ್ಯನಲ್ಲ! ಕೇವಲ ಪಶುವು. ಇದೋ ನಿನಗೆ ಇದೇ ಆಹಾರಯೋಗ್ಯವಾದ ವಸ್ತು"ವೆಂದು ಸೂಚಿಸಿದುದಾಗಿಯೂ, ಅಥವಾ ಸೀತೆಯು ರಾವಣನನ್ನು ಕುರಿತು "ಎಲೆ ರಾವಣಾ! ನೀನು ನನಗೆ ಎಷ್ಟೋ ವಸ್ತ್ರಮಾಲ್ಯಾಭರಣಗಳೆಲ್ಲವನ್ನೂ ಕೊಡುವುದಾಗಿ ಹೇಳಿದೆಯಲ್ಲವೆ? ಅವೆಲ್ಲವೂ ಇದೋ! ಈ ತೃಣಕ್ಕಿಂತಲೂ ಕಡೆ! ಅವುಗಳನ್ನು ನಾನು ಕಣ್ಣೆತ್ತಿಯೂ ನೋಡುವವಳಲ್ಲ"ವೆಂದು ತನ್ನ ಮನೋದಾರ್ಢ್ಯವನ್ನು ತಿಳಿಸುವುದಾಗಿಯೂ ಅಥವಾ "ಲಂಕಾ ರತ್ನೌಘಸಂಕುಲಾ। ಅಪರಾಧಾತ್ತವೈಕಸ್ಯ ನಚಿರಾದ್ವಿನಶಿಷ್ಯತಿ" ಎಂಬಂತೆ, ನಿನ್ನ ದೋಷದಿಂದ ರತ್ನಸಮೃದ್ಧವಾದ ಈ ಲಂಕೆಯೆಲ್ಲವೂ ಶೀಘ್ರದಲ್ಲಿಯೇ ಕೇವಲತೃಣಭೂಮಿಯಾಗುವುದೆಂದು ಸೂಚಿಸುವುದಾಗಿಯೂ, ಅಥವಾ "ಮಿತ್ರಮೌಪಯಿಕಂಕರ್ತುಂರಾಮಃ ಸ್ಥಾನಂ ಪರೀಪ್ಸತಾ। ವಧಂಚಾನಿಚ್ಛತಾ ಘೋರಂ" ಎಂಬಂತೆ ನಿನ್ನ ಪದವಿಯನ್ನೂ, ನಿನ್ನ ಪ್ರಾಣವನ್ನೂ ಕಾಪಾಡಿಕೊಳ್ಳಬೇಕಾದರೆ, ಇದೋ! ಈ ತೃಣವನ್ನೇ ಬಾಯಲ್ಲಿ ಕಚ್ಚಿಕೊಂಡು, ಪುರುಷಶ್ರೇಷ್ಠನಾದ ಆ ರಾಮನ ಪಾದದಲ್ಲಿ ಬಿದ್ದು ಶರಣಾಗತಿಯನ್ನು ಮಾಡೆಂದು ಸೂಚಿಸುವುದಾಗಿಯೂ, ಅಥವಾ ತೃಣಾದಿಗಳನ್ನು ಮುಂದಿಟ್ಟು ಪ್ರತಿಜ್ಞೆಮಾಡಬೇಕೆಂಬ ನ್ಯಾಯವನ್ನನುಸರಿಸಿ, ಈ ಸೀತೆಯು ರಾವಣನನ್ನು ಶಪಿಸುವಾಗ "ಕ್ಷಿಪ್ರಂತವ ಸನಾಥೋಮೇರಾಮಸ್ಸೌಮಿತ್ರಿಣಾಸಹ। ತೋಯಮಲ್ಪಮಿವಾದಿತ್ಯಃ ಪ್ರಾಣಾನಾದಾಸ್ಯತೇಶರೈಃ" ರಾಮನು ಲಕ್ಷ್ಮಣಸಹಿತನಾಗಿ ಬಂದು ನಿನ್ನ ಪ್ರಾಣಗಳನ್ನು ಹೀರಿಬಿಡುವನೆಂದು ದೃಢಪ್ರತಿಜ್ಞೆಮಾಡುವುದಾಗಿಯೂ ಅಥವಾ ರಾವಣನು ತನ್ನನ್ನು ಕುರಿತು "ಯದ್ಯತ್ಪಶ್ಯಾಮಿ ತೇ ಗಾತ್ರಂ ಶೀತಾಂಶುಸದೃಶಾನನೇ। ತಸ್ಮಿಂಸ್ತಸ್ಮಿನ್ ಪೃಥುಶ್ರೋಣಿ ಚಕ್ಷುರ್ಮಮ ನಿಬಧ್ಯತೇ" ಎಂದು ಹೇಳಿದ ಕರ್ಣಕಠೋರವಾಕ್ಯವನ್ನು ಕೇಳಿ ಸೀತೆಯು ಅವನನ್ನು ಕುರಿತು ಕೋಪದಿಂದ "ಎಲೆ ರಾವಣಾ! ಪೂರ್ವದಲ್ಲಿ ವಾಮನನು ಶುಕ್ರಾಚಾರ್ಯರ ಕಣ್ಣನ್ನು ಇದೇ ಹುಲ್ಲಿನಿಂದ ತೊಳಸಿ

ಉತ್ತರವನ್ನು ಕೊಡುವಳು. ಆಗಲೂ ತನ್ನ ಸ್ವಾಭಾವಿಕವಾದ ಮುಖವಿಕಾರ

---

ವಂತೆ, ಪರದಾರ ದರ್ಶನವೆಂಬ ಮಹಾಪಾತಕವನ್ನು ಮಾಡಿದ ನಿನ್ನ ಕಣ್ಣುಗಳಿಗೂ ಈ ಕಡ್ಡಿಯೇ ನಾಶಕವಾಗ"ಲೆಂದು ಅವನಮುಂದೆ ಹುಲ್ಲನ್ನು ಹಾಕಿದುದಾಗಿಯೂ, ಅಥವಾ ಮೊದಲು ರಾಮನು "ಸದರ್ಭಂ ಸಂಸ್ತರಾದ್ಗೃಹ್ಯ ಹಿನಸ್ತಿಸ್ಮ ಸದಕ್ಷಿಣವಮ್" ಎಂಬುದಾಗಿ ಒಂದು ದರ್ಭೆಯ ಹುಲ್ಲಿನಿಂದಲೇ ಕಾಕಾಸುರನನ್ನು ಕಣ್ಣಿಲ್ಲದಂತೆ ಮಾಡಿದಹಾಗೆ ಈಗಲೂ ಇದೋ! ಈ ಹುಲ್ಲಿನಿಂದಲೇ ಪಾಪಿಯಾದ ನಿನ್ನ ಕಣ್ಣನು ತೊಳಲಿಸುವೆನೆಂದು ಸೂಚಿಸುವುದಾಗಿಯೂ, ಅಥವಾ "ಸೀತಾಯಾಸ್ತೇಜಸಾ ದಗ್ಧಃ" "ನತ್ವಾಂ ಕುರ್ಮಿ ದಶಗ್ರೀವ ಭಸ್ಮಸಾನ್ಮತೇಜಸಾ" ಎಂಬಂತೆ "ನನ್ನ ಪಾತಿವ್ರತ್ಯವೆಂಬ ಅರಣಿಯ ಬೆಂಕಿಯಲ್ಲಿ ಈ ಹುಲ್ಲನ್ನು ಹತ್ತಿಸಿ, ಆ ತೃಣಾಗ್ನಿಯಿಂದಲೇ ನಿನ್ನನ್ನೂ, ನಿನ್ನ ಲಂಕಾರಾಜ್ಯವನ್ನೂ ಭಸ್ಮಮಾಡುವೆ"ನೆಂದು ಸೂಚಿಸುವುದಾಗಿಯೂ ಭಾವವು. ಹೀಗೆ ತನ್ನ ಮನೋಭಾವಗಳೆಲ್ಲವನ್ನೂ ಸೂಚಿಸುವಂತೆ ಅಡ್ಡಲಾಗಿ ತೃಣವನ್ನಿಟ್ಟು (ಶುಚಿಸ್ಮಿತಾ ಪ್ರತ್ಯುವಾಚ) ಮಂದಹಾಸದೊಡನೆ ಉತ್ತರಕೊಟ್ಟಳು "ಅಷ್ಟುಕೋಪವೂ, ಸಂಕಟವೂ ಇರುವಾಗ ಮಂದಹಾಸವೇಕೆ ?" ಎಂದರೆ, ಈ ನಗುವಿಗೂ ಅನೇಕಭಾವಗಳುಂಟು. ಹೇಗೆಂದರೆ:- (ಶುಚಿಸ್ಮಿತಾ) "ಆಃ! ಈಗಲೋ ಇನ್ನು ಕ್ಷಣಕ್ಕೋ ರಾಮನ ಬಾಣಕ್ಕೆ ಸಿಕ್ಕಿ ಸಾಯುವುದಕ್ಕಿರುವ ಈ ಪಾಪಿಗೆ, ಕೊಬ್ಬಿದಕುರಿಯುತೋರಣದ ಸೊಪ್ಪಿಗೆ ಬಾಯಿಹಾಕುವಂತೆ ಈಗಲೂ ಭೋಗದಾಸೆಯೇ? ಎಂಬುದೊಂದು! (ಶುಚಿಸ್ಮಿತಾ) "ಹಸನ್ನಿವ ನೃಪೋಹಂತಿ" ರಾಜರು ನಗುತ್ತಿರುವಂತೆಯೇ ಕೊಲ್ಲುವರೆಂಬ ನ್ಯಾಯದಿಂದ ರಾಜಕುಲದವಳಾದ ತನ್ನ ಈ ನಗೆಯೇ ಅವನಿಗೆ ಮೃತ್ಯು" ವೆಂಬುದೊಂದು ಭಾವವು ಅಥವಾ (ಶುಚಿಸ್ಮಿತಾ) "ರಾವಣಾ! ಈಗ ನೀನು "ನರಾಮಸ್ತಪಸಾದೇವಿ ನ ಬಲೇನ ನವಿಕ್ರಮೈಃ। ನಧನೇನ ಮಯಾ ತುಲ್ಯಃ" ಎಂದು ನೀನೇ ರಾಮನಿಗಿಂತಲೂ ಮೇಲೆಂದು ಹೇಳಿಕೊಳ್ಳುವೆಯಲ್ಲವೆ! ಮೊದಲು ನೀನು ನನ್ನನ್ನು ಕದ್ದು, ರಾಮಬಾಣಕ್ಕೆ ಹೆದರಿ ಅತ್ತಿತ್ತ ತಿರುಗದೆ ಪಲಾಯನವಾಡಿ ಬರುವಾಗ, ನೀನು ಪಟ್ಟ ಅವಸ್ಥೆಯನ್ನು ನನ್ನ ಕಣ್ಣಾರೆ ನಾನೇ ನೋಡಿರುವಾಗ, ನನ್ನ ಮುಂದೆಯೇ ಹೀಗೆ ಪ್ರತ್ಯಕ್ಷಾಪಲಾಪಮಾಡುವ ನಿನಗೆ ನಾಚಿಕೆಯಿಲ್ಲವೆ ?" ಎಂಬುದೊಂದು ಭಾವವು ಮತ್ತು "ಈಗಲೋ ನಾಳೆಯೋ ನೀನು ಯಾವನ ಬಾಣದಿಂದ ಸತ್ತು ನರಿಕಾಗೆಗಳಿಗೆ ನಿನ್ನ ದೇಹವನ್ನೊಪ್ಪಿಸಬೇಕಾಗಿರುವುದೋ, ಆ ರಾಮನನ್ನೇ "ಶಂಕೇ ಜೀವತಿ ವಾ ನ ವಾ" ಅವನು ಬದುಕಿರುವನೋ ಇಲ್ಲವೋ ಎಂದು ಹೇಳುವೆಯಲ್ಲಾ!" ಎಂಬುದೊಂದು ಭಾವವು. ಮತ್ತು "ವಿಭೀಷಣವಿಧೇಯಂಹಿ ಲಂಕಾರಾಜ್ಯಮಿದಂ ಕೃತಂ ಶ್ರೀಮತಾ ರಾಜರಾಜೇನ" ಎಂಬಂತೆ "ಯಾವಾಗಲೋ ರಾಮನು ವಿಭೀಷಣನಿಗಾಗಿ ಸಂಕಲ್ಪಿಸಿಟ್ಟಿರುವ ಈ ಲಂಕಾರಾಜ್ಯವನ್ನೂ, ಐಶ್ವರ್ಯವನ್ನೂ, ಈಗಲೂ ನೀನು ನಿನ್ನದೆಂದು ಭ್ರಮಿಸಿ, "ಬುದ್ಧಿಂ ಮಮಾನುಪಶ್ಯತ್ವಂ ಶ್ರಿಯಂಭದ್ರೇ" ಎಂದು ಹೇಳಿಕೊಳ್ಳುವೆಯಾ ?" ಎಂಬುದೊಂದು ಭಾವವು ಮತ್ತು "ಉಪಧಾಯ ಭುಜಂ ತಸ್ಯ ಲೋಕನಾಥಸ್ಯ ಸತ್ಕೃತಂ" ಎಂಬಂತೆ ಆ ಲೋಕನಾಥನ ಭುಜದಮೇಲೆ ಮಲಗುತ್ತ, ಆತನಿಗೆ ನಿತ್ಯಾನಪಾಯಿನಿಯಾದ ನನ್ನನ್ನು ಕುರಿತೇ ನೀನು "ಮಾಂಚಭುಂಕ್ಷ್ವಯಥಾಸುಖಂ" ಎಂದು ಹೇಳುವೆಯಾ"

ವನ್ನು ಬಿಡದೆ, ಬಹಳಮೃದುವಾಕ್ಯದಿಂದ" "ರಾವಣಾ! ಈ ದುರಾಲೋಚನೆ

---

ಎಂಬುದೊಂದು ಭಾವವು. ಹೀಗೆ ಸರ್ವಜ್ಞಳಾದ ಸೀತೆಯು, ರಾವಣನು ಹೇಳುವ ಅಹಂಕಾರ ಮಮಕಾರ ವಿಶಿಷ್ಟವಾದ ಮಾತನ್ನು ಕೇಳಿ, ಅವನ ಅಜ್ಞತೆಗಾಗಿ ನಗುವಳೆಂದು ಗ್ರಾಹ್ಯವು. "ನಿವರ್ತಯ ಮನೋಮತ್ತಃ ಸ್ವಜನೇ ಕ್ರಿಯತಾಂ ಮನಃ" "ಎಲೆ ರಾವಣಾ! ನಿನ್ನ ಪ್ರಾಣವನ್ನುಳಿಸಿ ನಿನ್ನಸ್ವಾಧೀನದಲ್ಲಿರಿಸಿಕೊಳ್ಳಬೇಕಾದರೆ, ಮೊದಲು ನಿನ್ನ ಮನಸ್ಸನ್ನು ನನ್ನ ಕಡೆಯಿಂದ ತಡೆದಿಡು. ಆ ಮನಸ್ಸನ್ನೇ ನಿನ್ನ ಸ್ವಪತ್ನಿಯರಲ್ಲಿಡು. ನಿನಗೆ ಇದರಿಂದ ಎರಡು ಬಗೆಯ ವಿಪತ್ತುಗಳು ತಪ್ಪುವುವು. ಪರಸ್ತ್ರೀಕಾಮುಕತೆಯಿಂದುಂಟಾಗುವ ಅನರ್ಥವೊಂದು! "ಪರಿಭೂತ ವಿಷಣ್ಣಾ ಚೇದ್ಭಾರ್ಯಾಭರ್ತಾ ವಿನಶ್ಯತಿ" ಎಂಬಂತೆ, ನಿನ್ನ ಪತ್ನಿಯರನ್ನನಾದರಿಸಿ ಅವರನ್ನು ದುಃಖಪಡಿಸುವುದರಿಂದ ನಿನಗೆ ಬರುವ ನಾಶವೊಂದು. ಇವೆರಡು ಮಹಾನರ್ಥಗಳನ್ನೂ ನೀನು ತಪ್ಪಿಸಿಕೊಳ್ಳಬೇಕಾದರೆ ಮನಸ್ಸನ್ನು ನನ್ನಕಡೆಯಿಂದ ತಡೆದು ನಿನ್ನ ಪತ್ನಿಯರಲ್ಲಿಡು" ಎಂದು ಸೂಚಿಸಿದುದಾಗಿ ಭಾವವು. (ತನಿಶ್ಲೋಕಿ).

1. ಇಲ್ಲಿ "ಇಹ ಸಂತೋನವಾ ಸಂತಿ ಸತೋವಾನಾನುವರ್ತಸೇ। ತಥಾಹಿ ವಿಪರೀತಾ ತೇ ಬುದ್ಧಿರಾಚಾರವರ್ಜಿತಾ" ಎಂದು ಮೂಲವು, ವಿಶೇಷಾರ್ಥವು:— ಎಲೆ ರಾವಣಾ! ದುರ್ಜನಪ್ರಚುರವಾದ ಈ ನಿನ್ನ ದೇಶದಲ್ಲಿ (ಸಂತೋನವಾ) ನಿನಗೆ ಹಿತವನ್ನು ಹೇಳುವ ಸಜ್ಜನರೊಬ್ಬರಾದರೂ ಇಲ್ಲವೆ? "ಅಗ್ನಿಹೋತ್ರಾಶ್ಚ ವೇದಾಶ್ಚ ರಾಕ್ಷಸಾನಾಂ ಗೃಹೇಗೃಹೇ" ಎಂದೂ "ಶುಶ್ರಾವ ಬ್ರಹ್ಮಘೋಷಾಂಶ್ಚ ವಿರಾತ್ರೇ ಬ್ರಹ್ಮ ರಕ್ಷಸಾಂ" ಎಂದೂ, ವೇದವೈದಿಕ ಮರ್ಯಾದವನ್ನು ನಡೆಸುವಂತೆ ತೋರಿದುದೆಲ್ಲವೂ ಕೇವಲನಟನವೇನು? ಬೇರೆಯವರಿಗೆ ಅನರ್ಥವನ್ನುಂಟುಮಾಡುವ ಪ್ರಹಸ್ತಧೂಮ್ರಾಕ್ಷಾದಿಗಳಾದ ಅಸತ್ತುಗಳನ್ನು ಕಾಣುವೆವೇಹೊರತು, ಸಾಧುಗಳನ್ನು ಕಾಣಲಿಲ್ಲ! ಹಾಗೆ ಸತ್ಪುರುಷರೇ ಇಲ್ಲವೆಂದೂ ಹೇಳುವುದಕ್ಕಿಲ್ಲ. (ಸಂತಿ) ಇದ್ದೇ ಇರಬೇಕು; ಈ ಪಟ್ಟಣದಲ್ಲಿ ಇಷ್ಟು ವಿಜಯಸಂಪತ್ಪುತ್ರಾದಿ ಸಮೃದ್ಧಿಯಿರುವುದರಿಂದ, ಇದಕ್ಕೆ ಮೂಲವಾದ ಧರ್ಮಾನುಷ್ಠಾನವೂ, ಅದಕ್ಕೆ ಕಾರಣರಾದ ಸತ್ಪುರುಷರೂ ಇದ್ದೇ ಇರಬೇಕು, ಹಾಗಿಲ್ಲದಿದ್ದರೆ ಅಕಾರಣಕಾರ್ಯೋತ್ಪತ್ತಿಯು ಸಂಭವಿಸುವುದಲ್ಲವೆ? (ಸತೋವಾನಾನುವರ್ತಸೇ) ಹಾಗಿದ್ದರೂ ನೀನು ಅವರನ್ನು ಅನುವರ್ತಿಸಿ ಕೇಳುವುದಿಲ್ಲವೋ? "ನಾಪೃಷ್ಟಃ ಕಸ್ಯಚಿದ್ಬ್ರೂಯಾತ್" ಎಂದೂ, "ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ। ಉಪದೇಕ್ಷ್ಯಂತಿ" ಎಂದೂ, ಪ್ರಶ್ನಾದಿಗಳಿಂದಲೂ, ಸೇವೆಯಿಂದಲೂ ಅನುವರ್ತಿಸಿದಹೊರತು ಯಾರೂ ಉಪದೇಶಿಸಲಾರರು. ಅದುದರಿಂದ ನೀನು ಅವರನ್ನು ತಕ್ಕರೀತಿಯಲ್ಲಿ ಅನುವರ್ತಿಸಲಾರೆ ಯೆಂಬುದೇ ಸಿದ್ಧವು. "ನಾನು ಅನುವರ್ತಿಸುವುದನ್ನಾಗಲಿ, ಇಲ್ಲದುವನ್ನಾಗಲಿ, ನಿನ್ನ ಬುದ್ಧಿಯಿಂದ ನೀನು ಹೇಗೆ ಬಲ್ಲೆ?" ಎನ್ನುವೆಯೋ? (ತಥಾಹಿ ವಿಪರೀತಾತೇ ಬುದ್ಧಿಃ ನಿನ್ನ,

ಯನ್ನು ಬಿಡು! ಈಗ ನಿನಗೆ ನನ್ನಲ್ಲಿ ಹುಟ್ಟಿರುವ ಮೋಹವನ್ನೇ ನಿನ್ನ ಸ್ವಪತ್ನಿಯರಲ್ಲಿ ತೋರಿಸು! ಪಾಪಿಯು ಮೋಕ್ಷಸಿದ್ಧಿಯನ್ನು ಕೋರುವಂತೆ ನೀನು ನನ್ನನ್ನು ಕೋರುವುದು ಸರ್ವಥಾ ಯುಕ್ತವಲ್ಲ. ಉತ್ತಮಕುಲದಲ್ಲಿ ಹುಟ್ಟಿ, ಅದಕ್ಕಿಂತಲೂ ಪವಿತ್ರವಾದ ಮತ್ತೊಂದು ಕುಲವನ್ನು ಸೇರಿ, ಒಬ್ಬನೇ ಪತಿಯೆಂಬ ಮಹಾವ್ರತವನ್ನು ಹಿಡಿದಿರುವ ನಾನು ಲೋಕನಿಂದಿತವಾದ ಈ ಅಕಾರ್ಯಕ್ಕೆ ಪ್ರಯತ್ನಿಸುವೆನೆ? ಎಂದಿಗೂ ಇಲ್ಲ" ಎಂದು ಹೇಳಿ ಯಶಸ್ವಿನಿಯಾದ ಆ ವಿದೇಹಪುತ್ರಿಯು, ತಿರುಗಿ ಆ ರಾವಣನನ್ನು ಕುರಿತು ತಿರಸ್ಕಾರದೊಡನೆ ಕೆಲವು ಮಾತುಗಳನ್ನಾಡುವಳು. "ಎಲೆ ನಿಶಾಚರಾ! ಎಂದಿಗೂ ನಾನು ನಿನಗೆ ಭಾರ್ಯೆಯಲ್ಲ! ನನಗೆ ಬೇರೆ ಪತಿಯಿರುವನು. ನಾನು ಅವನನ್ನೇ ವ್ರತವಾಗಿ ಉಳ್ಳವಳು! ನಿನಗೆ ಈ ದುರ್ಬುದ್ಧಿಯೇಕೆ? ಸತ್ಪುರುಷರ ಧರ್ಮದಲ್ಲಿ ದೃಷ್ಟಿಯಿಟ್ಟು ನೀನೂ ಅವರ ಧರ್ಮವನ್ನೇ ಅನುಸರಿಸು! ನಿನ್ನ ಪತ್ನಿಯರನ್ನು ನೀನು ಪರಪುರುಷರಿಂದ ರಕ್ಷಿಸಿಕೊಳ್ಳುವಂತೆ ಇತರರ ಪತ್ನಿಯರನ್ನೂ ನೋಡಬೇಡವೆ? ನಿನ್ನ ಸ್ವಪತ್ನಿಯರಲ್ಲಿ ನೀನು ರಮಿಸು! ಸ್ವಪತ್ನಿಯರಲ್ಲಿ ತೃಪ್ತಿಪಡದೆ, ಚಪಲನಾಗಿ, ಧೂರ್ತನಾಗಿ, ಇಂದ್ರಿಯಗಳನ್ನು ತಡೆಯಲಾರದ ಮನುಷ್ಯನಿಗೆ ಎಂದಿಗೂ ಕೇಡು ತಪ್ಪದು! ಪರಸ್ತ್ರೀಸಂಬಂಧವು ಸುಮ್ಮನೆ ಹೋಗುವುದೆಂದೆಣಿಸಬೇಡ! ಆಯುರಾರೋಗ್ಯೈಶ್ವರ್ಯಾದಿಗಳನ್ನೆಲ್ಲಾ ಹಾಳುಮಾಡುವುದು. ರಾವಣಾ! ಇಷ್ಟು ವಿಶಾಲವಾದ ಈ ನಿನ್ನ ದೇಶದಲ್ಲಿ ನಿನಗೆ ತಕ್ಕ ಬುದ್ಧಿವಾದವನ್ನು ಹೇಳುವ ಸಾಧುಗಳೊಬ್ಬರಾದರೂ ಇಲ್ಲವೇನು? ಅಥವಾ ಇದ್ದರೂ ನೀನು ಅವರ ಮಾತನ್ನೂ ಮೀರಿ ನಡೆಯುತ್ತಿರುವೆಯೋ? ನಿನ್ನಬುದ್ಧಿಯೇ ಈಗ ವಿಪರೀತವಾಗಿರುವುದೇನೋ ನಿಜವು. ನಿನ್ನ ಕೆಟ್ಟನಡತೆಯೇ ನಿನ್ನ ಬುದ್ಧಿಯು ಕೆಟ್ಟಿರುವುದೆಂಬುದನ್ನು ಚೆನ್ನಾಗಿ ಸೂಚಿಸುತ್ತಿರುವುದು. ಎಲ್ಲಿಯೂ ಸಾಧುಗಳುಂಟು! ಈಗ ಅವರು ಹೇಳುವ ಪಥ್ಯವಾಕ್ಯಗಳೊಂದೂ ನಿನಗೆ ಕಿವಿಗೇರುವುದಿಲ್ಲ. ನೀನೊಬ್ಬನು ಕೆಡುವುದ

---

ವಿಪರೀತಬುದ್ಧಿಯೇ ಅದನ್ನು ಸೂಚಿಸುವುದು. "ಕಣ್ಣಿಗೆ ಅಗೋಚರವಾದ ನನ್ನ ಬುದ್ಧಿಯನ್ನಾಗಲಿ ನೀನು ಹೇಗೆ ಬಲ್ಲೆ?" ಎಂದು ಕೇಳುವೆಯಾ? (ಆಚಾರವರ್ಜಿತಾ) ನಿನ್ನ ಬುದ್ಧಿಯು ಅಗೋಚರವಾಗಿದ್ದರೂ ಪ್ರತ್ಯಕ್ಷದಲ್ಲಿ ಕಾಣುವ ಬಾಹ್ಯವ್ಯಾಪಾರವಾದ ಆಚಾರವೇ ನಿನ್ನಬುದ್ಧಿಯ ಸ್ಥಿತಿಯನ್ನು ತೋರಿಸುವುದು" ಎಂದು ಹೇಳಿದುದಾಗಿಯೂ ಭಾವವು.

ಲ್ಲದೆ ಇಲ್ಲಿನ ಸಮಸ್ತ ರಾಕ್ಷಸರನ್ನೂ ನಿರ್ಮೂಲ ಮಾಡಿಸುವುದಕ್ಕಾಗಿಯೇ ನಿನಗೆ ಈ ವಿಪರೀತ ಬುದ್ಧಿಯು ಹುಟ್ಟಿರುವುದು. ನೀನು ಇಲ್ಲಿನ ರಾಕ್ಷಸರಲ್ಲಿ ತೋರಿಸು ತ್ತಿರುವ ಪ್ರೇಮವೆಲ್ಲವೂ ನಿಜವಾದುದಲ್ಲವೆಂದೂ, ಅವರನ್ನು ಕೊಲ್ಲಿಸುವುದಕ್ಕಾ ಗಿಯೇ ನಿನ್ನ ಪ್ರಯತ್ನವೆಂದೂ ಹೇಳಬೇಕಾಗಿದೆ! ನಿನ್ನಂತೆ ಬುದ್ಧಿಗೆಟ್ಟು, ನ್ಯಾಯ ತಪ್ಪಿ ನಡೆಯುವ ರಾಜನ ಕೈಗೆ ಸಿಕ್ಕಿದಮೇಲೆ, ಯಾವ ರಾಷ್ಟ್ರಗಳಾಗಲಿ, ಯಾವ ಪಟ್ಟಣಗಳಾಗಲಿ, ಎಷ್ಟೇ ಧನಕನಕಸಮೃದ್ಧಿಯುಳ್ಳವುಗಳಾಗಿದ್ದರೂ ಕ್ಷಣಮಾತ್ರ ದಲ್ಲಿ ನಾಶಹೊಂದುವುವು. ಈ ನಿನ್ನ ಲಂಕಾರಾಜ್ಯವು ಎಷ್ಟು ರತ್ನಸಮೃದ್ಧಿಯುಳ್ಳು ದಾಗಿದ್ದರೇನು? ನಿನ್ನ ದೋಷದಿಂದ ಇನ್ನು ಬಹುಶೀಘ್ರದಲ್ಲಿಯೇ ನಾಶಹೊಂದು ವುದು. ಎಲೆ ರಾವಣಾ! ದೂರದೃಷ್ಟಿಯಿಲ್ಲದೆ ತನ್ನ ತಪ್ಪಿನಿಂದಲೇ ತಾನು ಕೆಡುವವ ನನ್ನು ನೋಡಿ, ಸಮಸ್ತಭೂತಗಳೂ ಸಂತೋಷಿಸುವುವೇ ಹೊರತು, ಅವನಿಗಾಗಿ ಯಾವ ಪ್ರಾಣಿಯೂ ಪಶ್ಚಾತ್ತಾಪಪಡುವುದಿಲ್ಲ. ಲೋಕದಲ್ಲಿ ನಿನ್ನಿಂದ ತಿರಸ್ಕೃ ತರಾದವರೆಷ್ಟೋ ಮಂದಿಯುಂಟು! ಪಾಪಿಯಾದ ನಿನಗೆ ಮುಂದೆ ಯಾವುದಾ ದರೂ ವ್ಯಸನವು ಪ್ರಾಪ್ತವಾದಾಗ, ಅವರೆಲ್ಲರೂ ನಿನ್ನನ್ನು ನೋಡಿ "ದೈವವು ಆ ನೀಚನಿಗೆ ತಕ್ಕ ಫಲವನ್ನು ತೋರಿಸಿತು" ಎಂದು ಸಂತೋಷಪಡುವರಲ್ಲವೆ? ಎಲೆ ರಾಕ್ಷಸನೆ! ನನಗೆ ನೀನು ಬೇಕಾದ ಭೋಗಸಾಮಗ್ರಿಗಳನ್ನು ಕೊಡುವೆ ನೆಂದು ಹೇಳಿದೆಯಲ್ಲವೆ? 1 ನಿನ್ನ ಐಶ್ವರ್ಯಕ್ಕಾಗಲಿ, ನಿನ್ನ ಅಧಿಕಾರಕ್ಕಾಗಲಿ ನಾನು ಮರುಳಾಗುವವಳಲ್ಲ! ಸೂರ್ಯನಿಗೆ ಪ್ರಭೆಯು ಹೇಗೋ ಹಾಗೆ, ನಾನು

---

• 1. ಇಲ್ಲಿ "ಶಕ್ಯಾ ಲೋಭಯಿತುಂ ನಾಹಮೈಶ್ವರ್ಯೇಣ ಧನೇನವಾ। ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾ ಯಥಾ" ಎಂಬ ಮೂಲವು. ವಿಶೇಷಾರ್ಥವು.— (ಅಹಂ) ಶ್ರೀ ಮಹಾವಿಷ್ಣುವಿಗೆ ನಿತ್ಯಾನಪಾಯಿನಿಯಾದ ನಾನು, (ರಾಘವೇಣ ಅನನ್ಯಾ) ಈ ರಾಮನಿಂದ ಬೇರ್ಪಡುವವಳಲ್ಲ. ಎಂದರೆ ಅವನು ಯಾವಯಾವ ಕುಲದಲ್ಲಿ ಅವತರಿಸು ವನೋ ಆಯಾಕುಲದಲ್ಲಿ ನಾನೂ ಅವತರಿಸಿ, ಅವನೊಡನೆಯೇ ಇರತಕ್ಕವಳು" ಎಂದು ಭಾವವು. ಇಲ್ಲಿ (ರಾಘವೇಣ) ಎಂದು ತೃತೀಯೆಯನ್ನು ಹೇಳಿರುವುದರಿಂದ ಆ ದೇವನಿಗೆ ತಾನು ಪರತಂತ್ರಳೆಂದೂ (ಭಾಸ್ಕರೇಣ ಪ್ರಭಾಯಥಾ) ಎಂಬುದರಿಂದ, ಕಾಂತಿಯು ಸೂರ್ಯ ನಿಗೆ ಅತಿಶಯ ಹೇತುವಾಗಿರುವಂತೆ ರಾಮನಿಗೆ ತನ್ನ ಸಂಬಂಧದಿಂದ ಒಂದು ಮೇಲ್ಮೆ ಯುಂಟೆಂದೂ, ಸೂಚಿತವು. ಇದನ್ನು ತಿಳಿದೇ ಮಾರೀಚನೂ "ಅಪ್ರಮೇಯಂ ಹಿ ತತ್ತೇಜೋ ಯಸ್ಯಸಾ ಜನಕಾತ್ಮಜಾ" ಎಂದು ಹೇಳಿರುವನು. "ಅವನ ಹಿತವಾಕ್ಯವನ್ನೂ ಕೂಡ ನೀನು ಅಜ್ಞಾನದಿಂದ ಮರೆತುಬಿಟ್ಟೆಯಾ?" ಎಂದು ಕೇಳಿದುದಾಗಿ ಭಾವವು.

ರಘುವಂಶ ವರ್ಧಕನಾದ ಆ ರಾಮನಿಗೆ ನಿತ್ಯಾನಪಾಯಿನಿಯೆಂದು ತಿಳಿ! ಸರ್ವಲೋಕನಾಥನಾದ ಆ ರಾಮನ ಬಲದಭುಜದಮೇಲೆ ತಲೆಯಿಟ್ಟು ಮಲಗುತಿದ್ದ ನಾನು, ನಿನ್ನಂತೆ ಕ್ಷುದ್ರನಾದ ಬೇರೊಬ್ಬನ ಭುಜದಮೇಲೆ ಮಲಗುವೆನೆ? ವ್ರತಸ್ನಾತನಾಗಿ ಮಹಾಧೀಮಂತನೆನಿಸಿಕೊಂಡ ಆತ್ಮಜ್ಞಾನಿಗೆ ವಿದ್ಯೆಯು ಹೇಗೋ ಹಾಗೆ, ನಾನು [1] ಭೂನಾಥನಾದ ಆ ರಾಮನೊಡನೆಯೇ ಇರಬೇಕಾದ ಭಾರ್ಯೆಯು! ರಾವಣಾ! ಒಳ್ಳೇದು! ಈಗಲೂ ಚಿಂತೆಯಿಲ್ಲ! ಕಾಡಿನಲ್ಲಿ ಗುಂಪನ್ನಗಲಿ ಬಂದಿರುವ ಹೆಣ್ಣಾನೆಯ ಬಳಿಗೆ, ಗಂಡಾನೆಯನ್ನು ತಂದು ಸೇರಿಸುವಂತೆ, ದುಃಖಿತೆಯಾದ ಈ ನನ್ನೊಡನೆ ಆ ರಾಮನನ್ನು ಕರೆತಂದು ಸೇರಿಸಿಬಿಡು! [2] ಎಲೆ ರಾಕ್ಷಸಾ! ನೀನು ಲಂಕೆಯಲ್ಲಿ ಇನ್ನೂ ಸ್ಥಿರವಾಗಿ ನಿಲ್ಲಬೇಕೆಂದಿದ್ದರೆ, ಭಯಂಕರವಾದ ಕೊಲೆಗೀಡಾಗಬಾರದೆಂಬ ಕೋರಿಕೆಯಾದರೂ ನಿನಗಿದ್ದರೆ, ಪುರುಷಶ್ರೇಷ್ಠನಾದ ಆ ರಾಮನೊಡನೆ ಈಗಲೂ ಮೈತ್ರಿಯನ್ನು ಬೆಳೆಸು! ನೀನು ಇಷ್ಟು ಮಹಾಪರಾಧಿಯಾದರೂ ಅವನು ನಿನ್ನನ್ನು ರಕ್ಷಿಸುವನು!

---

1. ಇಲ್ಲಿ "ಅಹಮೌಪಯಿಕೀ ಭಾರ್ಯಾ ತಸ್ಯೈವ ವಸುಧಾಪತೇಃ" ಎಂದು ಮೂಲವು. ಇಲ್ಲಿ (ವಸುಧಾಪತೇಃ) ಎಂಬ ವಿಶೇಷಣವನ್ನು ಪ್ರಯೋಗಿಸಿರುವುದರಿಂದ "ಹ್ರೀಶ್ಚತೇ ಲಕ್ಷ್ಮೀಶ್ಚಪತ್ನ್ಯೌ" ಎಂಬಂತೆ, ಭೂದೇವಿಗೆ ನಾಥನಾದ ಆ ರಾಮನಿಗೆ ಲಕ್ಷ್ಮೀಸ್ವರೂಪೆಯಾದ ನಾನೇ ತಕ್ಕ ಭಾರ್ಯೆಯೆಂದು ಸೂಚಿಸಿದುದಾಗಿ ಗ್ರಾಹ್ಯವು.

2. ಇಲ್ಲಿ "ಮಿತ್ರಮೌಪಯಿಕಂ ಕರ್ತುಂ ರಾಮಃ ಸ್ಥಾನಂಪರೀಪ್ಸತಾ। ವಧಂಚಾನಿಚ್ಛತಾ ಘೋರಂ ತ್ವಯಾಸೌ ಪುರುಷರ್ಷಭಃ" ಎಂದು ಮೂಲವು. ಸೀತೆಯು ಸರ್ವಲೋಕಜನನಿಯಾಗಿದ್ದರೂ, ಇದುವರೆಗೆ ರಾವಣನಲ್ಲಿ ಆ ಜನನೀತ್ವಪ್ರತಿಪತ್ತಿಯನ್ನು ತೋರಿಸದೆ, ಅವನೊಡನೆ ಚರ್ಚಿಸುತ್ತ, ಅಷ್ಟಾದರೂ ಅವನು ತನ್ನ ಮೂರ್ಖಸ್ವಭಾವವನ್ನು ಬಿಡದಿದ್ದುದನ್ನು ನೋಡಿ ಖಿನ್ನೆಯಾಗಿ "ಅಯ್ಯೋ! ಇವನ ಸ್ವಭಾವವನ್ನು ತಿದ್ದುವುದಕ್ಕುಪಾಯವೇನು! ಎಂದು ಅವನಲ್ಲಿ ಮರುಕಗೊಂಡು, "ಇಹಸಂತೋನ ವಾಸಂತಿ" ಇತ್ಯಾದಿ ವಾಕ್ಯಗಳಿಂದ, ಅವನ ಕಡೆಯುವಂತಾಗಿ ಅವನಿಗೆ ಹಿತವನ್ನು ಹೇಳಿ, ಸನ್ಮಾರ್ಗಕ್ಕೆ ತರುವವರೂ ಇಲ್ಲದೆ ಹೋದುದನ್ನೂ ಚಿಂತಿಸಿ, ಕೊನೆಗೆ ತಾನೇ ಆತನಿಗೆ ಉಪದೇಶಿಸುವಳು. (ಮಿತ್ರಮೌಪಯಿಕಂ ಕರ್ತುಂರಾಮಃ) "ರಾವಣಾ! ರಾಮನೊಡನೆ ವಿರೋಧವು ಕೂಡದು. ಅವನೊಡನೆ ಮೈತ್ರಿಯನ್ನು ಮಾಡುವುದೇ ಯುಕ್ತವು." ಎಂದರೆ, ಮಹಾಪರಾಧಿಯಾದ ನಿನಗೆ ಅವನಲ್ಲಿ ಶರಣಾಗತಿಯನ್ನು ಮಾಡುವುದೇ ಯುಕ್ತವು" ಎಂದು ಭಾವವು. ಇಲ್ಲಿ ಮಿತ್ರಶಬ್ದಕ್ಕೆ ಶರಣ್ಯವೆಂಬರ್ಥವು ಹೇಗೆ? ಎಂದರೆ, ಮುಂದಿನ ಶ್ಲೋಕದಲ್ಲಿ "ವಿದಿತಸ್ಸಹಿ ಧರ್ಮಜ್ಞಃ ಶರಣಾಗತವತ್ಸಲಃ" ಎಂದು ರಾಮನನ್ನು ಶರಣಾಗತವತ್ಸಲನನ್ನಾಗಿ ಹೇಳಿ, ಆಮೇಲೆ ತೇನ ಮೈತ್ರೀ ಭವತುತೇ "ಅವನೊಡನೆ ಮೈತ್ರಿಯನ್ನು ಮಾಡು" ಎಂದೂ ಹೇಳಿರುವುದರಿಂದ, ಈ ಕಾರ್ಯಕಾರಣಸಂಬಂಧವನ್ನನು

ಅವನು ಸಮಸ್ತಧರ್ಮಸೂಕ್ಷ್ಮಗಳನ್ನೂ ಬಲ್ಲವನು! ಮರೆಹೊಕ್ಕವರಲ್ಲಿ ವಾತ್ಸಲ್ಯ

ಇರಿಸಿ, ಮೈತ್ರಿಯೆಂಬುದಕ್ಕೆ ಶರಣಾಗತಿಯೆಂಬ ಅರ್ಥವನ್ನೇ ಮಾಡಬೇಕಾಗುವುದು. ಇದಲ್ಲದೆ "ಅರ್ಚನಂ, ವಂದನಂ, ದಾಸ್ಯಂ ಸಖ್ಯಮಾತ್ಮನಿವೇದನಂ" ಎಂಬುದಾಗಿ, ಭಕ್ತಿಪ್ರಕಾರಗಳಲ್ಲಿ ಸಖ್ಯವನ್ನೂ ಒಂದಾಗಿ ಹೇಳಿರುವುದರಿಂದ, ಇಲ್ಲಿ ಮಿತ್ರಶಬ್ದಕ್ಕೆ ಶರಣ್ಯನೆಂಬ ಅರ್ಥವೇ ಯುಕ್ತವು. "ತಮೇವ ಶರಣಂಗಚ್ಛ ಸರ್ವಭಾವೇನ ಭಾರತ" ಎಂಬಂತೆ ಸರ್ವವಿಧಭಾವದಿಂದಲೂ ಶರಣಾಗತಿಯನ್ನು ಮಾಡಬೇಕೆಂದು ಹೇಳಿರುವುದರಿಂದ, ಇಲ್ಲಿಯೂ ಮೈತ್ರಿಯೆಂಬುದಕ್ಕೆ ಕೇವಲಸ್ನೇಹಭಾವವೆಂದು ಹೇಳದೆ, ಮಿತ್ರಭಾವದಿಂದ ಶರಣಾಗತಿಯನ್ನು ಮಾಡಬೇಕೆಂಬುದೇ ತತ್ತ್ವಾರ್ಥವು. ಅದರೆ ಇಲ್ಲಿ ಸೀತೆಯು ಸ್ಪಷ್ಟವಾಗಿ ಶರಣಾಗತಿಯೆಂದೇ ಹೇಳಬಾರದೆ! ಮಿತ್ರಶಬ್ದವನ್ನು ಹೇಳಿದುದೇಕೆ? ಎಂದರೆ ಅಲ್ಪ ಸ್ವಭಾವವುಳ್ಳವರು ತಮ್ಮನ್ನೇ ತಾವು ಬಹಳಮೇಲೆಂದೆಣಿಸಿ, ಇತರರಲ್ಲಿ ನೈಚ್ಯಭಾವವನ್ನೇ ತೋರಿಸುವರಾದುದರಿಂದ, ಬಹಳ ಉದಾರಸ್ವಭಾವವುಳ್ಳ ಸೀತೆಯು ಆ ರಾವಣನ ಮನೋಭಿಪ್ರಾಯವನ್ನನುಸರಿಸಿಯೇ ಅವನ ಮನಸ್ಸನ್ನಾಕರ್ಷಿಸುವುದಕ್ಕಾಗಿ, ಅವನಿಗೆ ಗೌರವವನ್ನೇ ಕಲ್ಪಿಸಿ, ಇಲ್ಲಿ ಮಿತ್ರಶಬ್ದವನ್ನುಪಯೋಗಿಸಿದುದಾಗಿ ಗ್ರಾಹ್ಯವು. ಹೀಗೆಯೇ ರಾಮನೂ, ಎಷ್ಟೋ ನೀಚಸ್ವಭಾವವುಳ್ಳವನನ್ನು ಕೂಡ ತುಚ್ಛೀಕರಿಸದೆ, ತನಗೆ ಸಮಾನವಾಗಿಯೇ ಭಾವಿಸಿ ಗೌರವವನ್ನು ತೋರಿಸುವ ಸ್ವಭಾವವುಳ್ಳವನು. ಒಬ್ಬ ರಾಕ್ಷಸನನ್ನು ನೋಡಿ "ಮಿತ್ರಭಾವೇನ ಸಂಪ್ರಾಪ್ತಂ" ಎಂದೂ, ಒಂದು ಕಪಿಯನ್ನು ಕುರಿತು "ಸಖಾಚಮೇ" ಎಂದೂ, ಅಲ್ಲಲ್ಲಿ ತನಗೆ ಸಮಾನರಲ್ಲದ ಅಲ್ಪರಲ್ಲಿಯೂ ಕೂಡ ಗೌರವವನ್ನಾರೋಪಿಸಿ ತನಗೆ ಮಿತ್ರನನ್ನಾಗಿ ಹೇಳಿಕೊಂಡಿರುವನಾದುದರಿಂದ, ಸೀತೆಯು ತನ್ನ ಉದಾರಸ್ವಭಾವಕ್ಕೂ, ರಾಮನ ಸೌಲಭ್ಯಕ್ಕೂ, ಕೇವಲ ದುರ್ಮಾನಿಯಾದ ಆ ರಾವಣನ ಮನೋಭಿಪ್ರಾಯಕ್ಕೂ ಅನುಸಾರವಾಗಿ ಅವನಿಗೆ ರಾಮನೊಡನೆ ಸಾಮ್ಯವನ್ನೇ ಕಲ್ಪಿಸಿ, ಮಿತ್ರಶಬ್ದವನ್ನು ಹೇಳಿದುದಾಗಿ ಭಾವವು. ಈ ರಾವಣನು "ನ ನಮೇಯಂ" ಎಂಬುದಾಗಿ, ತಾನು ಎಂದಿಗೂ ಯಾರಿಗೂ ಜಗ್ಗುವವನಲ್ಲವೆಂದು ಹೇಳಿಕೊಂಡಿರುವುದರಿಂದ, ಕೇವಲ ದುರ್ಮಾನಿಯಾದ ಅತನೊಡನೆ "ನೀನು ಶರಣಾಗತಿಯನ್ನು ಮಾಡು!" ಎಂದು ವಾಚ್ಯವಾಗಿ ಹೇಳಿದಪಕ್ಷದಲ್ಲಿ, ಸಮ್ಮತಿಸದಿರಬಹುದು. ಮೈತ್ರಿಯನ್ನು ಮಾಡೆಂದು ಹೇಳಿದರೆ ಒಂದುವೇಳೆ ಸಮ್ಮತಿಸಿದರೂ ಸಮ್ಮತಿಸಬಹುದು, ಎಂದು ಹೀಗೆ ಹೇಳಿದುದಾಗಿ ಗ್ರಾಹ್ಯವು. ಹೀಗಿದ್ದರೂ ರಾವಣನು ತಾನು ರಾಮನಲ್ಲಿ ಮೈತ್ರಿಗಾಗಿ ಹೋದರೂ ಮಹಾಪರಾಧಿಯಾದ ತನ್ನಲ್ಲಿ ಒಂದುವೇಳೆ ಅವನು ಪ್ರಸನ್ನನಾಗದಿರಬಹುದೆಂದು ಶಂಕಿಸುವನೆಂದು ತಿಳಿದು ಆ ಶಂಕಾಪರಿಹಾರಾರ್ಥವಾಗಿ ಹೇಳುವಳು! (ರಾಮಃ) ರಮಯತೀತಿ ಎಂಬಂತೆ ಎಷ್ಟೇ ಅಪರಾಧಿಗಳಾಗಿದ್ದರೂ, ಅವರನ್ನು ಪ್ರೇಮದಿಂದ ನೋಡುವ ಅರ್ದ್ರಸ್ವಭಾವವುಳ್ಳವನು. ಬೆಸ್ತರೊಡನೆಯೂ ಕಪಿಗಳೊಡನೆಯೂ ಸ್ನೇಹವನ್ನು ಬೆಳೆಸುವಷ್ಟು ಸೌಲಭ್ಯವುಳ್ಳ ರಾಮನು ನಿನ್ನನ್ನುಪೇಕ್ಷಿಸುವನೆ! ನೀನಾಗಿ ಅವನ ಮೈತ್ರಿಯನ್ನೊಲ್ಲದೆ ಹೋದರೂ "ಯದಿ ವಾ ರಾವಣಸ್ಸ್ವಯಂ ಆನಯೈನಂ" "ರಾವಣನ ಕಡೆಯವನು ಮಾತ್ರವೇ ಅಲ್ಲ! ರಾವಣನೇ ತಾನಾಗಿ ಬಂದರೂ ನಾನು ಕಾಪಾಡುವೆನು" ಎಂದು-

ಉಳ್ಳವನು! ಇದನ್ನು ಲೋಕವೆಲ್ಲವೂ ಬಲ್ಲುದು! ನಿನಗೆ ಇನ್ನೂ ಬದುಕಿರ

---

ತನ್ನಲ್ಲಿಗೆ ಕರೆಸಿಕೊಳ್ಳುವನಲ್ಲದೆ, ಶತ್ರುವಾದ ನಿನ್ನನ್ನು ಕೊಲ್ಲಬೇಕಾಗಿ ಬಂದಾಗಲೂ, ನಿನಗೆ ಹಿತವನ್ನು ಹೇಳಿ ಹಿಂತಿರುಗಿಸುವ ದಯಾಸ್ವಭಾವವುಳ್ಳವನು. "ರಾವಣೋಮಿತ್ರಂ ಕರ್ತುಮೌಪಯಿಕಂ" "ರಾವಣಾ! ದುಷ್ಟಹೃದಯರಾಗಿಯೂ, ದುರ್ಬೋಧನೆ ಮಾಡುವವರಾಗಿಯೂ ಇರುವ ಪ್ರಹಸ್ತಾದಿಗಳನ್ನು ನಂಬಿ ಕೆಡಬೇಡ! "ಸುಹೃದಂ ಸರ್ವಭೂತಾನಾಂ" ಎಂದೂ, "ನಿವಾಸಶ್ಶರಣಂ ಸುಹೃತ್" ಎಂದೂ, ಸರ್ವಭೂತಸುಹೃತ್ತೆನಿಸಿಕೊಂಡ ರಾಮನಲ್ಲಿ ಮೈತ್ರಿಯನ್ನು ಮಾಡುವುದೇ ನಿನಗುಚಿತವು. ಅವನೊಡನೆ ಸ್ನೇಹಮಾಡುವುದರಿಂದ ಫಲವೇನು? ಎಂದು ಕೇಳುವೆಯೋ? "ಸ್ಥಾನಂ ಪರೀಪ್ಸತಾ ವಧಂಚಾನಿಚ್ಛತಾ" ನಿನ್ನ ಪದವಿಯೂ, ನಿನ್ನ ಪ್ರಾಣಗಳೂ ಇದುವರೆಗೆ ನಿನ್ನವಾಗಿದ್ದರೂ, ಇನ್ನು ಮುಂದೆಯೂ, ಅವುಗಳನ್ನು ನಿನ್ನವಾಗಿಯೇ ನಿಲ್ಲಿಸಿಕೊಳ್ಳಬೇಕಾದರೆ ರಾಮನೊಡನೆ ಮೈತ್ರಿಯನ್ನು ಮಾಡು. (ಸ್ಥಾನಂಪರೀಪ್ಸತಾ) ಸ್ಥಾನವೆಂದರೆ ಆವಾಸವು. "ಅಭಿಷಿಚ್ಯ ಚಲಂಕಾಯಾಂ ರಾಕ್ಷಸೇಂದ್ರಂ ವಿಭೀಷಣಂ" ಎಂಬುದಾಗಿ ನಿನ್ನ ತಮ್ಮನಿಗೆ ಇಲ್ಲಿ ಪಟ್ಟವನ್ನು ಕಟ್ಟುವುದೇನೋ ನಿಶ್ಚಯವು. ಹಾಗಿಲ್ಲದೆ ನೀನೇ ಈ ಸ್ಥಾನದಲ್ಲಿ ನೆಲೆಯಾಗಿ ಆಳುತ್ತಿರಬೇಕೆಂದು ಕೋರುವ ಪಕ್ಷದಲ್ಲಿ ರಾಮನನ್ನಾಶ್ರಯಿಸು. (ಸ್ಥಾನಂಪರೀಪ್ಸತಾ) ಸ್ಥಾನವೆಂದರೆ ಸ್ಥಿತಿಯು, ಒಂದೇಕಡೆಯಲ್ಲಿ ನೆಲೆಯಾಗಿರುವುದು. "ಎಲೆ, ರಾವಣಾ! "ತ್ರೀಗ್ಲೋಕಾ ಸಂಪರಿಕ್ರಮ್ಯ" ಎಂಬಂತೆ, ಕಾಕಾಸುರನು ಕಂಡಕಂಡೆಡೆಗಳನ್ನೆಲ್ಲಾ ಸುತ್ತಿ ಕೊನೆಗೂ ಕಾಪಾಡುವವರಿಲ್ಲದೆ ಬಂದುದನ್ನು ಕಾಣೆಯಾ? ನೀನೂ ಆವಸಂಕೆ ಅಲೆಯದೆ ಸುಖವಾಗಿ ಒಂದೇಕಡೆಯಲ್ಲಿ ನೆಲೆಯಾಗಿರಬೇಕಾದರೆ ರಾಮನನ್ನಾಶ್ರಯಿಸು. (ಸ್ಥಾನಂ) ಎಂದರೆ ಸಂಸ್ಥಾನವು. ಚತುರಂಗಬಲರೂಪವಾದ ನಿನ್ನ ಪರಿಕರವೂ, ನೀನೂ ನಾಶಹೊಂದದಿರಬೇಕಾದರೆ ರಾಮನನ್ನಾಶ್ರಯಿಸು, (ಸ್ಥಾನಂ) ಎಂದರೆ ಅಧಿಷ್ಠಾನವು. ನಿನ್ನ ಪ್ರಹಸ್ತಾದಿ ಮಂತ್ರಿವರ್ಗಗಳೂ, ಕುಂಭಕರ್ಣಾದಿಬಂಧುಗಳೂ, ನೀನು ಸಂಪಾದಿಸಿದ ಹಣವೂ, ನಿನ್ನ ಈ ರಾಜಧಾನಿಯೂ, ಇವೆಲ್ಲವೂ ಸೇರಿದ ನಿನ್ನ ರಾಜ್ಯದ ಕಟ್ಟು ನಾಶಹೊಂದದಿರಬೇಕಾದರೆ ರಾಮನನ್ನಾಶ್ರಯಿಸು, "ನನಗೆ ಈ ಸ್ಥಾನಬಲಾದಿಗಳು ಹೋದರೂ ಹೋಗಲಿ! ಎಲ್ಲಿಯಾದರೂ ಬದುಕಿದ್ದರೆ ಸಾಕು!" ಎಂದು ಹೇಳುವೆಯಾ? ಅದಕ್ಕೂ ಸಾಧ್ಯವಲ್ಲ! (ವಧಂಚಾನಿಚ್ಛತಾ) "ರಸಾತಲಂ ಹಿ ಪ್ರವಿಶೇತ್ಪಾತಾಳಂ ಚಾಪಿರಾವಣ। ಪಿತಾಮಹಸಕಾಶಂವಾ ನಮೇ ಜೀವನ್ ಹಿ ಮೋಕ್ಷ್ಯಸೇ" ಎಂಬಂತೆ, ನೀನು ಯಾವ ಲೋಕಕ್ಕೆ ಹೋದರೂ, ಕೊನೆಗೆ ನಿನಗೆ ವರದಾನಮಾಡಿ ಇಷ್ಟುವೃದ್ಧಿಗೆ ತಂದ ಬ್ರಹ್ಮದೇವನ ಬಳಿಗೆ ಹೋದರೂ ನೀನು ಬದುಕಲಾರೆ. "ಎಂದಾದರೂ ಒಮ್ಮೆ ಸಾಯಲೇಬೇಕಲ್ಲವೆ? ಸಾವಿಗಾಗಿ ಚಿಂತೆಯೇಕೆ?" ಎನ್ನುವೆಯಾ? (ವಧಮನಿಚ್ಛತಾ) ಇದು ವ್ಯಾಧಿಪೀಡಿತನಾಗಿ ಸಾಯುವಂತಲ್ಲ! ಇದೊಂದು ದೊಡ್ಡ ಕೊಲೆ! ದುರ್ಮರಣರೂಪವಾದ ಆ ಕೊಲೆಯನ್ನು ನೀನು ತಪ್ಪಿಸಿಕೊಳ್ಳಬೇಕಾದರೆ ರಾಮನನ್ನು ಮರೆಹೋಗು! "ವೀರನಾದವನಿಗೆ ಶತ್ರುವಿನಿಂದಾಗತಕ್ಕ ವಧವು ಮೇಲಾದುದೇ ಅಲ್ಲವೆ?" ಎಂದರೆ, ಅದು ಸಾಮಾನ್ಯ

ಬೇಕೆಂಬ ಆಸೆಯಿದ್ದರೆ, ಶರಣಾಗತವತ್ಸಲನಾದ ಆ ರಾಮನೊಡನೆಯೇ ಸ್ನೇಹವನ್ನು ಮಾಡು! ಅವನಲ್ಲಿ ಮನ್ನಣೆಯನ್ನು ಬೇಡಿ ಅವನನ್ನು ಪ್ರಸನ್ನನಾಗಿ ಮಾಡುವುದಕ್ಕೆ ಪ್ರಯತ್ನಿಸು! ನಾನೂ ನಿನಗಾಗಿ ಅವನನ್ನು ಪ್ರಾರ್ಥಿಸಿಕೊಳ್ಳುವೆನು! ಅವನು ಆಶ್ರಿತವತ್ಸಲನಾದುದರಿಂದ ತಪ್ಪದೆ ನಿನ್ನನ್ನು ಮನ್ನಿಸಿಬಿಡುವನು! ಈಗಲೂ ನೀನು ಅವನಲ್ಲಿ ಮರೆಹೊಕ್ಕು, ಶುದ್ಧವಾದ ಮನಸ್ಸಿನಿಂದ ನನ್ನನ್ನು ಆ ರಾಮನ ಪಾದಕ್ಕೊಪ್ಪಿಸಿಬಿಡು! ಇದರಿಂದ ನಿನಗೆ ಶ್ರೇಯಸ್ಸುಂಟು! ಇದನ್ನು ಬಿಟ್ಟು ನೀನು ಬೇರೆ ಮಾರ್ಗವನ್ನವಲಂಬಿಸಿದರೆ, ಎಂದಿಗೂ

---

ವಧವಲ್ಲ! (ಘೋರಂವಧಮನಿಚ್ಛತಾ) ನಿನಗೆ ಮಹಾಘೋರವಾದ ಚಿತ್ರವಧವುಂಟಾಗಬಾರದೆಂಬ ಆಸೆಯಿದ್ದರೆ ರಾಮನನ್ನಾಶ್ರಯಿಸು! ಅವನು ಕೋಪಗೊಂಡರೆ ನಿನ್ನನ್ನು ಸುಲಭವಾಗಿ ಬಿಡುವವನಲ್ಲ! ನಿನ್ನ ಈ ಹತ್ತುತಲೆಗಳನ್ನೂ ಚಂಡಾಡಿಬಿಡುವನು. "ರಾಮನಿಂದ ಇಷ್ಟುಕ್ರೂರವಾಗಿ ಇದುವರೆಗೆ ವಧಿಸಲ್ಪಟ್ಟವರ್ಯಾರು;" ಎಂದು ಕೇಳುವೆಯಾ? (ತ್ವಯಾ) ಬೇರೊಬ್ಬರಲ್ಲಿಯೂ ಅವನು ಅಷ್ಟು ಕ್ರೌರ್ಯವನ್ನು ತೋರಿಸಿದವನಲ್ಲ! ನೀನು ಮಹಾಪರಾಧವನ್ನು ಮಾಡಿದವನಾದುದರಿಂದ, ನಿನಗೆ ಅವನಿಂದ ಘೋರವಧವಾಗುವುದರಲ್ಲಿ ಸಂದೇಹವೇ ಇಲ್ಲ. ನೀನೊಬ್ಬನು ಮಾತ್ರ ಶರಣಾಗತಿಯನ್ನು ಮಾಡಿಯೇ ನಿನ್ನ ಪ್ರಾಣವನ್ನು ಉಳಿಸಿಕೊಳ್ಳಬೇಕಾಗಿರುವುದು. ಆದರೆ "ಅವನು ಸನ್ನಿಹಿತನಾಗಿದ್ದರಲ್ಲವೇ ಅವನನ್ನಾಶ್ರಯಿಸಬಹುದು" ಎಂದರೆ, (ಅಸೌ) ಇದೋ! ಇಲ್ಲಿಯೇ ಇರುವನು. "ರಾಮಮೇವಾನುಪಶ್ಯತಿ" ಎಂದೂ. "ರಾಮೇತಿರಾಮೇತಿ ಸದೈವಬುದ್ಧ್ಯಾ ವಿಚಿಂತ್ಯ" ಎಂದೂ, ಯಾವಾಗಲೂ ಸೀತೆಯು ಆತನನ್ನೇ ಧ್ಯಾನಿಸುವವಳಾದುದರಿಂದ, ತನಗೆ ಅವನು ನಿತ್ಯಸನ್ನಿಹಿತನೆಂಬುದನ್ನೂ ಸೂಚಿಸುವುದಾಗಿ ಭಾವವು.

"ಆದರೆ ಅವನು ದ್ವೇಷವನ್ನು ಬಿಟ್ಟು, ನನ್ನನ್ನು ಪರಿಗ್ರಹಿಸುವನೆಂಬ ನಂಬಿಕೆಯೇನು" ಎಂದು ಶಂಕಿಸಬೇಡ। ಅವನು ಸಾಮಾನ್ಯನಲ್ಲ! (ಪುರುಷರ್ಷಭಃ) ಪುರುಷಶ್ರೇಷ್ಠನು. "ಅವಿಜ್ಞಾತಾ" ಎಂಬಂತೆ, ಇತರರ ದೋಷವನ್ನೆಣಿಸತಕ್ಕವನಲ್ಲ. "ನಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ" ಎಂಬಂತೆ, ನೂರಾರು ಅಪಕಾರಗಳನ್ನು ಮಾಡಿದರೂ ಅವುಗಳನ್ನು ಮನಸ್ಸಿಗೆ ತಂದುಕೊಳ್ಳುವವನಲ್ಲ. ಅಪರಾಧಾನಭಿಜ್ಞಸ್ಸನ್ ಸದೈವಕುರುತೇ ದಯಾಂ" ಎಂಬುದಾಗಿ ಅಪರಾಧವನ್ನೇ ಕಂಡುಕೊಳ್ಳದವನಂತೆ ಯಾವಾಗಲೂ ದಯೆಯನ್ನು ತೋರಿಸುವವನು. ಹೀಗೆ ಕವಿಗಳಿಂದ ಸ್ತುತಿಸಲ್ಪಟ್ಟ ಮಹಾಪುರುಷಶ್ರೇಷ್ಠನೆಂದು ಭಾವವು. (ಪುರುಷರ್ಷಭಃ) ಇತರರು ಮಾಡಿದ ಅಪರಾಧವನ್ನು ಮನಸ್ಸಿನಲ್ಲಿಯೇ ಇಟ್ಟು, ಹಗೆಯನ್ನು ಸಾಧಿಸುವವನು ಪುರುಷಾಧಮನು. ತತ್ಕಾಲಕ್ಕೆ ಕೋಪವಿದ್ದರೂ ಕಾಲಕ್ರಮದಿಂದ ಮರೆತುಬಿಡುವವನು ಮಧ್ಯಮನು. ಇತರರು ಮಾಡಿದ ಅಪರಾಧವನ್ನು ಮನಸ್ಸಿಗೇ ತಂದುಕೊಳ್ಳದವನು ಉತ್ತಮನು. ಈ ಮೂರುವಿಧದಲ್ಲಿ ಉತ್ತಮಲಕ್ಷಣವುಳ್ಳವನಾದ ಇಂತಹ ಆ ರಾಮನು ಮರೆಹೊಕ್ಕು ಬಂದ ನಿನ್ನನ್ನು ರಕ್ಷಿಸದಿರಲಾರನೆಂದೂ ಸೀತೆಯು ಹಿತೋಪದೇಶದ ಭಾವವು. (ತನಿಶ್ಲೋಕಿ).

ನಿನಗೆ ರಾಮನಿಂದ ವಧವು ತಪ್ಪದು! ಒಂದುವೇಳೆ ಇಂದ್ರನು ಪ್ರಯೋಗಿಸಿದ ವಜ್ರಾಯುಧವಾದರೂ ನಿನ್ನಲ್ಲಿ ತಪ್ಪಿಹೋಗಬಹುದು! ಯಮನ ಕೈಗೆ ಸಿಕ್ಕಿಯಾದರೂ ನೀನು ಬಿಡಿಸಿಕೊಂಡು ಬರಬಹುದು! ಲೋಕನಾಥನಾದ ಆ ರಾಮನು ಮಾತ್ರ ಕುಪಿತನಾದಮೇಲೆ, ನಿನ್ನಂತಹ ದುಷ್ಟಾತ್ಮನನ್ನು ಎಷ್ಟುಮಾತ್ರವೂ, ಕೊಲ್ಲದೆ ಬಿಡನು! ನೀನು ಇನ್ನು ಬಹುಶೀಘ್ರದಲ್ಲಿಯೇ ಇಂದ್ರನಿಂದ ಪ್ರಯೋಗಿಸಲ್ಪಟ್ಟ ವಜ್ರಾಯುಧ ಧ್ವನಿಯಂತಿರುವ ಆ ರಾಮನ ಧನುಷ್ಟಂಕಾರವನ್ನು ಕೇಳಬೇಕಾಗುವುದು. ಎಲೆ ರಾವಣಾ! ಇನ್ನು ಸ್ವಲ್ಪಕಾಲದಲ್ಲಿಯೇ ರಾಮಲಕ್ಷ್ಮಣರ ನಾಮಾಂಕಿತಗಳಾದ ದೃಢವಾದ ಗಿಣ್ಣುಗಳುಳ್ಳ ತೀಕ್ಷ್ಣಬಾಣಗಳು, ಉರಿಯನ್ನು ಕಕ್ಕುವ ಹಾವುಗಳಂತೆ ಈ ಲಂಕೆಯಲ್ಲಿ ಬೀಳುವುವು! ಗರಿಗಳುಳ್ಳ ಆ ಬಾಣಗಳೇ ಈ ಲಂಕೆಯಲ್ಲಿರುವ ಸಮಸ್ತ ರಾಕ್ಷಸರನ್ನೂ ಕೊಂದು, ಈ ಪಟ್ಟಣದಲ್ಲಿ ಎಡೆಬಿಡದೆ ತುಂಬಿಹೋಗುವುವು! ರಾಕ್ಷಸಾ! ರಾಮನೆಂಬ ಆ ಮಹಾಗರುತ್ಮಂತನು, ಇಲ್ಲಿನ ರಾಕ್ಷಸರೆಂಬ ಸರ್ಪಗಳೆಲ್ಲವನ್ನೂ ಗರುಡನು ಹಾವುಗಳನ್ನೆತ್ತುವಂತೆ ವೇಗದಿಂದೆತ್ತುವನೆಂದು ತಿಳಿ! ಪೂರ್ವದಲ್ಲಿ ವಿಷ್ಣುವು ತನ್ನ ಮೂರಡಿಗಳಿಂದಲೇ ರಾಕ್ಷಸರ ಕೈಗೆ ಸೇರಿದ್ದ ತ್ರೈಲೋಕ್ಯಲಕ್ಷ್ಮಿಯನ್ನೂ ಸಾಧಿಸಿ ತಂದಂತೆ, ನನ್ನ ಪತಿಯಾದ ರಾಮನು ಶೀಘ್ರದಲ್ಲಿಯೇ ನನ್ನನ್ನು ಬಿಡಿಸಿಕೊಂಡು ಹೋಗುವುದರಲ್ಲಿ ಸಂದೇಹವಿಲ್ಲ. ಎಲೆ ರಾವಣಾ! ಜನಸ್ಥಾನದಲ್ಲಿ ಅನೇಕರಾಕ್ಷಸಸೈನ್ಯವು ಹತವಾದುದನ್ನು ಕಂಡು, ಆ ಭಯಕ್ಕಾಗಿ ನೀನು ರಾಮನಿಗಿದಿರಾಗಿ ನಿಲ್ಲಲಾರದೆ, ಪುರುಷಸಿಂಹರಾದ ಆ ಅಣ್ಣತಮ್ಮಂದಿರಿಬ್ಬರೂ ಇಲ್ಲದ ಕಾಲದಲ್ಲಿ, ನಮ್ಮಾಶ್ರಮವನ್ನು ಪ್ರವೇಶಿಸಿ, ಕಳ್ಳತನದಿಂದ ನನ್ನನ್ನು ಇಲ್ಲಿಗೆ ತಂದೆಯಲ್ಲವೆ? ಆಗ ರಾಮಲಕ್ಷ್ಮಣರ ವಾಸನೆಯಾದರೂ ನಿನಗೆ ತಿಳಿದಿದ್ದರೆ, ಹೆಬ್ಬುಲಿಯ ವಾಸನೆಯನ್ನು ಕಂಡ ನಾಯಿಯಂತೆ, ನೀನು ಅವರ ಮುಂದೆ ನಿಮಿಷಮಾತ್ರವೂ ನಿಂತಿರಲಾರೆ! ನೀನು ಮೊದಲೇ ದುರ್ಬಲನು! ಇದರ ಮೇಲೆ ಭೀರುಸ್ವಭಾವವುಳ್ಳವನು! ಅಂತಹ ನಿನಗೆ ಆ ರಾಮಲಕ್ಷ್ಮಣರಿಬ್ಬರೊಡನೆಯೂ ಯುದ್ಧವು ಸಂಭವಿಸಿದ್ದ ಪಕ್ಷದಲ್ಲಿ ನಿನಗೆ ಜಯದಾಸೆಯೇನು! ಇಂದ್ರವೃತ್ರರಿಗೆ ಯುದ್ಧವಾದಾಗ ಒಂದೇಕೈಯುಳ್ಳ ವೃತ್ರನನ್ನು ಇಂದ್ರನು ತನ್ನ ಎರಡು ಕೈಗಳ ಬಲದಿಂದ ಕೊಂದು ಹಾಕಿದಂತೆ, ಏಕಾಕಿಯಾದ ನೀನು ಅವರಿಬ್ಬರ ಬಾಣವನ್ನೂ ತಡೆದು ಬದುಕಿರುತ್ತಿದ್ದೆಯಾ? ಎಲೆ ರಾವಣಾ! ನನ್ನ ಪ್ರಾಣನಾಥನಾದ ರಾಮನು ಲಕ್ಷ್ಮಣಸಹಿತನಾಗಿ ಬಂದು, ಸೂರ್ಯನು ತನ್ನ ಕಿರಣಗಳಿಂದ ತೇವವನ್ನೆಳೆಯುವಂತೆ ನಿನ್ನ ಪ್ರಾಣಗಳನ್ನು ಹೀರಿ ಬಿಡುವನು!

ಮುಖ್ಯವಾಗಿ ನಿನಗೆ ಇದು ಶುಭಕಾಲವಲ್ಲ! ನಿನ್ನ ಕಟ್ಟಕಾಲಕ್ಕಾಗಿಯೇ ನನ್ನನ್ನು ನೀನು ಹೀಗೆ ಸೆರೆಯಲ್ಲಿ ಸಿಕ್ಕಿಸಿರುವೆ! ಎಲೆ ರಾಕ್ಷಸಾಧಮನೆ! ಒಂದೇ ತತ್ವವನ್ನು ಹೇಳುವೆನು ಕೇಳು! ನೀನು ರಾಮನ ಬಾಣಕ್ಕೆ ಸಿಕ್ಕಿದ ಮೇಲೆ, ಅದಕ್ಕೆ ಹೆದರಿ ಪಲಾಯಿತನಾಗಿ ಕುಬೇರನ ಕೈಲಾಸಕ್ಕೆ ಹೋದರೂ ಅದಕ್ಕೂ ಮೇಲಿನ ಊರ್ಧ್ವಲೋಕಗಳಿಗೆ ಹೋದರೂ, ಪಾತಾಳದಲ್ಲಿ ವರುಣನ ಸಭೆಯನ್ನು ಹೊಕ್ಕರೂ, ಅದಕ್ಕಿಂತಲೂ ಕೆಳಗಿನ ಲೋಕಗಳಲ್ಲಿ ಹುದುಗಿಕೊಂಡರೂ, ಬೇರೆ ಇನ್ನೆಲ್ಲಿಗೆ ಹೋದರೂ ತಪ್ಪಿಸಿಕೊಳ್ಳಲಾರೆ. ಇದು ನಿಜವು! ಎಷ್ಟುದೊಡ್ಡ ಮರವಾದರೇನು? ಸಿಡಿಲಿಗೆ ಸಿಕ್ಕಿದಮೇಲೆ ಬದುಕಬಲ್ಲುದೆ? ಅದರಂತೆ ಆ ರಾಮನ ಬಾಣಕ್ಕೆ ಸಿಕ್ಕಿದಮೇಲೆ ನಿನಗೆ ಇನ್ನೆಲ್ಲಿಯೂ ಉಳಿಗಾಲವಿಲ್ಲ!'' ಎಂದಳು. ೧

ಇಲ್ಲಿಗೆ ಇಪ್ಪತ್ತೊಂದನೆಯ ಸರ್ಗವು.

---

1. ರಾವಣನು ಸೀತೆಯನ್ನು ಕುರಿತು ಹೇಳಿದ ಮಾತುಗಳೆಲ್ಲವೂ ಹೊರಕ್ಕೆ ಪರುಷವಾಕ್ಯಗಳಂತೆ ತೋರಿಬಂದರೂ, ತತ್ವದೃಷ್ಟಿಯಿಂದ ವಿಚಾರಿಸುವಾಗ ಭಕ್ತಿಪ್ರಚುರಗಳಾಗಿ ಸೌಮ್ಯಗಳಾಗಿಯೇ ಇರುವುವೆಂದು ಹೇಳಲ್ಪಟ್ಟಿರುವುವಷ್ಟೆ? ಹಾಗೆ ಅವು ಸೌಮ್ಯಗಳಾಗಿದ್ದರೆ, ಸರ್ವಜ್ಞಳಾದ ಸೀತೆಯು ಕ್ರೂರವಾದ ಪ್ರತ್ಯುತ್ತರವನ್ನು ಕೊಟ್ಟುದೇಕೆ? ಎಂದರೆ, ಸೀತೆಯೂ ರಾವಣನು ಹೇಳಿದ ವಾಕ್ಯಗಳ ತತ್ವಾರ್ಥವನ್ನು ಮರೆಸಿಟ್ಟು ಬಾಹ್ಯದೃಷ್ಟಿಯನ್ನೇ ಅನುಸರಿಸಿ ಪರುಷವಾಕ್ಯಗಳಿಂದ ಪ್ರತ್ಯುತ್ತರವನ್ನು ಹೇಳುವುದಾಗಿ ಗ್ರಹಿಸಬೇಕೆಂದು ಮಹೇಶ್ವರತೀರ್ಥರ ಸಮಾಧಾನವು. ಆದರೆ ಈ ಘಟ್ಟಗಳಲ್ಲಿ ತಿಲಕವ್ಯಾಖ್ಯಾನಕಾರರು ಇದನ್ನಂಗೀಕರಿಸಿಲ್ಲ. ಮಹೇಶ್ವರತೀರ್ಥರು ತತ್ವದೃಷ್ಟಿಯನ್ನು ಹಿಡಿದು ಅರ್ಥಭೇದವನ್ನು ಕಲ್ಪಿಸಿರುವುದು ಕೇವಲಭ್ರಾಂತಿಯೆಂದೂ, ತಮೋಗುಣಾವೇಶವನ್ನುಹೊಂದಿ ಭಗವನ್ಮಾಯೆಯಿಂದ ಮೋಹಿತನಾದ ರಾಕ್ಷಸನಿಗೆ ಅಕೃತ್ಯಗಳಲ್ಲಿಯೇ ಬುದ್ಧಿಯು ಪ್ರವರ್ತಿಸುವುದು ಸಹಜವೆಂದೂ ಹೇಳಿರುವರು.

ರಾವಣನು ಸೀತೆಯ ಮಾತನ್ನು ಕೇಳಿ ಕೋಪಗೊಂಡು, ಅವಳಿಗೆ ಎರಡು ತಿಂಗಳ ಅವಧಿಯನ್ನು ಸೂಚಿಸಿ, ಅಷ್ಟರಲ್ಲಿಯೂ ತನ್ನ ದಾರಿಗೆ ಬಾರದಿದ್ದರೆ ಅವಳನ್ನು ಭಕ್ಷಿಸುವುದಾಗಿ ಹೆದರಿಸಿದುದು. ಸೀತೆಯ ಪ್ರತ್ಯುತ್ತರವು. ರಾವಣನು ಸೀತೆಯನ್ನು ವಶೀಕರಿಸುವಂತೆ ಅಲ್ಲಿನ ರಾಕ್ಷಸ ಸ್ತ್ರೀಯರಿಗೆ ನಿಯಮಿಸಿ, ತನ್ನ ಅಂತಃಪುರಕ್ಕೆ ಹಿಂತಿರುಗಿದುದು.

ಪ್ರಿಯದರ್ಶನೆಯಾದ ಸೀತೆಯು ಹೇಳಿದ ಈ ಕ್ರೂರವಾಕ್ಯಗಳನ್ನು ಕೇಳಿ ಪುನಃ ರಾವಣನು ಆಕೆಯನ್ನು ಕುರಿತು "ಎಲೆ ಸೀತೆ! ಲೋಕದಲ್ಲಿ ಪುರುಷನು, ಸ್ತ್ರೀಯರನ್ನು ಲಾಲಿಸುತ್ತಿದ್ದಷ್ಟೂ ಅವರಿಗೆ ವಶ್ಯನಾಗುವನು. ಅವರಿಗೆ ಹಿತವಾಕ್ಯವನ್ನು ಹೇಳಿದಷ್ಟೂ ಅವರಿಂದ ತಿರಸ್ಕೃತನಾಗುವನು. ಇದು ಲೋಕಸ್ವಭಾವವು. ಆದರೇನು? [1] ಸಾರಥಿಯು ದಾರಿತಪ್ಪಿ ಹೋಗುವ ಕುದುರೆಗಳನ್ನು ತಡೆದಿಡುವಂತೆ, ನಿನ್ನಲ್ಲಿ ನನಗುಂಟಾಗಿರುವ ಕಾಮವೇ ನಿನ್ನ ಮೇಲೆ ನನಗೆ ಮಿತಿಮೀರಿ ಹೋಗುತ್ತಿರುವ ಕೋಪವನ್ನು ತಡೆದಿಡುತ್ತಿರುವುದು. ಮನುಷ್ಯನಿಗೆ ಕಾಮವೆಂಬುದು ಬಹಳ ವಿಚಿತ್ರವಾದುದು. ಆ ಕಾಮವು ಯಾರಲ್ಲಿ ಪ್ರವರ್ತಿಸುವುದೋ ಆ ಜನದಲ್ಲಿ ದಯೆಯೂ, ಪ್ರೇಮವೂ ಹುಟ್ಟಿಬಿಡುವುದು. [2] ಈ

---

1. ಇಲ್ಲಿ ಸನ್ನಿಯಚ್ಛತಿ ಮೇ ಕ್ರೋಧಂ ತ್ವಯಿ ಕಾಮಸ್ಸಮುತ್ಥಿತಃ । ದ್ರವತೋ ಮಾರ್ಗಮಾಸಾದ್ಯ ಹಯಾನಿವ ಸುಸಾರಥಿಃ ॥" ಎಂದು ಮೂಲವು. (ತ್ವಯಿ ಸಮುತ್ಥಿತೋ ಮೇ ಕಾಮಃ) ನಿನ್ನಲ್ಲಿ ನನಗೆ ಹುಟ್ಟಿರುವ ಭಕ್ತಿಯು (ಮೇ ಕ್ರೋಧಂ) ರಾಕ್ಷಸಜಾತಿಗೆ ಸಹಜವಾದ ನನ್ನ ಕೋಪವನ್ನು ಎಂದರೆ ಕ್ರೋಧಾದ್ಯರಿಷಡ್ವರ್ಗವನ್ನು (ಸನ್ನಿಯಚ್ಛತಿ) ಅಡಗಿಸುತ್ತಿರುವುದು. ಸಮರ್ಥನಾದ ಸಾರಥಿಯು ದಾರಿತಪ್ಪಿಹೋಗುವ ಕುದುರೆಯನ್ನು ತಡೆಯುವಂತೆ ನಿನ್ನಲ್ಲಿ ನನಗುಂಟಾಗಿರುವ ಭಕ್ತಿಯು, ನನ್ನಲ್ಲಿ ರಾಕ್ಷಸಜಾತಿಗೆ ಸಹಜವಾಗಿರುವ ಕ್ರೋಧಾದ್ಯರಿಷಡ್ವರ್ಗಗಳನ್ನೂ ತಡೆದಿಡುವುದು" ಎಂದು ವಾಸ್ತವಾರ್ಥವು. (ಮ. ತೀ.)

2. ಇಲ್ಲಿ "ಏತಸ್ಮಾತ್ಕಾರಣಾನ್ನತ್ವಾಂ ಘಾತಯಾಮಿ ವರಾನನೇ । ವಧಾರ್ಹಾಮವಮಾನಾರ್ಹಾಂ ಮಿಥ್ಯಾಪ್ರವ್ರಜಿತೇರತಾಮ್" ಎಂದು ಮೂಲವು. ವಾಸ್ತವಾರ್ಥವು. (ಹೇ ವರಾನನೇ! ಪ್ರವ್ರಜಿತೇರತಾಂ ತ್ವಾಂ ಏತಸ್ಮಾತ್ಕಾರಣಾನ್ನ ಘಾತಯೇ!) ನನ್ನನ್ನುದ್ಧರಿಸುವು

ಕಾರಣದಿಂದಲೇ ನಿನ್ನನ್ನು ನಾನು ಕೊಲ್ಲದೆ ಬಿಟ್ಟಿರುವೆನೆಂದು ತಿಳಿ! ನಿನ್ನ ವಿಷಯದಲ್ಲಿ ವಧವಾಗಲಿ, ಮಾನಭಂಗವಾಗಲಿ ಯಾವುದನ್ನು ಮಾಡಿದರೂ ಉಚಿತವಾಗಿಯೇ ಇರುವುದು! ಜನಗಳನ್ನು ಮರುಳುಮಾಡುವುದಕ್ಕಾಗಿ ವಾನಪ್ರಸ್ಥವೇಷವನ್ನು ಹಾಕಿಕೊಂಡಿರುವ ಆ ರಾಮನಲ್ಲಿಯೇ ಇನ್ನೂ ನಿನ್ನ ಮನಸ್ಸು ತಗಲಿರುವುದೆ? ಅವನನ್ನು ನಂಬಿ ನನ್ನನ್ನು ಹೀಗೆ ತಿರಸ್ಕರಿಸುತ್ತಿರುವೆಯಾ? [1] ನಿನ್ನ ಒಂದೊಂದು ಮಾತಿಗೂ, ನಿನ್ನ ಒಂದೊಂದು ಅವಯವವನ್ನು ಕಡಿದು ಆಗಾಗಲೇ ಘೋರವಾದ ಚಿತ್ರವಧವನ್ನು ಮಾಡಬೇಕಾಗಿತ್ತು! ಅದರೂ ನನ್ನ ಕಾಮವೇ ನನ್ನ ಕೋಪವನ್ನು ತಡೆಯುತ್ತಿರುವುದು'' ಎಂದು ಹೇಳಿ, ಆ ರಾವಣನು ಕೋಪದಿಂದ ಕೆರಳಿದ ಕಣ್ಣುಳ್ಳವನಾಗಿ ದುರದುರನೆ ಆ ಸೀತೆಯನ್ನು ನೋಡುತ್ತ, ತಿರುಗಿ ಅವಳನ್ನು ಕುರಿತು ''ಎಲೆ ಸೀತೆ! ನಾನು ನಿನಗೆ ಹಿಂದೆಯೇ ಹನ್ನೆ

---

ಪಕ್ಕಾಗಿಯೇ ವಾನಪ್ರಸ್ಥವೇಷವನ್ನು ಧರಿಸಿ ಹೊರಟುಬಂದಿರುವ ನನ್ನ ಸ್ವಾಮಿಯಾದ ರಾಮನ ಪತ್ನಿಯಾದ ಕಾರಣದಿಂದಲೇ ನಾನು ನಿನ್ನನ್ನು ಇಲ್ಲಿನ ಬೇರೆ ಕ್ರೂರರಾಕ್ಷಸಿಯರಿಂದ ಕೊಲ್ಲಿಸದೆ ಕಾವಲಿಟ್ಟು ರಕ್ಷಿಸುತ್ತಿರುವೆನು. (ವಧಾರ್ಹಾಮವಮಾನಾರ್ಹಾಮಪಿ ಮಿಥ್ಯಾ) ಕೇವಲವಧಕ್ಕೂ ಅವಮಾನಕ್ಕೂ ಅರ್ಹಳಾದ ಸ್ತ್ರೀಯನ್ನಾದರೂ ನಾನು ಕೊಲ್ಲಿಸುವೆನೆಂಬುದು ಸುಳ್ಳು! ಹಾಗಿರುವಾಗ ಲೋಕೇಶ್ವರಿಯಾದ ನಿನ್ನನ್ನು ನಾನು ಅಪಾಯಕ್ಕೀಡು ಮಾಡುವೆನೇ? ಎಂದು ಭಾವವು. (ಮ. ತೀ.)

1. ಇಲ್ಲಿ ''ಪರುಷಾಣೀಹ ವಾಕ್ಯಾನಿ ಯಾನಿಯಾನಿ ಬ್ರವೀಷಿಮಾಮ್ | ತೇಷು ತೇಷುವಧೋಯುಕ್ತಸ್ತವ ಮೈಥಿಲಿದಾರುಣಃ'' ಎಂದು ಮೂಲವು. ವಾಸ್ತವಾರ್ಥವು:—

ಎಲೆ ಸೀತೆ! (ತವಮಾಮ್) ನಿನಗೆ ಸೇರಿದ ನನ್ನನ್ನು ಎಂದರೆ ನಿನ್ನ ಭೃತ್ಯನಾದ ನನ್ನನ್ನು (ಯಾನಿಯಾನಿ ಪರುಷಾಣಿ ವಾಕ್ಯಾನಿಬ್ರವೀಷಿ) ಯಾವಯಾವ ಕ್ರೂರವಾಕ್ಯಗಳನ್ನಾಡುತ್ತಿರುವೆಯೋ (ತೇಷುತೇಷು ಮಮದಾರುಣೋ ವಧೋಯುಕ್ತಃ) ಅಯಾ ಮಾತುಗಳಲ್ಲಿಯೇ ನನಗೆ ವಧವು ಯುಕ್ತವು. ಎಂದರೆ ನಿನ್ನ ಭೃತ್ಯನಾದ ನನ್ನನ್ನು ಕುರಿತು ನೀನು ಇಷ್ಟು ಪರುಷವಾಕ್ಯಗಳನ್ನಾಡಿದೆಯಲ್ಲವೆ? ಆ ಒಂದೊಂದು ಮಾತಿಗೂ ಪ್ರತಿಯಾಗಿ ನನ್ನನ್ನು ಕೊಂದೇ ಬಿಡಬಹುದು'' ಎಂದು ಭಾವವು.

ರಡು ತಿಂಗಳ ಅವಧಿಯನ್ನು ಕೊಟ್ಟಿದ್ದೆನು.[1] ಅದಕ್ಕೆ ಇನ್ನೆರಡು ತಿಂಗಳು ಮಾತ್ರವೇ ಉಳಿದಿರುವುವು. ಅಷ್ಟರಲ್ಲಿ ನೀನು ನನ್ನ ಹಾಸಿಗೆಯನ್ನೇರಲೇಬೇಕು! ಆ ಎರಡು ತಿಂಗಳ ಮೇಲೆಯೂ ನೀನು ನನ್ನನ್ನು ಭರ್ತೃವನ್ನಾಗಿ ಕೈಕೊಳ್ಳದಿದ್ದರೆ ನಿನ್ನನ್ನು ನನ್ನ ತಿಂಗಳೂಟಕ್ಕಾಗಿ ಅಡಿಗೆಯ ಮನೆಗೆ ಸೇರಿಸಿಕೊಳ್ಳುವುದೇ ನಿಜವು!" ಎಂದನು. ಹೀಗೆ ರಾವಣನು ಕ್ರೂರವಾಕ್ಯಗಳಿಂದ ಸೀತೆಯನ್ನು ಹೆದರಿಸುತ್ತಿರಲು, ಅದನ್ನು ನೋಡಿ ಅಲ್ಲಿ ರಾವಣನೊಡನೆ ಬಂದಿದ್ದ ದೇವಗಂಧರ್ವ ಕನ್ನಿಕೆಯರೆಲ್ಲರೂ ದುಃಖಿತರಾಗಿ, ಭಯದಿಂದ ನಡುಗುತ್ತ, ಬಾಷ್ಪಜಲದಿಂದ ಕದಲಿದ ಕಣ್ಣುಳ್ಳವರಾಗಿ ಸೀತೆಯನ್ನು ನೋಡಿ ಮರುಗುತ್ತಿದ್ದರು. ಅವರಲ್ಲಿ ಕೆಲವರು ಮುಖಸಂಜ್ಞೆಯಿಂದಲೂ, ಕೆಲವರು ಕಣ್ಣಿನ ಸಂಜ್ಞೆಯಿಂದಲೂ, ಕೆಲವರು ತುಟಿಯ ಸಂಜ್ಞೆಯಿಂದಲೂ ರಾವಣನಿಗೆ ತಿಳಿಯದಂತೆ ಸೀತೆಯನ್ನು ಸಮಾಧಾನಪಡಿಸಿದರು. ಆಗ ಸೀತೆಯೂ ಧೈರ್ಯಗೆಡದೆ, ತನ್ನ ಪಾತಿವ್ರತ್ಯವೇ ತನಗೆ ಪೂರ್ಣವಾದ ಬಲವೆಂದು ನಂಬಿ ರಾವಣನಿಗೆ ಪ್ರತ್ಯುತ್ತರವನ್ನು ಕೊಡುವಳು. "ರಾವಣಾ! ನಿಜವಾಗಿಯೂ ಇಲ್ಲಿ ನಿನಗೆ ಶ್ರೇಯಃಕಾಂಕ್ಷಿಯಾಗಿ ಹಿತವಾದವನ್ನು ಹೇಳುವವನೊಬ್ಬನೂ ಇಲ್ಲವೆಂದೇ ಎಣಿಸಬೇಕಾಗಿದೆ! ಇಷ್ಟು ನಿಂದಿತವಾದ ಕಾರ್ಯಕ್ಕೆ ಪ್ರವರ್ತಿಸಿರುವ ನಿನ್ನನ್ನು ತಡೆಯುವವನ

---

1. ಇಲ್ಲಿ "ದ್ವೌಮಾಸೌ ರಕ್ಷಿತವ್ಯೌ ಮೇಯೋಽವಧಿಸ್ತೇ ಮಯಾಕೃತಃ। ಊರ್ಧ್ವಂ ದ್ವಾಭ್ಯಾಂತು ಮಾಸಾಭ್ಯಾಂ ಭರ್ತಾರಂಮಾಮನಿಚ್ಛತೀಮ್। ಮಮತ್ವಾಂ ಪ್ರಾತರಾಶಾರ್ಥಮಾರಭನ್ತೇ ಮಹಾನಸೇ" ಎಂದು ಮೂಲವು. ವಾಸ್ತವಾರ್ಥವು. "ಎಲೆ ಸೀತೆ! ನಾನು ಪಡೆದು ಬಂದಿರುವ ಆಯುಃಪ್ರಮಾಣವು ತೀರುವುದಕ್ಕೆ ಇನ್ನೆರಡು ತಿಂಗಳು ಮಾತ್ರವೇ ಕಾಯಬೇಕಾಗಿರುವುದು. ಅಮೇಲೆ ನೀನು ಶ್ರೀರಾಮನೊಡಗೂಡಿ ಸುಖವಾಗಿ ಶಯನಮಾಡಬಹುದು. (ಮಾಮನಿಚ್ಛತೀಂ ಮಾಂಚ ಪ್ರಾಪ್ಸ್ಯಸಿ) ಈಗಲೇ ನನ್ನನ್ನೊಳ್ಳದಿರುವ ನನ್ನ ರಾಜ್ಯಲಕ್ಷ್ಮಿಯನ್ನೂ ಪಡೆಯುವೆ! ಅದಕ್ಕೆ ಮರುದಿನವೇ ನನ್ನ ಅಡಿಗೆಯ ಮನೆಯಲ್ಲಿ ನಿನಗಾಗಿ ಪ್ರಾತರ್ಭೋಜನವನ್ನು ಸಿದ್ಧಪಡಿಸುವುದಕ್ಕೂ ತೊಡಗುವರು" ಎಂದು ಭಾವವು.

ನೊಬ್ಬನೂ ಇಲ್ಲವೆ? [1] ಇಂದ್ರನಿಗೆ ಶಚಿಯಂತೆ ಧರ್ಮಾತ್ಮಕನಾದ ರಾಮನಿಗೆ ಪತ್ನಿಯಾದ ನನ್ನನ್ನು, ಈ ಮೂರು ಲೋಕಗಳಲ್ಲಿಯೂ ನಿನ್ನೊಬ್ಬನ ಹೊರತು ಬೇರೆ ಯಾವನೂ ಮನಸ್ಸಿನಿಂದಲಾದರೂ ಆಶಿಸಲಾರನು! ಮಹಾತೇಜಸ್ವಿಯಾದ ರಾಮನಿಗೆ ನಾನು ಪತ್ನಿಯೆಂಬುದನ್ನು ಕಾಣೆಯಾ? ಈ ಪಾಪವಾರ್ತೆಯನ್ನು ನನ್ನೊಡನೆ ನುಡಿಯುವೆಯಲ್ಲಾ! ಎಲೆ ರಾಕ್ಷಸಾಧಮನೆ! ನೀನು ಇನ್ನೆಲ್ಲಿಗೆ ಹೋದರೆ ತಾನೇ ಈ ಪಾಪದಿಂದ ಬಿಡಿಸಿಕೊಳ್ಳಬಲ್ಲೆ? ಕಾಡಿನಲ್ಲಿ ಮದಿಸಿದ ಒಂದು ಮಹಾಗಜವೂ, ಒಂದು ಸಣ್ಣ ಮೊಲವೂ ಕಲಹಕ್ಕೆ ನಿಂತಹಾಗೆ ಆ ರಾಮನೊಡನೆ ನಿನಗೆ ಹೋರಾಟವೆ? ಆನೆಯ ಮುಂದೆ ಮೊಲವು ನಿಂತಂತೆ ರಾಮನ ಮುಂದೆ ಕ್ಷಣಮಾತ್ರವಾದರೂ ನೀನು ನಿಲ್ಲಬಲ್ಲೆಯಾ? ನಿನಗೆ ಈ ವರ್ಗದ ಮಾತೇಕೆ? ಆಗ ರಾಮಬಾಣಕ್ಕೆ ಹೆದರಿ ಅವನ ಕಣ್ಣಿಗೆ ಬೀಳದಂತೆ ನನ್ನನ್ನು ಕದ್ದುತಂದ ನೀನು, ಈಗ ಇಕ್ಷ್ವಾಕುನಾಥನಾದ ಆತನನ್ನೇ ನಿಂದಿಸುತ್ತಿರುವೆಯಲ್ಲಾ! ನಿನಗೆ ನಾಚಿಕೆಯಿಲ್ಲವೆ? ಇಷ್ಟಕ್ಕೂ ನೀನು ಆ ರಾಮನ ಕಣ್ಣಿಗೆ ಬಿದ್ದವನಲ್ಲ. ಅವನ ಕಣ್ಣಿನಲ್ಲಿ ಬಿದ್ದಿದ್ದರೆ, ಆಗ ಅವನ ಪ್ರಭಾವವು ನಿನಗೆ ಚೆನ್ನಾಗಿ ತಿಳಿಯುತ್ತಿತ್ತು! ಎಲೆ ನೀಚನೆ! ಮಹಾಪತಿವ್ರತೆಯಾದ ನನ್ನನ್ನು ಹೀಗೆ ವಿಕಾರವಾಗಿಯೂ, ಪಿಂಗಳವರ್ಣವಾಗಿಯೂ, ಕರಿಯಾಲೆಯಿಂದ ಭಯಂಕರವಾಗಿಯೂ ಇರುವ ಈ ಕ್ರೂರದೃಷ್ಟಿಗಳಿಂದ ನೋಡುತ್ತಿರುವೆಯಲ್ಲಾ! ನನ್ನನ್ನು ನೋಡುವಾಗಲೇ ಈ ನಿನ್ನ ಕಣ್ಣುಗಳು ಕಿತ್ತುಬೀಳಬಾರದೆ? ಆ ಧರ್ಮಾತ್ಮನಿಗೆ ಪತ್ನಿಯಾಗಿ ದಶರಥರಾಜನಿಗೆ ಸೊಸೆಯಾದ ನನ್ನನ್ನು ಕುರಿತು ಈ ಕ್ರೂರವಾಕ್ಯವನ್ನಾಡುವ ನಿನ್ನ ನಾಲಗೆಯು ಈಗಲೇ ಸೀಳಿಹೋಗಬಾರದೆ! ಎಲೆ ದುರಾತ್ಮಾ! ಮುಖ್ಯವಾಗಿ ನಾನೇ ನಿನ್ನನ್ನು ಈ ಕ್ಷಣವೇ ಸುಟ್ಟು ಬೂದಿ ಮಾಡಬಲ್ಲೆನು! ನಿನ್ನನ್ನು, ಭಸ್ಮಮಾಡಬೇಕಾದುದೇ ಉಚಿತವು! ಆದರೆ ನನಗೆ ರಾಮಾಜ್ಞೆಯಿಲ್ಲದುದರಿಂದಲೂ, ನನ್ನ ತಪಃಫಲವನ್ನು ವ್ಯರ್ಥಮಾಡದೆ ಕಾಪಾಡಬೇಕಾದುದರಿಂದಲೂ, ಈಗ ನಿನ್ನನ್ನು ಭಸ್ಮಮಾಡದೆ ಸುಮ್ಮನಿರುವೆನೆಂದು ತಿಳಿ! ಮಹಾಧೀಮಂತನಾದ ಆ ರಾಮನಿಂದ ನನ್ನನ್ನು ತಪ್ಪಿಸ

---

1. ಇಲ್ಲಿ "ಮಾಂಹಿ ಧರ್ಮಾತ್ಮನಃ ಪತ್ನೀಂ ಶಚೀಮಿವ ಶಚೀಪತೇಃ। ತ್ವದನ್ಯಸ್ತ್ರಿಷುಲೋಕೇಷು ಪ್ರಾರ್ಥಯೇನ್ಮನಸಾಪಿ ಕಃ" ಎಂದು ಮೂಲವು. ವಾಸ್ತವಾರ್ಥವು:— ಸಾಕ್ಷಾನ್ನಾರಾಯಣಪತ್ನಿಯಾದ ನನ್ನನ್ನು ನೀನು ನಿನ್ನ ಪೂರ್ವಜನ್ಮಭಾಗ್ಯವಶದಿಂದ ಹೀಗೆ ಪ್ರತ್ಯಕ್ಷದಲ್ಲಿ ದರ್ಶನಮಾಡುತ್ತಿರುವೆಯೋ ಹೊರತು, ನೀನಲ್ಲದೆ ಬೇರೊಬ್ಬನು ಮನಸ್ಸಿನಿಂದಲಾದರೂ ನನ್ನ ಸ್ವರೂಪವನ್ನರಿಯಲಾರ" ನೆಂದು ಭಾವವು.

ಬೇಕೆಂದರೆ ನಿನಗೆ ಸಾಧ್ಯವೆ? ಎಂದಿಗೂ ಇಲ್ಲ! ಈಗ ನೀನು ನನ್ನನ್ನು ಇಲ್ಲಿಗೆ ತಂದಿದ್ದರೂ ನಿನ್ನ ಸಾವಿಗಾಗಿ ಹೀಗೆ ಇದೊಂದು ವಿಧಿಯು ಏರ್ಪಟ್ಟಿರುವುದೇ ಹೊರತು ಬೇರೆಯಲ್ಲ! ಛೀ ನೀಚನೇ! ನೀನು ನನ್ನ ಮುಂದೆ ನಿಂತು, "ನಾನು ಮಹಾಶೂರನು! ನಾನು ಕುಬೇರನ ತಮ್ಮನು! ನಾನು ಬಲದಲ್ಲಿ ಎಲ್ಲರನ್ನೂ ಮೀರಿದವನು!" ಎಂದು ಹೆಮ್ಮೆಯನ್ನು ಹೇಳಿಕೊಂಡೆಯಲ್ಲವೆ? ಅವೆಲ್ಲವೂ ಹಾಗೆಯೇ ನಿಜವಾಗಿದ್ದರೆ, ಉಪಾಯದಿಂದ ಆ ರಾಮನನ್ನು ದೂರಕ್ಕೆ ಕಳುಹಿಸಿ ಕಳ್ಳತನದಿಂದ ನನ್ನನ್ನು ತಂದುದೇಕೆ?" ಎಂದಳು. ಸೀತೆಯು ಹೇಳಿದ ಈ ಮಾತನ್ನು ಕೇಳಿ ರಾವಣನು ಕ್ರೂರದೃಷ್ಟಿಯಿಂದ ಆಕೆಯನ್ನು ದುರದುರನೆ ನೋಡುತಿದ್ದನು. ಆ ರಾವಣನಾದರೋ ಮೊದಲೇ ರಾಕ್ಷಸನು. ಇದರ ಮೇಲೆ ಕಾಳ ಮೇಘದಂತೆ ಕಪ್ಪಾದ ಮೈ! ಎತ್ತರವಾದ ಹೆಗಲು! ಉಬ್ಬಿದ ಕೊರಲು! ಸಿಂಹ ದಂತೆ ಶಕ್ತಿ! ಸಿಂಹದಂತೆ ನಡೆ! ಮುಖದಲ್ಲಿ ರಾಜಕಳೆ! ಅಗ್ನಿಜ್ವಾಲೆಯಂತೆ ಉರಿಯುವ ಕಣ್ಣುಗಳು! ತಲೆಯಮೇಲೆ ಕೋಪಾವೇಶದಿಂದಲುಗುವ ಕಿರೀಟದಿಂದ ಮತ್ತಷ್ಟು ಉದ್ದವಾಗಿ ಕಾಣುವ ಆಕೃತಿ! ವಿಚಿತ್ರವರ್ಣದ ಪುಷ್ಪಮಾಲಿಕೆ! ಮೈಮೇಲೆ ಬಳಿದ ನಾನಾಬಣ್ಣವುಳ್ಳ ಗಂಧದ ಪಟ್ಟೆ! ಕೊರಲಿಗೆ ಹಾಕಿದ ಕೆಂಪು ಹೂವಿನದಂಡೆ! ಕೆಂಪಾದ ಪಟ್ಟೆಮಡಿಯ ನಡುಬಟ್ಟೆ! ಕೆಂಪಾದ ಅಪ ರಂಜಿ ಚಿನ್ನದ ತೋಳ್ಬಳೆಗಳು! ಅಮೃತಮಥನಕ್ಕಾಗಿ ಮಂದರಪರ್ವತಕ್ಕೆ ಸುತ್ತಿದ ಹಾವಿನಂತೆ ಕಪ್ಪಾದ ದೊಡ್ಡ ನಡುವಿನ ಪಟ್ಟಿ! ಹೀಗೆ ಘೋರವೇಷವುಳ್ಳ ಆ ರಾಕ್ಷಸನು ತುಂಬಿದ ತೋಳುಗಳನ್ನು ನೀಡಿ ನಿಂತಿರುವಾಗ, ಶಿಖರಗಳಿಂದ ಕೂಡಿದ ಮಂದರಪರ್ವತದಂತೆ ತೋರುತಿದ್ದನು. ಬೆಟ್ಟದಮೇಲೆ ಕೆಂಪುಹೂಗ ಳಿಂದಲೂ, ಚಿಗುರುಗಳಿಂದಲೂ ತುಂಬಿ ಬೆಳೆದ ಎರಡು ಅಶೋಕ ವೃಕ್ಷಗಳಂತೆ, ಮಹಾದೇಹವುಳ್ಳ, ಆತನ ಕಿವಿಗಳಲ್ಲಿ ಸೂರ್ಯಸಮಾನಗಳಾದ ಎರಡು ಕುಂಡಲ ಗಳು ಕಾಂತಿಯಿಂದ ಜ್ವಲಿಸುತ್ತಿದ್ದುವು. ಹೀಗೆ ಕಲ್ಪವೃಕ್ಷದಂತೆಯೂ, ಮೂರ್ತಿ ಮಂತನಾದ ವಸಂತನಂತೆಯೂ ಇದ್ದ ರಾವಣನು, ಶ್ಮಶಾನ ದೇವಾಲಯದಂತೆ ಸರ್ವಾಲಂಕಾರಭೂಷಿತನಾಗಿದ್ದರೂ ಭಯಂಕರನಾಗಿದ್ದನು. ಮಹಾಘೋರಸ್ವರೂಪ ವುಳ್ಳ ಆ ರಾಕ್ಷಸನು, ಕೆಂಡದಂತೆ ಕೆಂಪಾದ ಕಣ್ಣುಗಳಿಂದ ಸೀತೆಯನ್ನು ನೋಡಿ ಕೋಪದಿಂದ ಹಾವಿನಂತೆ ಬುಸುಗುಟ್ಟುತ್ತ, ಆ ಸೀತೆಯನ್ನು ಕುರಿತು "ಓಹೋ! ಎಲೆ ಸೀತೆ! 1 ನ್ಯಾಯಹೀನನಾದ, ದರಿದ್ರನಾದ ಆ ರಾಮನಲ್ಲಿಯೇ ನಿನಗೆ ವ್ರತ

1. ಇದು ಅನೇಕ ಕೋಶಗಳಲ್ಲಿಲ್ಲದಿರುವುದರಿಂದ ಇದಕ್ಕೆ ವಾಸ್ತವಾರ್ಥವು ವಿವರಿ ಸಲ್ಪಡಲಿಲ್ಲವೆಂದು ಮಹೇಶ್ವರತೀರ್ಥರು.

ವಲ್ಲವೆ ? ಇರಲಿ ! ಸೂರ್ಯನು ತನ್ನ ತೇಜಸ್ಸಿನಿಂದ ಸಂಧ್ಯಾಕಾಲವನ್ನು ದೂರ ಳಿಸುವಂತೆ ಈಗಲೇ ನಿನ್ನನ್ನು ಧ್ವಂಸಮಾಡುವೆನು.'' ಎಂದು ಹೇಳುತ್ತ ಆ ಕ್ಷಣವೇ ಅಲ್ಲಿ ಕಾವಲಿದ್ದ ಘೋರ ರಾಕ್ಷಸಿಯರ ಕಡೆಗೆ ತಿರುಗಿ "ಎಲೆ ರಾಕ್ಷಸಿಯರೆ! ಇತ್ತ ಬನ್ನಿರಿ'' ಎಂದನು. ಆಗಲೇ ಅವರೆಲ್ಲರೂ, ವೇಗದಿಂದ ಬಂದು ಮುಂದೆ ನಿಂತರು ! ಆ ರಾಕ್ಷಸಿಯರಲ್ಲಿಯೋ ಒಂದು ಕಣ್ಣಿನವಳೊಬ್ಬಳು ! ಒಬ್ಬಳಿಗೆ ಜಲೆಯಮೇಲೆ ಕಿವಿ ! ಒಬ್ಬಳಿಗೆ ಹಸುವಿನ ಕಿವಿ ! ಒಬ್ಬಳಿಗೆ ಆನೆಯ ಕಿವಿ ! ಒಬ್ಬಳಿಗೆ ಜೋಲ್ಗಿವಿ ! ಕಿವಿಯೇ ಇಲ್ಲದವಳೊಬ್ಬಳು ! ಒಬ್ಬಳಿಗೆ ಆನೆಯ ಕಾಲು ! ಒಬ್ಬಳಿಗೆ ಕುದುರೆಯ ಕಾಲು ! ಒಬ್ಬಳಿಗೆ ಹಸುವಿನ ಕಾಲು ! ಕಾಲಿನಲ್ಲಿ ಜುಟ್ಟುಳ್ಳವಳೊಬ್ಬಳು ! ಒಂದೇಕಾಲಿನವಳೊಬ್ಬಳು ! ದೊಡ್ಡ ಕಾಲಿನವಳೊಬ್ಬಳು ! ಕಾಲೇ ಇಲ್ಲದವಳೊಬ್ಬಳು ! ಬಹಳ ದಪ್ಪ ತಲೆಯುಳ್ಳವಳೊಬ್ಬಳು ! ದೊಡ್ಡಕೊರಲುಳ್ಳವಳೊಬ್ಬಳು ! ಒಬ್ಬಳಿಗೆ ಪರ್ವತಾಕಾರದ ಮೊಲೆ ! ಒಬ್ಬಳಿಗೆ ಗುಡಾಣದಂತೆ ಹೊಟ್ಟೆ ! ಗುಹೆಯಂತೆ ದೊಡ್ಡ ಬಾಯಿಯುಳ್ಳವಳೊಬ್ಬಳು ! ಅಗಲವಾದ ಕಣ್ಣುಳ್ಳವಳೊಬ್ಬಳು ! ಉದ್ದವಾದ ನಾಲಗೆಯವಳೊಬ್ಬಳು ! ನಾಲಗೆಯೇ ಇಲ್ಲದವಳೊಬ್ಬಳು ! ಮೂಗಿಲ್ಲದವಳೊಬ್ಬಳು ! ಹಾಗೆಯೇ ಹಂದಿ, ಹಸು ಮುಂತಾದ ಮೃಗಗಳ ಮುಖವನ್ನು ಹೋಲುವ ಮೂತಿಯುಳ್ಳವರು ಕೆಲವರು ! ಇವರೆಲ್ಲರೂ ರಾವಣನಮುಂದೆ ನಿಲ್ಲಲು, ಅವರನ್ನು ನೋಡಿ ರಾವಣನು "ಎಲೆ ರಾಕ್ಷಸಿಯರೆ ! ನೀವೆಲ್ಲರೂ ಸೇರಿ ಈ ಸೀತೆಯು ಶೀಘ್ರದಲ್ಲಿಯೇ ನನ್ನ ಸ್ವವಶವಾಗುವಂತೆ ಮಾಡಬೇಕು. ನಯದಿಂದಲೋ, ಭಯದಿಂದಲೋ, ವಿರೋಧಾಚರಣೆಯಿಂದಲೋ, ದಾನೋಪಾಯದಿಂದಲೋ, ಬೇರೆ ಯಾವ ಉಪಾಯಗಳಿಂದಲೋ ಆ ಸೀತೆಯನ್ನು ವಶಪಡಿಸಬೇಕು'' ಎಂದು ಬಾರಿಬಾರಿಗೂ ಒತ್ತಿ ಹೇಳಿ ಕ್ರೂರಶಾಸನವನ್ನು ಮಾಡಿದನು. ಹೀಗೆ ಹೇಳುತ್ತಿರುವಾಗಲೇ ಅವನ ಕಾಮವೂ, ಅವನ ಕೋಪವೂ ಮೇಲೆ ಮೇಲೆ ಉಕ್ಕಿ ಹೋಯಿತು. ಅದರಿಂದ ಮೈಥಿಲಿಯಕಡೆ ಆ ರಾಕ್ಷಸನು ಸೀತೆಯ ಕಡೆಗೆ ನುಗ್ಗಿದನು. ಇಷ್ಟರಲ್ಲಿ [1] ಧಾನ್ಯಮಾಲಿನಿಯೆಂಬ

1. ಇಲ್ಲಿ ಧಾನ್ಯಮಾಲಿನಿಯನ್ನು ಮಾತ್ರಹೇಳಿದ್ದರೂ, ಮುಂದೆ ಹನುಮಂತನು ತಾನು ಲಂಕೆಗೆ ಹೋಗಿಬಂದ ವೃತ್ತಾಂತಗಳನ್ನು ಅಂಗದಾದಿಗಳಿಗೆ ತಿಳಿಸುವಾಗ, ಮಂಡೋದರಿಯೂ ರಾವಣನನ್ನು ತಡೆದುದಾಗಿ ಹೇಳಿರುವುದರಿಂದ, ಇಲ್ಲಿ ಮಂಡೋದರಿಯನ್ನೂ ಗ್ರಹಿಸಬೇಕು.

ರಾಕ್ಷಸಿಯೊಬ್ಬಳು ಥಟ್ಟನೆ ಮುಂದೆ ಬಂದು ರಾವಣನನ್ನು ತಡೆದು, ಅವನನ್ನು ಬಿಗಿಯಾಗಿ ಅಪ್ಪಿಕೊಂಡು “ಎಲೈ ಮಹಾರಾಜನೆ! ಇದೇನು? ಇಷ್ಟು ಕೋಪವೇಕೆ? ನಿನಗೆ ಈ ಸೀತೆಯಿಂದೇನು? ನನ್ನೊಡನೆ ಕ್ರೀಡಿಸು! ರಾಕ್ಷಸ ಚಕ್ರವರ್ತಿಯೆನಿಸಿಕೊಂಡಿರುವ ನಿನಗೆ ಕೇವಲ ಮನುಷ್ಯಸ್ತ್ರೀಯಾಗಿ, ಅದರಲ್ಲಿಯೂ ಈಗ ಬಣ್ಣಗೆಟ್ಟು, ಕಂದಿ, ಕುಂದಿ, ಕೃಶಳಾಗಿರುವ ಈಕೆಯಲ್ಲಿ ಹೇಗೆ ಪ್ರೀತಿಯುಂಟಾಯಿತು? ಎಲೈ ರಾಜಾಧಿರಾಜನೆ! ನಿನ್ನ ಭುಜಬಲದಿಂದ ಆರ್ಜಿತಗಳಾದ ಸರ್ವೋತ್ತಮ ಭೋಗಗಳನ್ನನುಭವಿಸುವುದಕ್ಕೆ ಬ್ರಹ್ಮನು ಈಕೆಯ ಹಣೆಯಲ್ಲಿಯೇ ಬರೆದಿಲ್ಲ. ಹೀಗಿರುವಾಗ ನೀನೇನು ಮಾಡುವೆ? ಇದಲ್ಲದೆ ಕಾಮವಿಲ್ಲದವಳೊಡನೆ ಕಾಮಿಸುವುದರಿಂದ ದೇಹಕ್ಕೆ ಸಂಕಟವೇ ಹೊರತು ಸುಖವಿಲ್ಲ! ತಾನಾಗಿ ಇಷ್ಟಪಟ್ಟು ಕಾಮಿಸಿ ಬಂದವಳನ್ನು ಆದರಿಸುವುದರಿಂದ ಸಂತೋಷವೂ ಹೆಚ್ಚು! ಅವಳಲ್ಲಿ ಮೋಹವನ್ನು ಬಿಟ್ಟು ನನ್ನೊಡನೆ ಕ್ರೀಡಿಸು” ಎಂದು ಹೇಳಿ ಅವನನ್ನು ತಡೆದು ನಿಲ್ಲಿಸಿದಳು. ಇದನ್ನು ಕೇಳಿ ರಾವಣನು ಪರಮಾನಂದಭರಿತನಾಗಿ ನಗುತ್ತಾ, ಆಗಲೇ ಅಲ್ಲಿಂದ ಹಿಂತಿರುಗಿ ನೆಲವನ್ನೇ ನಡುಗಿಸುವಂತೆ ಕಾಲಿಡುತ್ತಾ ಅಲ್ಲಿಂದ ಹೊರಟು, ಸೂರ್ಯನಂತೆ ಜ್ವಲಿಸುವ ತನ್ನ ಅಂತಃಪುರವನ್ನು ಪ್ರವೇಶಿಸಿದನು. ಅವನೊಡನೆ ಬಂದಿದ್ದ ದೇವಗಂಧರ್ವ ನಾಗಕನ್ಯೆಯರೆಲ್ಲರೂ ಆ ರಾವಣನನ್ನೇ ಹಿಂಬಾಲಿಸಿ ಹೊರಟುಹೋದರು. ಪಾತಿವ್ರತ್ಯಧರ್ಮದಲ್ಲಿಯೇ ನಿರತಳಾಗಿ, ದೃಢವಾದ ಮನಸ್ಸನ್ನು ಹಿಡಿದು ಭಯದಿಂದ ನಡುಗುತ್ತಿದ್ದ ಸೀತೆಯನ್ನು, ಹೀಗೆ ಕ್ರೂರನಾದ ರಾವಣನು ನಾನಾವಿಧದಲ್ಲಿ ಹೆದರಿಸಿ, ಕೊನೆಗೆ ಆಕೆಯನ್ನು ಬಿಟ್ಟು ಕಾಮಮೋಹಿತನಾಗಿ ತನ್ನ ಅಂತಃಪುರವನ್ನು ಪ್ರವೇಶಿಸಿದನು.

ಇಲ್ಲಿಗೆ ಇಪ್ಪತ್ತೆರಡನೆಯ ಸರ್ಗವು.

---

### [1]ರಾವಣನು ಅತ್ತಲಾಗಿ ಹೋದಮೇಲೆ ಇತ್ತಲಾಗಿ ರಾಕ್ಷಸಸ್ತ್ರೀಯರು ಸೀತೆಯನ್ನು ಹೆದರಿಸಿದುದು.

ಹೀಗೆ ರಾವಣನು ಸೀತೆಯನ್ನು ಹೆದರಿಸಿ ಅವಳನ್ನು ವಶಪಡಿಸುವಂತೆ ರಾಕ್ಷಸಸ್ತ್ರೀಯರಿಗೆ ಆಜ್ಞಾಪಿಸಿ ಹೊರಟುಬಂದನು. ಇತ್ತಲಾಗಿ ಇವನು ಅಂತಃಪುರವನ್ನು ಪ್ರವೇಶಿಸಿದಮೇಲೆ, ಅತ್ತಲಾಗಿ ಘೋರರೂಪವುಳ್ಳ ರಾಕ್ಷಸಿಯರೆಲ್ಲರೂ ಸೀತೆಯನ್ನು ಮುತ್ತಿನಿಂತರು. ಅವರಲ್ಲಿ ಒಬ್ಬೊಬ್ಬರೂ ಕೋಪವನ್ನು ತೋರಿಸುತ್ತ ಬಹಳ ಪೌರುಷವಾಕ್ಯಗಳಿಂದ ಆಕೆಯನ್ನು ಕುರಿತು "ಎಲೆ ಸೀತೆ! ಬಹಳ ಚೆನ್ನಾಯಿತು! ಆ ರಾವಣನನ್ನು ಯಾರೆಂದು ಬಲ್ಲೆ? ಪುಲಸ್ತ್ಯವಂಶದಲ್ಲಿ ಹುಟ್ಟಿದವನು! ಸಮಸ್ತ ವಿಷಯದಲ್ಲಿಯೂ ಎಲ್ಲರಿಗಿಂತಲೂ ಮೇಲಾದವನು! ಮಹಾತ್ಮನು! ಹತ್ತುತಲೆಯಿಂದ ಖ್ಯಾತಿಹೊಂದಿದವನು! ಅಂತವನಿಗೆ ಭಾರ್ಯೆಯಾಗಿರುವುದಕ್ಕೂ ನಿನಗೆ ಇಷ್ಟವಿಲ್ಲದೆ ಹೋಯಿತೆ?" ಎಂದು ಒಬ್ಬೊಬ್ಬರೂ ಆ ಸೀತೆಯನ್ನು ಹೀಗಳೆಯುವುದಕ್ಕೆ ತೊಡಗಿದರು. ಆಮೇಲೆ ಏಕಜಟೆಯೆಂಬ ರಾಕ್ಷಸಿಯೊಬ್ಬಳು ಕೋಪದಿಂದ ಕೆಂಪೇರಿದ ಕಣ್ಣುಳ್ಳವಳಾಗಿ ಸೀತೆಯಮುಂದೆ ನಿಂತು "ಎಲೆ ಸೀತೆ! ರಾವಣನ ಮಹಿಮೆಯನ್ನು ನೀನು ಕಾಣೆಯೋ? ಮರೀಚಿಮೊದಲಾದ ಆರುಮಂದಿ ಪ್ರಜಾಪತಿಗಳಲ್ಲಿ ನಾಲ್ಕನೆಯವನು ಪುಲಸ್ತ್ಯನೆಂಬವನು. ಅವನು ಬ್ರಹ್ಮನಿಗೆ ಮಾನಸಪುತ್ರನು. ಆ ಪುಲಸ್ತ್ಯನಿಗೂ ಮಾನಸಪುತ್ರನಾದ ಒಬ್ಬ ಮಹರ್ಷಿಯುಂಟು. ಅವನಿಗೆ ವಿಶ್ರವಸ್ಸೆಂದು ಹೆಸರು. ಅವನೋ ಮಹಾಪ್ರಭಾವವುಳ್ಳವನು. ಬ್ರಹ್ಮನಿಗೆ ಸಮಾನವಾದ ತೇಜಸ್ಸುಳ್ಳವನು. ಅವನ ಮಗನೇ ಈ ರಾವಣನೆಂದು ತಿಳಿ! ಶತ್ರುಗಳನ್ನು ಗೋಳಾಡಿಸತಕ್ಕ ಮಹಾವೀರ್ಯವುಳ್ಳ ಇವನೇ ರಾಕ್ಷಸರಿಗೆಲ್ಲಾ ಚಕ್ರವರ್ತಿಯು. ಇವನಿಗೂ ನೀನು ಪತ್ನಿಯಾಗಿರಕೊಲ್ಲೆಯಾ? ಎಲೆ ವಿಶಾಲಾಕ್ಷಿ! ಈಗಲೂ ನನ್ನಮಾತನ್ನು ಕೇಳು! ನಿನ್ನ ಹಿತಕ್ಕಾಗಿ ಹೇಳುವೆನು. ಈ ಹಿತವಾದನ್ನು ನೀನು ತಿರಸ್ಕರಿಸಬೇಡ. ಹೀಗೇಕೆ ಹಟಮಾಡುವೆ?" ಎಂದಳು. ಆಮೇಲೆ ಬೆಕ್ಕಿನ ಕಣ್ಣಿನಂತೆ ಕಣ್ಣುಳ್ಳ ಹರಿಜಟೆಯೆಂಬ ಬೇರೊಬ್ಬರಾಕ್ಷಸಿಯು ಸೀತೆಯ ಮುಂದೆ ನಿಂತು, ಕೋಪದಿಂದ ಕಣ್ಣುಗಳನ್ನು ತಿರುಗಿಸುತ್ತ "ಎಲೆ ಸೀತೆಯೇ! ಯಾವನಿಂದ ಮೂವತ್ತುಮೂರು

---

1. ಇದು ಮೊದಲಾಗಿ ಎರಡು ಸರ್ಗಗಳಲ್ಲಿ ಅಲ್ಲಲ್ಲಿ ಬರುವ "ಭಾರ್ಯೆ" ಯೆಂಬ ಶಬ್ದಕ್ಕೆ ಶುಶ್ರೂಷಾದಿಸೇವೆಯಿಂದ ಭರಿಸುವುದಕ್ಕೆ ಯೋಗ್ಯಳೆಂದೂ, "ಭರ್ತೃ" ನೆಂಬ ಶಬ್ದಕ್ಕೆ ಸೇವೆಮಾಡಿ ಪೋಷಿಸತಕ್ಕವನೆಂದೂ ಅರ್ಥಮಾಡಿ ವಾಸ್ತವಾರ್ಥವನ್ನು ಗ್ರಹಿಸಬೇಕು. (ಮು. ತೀ.)

ಕೋಟಿ ದೇವತೆಗಳೂ, ಅವರೆಲ್ಲರಿಗೂ ಪ್ರಭುವಾದ ದೇವೇಂದ್ರನೂ ಪರಾಜಿತರಾದರೋ ಅಂತಹ ರಾಕ್ಷಸಚಕ್ರವರ್ತಿಗೂ ನೀನು ಭಾರ್ಯೆಯಾಗಿರಲೊಲ್ಲೆಯಾ? ಬಹಳ ಚೆನ್ನಾಯಿತು" ಎಂದಳು. ಆ ಮೇಲೆ ಪ್ರಘಸೆಯೆಂಬ ಬೇರೊಬ್ಬ ರಾಕ್ಷಸಿಯು ಕೋಪದಿಂದ ಮುಂದೆ ಬಂದು, ಪರುಷವಾಕ್ಯಗಳಿಂದ ಆ ಸೀತೆಯನ್ನು ಹೆದರಿಸುತ್ತ "ಎಲೆ ಹುಚ್ಚಳೆ! ಈ ರಾವಣನನ್ನು ನೀನೇನೆಂದು ಬಲ್ಲೆ? ವೀರ್ಯದಿಂದ ಕೊಬ್ಬಿದವನು, ಮಹಾಶೂರನು, ಯಾವ ಯುದ್ಧಗಳಲ್ಲಿಯೂ ಹಿಂತಿರುಗುವವನಲ್ಲ! ಬಹಳ ಬಲಾಢ್ಯನು. ಅಂತಹ ಮಹಾವೀರನಿಗೆ ಭಾರ್ಯೆಯಾಗಿರುವ ಭಾಗ್ಯವನ್ನು ನೀನೇಕೆ ಪಡೆಯಲಿಲ್ಲ? ನಮ್ಮ ರಾಕ್ಷಸೇಂದ್ರನು ತನಗೆ ಪತ್ನಿಯರಿಲ್ಲದುದಕ್ಕಾಗಿ ನಿನ್ನಲ್ಲಿಗೆ ಬಂದು ಬೇಡುವನೆಂದೆಣಿಸುವೆಯೋ? ಹಾಗೆಣಿಸಬೇಡ. ಇವನಿಗೆ ಎಷ್ಟೋ ಪತ್ನಿಯರುಂಟು. ಅದರಲ್ಲಿಯೂ, ಅವನಿಗೆ ಪರಮಪ್ರೀತಿಪಾತ್ರಳಾಗಿಯೂ, ಗೌರವವುಳ್ಳವಳಾಗಿಯೂ, ಮಹಾಭಾಗಿನಿಯಾಗಿಯೂ ಇರುವ ಮಂಡೋದರಿಯೆಂಬ ಪಟ್ಟಮಹಿಷಿಯೊಬ್ಬಳುಂಟು. ಅವಳನ್ನೂ ಅನಾದರಿಸಿ ರಾವಣನು ನಿನ್ನನ್ನೇ ಹೆಚ್ಚಾಗಿ ಪ್ರೀತಿಸಿಬಂದನು. ನೀನು ಮಾತ್ರ ಅವನ ಇಷ್ಟವನ್ನನುಸರಿಸಿ ನಡೆದಿದ್ದರೆ, ಅವನು ಸಾವಿರಾರು ಸ್ತ್ರೀಯರಿಂದ ತುಂಬಿ, ನಾನಾರತ್ನಗಳಿಂದ ಶೋಭಿತವಾದ ತನ್ನ ಅಂತಃಪುರವನ್ನೆಲ್ಲಾ ಬಿಟ್ಟು ನಿನ್ನನ್ನೇ ಸೇರುತಿದ್ದನು" ಎಂದಳು. ಆ ಮೇಲೆ ವಿಕಟೆಯೆಂಬ ಬೇರೆ ರಾಕ್ಷಸಿಯು ಮುಂದೆ ಬಂದು "ಎಲೈ! ಯಾವನೊಡನೆ ದೇವತೆಗಳು ಯುದ್ಧಮಾಡುವಾಗ, ಅನೇಕ ದೇವದಾನವಗಂಧರ್ವರು ಎಷ್ಟೋ ಆವರ್ತಿ ಪರಾಜಿತರಾಗಿ ಓಡಿಹೋದರೋ, ಅಂತಹ ಬಲಾಢ್ಯನಾದ ರಾವಣನು ತಾನಾಗಿಯೇ ನಿನ್ನನ್ನು ಪ್ರೀತಿಸಿಬಂದನಲ್ಲಾ! ಎಲೆ ಹುಚ್ಚಳೆ? ಹೀಗೆ ಸಮಸ್ತಭಾಗ್ಯಸಂಪನ್ನನಾಗಿ, ಮಹಾತ್ಮನಾಗಿ, ರಾಕ್ಷಸೇಂದ್ರನೆನಿಸಿಕೊಂಡ ಆ ರಾವಣನಿಗೆ ಭಾರ್ಯೆಯಾಗಿರುವುದಕ್ಕೂ ನಿನಗೆ ಮನಸ್ಸಿಲ್ಲವೆ?" ಎಂದಳು ಆ ಮೇಲೆ ದುರ್ಮುಖಿಯೆಂಬ ರಾಕ್ಷಸಿಯೊಬ್ಬಳು "ಎಲೆ ಸೀತೆ! ಯಾವನಿಗಾಗಿ ಸೂರ್ಯನೂ ಭಯಪಟ್ಟು ತನ್ನ ತಾಪವನ್ನು ಉಡುಗಿಸಿಕೊಳ್ಳುವನೋ. ವಾಯುವೂ ಯಾವನಿಗೆ ಭಯಪಟ್ಟು ಅವನಿದ್ದ ಕಡೆಯಲ್ಲಿ ಬಿರುಸಾಗಿ ಬೀಸಲಾರನೋ, ಅಂತಹ ರಾವಣನ ಬಳಿಯಲ್ಲಿರುವುದಕ್ಕೂ ನೀನೊಲ್ಲೆಯಾ? ಎಲೆ ಸುಭ್ರು! ಯಾವನ ಭಯಕ್ಕಾಗಿ ವೃಕ್ಷಗಳೂ ಪುಷ್ಪವರ್ಷವನ್ನು ಕರೆಯುವುವೋ, ಕೋರಿದಾಗ ಪರ್ವತಗಳೂ, ಮೇಘಗಳೂ, ಭಯಪಟ್ಟು ನೀರನ್ನು ಸುರಿಸುವುವೋ, ಅಂತಹ ರಾಜರಾಜನಾದ ರಾಕ್ಷಸೇಶ್ವರನಿಗೆ ಭಾರ್ಯೆಯಾಗಿರುವುದಕ್ಕೂ ನಿನಗೆ ಬುದ್ಧಿಯು ಹುಟ್ಟಲಿಲ್ಲವೆ?

ಎಲೆ ದೇವಿ! ನಿನಗೆ ನಾವು ಯಥಾರ್ಥವಾದ ಸಂಗತಿಗಳನ್ನು ಚೆನ್ನಾಗಿ ತಿಳಿಸಿಬಿಟ್ಟೆವು. ಈಗಲೂ ನೀನು ನಮ್ಮ ಮಾತಿನಂತೆ ನಡೆಸು! ಹಾಗಿಲ್ಲದಿದ್ದರೆ ನಿನ್ನ ಪ್ರಾಣಗಳುಳಿಯುವುದೇ ಕಷ್ಟವು'' ಎಂದಳು.

ಇಲ್ಲಿಗೆ ಇಪ್ಪತ್ತುಮೂರನೆಯ ಸರ್ಗವು.

---

ರಾಕ್ಷಸಸ್ತ್ರೀಯರು ತಿರುಗಿ ಸೀತೆಯನ್ನು ನಿರ್ಬಂಧಿಸಿದುದು. ಸೀತೆಯ ರೋದನವು.

ಘೋರರೂಪವುಳ್ಳ ಆ ಕ್ರೂರರಾಕ್ಷಸಿಯರು, ತಿರುಗಿತಿರುಗಿ ಒಬ್ಬೊಬ್ಬರಾಗಿ ಕ್ರೂರವಾಕ್ಯದಿಂದ ಅವಳನ್ನು ನಿರ್ಬಂಧಿಸತ್ತೊಡಗಿದರು. ಅವರೆಲ್ಲರೂ ಸೀತೆಯನ್ನು ಮುತ್ತಿ ನಿಂತು, "ಎಲೆ ಸೀತೆ! ಉತ್ತಮವಾದ ಶಯನಾಸನಗಳಿಂದ ಸಮಸ್ತಪ್ರಾಣಿಗಳ ಮನಸ್ಸನ್ನೂ ಆಕರ್ಷಿಸುವ ರಾವಣನ ಅಂತಃಪುರದಲ್ಲಿಯೂ ನಿನಗೆ ವಾಸವು ರುಚಿಸದೆ ಹೋಯಿತೆ? [1] ನೀನು ಮನುಷ್ಯಸ್ತ್ರೀಯಾದ ಮಾತ್ರಕ್ಕೆ ಸಾಯುವವರೆಗೂ ಮನುಷ್ಯನಿಗೇ ಹೆಂಡತಿಯಾಗಿರಬೇಕೆಂದೆಣಿಸುವೆಯಾ? ಆ ರಾಮನಲ್ಲಿ ಮನಸ್ಸನ್ನು ಬಿಟ್ಟುಬಿಡು! ಇನ್ನು ಮೇಲೆ ನೀನು ರಾಮನ ಮುಖವನ್ನು ನೋಡುವುದೆಂದರೇನು? ನಮ್ಮ

---

1. ಇಲ್ಲಿ "ಮಾನುಷೀ ಮಾನುಷಸ್ಯೈವ ಭಾರ್ಯಾತ್ವಂ ಬಹುಮನ್ಯಸೇ। ಪ್ರತ್ಯಾಹರ ಮನೋರಾಮಾನ್ನ ತ್ವಂ ಜಾತುಭವಿಷ್ಯಸಿ'' ಎಂದು ಮೂಲವು. "ತ್ವಂಮಾನುಷೀ'' ನೀನು ಮನುಷ್ಯಸ್ತ್ರೀಯಾಗಿ ಅವತರಿಸಿರುವುದರಿಂದಲೇ (ಮಾನುಷಸ್ಯ ಭಾರ್ಯಾತ್ವಂಬಹುಮನ್ಯಸೇ) ಮನುಷ್ಯಭಾರ್ಯತ್ವವನ್ನೇ ಆದರಿಸುತ್ತಿರುವೆ!'' ಎಂದರೆ "ರಾಘವತ್ವೇಭವತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ'' ಇತ್ಯಾದಿಪ್ರಕಾರದಿಂದ ಭಗವಂತನಿಗೆ ನಿತ್ಯಾನಪಾಯಿನಿಯಾದ ನೀನು ಅವನ ಅವತಾರಭೇದಗಳಿಗೆ ತಕ್ಕರೂಪವನ್ನೇ ಹೊಂದಿ ಆಯಾಕಾಲಗಳಿಗನುಸಾರವಾಗಿ ನಾರಾಯಣನನ್ನು ಸೇವಿಸುತ್ತಿರುವೆಯೆಂದು ಭಾವವು. ಆದುದರಿಂದ (ರಾಮಾತ್ ಮನಃ ನಪ್ರತ್ಯಾಹರ) ರಾಮವಿಷಯಕವಾದ ಮನಸ್ಸನ್ನು ಹಿಂತಿರುಗಿಸಬೇಡ! (ತ್ವಂ ಜಾತುಭವಿಷ್ಯಸಿ) ತಿರುಗಿ ನೀನು ರಾಮನನ್ನೇ ಸೇರುವೆ'' ಎಂದರೆ ವಿಷ್ಣುಭಾರ್ಯೆಯಾಗಿ ಲಕ್ಷ್ಮೀಸ್ವರೂಪೆಯಾದ ನೀನು ಮನುಷ್ಯಾವತಾರವನ್ನೆತ್ತಿರುವ ರಾಮನಿಗೆ ಮನುಷ್ಯರೂಪದಿಂದಲೇ ಭಾರ್ಯೆಯಾಗಿರುವುದೂ, ಅವನಲ್ಲಿಯೇ ಮನಸ್ಸನ್ನಿರಿಸಿರುವುದೂ ಯುಕ್ತವೇ'' ಎಂದು ಇಲ್ಲಿನ ವಾಸ್ತವಾರ್ಥವು.

ರಾಕ್ಷಸೇಶ್ವರನಾದ ರಾವಣನೊಬ್ಬನೇ ಮೂರುಲೋಕದ ಭಾಗ್ಯವನ್ನೂ ಯಥೇಚ್ಛವಾಗಿ ಅನುಭವಿಸತಕ್ಕವನು. ಅಂತವನನ್ನು ಪತಿಯನ್ನಾಗಿ ವರಿಸಿ, ಸುಖವಾಗಿ ವಿಹರಿಸಬಾರದೆ! ಎಲೆ ಶೋಭನಾಂಗಿ! [1] ನೀನೋ ಕಂದುಕುಂದಿಲ್ಲದ ಸೌಂದರ್ಯವುಳ್ಳವಳು. ಮನುಷ್ಯಜಾತಿಯಲ್ಲಿ ಹುಟ್ಟಿದ ಮಾತ್ರಕ್ಕೆ ರಾಜ್ಯಭ್ರಷ್ಟನಾಗಿಯೂ, ಆಶಾಭಂಗವನ್ನು ಹೊಂದಿ ಕೇವಲದೀನನಾಗಿಯೂ ಇರುವ ಆ ರಾಮನನ್ನೇ ಅಪೇಕ್ಷಿಸುತ್ತಿರುವೆಯಾ? ಈ ಮರುಳುತನವನ್ನು ಬಿಡು'' ಎಂದರು. ಕಮಲಾಕ್ಷಿಯಾದ ಸೀತೆಯು ರಾಕ್ಷಸಿಯರ ಈ ಮಾತುಗಳನ್ನು ಕೇಳಿ, ಕಣ್ಣುಗಳಲ್ಲಿ ನೀರುತುಂಬಿಕೊಂಡು, ಅವರನ್ನು ಕುರಿತು ''ಎಲೈ! ನೀವೆಲ್ಲರೂ ಒಂದಾಗಿ ಸೇರಿ ಬಹಳ ಅಸಹ್ಯವಾದ ಈ ಮಾತನ್ನು ನನಗೆ ಹೇಳುತ್ತಿವಿರಲ್ಲಾ? ಇದು ಕೇವಲ ಪಾಪವಿಷಯವಾದುದೆಂದು ಇನ್ನೂ ನಿಮ್ಮ ಮನಸ್ಸಿಗೆ ತೋರಲಿಲ್ಲವೆ? ಮನುಷ್ಯಜಾತಿಯಲ್ಲಿ ಹುಟ್ಟಿದ ನಾನು ರಾಕ್ಷಸನಿಗೆ ಪತ್ನಿಯಾಗುವುದು ಎಷ್ಟುಮಾತ್ರವೂ ಯುಕ್ತವಲ್ಲ! ನೀವೆಲ್ಲರೂ ಸೇರಿ ನಿಮಗೆ ಇಷ್ಟಬಂದಂತೆ ನನ್ನನ್ನು ಭಕ್ಷಿಸಿದರೂ ಭಕ್ಷಿಸಿರಿ! ಅದಕ್ಕಾದರೂ ನಾನು ಸಮ್ಮತಿಸುವೆನೇ ಹೊರತು, ನಿಮ್ಮ ಈ ಮಾತನ್ನು ನಾನು ನಡೆಸುವವಳಲ್ಲ. ದರಿದ್ರನಾಗಿರಲಿ, ರಾಜ್ಯಭ್ರಷ್ಟನಾಗಿರಲಿ, ನನ್ನನ್ನು ಕೈಹಿಡಿದ ಪತಿ ಯಾವನೋ ಅವನೇ ನನಗೆ ಗುರುವು. ಸುವರ್ಚಲೆಯು ಸೂರ್ಯನಲ್ಲಿ ಹೇಗೋ ಹಾಗೆ ನಾನು ಯಾವಾಗಲೂ ಆತನಲ್ಲಿಯೇ ದೃಢಾನುರಾಗವುಳ್ಳವಳು. ಮಹಾಭಾಗೆಯಾದ ಶಚೀದೇವಿಯು ದೇವೇಂದ್ರನನ್ನೂ, ಅರುಂಧತಿಯು ವಸಿಷ್ಠನನ್ನೂ, ರೋಹಿಣಿಯು ಚಂದ್ರನನ್ನೂ, ಸುಕನ್ಯೆಯು ಚ್ಯವನನನ್ನೂ, ಸಾವಿತ್ರಿಯು ಸತ್ಯವಂತನನ್ನೂ, ಶ್ರೀಮತಿಯು ಕಪಿಲನನ್ನೂ, ದಮಯಂತಿಯು ಸೌದಾಸನನ್ನೂ, ಕೇಶಿನಿಯು ಸಗರನನ್ನೂ ಹೇಗೆ ಅನುವರ್ತಿಸುತಿದ್ದರೋ, ಹಾಗೆಯೇ ನಾನೂ ನನ್ನ ಪತಿಯಾದ ರಾಮನನ್ನೇ ಅನುವರ್ತಿಸತಕ್ಕವಳು. ಭೀಮಪುತ್ರಿ

---

1. ಇಲ್ಲಿ ''ಮಾನುಷೀ ಮಾನುಷಂತಂತು ರಾಮ ಮಿಚ್ಛಸಿ ಶೋಭನೇ। ರಾಜ್ಯಾದ್ಭ್ರಷ್ಟಮಸಿದ್ಧಾರ್ಥಂ ವಿಕ್ಲಬಂತ್ವಮನಿನ್ದಿತೇ'' ಎಂದು ಮೂಲವು. (ಹೇ ಅನಿಂದಿತೇ) ಎಲೈ ನಿರ್ದುಷ್ಟವಾದ ನಡತೆಯುಳ್ಳವಳೇ! ಈಗ ನೀನು (ಮಾನುಷಂ) ಮನುಷ್ಯಾವತಾರವನ್ನೆತ್ತಿದವನಾಗಿಯೂ, (ರಾಜ್ಯಾದ್ಭ್ರಷ್ಟಂ) ಪಿತೃವಾಕ್ಯಪಾಲನಾರ್ಥವಾಗಿ ರಾಜ್ಯವನ್ನೇ ಬಿಟ್ಟವನಾಗಿಯೂ (ಅಸಿದ್ಧಾರ್ಥಂ) ''ಅಶ್ವಾಸೌ+ಸಿದ್ಧಾರ್ಥಶ್ಚತಂ'' ವಿಷ್ಣುರೂಪಿಯಾಗಿ ಅವಾಪ್ತಸಮಸ್ತಕಾಮನಾಗಿಯೂ (ವಿಕ್ಲಬಂ) ದಯಾಳುವಾಗಿಯೂ ಇರುವ ರಾಮನನ್ನು ಕೋರುವುದೇ ಯುಕ್ತವು'' ಎಂದು ವಾಸ್ತವಾರ್ಥವು.

ಯಾದ ದಮಯಂತಿಯು ನಳನಲ್ಲಿ ಹೇಗೆ ದೃಢವಾದ ಪಾತಿವ್ರತ್ಯವನ್ನು ಹಿಡಿದಿದ್ದಳೋ, ಹಾಗೆಯೇ ನಾನೂ ಇಕ್ಷ್ವಾಕುಕುಲಶ್ರೇಷ್ಠನಾದ ರಾಮನನ್ನೇ ವ್ರತವಾಗಿ ಹಿಡಿದಿರತಕ್ಕವಳು'' ಎಂದಳು. ಸೀತೆಯ ಈ ಮಾತನ್ನು ಕೇಳಿ ಆ ರಾಕ್ಷಸಿಯರೆಲ್ಲರೂ ಇನ್ನೂ ಕೋಪಗೊಂಡವರಾಗಿ, ಆಕೆಯನ್ನು ಮತ್ತಷ್ಟು ಪರುಷವಾಕ್ಯಗಳಿಂದ ಹೆದರಿಸುತ್ತಿದ್ದರು. ಅತ್ತಲಾಗಿ ಶಿಂಶುಪಾವೃಕ್ಷದ ಮೇಲೆ ಸದ್ದಿಲ್ಲದೆ ಅವಿತುಕೊಂಡಿದ್ದ ಹನುಮಂತನೂ ಕೂಡ, ಈ ರಾಕ್ಷಸಸ್ತ್ರೀಯರು ಸೀತೆಯನ್ನು ಹೆದರಿಸುವುದಕ್ಕಾಗಿ ಆಡಿದ ಕ್ರೂರವಾಕ್ಯಗಳೆಲ್ಲವನ್ನೂ ಕೇಳುತಿದ್ದನು. ಇತ್ತಲಾಗಿ ರಾಕ್ಷಸಿಯರು ಮೇಲೆಮೇಲೆ ಕೋಪವನ್ನೇ ತೋರಿಸುತ್ತ ಭಯದಿಂದ ನಡುಗುತ್ತಿರುವ ಆ ಸೀತೆಯ ಸುತ್ತಲೂ ಮುತ್ತಿಕೊಂಡು, ಬೆಂಕಿಯುರಿಯಂತೆ ಕೆಂಪಾಗಿ ಜೋಲುತ್ತಿರುವ ತಮ್ಮ ತುಟಿಗಳನ್ನು ಕಚ್ಚಿಕೊಂಡು, ಅತಿಕೋಪದಿಂದ ಗಂಡುಗೊಡಲಿಗಳನ್ನು ಕೈಯಲ್ಲಿ ಹಿಡಿದಾಡಿಸುತ್ತ, ಮುಂದೆ ನುಗ್ಗಿಬಂದು, ಒಬ್ಬರಿಗೊಬ್ಬರು "ಮೂರ್ಖಳಾದ ಇವಳು ರಾಕ್ಷಸಚಕ್ರವರ್ತಿಯಾದ ನಮ್ಮ ರಾವಣನಿಗೆ ಪತ್ನಿಯಾಗಿರುವುದಕ್ಕೇ ಅರ್ಹಳಲ್ಲ. ಇನ್ನು ಇವಳಿದ್ದರೇನು! ಸತ್ತರೇನು?'' ಎಂದು ಆರ್ಭಟಿಸಿ ಕೂಗುತ್ತಿದ್ದರು. ಹೀಗೆ ಘೋರ ರಾಕ್ಷಸಿಯರು ಸುತ್ತಲೂ ಸುತ್ತಿ ಹೆದರಿಸುತ್ತಿರುವುದನ್ನು ನೋಡಿ ಸೀತೆಯು ಅತಿ ದುಃಖದಿಂದ ಕಣ್ಣೀರನ್ನೊರಸಿಕೊಳ್ಳುತ್ತ, ಆ ಸ್ಥಳವನ್ನು ಬಿಟ್ಟು ಹನುಮಂತನು ಕುಳಿತಿದ್ದ ಶಿಂಶುಪಾವೃಕ್ಷದ ಬಳಿಗೆ ಬಂದಳು. ಅಲ್ಲಿಯೂ ರಾಕ್ಷಸಿಯರು ಇವಳ ಸುತ್ತಲೂ ಮುತ್ತಿಕೊಂಡರು. ಸೀತೆಯು ಆ ಮರದಡಿಯಲ್ಲಿಯೇ ದುಃಖಪರವಶಳಾಗಿ ಕುಳಿತಿದ್ದಳು. ಕೇವಲ ಕೃಶಳಾಗಿಯೂ, ಕಂದಿದ ಮುಖವುಳ್ಳವಳಾಗಿಯೂ, ಮಾಸಿದ ಬಟ್ಟೆಯನ್ನುಟ್ಟವಳಾಗಿಯೂ ಇದ್ದ ಆ ಸೀತೆಯನ್ನು ನಾನಾ ಕಡೆಯಿಂದಲೂ ರಾಕ್ಷಸಿಯರು ಹೆದರಿಸುತಿದ್ದರು. ಇಷ್ಟರಲ್ಲಿ ಭಯಂಕರ ರೂಪವುಳ್ಳ ವಿನತೆಯೆಂಬ ರಾಕ್ಷಸಿಯೊಬ್ಬಳು ಸೀತೆಯ ಮುಂದೆ ಬಂದು ನಿಂತು "ಅಮ್ಮ ಸೀತೆ! ಇನ್ನು ಸಾಕುಬಿಡು! ನೀನು ನಿನ್ನ ಪತಿಯಲ್ಲಿರಬೇಕಾದ ಅಸಾಧಾರಣ ಪ್ರೇಮವನ್ನು ತೋರಿಸಿದುದಾಯಿತಲ್ಲವೆ? ಇನ್ನು ಬಿಡು! ಎಲೆ ಶೋಭನಾಂಗಿ! ಯಾವ ವಿಷಯದಲ್ಲಿಯೂ ಮಿತಿಮೀರಿ ಹೋಗಬಾರದು! ಮಿತಿಮೀರಿ ಹೋದರೆ ಯಾವುದರಲ್ಲಿಯೂ ವ್ಯಸನವು ತಪ್ಪದು! ನೀನು ಇದುವರೆಗೂ ಮನುಷ್ಯಜಾತಿಗೆ ತಕ್ಕ ಪಾತಿವ್ರತ್ಯವನ್ನು ತೋರಿಸಿದೆ! ನಿನ್ನ ಪಾತಿವ್ರತ್ಯಕ್ಕಾಗಿ ನಾನೂ ಬಹಳ ಸಂತೋಷಪಟ್ಟೆನು. ನಿನಗೆ ಶುಭವಾಗಲಿ! ಎಲೆ ಸೀತೆ! ನಿನ್ನ ಹಿತಕ್ಕಾಗಿ ನಾನೊಂದು

ಮಾತನ್ನು ಹೇಳುವೆನು ಕೇಳು! ನನ್ನ ಮಾತನ್ನು ನಡೆಸು! 1 ರಾವಣನನ್ನು ಭರ್ತ್ತನನ್ನಾಗಿ ವರಿಸು! ಅವನು ಸಮಸ್ತ ರಾಕ್ಷಸರಿಗೂ ಒಡೆಯನು! ಬಹಳ ಪರಾಕ್ರಮವುಳ್ಳವನು! ವಿಶೇಷವಾದ ರೂಪಸಂಪತ್ತುಳ್ಳವನು! ಸಾಕ್ಷಾದ್ದೇವೇಂದ್ರನಂತೆ ಬೆಳಗುತ್ತಿರುವವನು! ಬಹಳಚತುರನು! ಉದಾರಸ್ವಭಾವವುಳ್ಳವನು! ಪ್ರಿಯದರ್ಶನವುಳ್ಳವನು! ಇಂತಹ ರಾಕ್ಷಸಚಕ್ರವರ್ತಿಯನ್ನು ಮಾತ್ರ ನೀನು ಕೈಹಿಡಿಯದೆ ಬಿಡಬೇಡ! ಕೇವಲ ಮನುಷ್ಯನಾಗಿಯೂ, ದುಃಖಿತನಾಗಿಯೂ ಇರುವ ರಾಮನಿಂದೇನು? ಅವನನ್ನು ಬಿಟ್ಟು ರಾವಣನನ್ನಾಶ್ರಯಿಸು! ಎಲೆ ವಿದೇಹಪುತ್ರಿ! ಇನ್ನು ಮೇಲೆಯೂ ನೀನು ಈ ದುರ್ದಶೆಯಲ್ಲಿರುವುದು ಸರಿಯಲ್ಲ! ದಿವ್ಯವಾದ ಗಂಧಾನುಲೇಪನಗಳಿಂದಲೂ, ದಿವ್ಯಾಭರಣಗಳಿಂದಲೂ ಅಲಂಕೃತಳಾಗಿ ಅಗ್ನಿಗೆ ಸ್ವಾಹಾದೇವಿಯಂತೆಯೂ, ಇಂದ್ರನಿಗೆ ಶಚೀದೇವಿಯಂತೆಯೂ ರಾವಣನಿಗೆ ಭಾರ್ಯೆಯಾಗಿ, ಇದುಮೊದಲು, ಸಮಸ್ತಲೋಕಗಳಿಗೂ ನೀನೇ ಅಧೀಶ್ವರಿಯೆನಿಸಿಕೊಂಡಿರು! ರಾಮನಾದರೋ ನಿನ್ನ ವಿರಹದುಃಖದಿಂದ ಈಗಲೋ ನಾಳೆಯೋ ಸಾಯುವಂತಿರುವನು, ಅವನಿಗೆ ಆಯುಸ್ಸು ತೀರಿದಂತೆಯೇ ಎಣಿಸಬೇಕಾಗಿದೆ! ಆ ರಾಮನಿಂದ ಇನ್ನು ನಿನಗಾಗಬೇಕಾದುದೇನು? ನನ್ನ ಮಾತನ್ನು ಕೇಳು! ಇಷ್ಟಾದರೂ ನೀನು ನಾನು ಹೇಳಿದಂತೆ ನಡೆಸದಿದ್ದರೆ, ಈಗಲೇ ನಾವೆಲ್ಲರೂ ಸೇರಿ ನಿನ್ನನ್ನು ಭಕ್ಷಿಸಿಬಿಡುವೆವು" ಎಂದಳು. ಆ ಮೇಲೆ ವಿಕಟೆಯೆಂಬ ಮತ್ತೊಬ್ಬ ರಾಕ್ಷಸಿಯು ಮಹಾಕೋಪದಿಂದ ಮುಷ್ಟಿಯನ್ನೆತ್ತಿ ಹಿಡಿದು, ಜೋಲುವ ಮೊಲೆಗಳನ್ನಾಡಿಸುತ್ತ, ಸೀತೆಯ ಮುಂದೆ ನಿಂತು, ಆರ್ಭಟಿಸಿ ಕೂಗುತ್ತ "ಎಲೆ, ಮೈಥಿಲಿ! ಎಲೆ ಬುದ್ಧಿಗೆಟ್ಟವಳೆ! ಇದುವರೆಗೆ ನೀನು ನಮ್ಮ ರಾಕ್ಷಸಚಕ್ರವರ್ತಿಯಾದ ರಾವಣನೊಡನೆ ಆಡಬಾರದ ಮಾತುಗಳನ್ನೆಲ್ಲಾ ಆಡಿದೆ! ನಿನ್ನಲ್ಲಿ ದಯೆಯಿಂದಲೂ, ಸಹಜವಾದ ಮೃದುತ್ವದಿಂದಲೂ ನಮ್ಮ ರಾವಣನು ಅವೆಲ್ಲವನ್ನೂ ಸಹಿಸಿಕೊಂಡನು! ಇದುವರೆಗೆ ನಾವೂ ನಿನಗೆ ಕಾಲೋಚಿತವಾಗಿ ಎಷ್ಟೋ ಹಿತವಾದಗಳನ್ನು ಹೇಳಿದೆವು! ಅವನ್ನೂ ನೀನು ಕೇಳಲಿಲ್ಲ! 2 ಅಯ್ಯೋ

---

1. ಇಲ್ಲಿ "ರಾವಣಂ ಭಜ ಭರ್ತಾರಂ ಭರ್ತಾರಂ ಸರ್ವರಕ್ಷಸಾಂ" ಎಂದು ಮೂಲವು, "ಸಮಸ್ತ ರಾಕ್ಷಸರಿಗೂ ಒಡೆಯನಾದ ರಾವಣನನ್ನೇ ನಿನ್ನ ಸೇವಕನನ್ನಾಗಿ ಸ್ವೀಕರಿಸು" ಎಂದು ಇಲ್ಲಿನ ವಾಸ್ತವಾರ್ಥವು.

2. ಇಲ್ಲಿ "ಇಮಾನ್ಯಪ್ರಿಯರೂಪಾಣಿ ವಚನಾನಿ ಸುದುರ್ಮತೇ। ಅನುಕ್ರೋಶಾನ್ಮೃದುತ್ವಾಚ್ಚ ಸೋಢಾನಿ ತವ ಮೈಥಿಲಿ" ಎಂದು ಮೂಲವು. (ಹೇ ಮೈಥಿಲಿ!) ಎಲೆ ಸೀತೆ! (ಸುದುರ್ಮತೇ) ಕೇವಲ ದುರ್ಬುದ್ಧಿಯುಳ್ಳ ಆ ರಾವಣನಲ್ಲಿ (ಇಮಾನ್ಯಪ್ರಿಯರೂಪಾಣಿ

ಹುಚ್ಚಳೆ! ಇನ್ನೂ ನಿನಗೆ ಇಲ್ಲಿಂದ ತಪ್ಪಿಸಿಕೊಂಡು ಹೋಗಬಹುದೆಂಬ ಆಸೆಯಿರುವುದೇನು? ಆ ಭ್ರಾಂತಿಯನ್ನು ಬಿಡು. ನಮ್ಮ ರಾವಣನೋ ಈಗ ನಿನ್ನನ್ನು ಈ ಸಮುದ್ರದ ತುತ್ತತುದಿಗೆ ತಂದಿರಿಸಿಬಿಟ್ಟಿರುವನು ಬೇರೊಬ್ಬರಿಗೆ ಇಲ್ಲಿಗೆ ಬರುವುದಕ್ಕೂ ಸಾಧ್ಯವಲ್ಲ. ಇದರಮೇಲೆ ಭಯಂಕರವಾದ ರಾವಣನ ಅಂತಃಪುರದೊಳಗೆ ನಿನ್ನನ್ನು ಸೇರಿಸಾಕಿ ನಾವೆಲ್ಲರೂ ನಿನ್ನಮೇಲೆ ಕಾವಲಿರುವೆವು! ಹೀಗಿರುವಾಗ ಸಾಕ್ಷಾದ್ದೇವೇಂದ್ರನಾದರೂ ನಿನ್ನನ್ನು ರಕ್ಷಿಸಬಲ್ಲನೆ? ಎಲೆ ಮೈಥಿಲಿ! ನಿನ್ನ ಹಿತಕ್ಕಾಗಿ ನಾನು ಹೇಳುವ ಮಾತನ್ನು ಕೇಳು! ಇನ್ನು ಕಣ್ಣೀರುಬಿಟ್ಟುದು ಸಾಕು! ವ್ಯಸನವನ್ನು ಬಿಡು! ಹೀಗೆ ದುಃಖಿಸುವುದರಿಂದೇನು? ರಾವಣನಲ್ಲಿ ಪ್ರೀತಿಯನ್ನಿಡು! ಮನಸ್ಸಿನಲ್ಲಿ ಸಂತೋಷದಿಂದಿರು! ಹೀಗೆ ಎಡೆಬಿಡದೆ ಕೊರಗುವುದರಿಂದ ಫಲವಿಲ್ಲ! [1] ಎಲೆ ಸೀತೆ! ನಮ್ಮ ರಾಕ್ಷಸರಾಜನೊಡನೆ ಸುಖವಾಗಿ ಕ್ರೀಡಿಸುತ್ತಿರು! ಎಲೆ ಭೀರು! ಸ್ತ್ರೀಯರಿಗೆ ಯೌವನವು ಸ್ಥಿರವಲ್ಲವೆಂಬುದನ್ನು ಕಾಣೆಯಾ! ಆ ಯೌವನವು ವ್ಯರ್ಥವಾಗಿ ಕಳೆದು ಹೋಗುವುದಕ್ಕೆ ಮೊದಲೇ ಬೇಕಾದ ಸುಖಗಳನ್ನನುಭವಿಸು! ಎಲೆ ಮದಿರಾಕ್ಷಿ! ಇಲ್ಲಿ ಮನೋಹರಗಳಾದ ಎಷ್ಟೋ ತೋಟಗಳುಂಟು? ಇವುಗಳಲ್ಲಿ ನೀನು ರಾವಣನೊಡಗೂಡಿ ಸಂತೋಷದಿಂದ ಕ್ರೀಡಿಸಬಾರದೆ? ಎಲೆ ಸುಂದರಿ! ಏಳುಸಾವಿರಮಂದಿ ಉತ್ತಮಸ್ತ್ರೀಯರು ನಿನ್ನ ಸೇವೆಮಾಡುತ್ತ ನಿನ್ನ ವಶದಲ್ಲಿರುವರು! ಸಮಸ್ತ ರಾಕ್ಷಸರಿಗೂ ಒಡೆಯನಾದ ನಮ್ಮ ರಾವಣನನ್ನು ಭರ್ತನನ್ನಾಗಿ ಅಂಗೀಕರಿಸು! ಎಲೆ ಮೈಥಿಲಿ! ನಾನು ಇಷ್ಟು ಹೇಳಿದರೂ ನೀನು ಕೇಳದ ಪಕ್ಷದಲ್ಲಿ, ಈಗಲೇ ನಾನು ನಿನ್ನ ಎದೆಯನ್ನು ಕಿತ್ತು ತಿಂದುಬಿಡುವೆನು" ಎಂದಳು. ಆಮೇಲೆ ಚಂಡೋದರಿಯೆಂಬ ರಾಕ್ಷಸಿಯು ಕೋಪದಿಂದ ಶೂಲವನ್ನು ತಿರುಗಿಸುತ್ತ ಮುಂದೆ ಬಂದು "ಎಲೆ ರಾಕ್ಷಸಿಯರೆ! ಮೊದಲು ನಮ್ಮ

---

ವಚನಾನಿ) ಇಂತಹ ಪರುಷವಾಕ್ಯಗಳೂಕೂಡ (ತವ ಅನುಕ್ರೋಶಾತ್, ಮೃದುತ್ವಾಚ್ಚ) ನಿನ್ನ ಸ್ವಾಭಾವಿಕವಾದ ದಯೆಯಿಂದಲೂ ಮೃದುತ್ವದಿಂದಲೂ (ಸೋಢಾನಿ) ನಿನ್ನಿಂದ ಸಹಿಸಲ್ಪಟ್ಟುವು. ನೀನು ಬಹಳ ದಯಾಸ್ವಭಾವವುಳ್ಳವಳಾದುದರಿಂದ ದುರ್ಬುದ್ಧಿಯುಳ್ಳ ಆ ರಾವಣನ ಕ್ರೂರವಾಕ್ಯಗಳನ್ನೂ ಮನ್ನಿಸಿ ಬಿಟ್ಟೆಯೆಂದು ವಾಸ್ತವಾರ್ಥವು.

1. ಇಲ್ಲಿ "ಸೀತೇ ರಾಕ್ಷಸರಾಜೇನ ಸಹ ಕ್ರೀಡ ಯಥಾಸುಖಮ್" ಎಂದು ಮೂಲವು. ವಾಸ್ತವಾರ್ಥವು:—(ರಾಕ್ಷಸರಾಜೇನ ಸಹ) ರಾವಣನೊಡನೆ ಸಹಿಸಿಕೊಳ್ಳುವಳಾಗು! (ಯಥಾಸುಖಂಕ್ರೀಡ) ನಿನ್ನ ಇಷ್ಟಬಂದಂತೆ ಸುಖವಾಗಿ ವಿಹರಿಸು "ಎಂದರೆ ರಾವಣನ ಕ್ರೂರವಾಕ್ಯಗಳಿಗಾಗಿ ಕೋಪಿಸದೆ ಸಹನದಿಂದಿದ್ದು, ನಿನ್ನ ಇಷ್ಟಬಂದಂತೆ ಸುಖದಿಂದಿರು" ಎಂದು ಭಾವವು.

ರಾವಣನು ಈಕೆಯನ್ನು ಕದ್ದುತಂದಾಗ, ಜಿಂಕೆಯ ಕಣ್ಣಿನಂತೆ ಚಂಚಲವಾದ ಕಣ್ಣಿನ ಅಂದವನ್ನೂ, ಭಯದಿಂದ ನಡುಗುತ್ತಿದ್ದ ಈಕೆಯ ಸ್ತನಗಳ ಸೊಗಸನ್ನೂ, ನೋಡಿದಾಗಿನಿಂದಲೇ ಈಕೆಯ ಎಡಬಲಪಕ್ಕಗಳಲ್ಲಿರುವ ಕಾಲಖಂಡ ಗುಲ್ಮಗಳೆಂಬ ಪಕ್ಕೆಯ ಮಾಂಸಗಳನ್ನೂ, ಇವುಗಳಮೇಲಿನ ಮಾಂಸಪಿಂಡವನ್ನೂ, ಇವಳ ನರಗಳನ್ನೂ, ತಲೆಯನ್ನೂ, ಬೇರೆಬೇರೆಯಾಗಿ ಕಿತ್ತು ತಿನ್ನಬೇಕೆಂದು ನನಗೆ ಬಹಳ ಆಸೆಯುಂಟಾಗಿರುವುದು. ಆ ಆಸೆಯನ್ನು ಈಗ ತೀರಿಸಿಕೊಳ್ಳಬೇಕೆಂದಿರುವೆನು'' ಎಂದಳು. ಆಮೇಲೆ ಪ್ರಘಸೆಯೆಂಬ ರಾಕ್ಷಸಿಯು ಅತಿ ಕೋಪದಿಂದ ಬಂದು ''ಎಲೆ! ಇದೇಕೆ ಇನ್ನೂ ಸುಮ್ಮನಿರುವಿರಿ! ಈಗಲೇ ಘಾತುಕಿಯಾದ ಈಕೆಯ ಕತ್ತನ್ನು ಮುರಿದು ಹಾಕಿಬಿಡುವೆವು. ಆಮೇಲೆ ಇವಳು ಸತ್ತ ಸುದ್ದಿಯನ್ನು ನಮ್ಮ ಪ್ರಭುವಾದ ರಾವಣನಿಗೆ ತಿಳಿಸಿಬಿಡುವೆವು. ಅದನ್ನು ಕೇಳಿ, ರಾವಣನು ಇವಳನ್ನು ಭಕ್ಷಿಸುವಂತೆ ನಮಗೆ ಹೇಳುವುದರಲ್ಲಿ ಸಂದೇಹವಿಲ್ಲ. ಆಗ ನಾವು ನಿರ್ಭಯವಾಗಿ ಸಂತೋಷದಿಂದ ಇವಳ ಮಾಂಸವನ್ನು ತಿಂದುಬಿಡಬಹುದಲ್ಲವೆ?'' ಎಂದಳು. ಆಮೇಲೆ ಅಜಾಮುಖಿಯೆಂಬ ರಾಕ್ಷಸಿಯೊಬ್ಬಳು ''ಆಮೇಲೆ ನಾವು ಸಾವು ಜಗಳವಾಡಬಾರದು. ಆದುದರಿಂದ ನಾವೆಲ್ಲರೂ ಸೇರಿಯೇ ಈಕೆಯನ್ನು ಕೊಂದು ಇವಳ ಮಾಂಸವನ್ನೂ ಸಮವಾಗಿಯೇ ಹಂಚಿಕೊಳ್ಳುವಂತೆ ಮಾಡಿರಿ! ನಂಜಿಕೊಳ್ಳುವದಕ್ಕೆ ಉತ್ತಮವಾದ ಮದ್ಯವನ್ನೂ, ಲೇಹ್ಯಪದಾರ್ಥಗಳನ್ನೂ ಈಗಲೇ ತಂದಿರಿಸಿರಿ!'' ಎಂದಳು. ಆಮೇಲೆ ಶೂರ್ಪಣಖಿಯೆಂಬ ರಾಕ್ಷಸಿಯು ''ಹಾಗೆಯೇ ಸರಿ! ಈ ಅಜಾಮುಖಿಯು ಹೇಳಿದ ಮಾತೇ ನನಗೂ ಯುಕ್ತವಾಗಿ ತೋರಿರುವುದು. ನಮ್ಮ ಸಮಸ್ತದುಃಖವನ್ನೂ ನೀಗಿಸಿ ಉತ್ಸಾಹವನ್ನು ಹುಟ್ಟಿಸತಕ್ಕ ಮದ್ಯವನ್ನು ಈಗಲೇ ತಂದಿರಿಸಿರಿ! ಯಥೇಚ್ಛವಾಗಿ ನಾವೆಲ್ಲರೂ ಮನುಷ್ಯ ಮಾಂಸವನ್ನು ತಿಂದು, ಮದ್ಯವನ್ನೂ ಕುಡಿದು, ಈ ಲಂಕೆಯ ಪಶ್ಚಿಮಭಾಗದಲ್ಲಿರುವ ನಿಕುಂಭಿಲೆಯೆಂಬ ಶಕ್ತಿದೇವತೆಗೆ ಪ್ರೀತಿಕರವಾಗಿ ನರ್ತನವನ್ನು ಮಾಡುವೆವು'' ಎಂದಳು. ಹೀಗೆ ಘೋರರಾಕ್ಷಸಿಯರೆಲ್ಲರೂ ಸೇರಿ, ಸುತ್ತಲೂ ನಿಂತು ಹೆದರಿಸುತ್ತಿರಲು, ದೇವಕನ್ಯೆಯಂತಿರುವ ಆ ಸೀತೆಯು ಧೈರ್ಯಗುಂದಿ ರೋದಿಸುತ್ತಿದ್ದಳು.

ಇಲ್ಲಿಗೆ ಅರುವತ್ತುನಾಲ್ಕನೆಯ ಸರ್ಗವು.

---

## ಸೀತೆಯು ರಾಕ್ಷಸಿಯರ ಹಿಂಸೆಯನ್ನು ತಡೆಯಲಾರದೆ ವಿಲಪಿಸಿದುದು.

ಹೀಗೆ 1 ಕ್ರೂರಸ್ವಭಾವವುಳ್ಳ ಆ ರಾಕ್ಷಸಿಯರೆಲ್ಲರೂ ಸೇರಿ ಕರ್ಣಕಠೋರವಾಗಿಯೂ, ಭಯಂಕರವಾಗಿಯೂ ಇರುವ ವಾಕ್ಯಗಳಿಂದ ಅನೇಕ ವಿಧದಲ್ಲಿ ಸೀತೆಯನ್ನು ಹೆದರಿಸುತಿದ್ದರು. ಸೀತೆಯು ಇವೆಲ್ಲವನ್ನೂ ಕೇಳುತ್ತ ದುಃಖದಿಂದ ಗೋಳಿಡುತ್ತಿದ್ದಳು. ಆಕೆಯು ಭೀರುಸ್ವಭಾವವುಳ್ಳವಳಾದರೂ, ಕೇವಲದೃಢಮನಸ್ಸುಳ್ಳವಳಾದುದರಿಂದ, ಆ ರಾಕ್ಷಸಿಯರ ಬೆದರಿಕೆಯ ಮಾತುಗಳಿಗೂ ಲಕ್ಷ್ಯಕೊಡದೆ, ದುಃಖದಿಂದ ಕಣ್ಣೀರುಬಿಡುತ್ತ, ಗದ್ಗದಸ್ವರದಿಂದ ಅವರಿಗೆ ಪ್ರತ್ಯುತ್ತರವನ್ನು ಕೊಡುವಳು. “ಎಲೈ! ಮನುಷ್ಯಸ್ತ್ರೀಯಾದ ನಾನು ರಾಕ್ಷಸನಿಗೆ ಭಾರ್ಯೆಯಾಗುವುದೆಂದರೇನು? ನೀವೆಲ್ಲರೂ ಸೇರಿ ನನ್ನನ್ನು ಕೊಂದು ಯಥೇಷ್ಟವಾಗಿ ತಿಂದರೂ ತಿನ್ನಬಹುದು! ನಿಮ್ಮ ಮಾತನ್ನು ನಾನು ನಡೆಸುವವಳಲ್ಲ” ಎಂದಳು. ದೇವಕನ್ಯಕೆಯಂತಿರುವ ಈ ಸೀತೆಯಾದರೋ ಮೊದಲೇ ರಾವಣನು ಬಂದು ಅತಿಕ್ರೂರವಾಕ್ಯಗಳಿಂದ ತನ್ನನ್ನು ಹೆದರಿಸಿಹೋದುದೊಂದು! ಇತ್ತಲಾಗಿ ರಾಕ್ಷಸಿಯರ ಹಾವಳಿಯೊಂದು! ಹೀಗೆ ನಾನಾವಿಧಸಂಕಟಕ್ಕೆ ಸಿಕ್ಕಿ, ದುಃಖದಿಂದ ಕೊರಗುತ್ತ, ಯಾವವಿಧದಲ್ಲಿಯೂ ಮನಸ್ಸಿಗೆ ತಿಳಿವಿಲ್ಲದೆ ತತ್ತಳಿಸುವಳು. ಕಾಡಿನಲ್ಲಿ ತನ್ನ ಹಿಂಡಿನಿಂದ ತಪ್ಪಿಬಂದು ತೋಳಗಳ ಗುಂಪಿನಲ್ಲಿ ಸಿಕ್ಕಿಬಿದ್ದ ಹೆಣ್ಣು ಜಿಂಕೆಯಂತೆ ಭಯದಿಂದ ನಡುಗುತ್ತಿರುವಳು. ತನ್ನದೇಹದಲ್ಲಿಯೇ ತಾನು ಹುದುಗಿಕೊಳ್ಳುವಂತೆ ಮೈಯನ್ನುಡುಗಿಸಿಕೊಂಡು ಗಡಗಡನೆ ನಡುಗುತ್ತಿರುವಳು. ಅಲ್ಲಿದ್ದ 2 ಅಶೋಕವೃಕ್ಷದ ಶಾಖೆಯನ್ನೊರಗಿಕೊಂಡು ಯಾವವಿಧದಿಂದಲೂ ಮನಸ್ಸಿಗೆ ನೆಮ್ಮದಿಯಿಲ್ಲದೆ ದುಃಖದಿಂದ ತನ್ನಪತಿಯಾದ ರಾಮನನ್ನೇ ಚಿಂತಿಸುತ್ತಿರುವಳು. ವಿಸ್ತಾರವಾದ ತನ್ನ ಸ್ತನಗಳನ್ನು ಎಡೆಬಿಡದೆ ಸುರಿಯುವ ತನ್ನ ಕಣ್ಣೀರಿನ ಪ್ರವಾಹದಿಂದ ತೊಯಿಸುತ್ತ, ಎಷ್ಟೆಷ್ಟು ಚಿಂತಿ

---

1. ಇದುವರೆಗೆ ಚಂಡೋದರಿ ಮೊದಲಾದವರು ಹೇಳಿದ ವಾಕ್ಯಗಳೆಲ್ಲವೂ, ಮೊದಲು ವಿಕಟೆಯು ಸೀತೆಯನ್ನು ಕುರಿತು ಹೇಳಿದ ಕ್ರೂರವಾಕ್ಯಗಳಿಗೆ ಸಹಿಸಲಾರದೆ ಆ ವಿಕಟೆಯನ್ನು ಕುರಿತು ಹೇಳಿದುದಾಗಿ ವಾಸ್ತವಾರ್ಥವು.

1. ಹನುಮಂತನು ಕುಳಿತಿದ್ದ ಶಿಂಶುಪಾವೃಕ್ಷದ ಶಾಖೆಯೂ, ಅಶೋಕವೃಕ್ಷದ ಶಾಖೆಯೂ, ಒಂದಕ್ಕೊಂದಕ್ಕೆ ಹೆಣೆಸುಕೊಂಡಂತೆ ಬೆಳೆದಿದ್ದುದರಿಂದ, ಇಲ್ಲಿ ಸೀತೆಯು ಅಶೋಕವೃಕ್ಷದ ಶಾಖೆಯೊಡನೆ ಸೇರಿದ್ದ ಶಿಂಶುಪಾವೃಕ್ಷದ ಶಾಖೆಯನ್ನು ಹಿಡಿದು ನಿಂತುದಾಗಿ ಗ್ರಾಹ್ಯವು.

ಸಿಡರೂ ತನ್ನ ದುಃಖವು ಕೊನೆಮುಟ್ಟುವ ರೀತಿಯನ್ನು ಕಾಣದೆ ಕೊರಗು ವಳು. ಬಿರುಗಾಳಿಯಿಂದ ಮುರಿದು ಬಿದ್ದ ಬಾಳೆಯಗಿಡದಂತೆ ನೆಲದಲ್ಲಿ ಬಿದ್ದು ನಡುಗುವಳು. ಆ ರಾಕ್ಷಸಿಯರ ಮೋರೆಯನ್ನು ನೋಡಿ ಹಾಗೆಯೇ ಭಯದಿಂದ ಮುಖದಲ್ಲಿ ಬಣ್ಣಗುಂದುವಳು. ಆಕೆಯು ಭಯದಿಂದ ಗಡಗಡನೆ ನಡುಗುವಾಗ, ಉದ್ದವಾಗಿಯೂ ವಿಸ್ತಾರವಾಗಿಯೂ ಬೆಳೆದ ಅವಳ ಕೇಶಪಾಶವು ಹೆಡೆಯಾಡುವ ಕಾಳಸರ್ಪದಂತೆ ಚಲಿಸುತ್ತಿರುವುದು. ಆ ಸೀತೆಯಾದರೋ ದುಃಖದಿಂದ ಎದೆಗೆಟ್ಟು ತತ್ತಳಿಸುತ್ತ, ಆಗಾಗ ನಿಟ್ಟುಸಿರನ್ನು ಬಿಡುವಳು. ಎಡೆಬಿಡದೆ ಕಣ್ಣೀರನ್ನು ಸುರಿಸುತ್ತಿರುವಳು. ಬಾರಿಬಾರಿಗೂ ವಿಲಪಿಸುವಳು! ಹಾಗೆಯೇ ಒಮ್ಮೆ "ಹಾ ರಾಮಾ!" ಎಂದು ಕೂಗಿಕೊಳ್ಳುವಳು! ಮತ್ತೊಮ್ಮೆ "ಹಾ ಲಕ್ಷ್ಮಣಾ!" ಎಂದು ಕೂಗುವಳು! ಒಮ್ಮೆ "ಅಮ್ಮ ಕೌಸಲ್ಯೆ!" ಎಂದು ಮೊರೆಯಿಡುವಳು! ಇನ್ನೊಮ್ಮೆ "ಹಾ! ಸುಮಿತ್ರೇ!" ಎಂದುಕೂಗಿಡುವಳು! ಹೀಗೆ ಅವಳು ತನ್ನ ಬಂಧುಗಳನ್ನು ಕೂಗಿಕೂಗಿ ಮೊರೆಯಿಡುತ್ತ "ಆಹಾ! ಹಿರಿಯರು ಹೇಳುವ ಈ ಲೋಕವಾರ್ತೆಯು ಸತ್ಯವು! ಸ್ತ್ರೀಗಾಗಲಿ, ಪುರುಷನಿಗಾಗಲಿ, ಆಸೆಪಟ್ಟರೂ ಅಕಾಲದಲ್ಲಿ ಮರಣವು ದುರ್ಲಭವು. ನಾನು ಹೀಗೆ ಕ್ರೂರರಾಕ್ಷಸಿಯರ ಹಿಂಸೆಗೊಳಗಾಗಿರುವುದಲ್ಲದೆ, ಆ ನನ್ನ ಪ್ರಿಯನಾದ ರಾಮನನ್ನಗಲಿಯೂ ಈ ಮುಹೂರ್ತದವರೆಗೆ ಬದುಕಿರುವೆನಲ್ಲಾ! ಹಾ! ಮಂದಭಾಗ್ಯೆಯಾಗಿ, ದೀನೆಯಾಗಿ, ದಿಕ್ಕಿಲ್ಲದೆ ಸಂಕಟಪಡುತ್ತಿರುವ ನಾನು ಸಮುದ್ರದಲ್ಲಿ ಬಿರುಗಾಳಿಯ ಬಡಿತಕ್ಕೆ ಸಿಕ್ಕಿದ ಹಡಗಿನಂತೆ ಈಗಲೇ ಸಾಯಬಾರದೆ? ಅಯ್ಯೋ! ನನ್ನ ಪ್ರಿಯಪತಿಯನ್ನೂ ಕಾಣದೆ, ಹೀಗೆ ರಾಕ್ಷಸಿಯರ ಕೈಗೆ ಸಿಕ್ಕಿಬಿದ್ದಿರುವ ನಾನು, ಪ್ರವಾಹವೇಗದಿಂದ ಕರಗಿ ಬೀಳುವ ನದೀತಟದಂತೆ ಈ ದುಃಖದಿಂದ ಕಂದಿಕುಂದಿ ಕೃಶಳಾಗುತ್ತಿರುವೆನಲ್ಲಾ! ಆಃ! ಕಮಲದಳದಂತೆ ಕಣ್ಣುಳ್ಳವನಾಗಿಯೂ, ಸಿಂಹದಂತೆ ಧೀರವಾದ ನಡೆಯುಳ್ಳವನಾಗಿಯೂ, ಕೃತಜ್ಞನಾಗಿಯೂ ಯಾರೊಡನೆಯೂ ಯಾವಾಗಲೂ ಪ್ರಿಯವನ್ನು ನುಡಿಯುವ ಸ್ವಭಾವವುಳ್ಳವನಾಗಿಯೂ ಇರುವ ನನ್ನ ಪ್ರಾಣನಾಥನಾದ ರಾಮನನ್ನು ನೋಡುವುದಕ್ಕೂ ಭಾಗ್ಯವಿರಬೇಕು! ಅವನನ್ನು ನೋಡುವವರೇ ಪರಮಭಾಗ್ಯಶಾಲಿಗಳು! ಏನಾದರೇನು? ತೀಕ್ಷ್ಣವಿಷವನ್ನು ಪಾನಮಾಡಿದಂತೆ ಆತ್ಮಜ್ಞನಾದ ರಾಮನನ್ನಗಲಿದ ನಾನು, ಇನ್ನು ಮೇಲೆ ಬದುಕುವುದೇನೋ ಸರ್ವಪ್ರಕಾರದಿಂದಲೂ ದುರ್ಲಭವು. ಹಾ ದೈವವೆ! ನಾನು ಜನ್ಮಾಂತರದಲ್ಲಿ ಎಂತಹ ಘೋರಪಾಪವನ್ನು ಮಾಡಿರುವೆನೋ, ಅದರಿಂದಲೇ ಹೀಗೆ ಮಹಾ ಭಯಂಕರ

ವಾಗಿಯೂ, ಕ್ರೂರವಾಗಿಯೂ ಇರುವ ಈ ದುಃಖವನ್ನನುಭವಿಸುತ್ತಿರುವೆನು! ಆಹಾ! ಈಗ ನಾನೇನು ಮಾಡಲಿ? ಮಹತ್ತಾಗಿ ಮೇಲೆ ಬಿದ್ದಿರುವ ಈ ದುಃಖ ಭಾರವನ್ನು ತಡೆಯಲಾರೆನಲ್ಲಾ! ಪ್ರಾಣವನ್ನೇ ಬಿಟ್ಟುಬಿಡಬೇಕೆಂದು ತೋರಿರು ವುದು! ರಾಕ್ಷಸಿಯರು ಕಣ್ಣಿಟ್ಟು ಕಾದಿರುವುದರಿಂದ ಅದಕ್ಕೂ ಅವಕಾಶ ವಿಲ್ಲ! ರಾಮನೂ ಸಿಕ್ಕಲಿಲ್ಲವಲ್ಲಾ! ಛೀ! ಇಷ್ಟಬಂದಾಗ ಸಾಯುವುದಕ್ಕೂ ಸಾಧ್ಯವಿಲ್ಲದ ಈ ಮನುಷ್ಯಜನ್ಮವನ್ನೇ ಸುಡಬೇಕು! ಅದರಲ್ಲಿಯೂ ಹೀಗೆ ಪರಾಧೀನತೆಯನ್ನು ಇನ್ನೂ ಸುಡಬೇಕು!'' ಎಂದಳು.

ಇಲ್ಲಿಗೆ ಇಪ್ಪತ್ತೈದನೆಯ ಸರ್ಗವು.

---

ಸೀತೆಯು ನಾನಾವಿಧದಲ್ಲಿ ದುಃಖಿಸಿ, ಆ ರಾಕ್ಷಸಿಯರ ಮುಂದೆ ತಾನೇ ಪ್ರಾಣವನ್ನು ಬಿಡುವುದಾಗಿ ಹೇಳಿದುದು.

ಹೀಗೆ ಜನಕಪುತ್ರಿಯಾದ ಆ ಸೀತೆಯು, ತಲೆಯನ್ನು ತಗ್ಗಿಸಿ, ಕಣ್ಣೀರು ಬಿಡುತ್ತ, ಹುಚ್ಚಳಂತೆಯೂ, ಪ್ರಜ್ಞೆತಪ್ಪಿದವಳಂತೆಯೂ ಬುದ್ಧಿಭ್ರಮೆ ಹಿಡಿ ದವಳಂತೆಯೂ ನಾನಾವಿಧದಲ್ಲಿ ಗೋಳಿಟ್ಟು ವಿಲಪಿಸುತ್ತಿದ್ದಳು. ಬಹಳವಾಗಿ ಸುತ್ತಿಬಂದ ಕುದುರೆಯ ಮರಿಯಂತೆ ಆಗಾಗ ನೆಲದಲ್ಲಿ ಬಿದ್ದು ಹೊರಳುತ್ತ "ಅಯ್ಯೋ! ನನ್ನ ಪ್ರಾಣನಾಥನಾದ ರಾಮನು ಏನೋ ಪ್ರಮಾದವಶದಿಂದ ನನ್ನನ್ನಗಲಿದ್ದಾಗ, ಕಾಮರೂಪಿಯಾದ ರಾವಣನು ಬಂದು ನನ್ನನ್ನು ನಿರ್ಬಂ ಧಿಸಿ, ನಾನು ಎಷ್ಟೆಷ್ಟೋ ಕೂಗಿ ಮೊರೆಯಿಡುತಿದ್ದರೂ ಕೇಳದೆ ಬಲಾತ್ಕಾರ ದಿಂದ ಇಲ್ಲಿಗೆ ಸೆಳೆದುತಂದುಬಿಟ್ಟನು! ಇಲ್ಲಿಯೋ ಈ ಘೋರರಾಕ್ಷಸಿಯರ ಕೈಗೆ ಸಿಕ್ಕಿಬಿದ್ದಿರುವೆನು. ಇವರು ಕ್ಷಣಕ್ಷಣಕ್ಕೂ ನನ್ನನ್ನು ಭಯಂಕರವಾಕ್ಯಗಳಿಂದ ಹೆದರಿಸುತ್ತಿರುವರು! ಎಷ್ಟೆಷ್ಟು ಚಿಂತಿಸಿ ಕೊರಗಿದರೂ ಈ ಕಷ್ಟದಿಂದ ತಪ್ಪಿಸಿ ಕೊಳ್ಳುವ ದಾರಿಯೇ ತೋರಲಿಲ್ಲವಲ್ಲಾ! ಈ ದುಃಖದಲ್ಲಿ ಸಿಕ್ಕಿ ನಾನುಬೇರೆ ಬದುಕಿರಲಾರೆನು! ಇನ್ನು ನನಗೆ ಈ ಜೀವದಿಂದಾಗಲಿ, ಹಣದಿಂದಾಗಲೀ ಒಡವೆಗ ಳಿಂದಾಗಲಿ ಆಗಬೇಕಾದುದೇನೂ ಇಲ್ಲ! ಮಹಾರಥನಾದ ಆ ರಾಮನನ್ನಗಲಿ, ಹೀಗೆ ರಾಕ್ಷಸಿಯರ ನಡುವೆ ಸಿಕ್ಕಿಬಿದ್ದಿರುವ ನನಗೆ ಇನ್ನು ಯಾವವಿಧದಲ್ಲಿ ಸುಖವುಂಟು? ನಿಜವಾಗಿ ನನ್ನ ಎದೆಯು ಕಲ್ಲಾಗಿರಬೇಕು! ಇಲ್ಲವೇ ಇದಕ್ಕೆ ಎಂದಿಗೂ ಮುಪ್ಪಾಗಲಿ, ಸಾವಾಗಲಿ ಇಲ್ಲದಿರಬೇಕು! ಇಷ್ಟು ಮಹಾದುಃಖ

ದಲ್ಲಿಯೂ ಇದು ಒಡೆದು ಹೋಗದಿರುವುದಲ್ಲಾ? ಛೀ! ಆ ನನ್ನ ಪ್ರಾಣ ನಾಥನಾದ ರಾಮನನ್ನಗಲಿಯೂ ನಾನು ಹೀಗೆ ಜೀವವನ್ನು ಬಚ್ಚಿಟ್ಟು ಕಾಪಾಡುತಿದ್ದ ಮೇಲೆ, ಅಸತಿಯಾಗಿಯೂ, ಅನಾಥೆಯಾಗಿಯೂ ಇರುವ ನನ್ನ ಜನ್ಮವನ್ನೇ ಸುಡಬೇಡವೆ? ಸಮುದ್ರಾಂತವಾದ ಸಮಸ್ತಭೂಮಿಗೂ ಒಡೆಯ ನಾಗಿ, ಯಾವಾಗಲೂ ಪ್ರಿಯವನ್ನು ನುಡಿಯುವವನಾದ ಆ ಪ್ರಾಣಪ್ರಿಯ ನನ್ನೇ ಅಗಲಿದ ಮೇಲೆ. ನನಗೆ ಈ ನನ್ನ ಜೀವದಲ್ಲಿಯಾಗಲಿ, ಸುಖದಲ್ಲಿಯಾ ಗಲಿ, ಆಸೆಯೇನು? ಎಲೆ ರಾಕ್ಷಸಿಯರೆ? ನಾನಂತೂ ಈ ದೇಹವನ್ನು ಬಿಟ್ಟು ಬಿಡುವೆನು. ನೀವು ಇದನ್ನು ಛೇದಿಸಿಯಾದರೂ ಛೇದಿಸಿರಿ! ತಿಂದಾದರೂ ತಿನ್ನಿರಿ! ಆ ಪ್ರಿಯನನ್ನು ಬಿಟ್ಟು ನಾನು ಇನ್ನು ಬಹುಕಾಲದವರೆಗೆ ಈ ದುಃಖವನ್ನು ಸಹಿಸಲಾರೆನು! ಎಲೈ! ನಾನು ನಿಶಾಚರನಾದ ಆ ರಾವಣ ನನ್ನು ಈ ನನ್ನ ಎಡಗಾಲಿನಿಂದಲಾದರೂ ಮುಟ್ಟಲಾರೆನು! ಇನ್ನು ಆ ನೀಚ ನಾದ ರಾಕ್ಷಸನನ್ನು ನಾನು ಕಾಮಿಸುವೆನೆ? ಆ ರಾವಣನು ತನಗಾಗುವ ಅವಮಾನವನ್ನಾಗಲಿ, ತನ್ನ ಸ್ಥಿತಿಯನ್ನಾಗಲಿ ತನ್ನ ಕುಲವನ್ನಾಗಲಿ ಯೋಚಿ ಸದೆ, ಹೀಗೆ ಘಾತುಕಸ್ವಭಾವದಿಂದ ನನ್ನನ್ನು ಪ್ರಾರ್ಥಿಸಿದನಲ್ಲವೆ? ನನ್ನನ್ನು ಸೀಳಿ ಕತ್ತರಿಸಿ ತುಂಡುಮಾಡಿದರೂ, ಕೊನೆಗೆ ಉರಿಯುವ ಬೆಂಕಿಯಲ್ಲಿ ಹಾಕಿದರೂ, ಆ ರಾವಣನನ್ನು ನಾನು ಸೇರುವವಳಲ್ಲ. ನೀವು ಸುಮ್ಮನೆ ಬೊಗಳುವುದರಿಂದೇನು? ನನ್ನ ಪತಿಯಾದ ಆ ರಾಮನೋ ಸಾಮಾನ್ಯನಲ್ಲ! ಲೋಕಪ್ರಸಿದ್ಧವಾದ ಖ್ಯಾತಿಯುಳ್ಳವನು! ಸಮಸ್ತವನ್ನೂ ಬಲ್ಲವನು! ಉಪ ಕಾರಸ್ಮರಣೆಯುಳ್ಳವನು! ಪ್ರಾಣಿಗಳಲ್ಲಿ ಮರುಕವುಳ್ಳವನು. ಸದಾಚಾರ ಶೀಲನು. ಇಷ್ಟಾದರೂ ಅವನು ಈಗ ನನ್ನಲ್ಲಿ ದಯಾಶೂನ್ಯನಾಗಿರುವುದು ನನ್ನ ದೌರ್ಭಾಗ್ಯವೇ ಹೊರತು ಬೇರೆಯಲ್ಲ. ಯಾವನು ಏಕಾಂಗಿಯಾಗಿ ನಿಂತು ಆ ಜನಸ್ಥಾನದಲ್ಲಿ ಹದಿನಾಲ್ಕುಸಾವಿರಮಂದಿ ರಾಕ್ಷಸರನ್ನೂ ಕ್ಷಣ ಮಾತ್ರದಲ್ಲಿ ಧ್ವಂಸಮಾಡಿದನೋ, ಅವನು ಈಗ ನನ್ನನ್ನು ಬಿಡಿಸಿಕೊಳ್ಳ ಲಾರನೇ! ಕೇವಲ ಅಲ್ಪವೀರ್ಯನಾದ ರಾಕ್ಷಸನು ನನ್ನನ್ನು ಈಗ ಬಲಾ ತ್ಕಾರದಿಂದ ತಡೆದಿಟ್ಟಿರುವನು. ಆದರೇನು? ಆ ರಾಮನಿಗೆ ಇದೊಂದು ಲಕ್ಷ್ಯವೆ? ಇವನನ್ನು ಯುದ್ಧದಲ್ಲಿ ಕೊಲ್ಲುವುದು ನನ್ನಪತಿಯಾದ ರಾಮ ನಿಗೆ ಅಸಾಧ್ಯವೆಂದೆಣಿಸುವಿರಾ? ದಂಡಕಾರಣ್ಯದಲ್ಲಿ ರಾಕ್ಷಸರಲ್ಲಿ ಮೇಲೆನಿಸಿ ಕೊಂಡ ಆ ವಿರಾಧನನ್ನೂ ಯಾವನು ಯುದ್ಧದಲ್ಲಿ ಕೊಂದನೋ, ಆ ರಾಮನಿಗೆ ನನ್ನನ್ನು ಕಾಪಾಡುವುದೊಂದಸಾಧ್ಯವೆ! ಈ ನಿಮ್ಮ ಲಂಕೆಯು ಇತರರಿಗೆ

ದುರ್ಗಮವಾಗಿ ಸಮುದ್ರಮಧ್ಯದಲ್ಲಿರುವುದೇನೋ ನಿಜವೆ! ಆದರೆ ಆ ರಾಮನ ಬಾಣಗಳಿಗೆ ಮಾತ್ರ ಇಲ್ಲಿ ಯಾವುದೂ ತಡೆಯಿಲ್ಲ. ಆಃ! ಅಂತಹ ದೃಢಪರಾಕ್ರಮವುಳ್ಳ ರಾಮನೂ ಕೂಡ ಈಗ ರಾಕ್ಷಸರ ಕೈಯಲ್ಲಿ ಸಿಕ್ಕಿಬಿದ್ದಿರುವ ತನ್ನ ಪ್ರಿಯಭಾರ್ಯೆಯಾದ ನನ್ನನ್ನು ಇದುವರೆಗೂ ಕಾಪಾಡದಿರುವುದಕ್ಕೆ ಏನು ಕಾರಣವೋ ತಿಳಿಯಲಿಲ್ಲ. ಒಂದುವೇಳೆ ನಾನು ಇಲ್ಲಿರುವುದನ್ನು ಲಕ್ಷ್ಮಣಾಗ್ರಜನಾದ ಆ ರಾಮನು ಇನ್ನೂ ತಿಳಿದಿರಲಾರನು. ಹಾಗೆ ತಿಳಿದಿದ್ದ ಪಕ್ಷದಲ್ಲಿ ನನ್ನ ತಿರಸ್ಕಾರವನ್ನು ಆತನು ಕ್ಷಣಮಾತ್ರವೂ ಸಹಿಸುತ್ತಿರಲಿಲ್ಲ. ನಾನು ರಾವಣನಿಂದ ಅಪಹೃತೆಯಾದುದನ್ನು ಗೃಧ್ರರಾಜನಾದ ಆ ಜಟಾಯುವೊಬ್ಬನು ತಿಳಿದಿದ್ದನು. ಅವನು ಈ ವಿಷಯವನ್ನು ತಪ್ಪದೆ ರಾಮನಿಗೆ ತಿಳಿಸುತ್ತಿದ್ದನು. ಆದರೆ ನನ್ನ ದೌರ್ಭಾಗ್ಯಕ್ಕೆ ಆತನೂ ಯುದ್ಧದಲ್ಲಿ ರಾವಣನಿಂದ ಹತನಾದನು. ಆ ಜಟಾಯುವು ಕೇವಲ ವೃದ್ಧನಾಗಿದ್ದರೂ, ನನ್ನನ್ನು ರಕ್ಷಿಸುವುದಕ್ಕಾಗಿ ಆ ಘೋರರಾಕ್ಷಸನೊಡನೆಯೂ ದ್ವಂದ್ವಯುದ್ಧಕ್ಕೆ ನಿಂತು, ಎಷ್ಟೋ ಸಾಹಸಕಾರ್ಯವನ್ನು ಮಾಡಿದನು. ನನ್ನ ದೌರ್ಭಾಗ್ಯಕ್ಕೆ ಅದೂ ವಿಫಲವಾಯಿತು. ಈಗಲೂ ರಘುವಂಶೋತ್ತಮನಾದ ರಾಮನು ನಾನು ಇಲ್ಲಿ ಸೆರೆಸಿಕ್ಕಿರುವ ವಿಷಯವನ್ನು ತಿಳಿದಪಕ್ಷದಲ್ಲಿ, ಇಷ್ಟರಲ್ಲಿಯೇ ಈ ಲೋಕದಲ್ಲಿ ರಾಕ್ಷಸರ ಹೆಸರೇ ಇಲ್ಲದಂತೆ ಮಾಡಿಬಿಡುವನು. ನಾನು ಇಲ್ಲಿರುವ ವಿಷಯವನ್ನು ಮಾತ್ರ ಆತನು ತಿಳಿದರೆ, ಈ ಲಂಕೆಯನ್ನೇ ಧೂಳಿಪ್ಪಿಸಿಬಿಡುವನು. ತನ್ನ ಬಾಣಗಳಿಂದ ಈ ಮಹಾಸಾಗರವನ್ನೂ ಶೋಷಿಸಿಬಿಡುವನು. ಕೊನೆಗೆ ನೀಚನಾದ ಆ ರಾವಣನ ಹೆಸರೇ ಇಲ್ಲದಂತೆಯೂ ಮಾಡುವನು. ಇದರಲ್ಲಿ ಸಂದೇಹವೇ ಇಲ್ಲ. ಇಲ್ಲಿ ನಾನು ಈಗ ಹೇಗೆ ಅಳುತ್ತಿರುವೆನೋ, ಹಾಗೆಯೇ ಇಲ್ಲಿನ ಒಂದೊಂದು ರಾಕ್ಷಸಗೃಹದಲ್ಲಿಯೂ ರಾಕ್ಷಸಸ್ತ್ರೀಯರು ವಿಧವೆಯರಾಗಿ ಗೋಳಿಡುವುದನ್ನು ಕೇಳುತ್ತಿದ್ದೆನು. ಮುಖ್ಯವಾಗಿ ಆ ರಾಮಲಕ್ಷ್ಮಣರು ಮಾತ್ರ ಈಗ ಲಂಕೆಯನ್ನು ಪ್ರವೇಶಿಸಿಬಿಟ್ಟರೆ, ಮನೆಮನೆಯನ್ನು ಹುಡುಕಿ ಇಲ್ಲಿ ರಾಕ್ಷಸರ ಹೆಸರೇ ಇಲ್ಲದಂತೆ ಮಾಡಿಬಿಡುವರು. ಅವರಿಬ್ಬರ ಕಣ್ಣಿಗೆ ಬಿದ್ದಮೇಲೆ ಯಾವ ಶತ್ರುವಾದರೂ ಒಂದು ಕ್ಷಣಮಾತ್ರವೂ ಜೀವಿಸಲಾರನು. ಆದರೇನು? ಇನ್ನಾದರೂ ಈ ವೃತ್ತಾಂತವು ರಾಮಲಕ್ಷ್ಮಣರಿಗೆ ತಿಳಿಯದೆ ಹೋಗದು. ಇನ್ನು ಶೀಘ್ರದಲ್ಲಿಯೇ ಈ ಲಂಕೆಯ ಬೀದಿಬೀದಿಗಳಲ್ಲಿಯೂ ಚಿತಾಗ್ನಿಯ ಹೊಗೆಯು ದಟ್ಟವಾಗಿ ತುಂಬಿಕೊಳ್ಳುವುದನ್ನೂ, ಹದ್ದುಕಾಗೆಗಳು ಅಲ್ಲಲ್ಲಿ ಗುಂಪುಕೂಡುವುದನ್ನೂ, ಈ ಲಂಕೆಯು ಶ್ಮಶಾನಕ್ಕೆ ಸಮವಾಗುವುದನ್ನೂ ನೋಡಬೇಕೆಂಬ ನನ್ನ ಕೋರಿ

ಕೆಯು ಈಡೇರುವುದರಲ್ಲಿ ಸಂದೇಹವಿಲ್ಲ. ಎಲೆ ರಾಕ್ಷಸಿಯರೆ ! ನಿಮ್ಮ ಈ ದುರ್ಮಾರ್ಗ ಪ್ರವರ್ತನೆಯೇ ರಾಕ್ಷಸರ ಮೂಲನಾಶನವನ್ನು ಸೂಚಿಸುತ್ತಿರುವುದು. ಇನ್ನು ಸ್ವಲ್ಪ ಕಾಲದಲ್ಲಿಯೇ ಈ ಲಂಕೆಯು ಕಳೆಗುಂದಿ ನಾಶಹೊಂದುವುದೆಂಬುದಕ್ಕೆ ಈಗಲೇ ದುರ್ನಿಮಿತ್ತಗಳು ತಲೆದೋರುತ್ತಿರುವುವು. ಈ ಲಂಕೆಯು ಎಷ್ಟೇ ದುರ್ಗಮವೆನಿಸಿಕೊಂಡಿದ್ದರೂ, ಪಾಪಾತ್ಮನಾದ ರಾವಣನು ಹತವಾದ ಕ್ಷಣದಲ್ಲಿಯೇ ಗಂಡನಿಲ್ಲದ ಮುಂಡೆಯಂತೆ ಕಳೆಗುಂದುವುದು. ಇದರಲ್ಲಿ ಸಂದೇಹವಿಲ್ಲ. ಹಾಗೆಯೇ ತನಗೆ ಪ್ರಭುವಾದ ರಾವಣನೂ, ರಕ್ಷಕರಾದ ರಾಕ್ಷಸರೂ ಸತ್ತಮೇಲೆ ಈ ಲಂಕೆಯು ವಿಧವೆಯಂತೆ ಯಾವುದೊಂದು ಮಂಗಳೋತ್ಸವವೂ ಇಲ್ಲದೆ ಕಾಂತಿವಿಹೀನವಾಗುವುದು. ಇನ್ನು ಶೀಘ್ರದಲ್ಲಿಯೇ ನಾನು ಇಲ್ಲಿನ ಮನೆಮನೆಗಳಲ್ಲಿಯೂ ದುಃಖದಿಂದ ಗೋಳಿಡುವ ರಾಕ್ಷಸಸ್ತ್ರೀಯರ ಗೋಳಾಟದ ಧ್ವನಿಯನ್ನು ಕೇಳುವುದರಲ್ಲಿ ಸಂದೇಹವಿಲ್ಲ. ಶೂರಾಗ್ರೇಸರನಾದ ಆ ರಾಮನು, ನಾನು ಈ ರಾವಣನ ಮನೆಯಲ್ಲಿರುವುದನ್ನು ಮಾತ್ರ ತಿಳಿದಪಕ್ಷದಲ್ಲಿ, ಆ ಕ್ಷಣವೇ ಅವನು ತನ್ನ ಬಾಣಗಳಿಂದ ಈ ಲಂಕೆಯನ್ನು ದಹಿಸಿಬಿಡುವನು. ಹೀಗೆ ರಾಮಬಾಣಜ್ವಾಲೆಗೆ ಸಿಕ್ಕಿದ ಈ ಲಂಕೆಯು ಕತ್ತಲೆಗವಿದು, ಕಾಂತಿಗುಂದಿ, ರಾಕ್ಷಸಶೂನ್ಯವಾಗುವುದರಲ್ಲಿ ಸಂದೇಹವಿಲ್ಲ ! ಆದರೆ ಈ ನನ್ನ ಕೋರಿಕೆಯು ಈಡೇರುವವರೆಗೂ ನಾನು ಮಾತ್ರ ಬದುಕಿರುವ ಆಸೆಯಿಲ್ಲ. ನೀಚನಾದ ಆ ಕ್ರೂರರಾಕ್ಷಸನು ನನಗೆ ನಿರ್ಣಯಿಸಿರುವ ಕಾಲಾವಧಿಯೂ ಕೊನೆಮುಟ್ಟುತ್ತ ಬಂದಿರುವುದು ! ಇನ್ನು ಎರಡು ತಿಂಗಳು ಮಾತ್ರವೇ ಉಳಿದಿರುವುದು. ಅಷ್ಟರಲ್ಲಿ ಆ ಪಾಪಿಯು ನನ್ನನ್ನು ಕೊಲ್ಲುವುದಾಗಿಯೂ ಹೇಳಿರುವನು. ಹೇಗಿದ್ದರೂ ಪಾಪಿಗಳಾದ ಈ ರಾಕ್ಷಸರು ಧರ್ಮಾಧರ್ಮಗಳನ್ನು ವಿಚಾರಿಸುವವರಲ್ಲ. ಆದುದರಿಂದ ನನ್ನನ್ನು ಕೊಲ್ಲುವುದಕ್ಕೂ ಹಿಂತೆಗೆಯರು. ಆ ರಾವಣನಿಂದ ನನಗೆ ಈ ದೊಡ್ಡ ಅನರ್ಥವು ಸಂಭವಿಸದೆ ಬಿಡದು. ಮಾಂಸಭಕ್ಷಕರಾದ ಈ ಕ್ರೂರರಾಕ್ಷಸರಿಗೆ ಸ್ವಲ್ಪವೂ ಧರ್ಮದೃಷ್ಟಿಯಿಲ್ಲ. ಆ ರಾವಣನು ನನ್ನೊಡನೆ ಹೇಳಿದಂತೆ, ನಿರ್ಣಯಕಾಲವು ಮುಗಿದ ಮರುದಿನವೇ ನನ್ನ ದೇಹವನ್ನು ತಂಗಳೂಟಕ್ಕಾಗಿ ಕಲ್ಪಿಸಿ ಭಕ್ಷಿಸಿಬಿಡುವನು. ಅಯ್ಯೋ ! ಪ್ರಿಯದರ್ಶನನಾಗಿಯೂ, ರಕ್ತಾಂತಲೋಚನನಾಗಿಯೂ ಇರುವ ಲೋಕಾಭಿರಾಮನಾದ ಆ ರಾಮನನ್ನಗಲಿ ಹೀಗೆ ದುಃಖಿತೆಯಾದ ನಾನು ಇನ್ನೇನು ಮಾಡಬಲ್ಲೆನು ! ಇನ್ನು ನನ್ನ ಗತಿಯೇನು ? ಈಗ ಯಾವ ಧರ್ಮಾತ್ಮನಾದರೂ ನನಗೆ ವಿಷಪ್ರದಾನವನ್ನು ಮಾಡುವ ಪಕ್ಷದಲ್ಲಿ ಅದನ್ನು ಕುಡಿದು ನನ್ನ ಪ್ರಾಣವನ್ನಾದರೂ ಬಿಡುವೆನು. ನನ್ನ ಪ್ರಿಯಪತಿಯನ್ನು ಕಾಣದಮೇಲೆ ಯಮದರ್ಶನವಾದರೂ ಮೇಲೆಂದು

ತೋರಿರುವುದು. ಆ ಲಕ್ಷ್ಮಣನಿಗಾಗಲಿ, ಅವನ ಅಣ್ಣನಾದ ರಾಮನಿಗಾಗಲಿ ನಾನು ಇನ್ನೂ ಬದುಕಿರುವೆನೆಂಬುದೇ ತಿಳಿಯದಿರಬಹುದು. ಹಾಗೆ ತಿಳಿದಿದ್ದಪಕ್ಷ ದಲ್ಲಿ ಇದುವರೆಗೂ ಅವರು ನನ್ನನ್ನು ಹುಡುಕದೆ ಸುಮ್ಮನಿರಲಾರರು. ಒಂದುವೇಳೆ ಆ ರಾಮನು ನನ್ನ ವಿರಹದುಃಖವನ್ನು ಸಹಿಸಲಾರದೆ ದೇಹವನ್ನು ಬಿಟ್ಟು, ಇಷ್ಟರಲ್ಲಿಯೇ ಸ್ವರ್ಗಕ್ಕೆ ಸೇರಿದ್ದರೂ ಇರಬಹುದು. ಅವನಿಗೆ ನನ್ನಲ್ಲಿರುವ ಪ್ರೀತಿ ಯನ್ನು ನೋಡಿದರೆ ಇದರಲ್ಲಿ ಸಂದೇಹವೇ ಇರದು. ಆಹಾ! ಹಾಗಿದ್ದರೆ ಪುಂಡರೀಕಾಕ್ಷನಾಗಿಯೂ, ಲೋಕಾಭಿರಾಮನಾಗಿಯೂ, ಇರುವ ಆ ನನ್ನ ಪತಿ ಯಾದ ರಾಮನನ್ನು ಈಗ ಸ್ವರ್ಗದಲ್ಲಿ ನೋಡುತ್ತಿರುವ ದೇವತೆಗಳೂ, ಗಂಧರ್ವರೂ, ಸಿದ್ಧರೂ, ಮಹರ್ಷಿಗಳೂ, ಎಷ್ಟು ಭಾಗ್ಯಶಾಲಿಗಳೋ! ಆ ರಾಮನು ರಾಜ ನಾದರೂ ಋಷಿಯಂತೆ ಬಹಳ ವಿರಕ್ತನು. ಬಹಳ ಗಂಭೀರಸ್ವಭಾವವುಳ್ಳವನು. ಆದುದರಿಂದ ಸುಖದುಃಖಗಳಿಗೆ ವಶನಾಗದೆ ಧರ್ಮದಲ್ಲಿ ಮಾತ್ರವೇ ದೃಷ್ಟಿಯಿಟ್ಟಿರು ವನು, ಕಾಮಕ್ಕೆ ವಶನಾಗುವವನಲ್ಲ. ಹೀಗೆ ವಿರಕ್ತನಾದ ಆತನಿಗೆ ನನ್ನಿಂದ ಆಗ ಬೇಕಾದುದೇನು? ಆದರೆ ಅವನಿಗೆ ನನ್ನಲ್ಲಿ ಅಸಾಧಾರಣವಾದ ಪ್ರೇಮವಿತ್ತೆಂಬುದ ರಲ್ಲಿ ಸಂದೇಹವಿಲ್ಲ. ಆದರೇನು! ಯಾವ ವಸ್ತುವನ್ನಾದರೂ ಕಣ್ಣಿನಿಂದ ನೋಡು ತ್ತಿರುವವರೆಗೆ ಮಾತ್ರವೇ ಅದರಲ್ಲಿ ಪ್ರೀತಿಯು ಹೆಚ್ಚುತ್ತಿರುವುದು! ಅದು ಕಣ್ಮರೆ ಯಾದಮೇಲೆ ಆ ಪ್ರೀತಿಯು ಕ್ರಮಕ್ರಮವಾಗಿ ತಗ್ಗಿಹೋಗುವುದೇ ಲೋಕ ಸ್ವಭಾವವು. ಆದುದರಿಂದ ಆ ರಾಮನಿಗೆ ನನ್ನಲ್ಲಿ ಮೊದಲಿದ್ದ ಪ್ರೀತಿಯು ಈಗೀಗ ತಗ್ಗಿಹೋಗಿದ್ದರೂ ಇರಬಹುದು. ಛೀ! ಆ ರಾಮನ ವಿಷಯದಲ್ಲಿ ಮಾತ್ರ ಹಾಗೆಣಿಸಬಾರದು. ಇದು ಕೃತಘ್ನರ ಸ್ವಭಾವವೇ ಹೊರತು ಆ ರಾಮನ ಸ್ವಭಾವವಲ್ಲ. ಅವನಿಗೆ ಒಂದಾವರ್ತಿ ಉಂಟಾದ ಪ್ರೇಮವು ಎಂದಿಗೂ ಕೆಡತಕ್ಕು ದಲ್ಲ. ಅಯ್ಯೋ! ನಾನು ಹೆಂಗಸಾಗಿ ಹುಟ್ಟಿಯೂ, ಪತಿಯನ್ನಗಲಿ ಹೀಗೆ ದುಃಖಿ ಸುತ್ತಿರುವೆನಲ್ಲಾ! ಆಹಾ! ನಾನು ಯಾವ ದುಷ್ಕರ್ಮಗಳನ್ನು ಮಾಡಿದೆನೋ" ನಾನು ಎಂತಹ ಭಾಗ್ಯಹೀನೆಯೋ! ಇನ್ನೆಷ್ಟು ಹೇಳಿದರೇನು? ಮಹಾತ್ಮ ನಾಗಿಯೂ, ಯಾವಾಗಲೂ ಯಾರಿಗೂ ಅಪ್ರಿಯವನ್ನು ಮಾಡದವನಾಗಿಯೂ, ಮಹಾಶೂರನಾಗಿಯೂ, ಶತ್ರುನಿಗ್ರಾಹಕನಾಗಿಯೂ ಇರುವ ಅಂತಹ ರಾಮ ನನ್ನಗಲಿ ಬದುಕಿರುವುದಕ್ಕಿಂತಲೂ, ನನಗೆ ಮರಣವೇ ಮೇಲು! ಒಂದುವೇಳೆ ಪುರುಷಶ್ರೇಷ್ಠರಾದ ಆ ಅಣ್ಣತಮ್ಮಂದಿರಿಬ್ಬರೂ ನನ್ನನ್ನು ಕಾಣದ ದುಃಖ ಕ್ಕಾಗಿ ವಿರಕ್ತಿಹೊಂದಿ, ತಮ್ಮ ಧನುರ್ಬಾಣಗಳನ್ನೂ ಬಿಸುಟು, ಫಲಮೂಲಗ ಳನ್ನು ತಿನ್ನುತ್ತಾ ತಪಸ್ವಿಗಳಂತೆ ಕಾಡುಕಾಡಾಗಿ ಸುತ್ತುತ್ತಿರಬಹುದೆ? ಅಥವಾ

ದುರಾತ್ಮನಾದ ರಾವಣನೇ ಶೂರನಾದ ಆ ರಾಮಲಕ್ಷ್ಮಣರನ್ನು ಇಷ್ಟರೊಳಗಾಗಿ ಮೋಸದಿಂದ ಕೊಂದುಹಾಕಿರಬಹುದೆ? ಸುಮ್ಮನೆ ಚಿಂತಿಸುವುದರಿಂದ ಫಲವೇನು! ಕಾಲಗತಿಯೇನೋ ಹೀಗೆ ಬಂದೊದಗಿತು. ಸರ್ವವಿಧದಿಂದಲೂ ಈಗ ನನಗೆ ಮರಣವೇ ಉತ್ತಮವೆಂದು ತೋರಿರುವುದು. ಆದಕ್ಕಾಗಿ ನಾನು ಆಸೆಪಟ್ಟರೂ ಫಲವೇನು? ಈ ಮಹಾದುಃಖದಲ್ಲಿಯೂ ನನಗೆ ಮರಣವು ಸಂಭವಿಸದಿರುವುದಲ್ಲಾ! ಲೋಕದಲ್ಲಿ ಧೈರ್ಯಶಾಲಿಗಳಾಗಿಯೂ, ಪಾಪವಿಮುಕ್ತರಾಗಿಯೂ, ಜಿತೇಂದ್ರಿಯರಾಗಿಯೂ ಇರುವ ಋಷಿಗಳು ಸುಖದುಃಖಗಳೆಂಬ ವಿಚಾರವನ್ನು ನಿಶ್ಶೇಷವಾಗಿ ಬಿಟ್ಟಿರುವುದರಿಂದ ಅವರೇ ಧನ್ಯರು. ಪ್ರಿಯವಸ್ತುವಿರುವವರೆಗೂ ದುಃಖವಿರುವುದಿಲ್ಲ. ಆ ಪ್ರಿಯವಸ್ತುವಿನಿಂದ ಭಯವೂ ಹೆಚ್ಚು! ಆದುದರಿಂದ ಪ್ರಿಯಾಪ್ರಿಯಗಳನ್ನು ಬಿಟ್ಟಿರುವವರೇ ಮಹಾತ್ಮರು. ಅಂತವರಿಗೆ ನಮಸ್ಕರಿಸುವೆನು. ನಾನಾದರೋ ಕೇವಲ ಪ್ರಿಯಪರಳಾಗಿದ್ದುದರಿಂದ, ಈಗ ನನಗೆ ಪರಮಪ್ರಿಯವಸ್ತುವಾದ ಆ ರಾಮನನ್ನೂ ಅಗಲಿ, ಪಾಪಿಯಾದ ರಾವಣನ ವಶದಲ್ಲಿ ಸಿಕ್ಕಿಬಿದ್ದೆನು. ಈ ಸ್ಥಿತಿಯಲ್ಲಿ ನಾನಂತೂ ಬದುಕಿರಲಾರೆನು. ಆದುದರಿಂದ ಪ್ರಾಣವನ್ನು, ಬಿಡುವೆನು" ಎಂದು ರೋದಿಸುತಿದ್ದಳು.

ಇಲ್ಲಿಗೆ ಇಪ್ಪತ್ತಾರನೆಯ ಸರ್ಗವು.

---

 ತ್ರಿಜಟೆಯು ತನ್ನ ಸ್ವಪ್ನವೃತ್ತಾಂತವನ್ನು ರಾಕ್ಷಸ ಸ್ತ್ರೀಯರಿಗೆ ತಿಳಿಸಿದುದು. 

ಸೀತೆಯು ಹೀಗೆ ಹೇಳಿದುದನ್ನು ಕೇಳಿ, ಅಲ್ಲಿದ್ದ ಘೋರರಾಕ್ಷಸಿಯರೆಲ್ಲರೂ ಕೋಪದಿಂದ ಮೈಮರೆತು ನಿಂತಿದ್ದರು. ಅಗಲೇ ಅವರಲ್ಲಿ ಕೆಲವರು ಸೀತೆಯು ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಕ್ಕೆ ನಿಶ್ಚಯಿಸಿರುವಳೆಂದು ರಾವಣನಿಗೆ ತಿಳಿಸುವುದಕ್ಕಾಗಿ ಓಡಿಹೋದರು. ಇತ್ತಲಾಗಿ ಸೀತೆಯಮುಂದೆ ನಿಂತಿದ್ದ ಕೆಲವು ಘೋರರಾಕ್ಷಸಿಯರು, ತಿರುಗಿ ಕೋಪದಿಂದ ಮುಂದೆ ಬಂದು, ಮೊದಲಿನಂತೆಯೇ ಪರುಷವಾಕ್ಯಗಳಿಂದ ಅವಳನ್ನು ಹೆದರಿಸುವುದಕ್ಕಾರಂಭಿಸಿ "ಎಲೆ ಸೀತೆ! ಚೆನ್ನಾಯಿತು. ನೀನು ಕೇವಲ ಅಯೋಗ್ಯಳೆಂಬುದು ಸ್ಪಷ್ಟವಾಯಿತು. ಆತ್ಮಹತ್ಯೆಯೆಂಬ ಈ ಪಾಪಕಾರ್ಯಕ್ಕೆ ನಿಶ್ಚಯಿಸಿದೆಯಾ? ನೀನಾಗಿ ಆ ಆತ್ಮಹತ್ಯಾಪಾತಕವನ್ನು ಏತಕ್ಕೆ ಕಟ್ಟಿಕೊಳ್ಳುವೆ? ಹೇಗಿದ್ದರೂ ಈಗಲೋ ಇನ್ನು ಕ್ಷಣಕಾಲದಲ್ಲಿಯೋ ರಾಕ್ಷಸಿಯರು ನಿನ್ನನ್ನು ಕೊಂದು ನಿನ್ನ ಮಾಂಸವನ್ನು ಸಂತೋಷದಿಂದ ತಿನ್ನುವರು" ಎಂದರು. ಹೀಗೆ ದುಷ್ಟರಾಕ್ಷಸಿಯರು ಸೀತೆಯ

ಮುಂದೆ ನಿಂತು ಹೆದರಿಸುತ್ತಿರುವುದನ್ನು, ಅಲ್ಲಿ ಮಲಗಿದ್ದ ವಿಭೀಷಣ ಪುತ್ರಿಯಾದ ತ್ರಿಜಟೆಯೆಂಬ ವೃದ್ಧರಾಕ್ಷಸಿಯೊಬ್ಬಳು ಕೇಳಿ, ಸೀತೆಯಲ್ಲಿ ಮರುಕಗೊಂಡು, ಆ ರಾಕ್ಷಸಿಯರನ್ನು ಕುರಿತು, "ಎಲೆ ದುಷ್ಟಾತ್ಮರೆ! ನಿಮ್ಮ ಹೆಣವನ್ನೇ ನೀವು ತಿನ್ನಬೇಕಾಗಿ ಬಂದಿರುವಾಗ, ಜನಕನಿಗೆ ಪ್ರಿಯಪುತ್ರಿಯಾಗಿಯೂ ದಶರಥರಾಜನಿಗೆ ಸೊಸೆಯಾಗಿಯೂ ಇರುವ ಈ ಸೀತೆಯನ್ನು ಭಕ್ಷಿಸುವಿರಾ? ಈಗಲೇ ನಾನು ಭಯಂಕರವಾದ ಒಂದು ಸ್ವಪ್ನವನ್ನು ಕಂಡೆನು. ಸಮಸ್ತರಾಕ್ಷಸರ ನಾಶಕ್ಕೂ, ಈಕೆಯ ಪತಿಯಾದ ರಾಮನ ಅಭ್ಯುದಯಕ್ಕೂ, ಸೂಚಕವಾದ ಆ ನನ್ನ ಸ್ವಪ್ನವು, ಕಿವಿಯಿಂದ ಕೇಳಿದ ಮಾತ್ರಕ್ಕೆ ಮೈಯ್ಯಲ್ಲಿ ರೋಮಾಂಚವನ್ನು ಹುಟ್ಟಿಸುವಷ್ಟು ಭಯಂಕರವಾಗಿರುವುದು. ಸಾಕು ಸುಮ್ಮನಿರಿ!" ಎಂದಳು. ಈ ಮಾತನ್ನು ಕೇಳಿದೊಡನೆಯೇ, ಆ ರಾಕ್ಷಸಿಯರ ಮನಸ್ಸಿನಲ್ಲಿ ಭಯವು ಹುಟ್ಟಿತು. ಅವರ ಕೋಪವೂ ಅಡಗಿತು. ಆಗ ಅವರೆಲ್ಲರೂ ಆತುರದಿಂದ ತ್ರಿಜಟೆಯನ್ನು ನೋಡಿ "ಅಮ್ಮಾ! ಆ ಸ್ವಪ್ನವೇನು ಹೇಳು? ಈ ರಾತ್ರಿಯಲ್ಲಿ ನೀನು ಕಂಡ ಭಯಂಕರಸ್ವಪ್ನದ ರೀತಿಯನ್ನು ವಿವರಿಸು" ಎಂದರು. ಆಗ ತ್ರಿಜಟೆಯು ಆ ರಾಕ್ಷಸಿಯರ ಮಾತನ್ನು ಕೇಳಿ, ತನ್ನ ಸ್ವಪ್ನವನ್ನು ಅವರಿಗೆ ವಿವರಿಸಿ ಹೇಳುವುದಕ್ಕೆ ತೊಡಗಿದಳು. "ಎಲೆ ರಾಕ್ಷಸಿಯರೆ! ಕೇಳಿರಿ! ನನ್ನ ಸ್ವಪ್ನದಲ್ಲಿ ರಾಮನು ಸಾವಿರಹಂಸಗಳಿಂದ ಅಂತರಿಕ್ಷದಲ್ಲಿ ಎಳೆಯಲ್ಪಡುತಿದ್ದ ಒಂದು ದಂತದ ಪಲ್ಲಕ್ಕಿಯನ್ನೇರಿ, ಬಿಳುಪಾದ ಪುಷ್ಪಮಾಲಿಕೆಯನ್ನೂ, ದುಕೂಲವನ್ನೂ ಧರಿಸಿ, ಲಕ್ಷ್ಮಣನೊಡನೆ ಬರುತಿದ್ದನು. ಮತ್ತು ಈ ಸೀತೆಯೂ ಕೂಡ ಬಿಳೀ ದುಕೂಲವನ್ನು ಧರಿಸಿ, ಸಮುದ್ರದಿಂದ ಪರಿವೃತವಾದ ಒಂದು ಶ್ವೇತಪರ್ವತವನ್ನೇರಿ ಕುಳಿತಿದ್ದಳು. ಹೀಗಿದ್ದ ಆ ಸೀತೆಯು, ಸೂರ್ಯನೊಡನೆ ·ಸೇರುವ ಪ್ರಭೆಯಂತೆ, ರಾಮನೊಡನೆ ಸೇರಿದಂತೆ ಸ್ವಪ್ನವನ್ನು ಕಂಡೆನು. ದಂತದ ಪಲ್ಲಕ್ಕಿಯಲ್ಲಿ ಕುಳಿತಿದ್ದ ರಾಮನು, ಅದರಿಂದಿಳಿದು ಬಂದು ಬೆಟ್ಟದಂತೆ ಮಹೋನ್ನತವಾದ ನಾಲ್ಕು ಕೊಂಬುಳ್ಳ, ಒಂದು[1] ಆನೆಯ ಮೇಲೆ ಏರಿ ಕುಳಿತನು. ಪುರುಷಶ್ರೇಷ್ಠರಾದ ಆ ರಾಮಲಕ್ಷ್ಮಣರಿಬ್ಬರೂ ಶುಭ್ರವಾದ ಪುಷ್ಪಮಾಲಿಕೆಯನ್ನೂ, ದುಕೂಲವನ್ನೂ

---

1. ಇಲ್ಲಿ "ಆರೋಹಣಂ ಗೋವೃಷಕುಂಜರಾಣಾಂ। ಪ್ರಾಸಾದಶೈಲಾಗ್ರವನಸ್ಪತೀನಾಂ॥ ವಿಷ್ಠಾನುಲೇಪೋ ರುದಿತಂ ಮೃತಂಚ। ಸ್ವಪ್ನೇಷ್ವಗಮ್ಯಾಗಮನಂಚಭವ್ಯಂ" ಎಂಬಂತೆ, ಗೂವು, ಎತ್ತು, ಆನೆ, ಉಪ್ಪರಿಗೆ, ಪರ್ವತಾಗ್ರ, ವೃಕ್ಷ, ಇವುಗಳನ್ನೇರುವುದೂ, ಮಲವನ್ನು ಲೇಪಿಸಿಕೊಳ್ಳುವುದೂ, ಅಳುವುದೂ, ಮರಣವೂ, ಅಗಮ್ಯಾಗಮನವೂ, ಸ್ವಪ್ನದಲ್ಲಿ ಶುಭಕರವೆಂದು ಸ್ವಪ್ನಶಾಸ್ತ್ರವು.

ಧರಿಸಿ, ತೇಜಸ್ಸಿನಿಂದ ದೇದೀಪ್ಯಮಾನರಾಗಿ, ಸೀತೆಯು ಕುಳಿತಿದ್ದ ಶ್ವೇತಪರ್ವತದ ಕಡೆಗೆ ಬಂದರು. 1 ಆ ಆನೆಯು ಪರ್ವತದ ಕಡೆಗೆ ಬಂದೊಡನೆ, ಸೀತೆಯು ಅದರ ಮೇಲೆ ತನ್ನ ಪತಿಯು ಏರಿರುವುದನ್ನು ಕಂಡು, ತಾನೂ ಅದರ ಹೆಗಲನ್ನೇರಿ ಕುಳಿತಳು. ಈ ಮೂವರೂ ಗಜಾರೂಢರಾಗಿ ಹೋಗುತ್ತಿರುವಾಗ, ಸೀತೆಯು ತನ್ನ ಪತಿಯತೊಡೆಯಿಂದ ಮೇಲಕ್ಕೆದ್ದು ಕೈನೀಡಿ 2 ಚಂದ್ರಸೂರ್ಯರನ್ನು ಕೈಯಿಂದ ಸವರುತ್ತಿರುವ ಹಾಗೆ ಕಂಡೆನು. ಆ ಮೇಲೆ ಈ ಮೂವರೂ ಕುಳಿತಹಾಗೆಯೇ ಆ ಆನೆಯು ಈ ಲಂಕೆಗೆ ಮೇಲಾಗಿ ಆಕಾಶದಲ್ಲಿ ನಡೆದುಬರುತ್ತಿತ್ತು. ಅಲ್ಲಿ ರಾಮನು ತನ್ನ ಪತ್ನಿಯಾದ ಸೀತೆಯೊಡನೆ ಒಂದು ರಥವನ್ನೇರಿ ಇಲ್ಲಿಗೆ ಬಂದನು. ಬಿಳೀಬಣ್ಣವುಳ್ಳ ಎಂಟು ವೃಷಭಗಳು ಆ ರಥವನ್ನೆಳೆಯುತಿದ್ದುವು. ಇವರೊಡನೆ ಲಕ್ಷ್ಮಣನೂ ಬಂದನು. ಹೀಗೆ ವೀರ್ಯವಂತನಾದ ರಾಮನು ತಮ್ಮನಾದ ಲಕ್ಷ್ಮಣನೊಡನೆಯೂ, ಪ್ರಿಯಪತ್ನಿಯಾದ ಸೀತೆಯೊಡನೆಯೂ ಕೂಡಿ ಲಂಕೆಯನ್ನು ಪ್ರವೇಶಿಸಿ, ಅಲ್ಲಿ ಸೂರ್ಯನಂತೆ ಜ್ವಲಿಸುತಿದ್ದ ಪುಷ್ಪಕವಿಮಾನವನ್ನೇರಿದನು. ಆ ವಿಮಾನದಮೇಲೆ ಕುಳಿತು ತನ್ನ ಅಯೋಧ್ಯೆಯ ಕಡೆಗೆ ಹೊರಟುದನ್ನೂ ಕಂಡೆನು. ಎಲೆ ರಾಕ್ಷಸಿಯರೆ! ಮಹಾವಿಷ್ಣುವಿನಂತೆ ವೀರ್ಯವುಳ್ಳವನಾಗಿಯೂ ಪುರುಷೋತ್ತಮನಾಗಿಯೂ ಇರುವ ರಾಮನು, ತನ್ನ ಪ್ರಿಯಸಹೋದರನಾದ ಲಕ್ಷ್ಮಣನೊಡನೆಯೂ, ಪ್ರಾಣಪ್ರಿಯೆಯಾದ ಸೀತೆಯೊಡನೆಯೂ ಸೇರಿದಂತೆ ನಾನು ಈ ನನ್ನ 3 ಸ್ವಪ್ನದಲ್ಲಿ ಕಂಡೆನು. ಮಹಾತೇಜಸ್ವಿಯಾದ ರಾಮನನ್ನು ಜಯಿಸಬೇಕೆಂದರೆ

---

1. ಇಲ್ಲಿ "ತತಸ್ತಸ್ಯನಗಸ್ಯಾಗ್ರೇ ಹ್ಯಾಕಾಶಸ್ಥಸ್ಯದಂತಿನಃ' ಎಂದುಮೂಲವು. ಇಲ್ಲಿರುವ "ಸ್ಯ" ಎಂಬಕ್ಷರವು ಗಾಯತ್ರಿಯ ಹದಿಮೂರನೆಯ ಅಕ್ಷರವಾಗಿರುವುದರಿಂದ, ಇದುವರೆಗೆ ರಾಮಾಯಣದಲ್ಲಿ ಹನ್ನೆರಡು ಸಹಸ್ರಗ್ರಂಥಗಳು ಮುಗಿದು, ಈ ಶ್ಲೋಕದಲ್ಲಿ ಹದಿಮೂರನೆಯ ಸಹಸ್ರವು ಆರಂಭಿಸುವುದಾಗಿ ಗ್ರಾಹ್ಯವು.

2. ಇಲ್ಲಿ "ಆದಿತ್ಯಮಂಡಲಂ ವಾತು ಚಂದ್ರಮಂಡಲಮೇವವಾ। ಸ್ವಪ್ನೇ ಗೃಹ್ಣಾತಿ ಹಸ್ತಾಭ್ಯಾಂ ರಾಜ್ಯಂ ಸಂಪ್ರಾಪ್ನುಯಾನ್ಮಹತ್" ಸ್ವಪ್ನದಲ್ಲಿ ಕೈಯಿಂದ ಚಂದ್ರಸೂರ್ಯಬಿಂಬಗಳನ್ನು ಹಿಡಿಯುವುದು ಶುಭಕರವೆಂದು ಸ್ವಪ್ನಾಧ್ಯಾಯವು.

3. ಇಲ್ಲಿನ ಸ್ವಪ್ನಕ್ರಮವೇನೆಂದರೆ ಮೊದಲು ರಾಮನು ಪಲ್ಲಕ್ಕಿಯಲ್ಲಿದ್ದಂತೆಯೂ, ಸೀತೆಯು ಶ್ವೇತಪರ್ವತದಮೇಲೆ ನಿಂತಂತೆಯೂ ಗೋಚರಿಸಿದರು. ಆಮೇಲೆ ರಾಮನು ಪಲ್ಲಕ್ಕಿಯಿಂದಿಳಿದು, ಲಕ್ಷ್ಮಣಸಹಿತನಾಗಿ ಆನೆಯನ್ನೇರಿ, ಶ್ವೇತಪರ್ವತದ ಬಳಿಗೆ ಬಂದು ಅಲ್ಲಿದ್ದ ಸೀತೆಯನ್ನು ಆನೆಯಮೇಲೆ ಕುಳ್ಳಿರಿಸಿಕೊಂಡನು. ಈ ಮೂವರೂ ಗಜಾರೂಢರಾಗಿ ಆಕಾಶದಲ್ಲಿ ಲಂಕೆಯಮೇಲೆ ಬರುವಾಗ, ಅಲ್ಲಿ ಒಂದು ರಥವನ್ನೇರಿ ಲಂಕೆಗಿಳಿದು, ಅಲ್ಲಿ ಪುಷ್ಪಕವನ್ನೇರಿ ಕುಳಿತರೆಂದು ಗ್ರಾಹ್ಯವು.

ದೇವಾಸುರರಿಂದಲಾಗಲಿ, ರಾಕ್ಷಸರಿಂದಲಾಗಲಿ, ಬೇರೆ ಯಾರಿಂದಲಾಗಲಿ ಸಾಧ್ಯವೇ ಅಲ್ಲ. ಪಾಪಿಗಳಿಗೆ ಸ್ವರ್ಗವು ಹೇಗೋ ಹಾಗೆ ಯಾರಿಗೂ ಅವನು ಈಡಾಗುವವನಲ್ಲ. ಆ ರಾಮನ ವಿಷಯವೂ ಹಾಗಿರಲಿ! ಆ ಸ್ವಪ್ನದಲ್ಲಿ ನಾನು ರಾವಣನ ವಿಷಯವಾಗಿ ಕಂಡುದನ್ನೂ ಹೇಳುವೆನು ಕೇಳಿರಿ! ಆ ರಾವಣನು ನೆನ್ನಿನ ರಾತ್ರಿಯಲ್ಲಿ ತನ್ನ ಸರ್ವಾಂಗಳ್ಕೂ ಎಣ್ಣೆಯನ್ನು ಹಚ್ಚಿಕೊಂಡು, ಕೆಂಪುಬಟ್ಟೆಯನ್ನುಟ್ಟು ಕೊರಳಲ್ಲಿ ಕಣಿಗಿಲೆ ಹೂವಿನ ಹಾರವನ್ನು ಧರಿಸಿ, ಎಣ್ಣೆಯನ್ನು ಕುಡಿಯುತ್ತಾ ಬರೀ ನೆಲದಲ್ಲಿ ಕುಳಿತಿರುವುದನ್ನು ಕಂಡೆನು. ಮತ್ತು ಅವನು ಬಹಳ ಮತ್ತನಾಗಿ, ತಲೆಯಲ್ಲಿ ಕೂದಲಿಲ್ಲದೆ, ಕರೀಬಟ್ಟೆಯನ್ನುಟ್ಟು ಪುಷ್ಪಕ ವಿಮಾನವನ್ನೇರಿ ಬರುತ್ತಿರುವಾಗ, ಆ ವಿಮಾನದಿಂದುರುಳಿ ನೆಲದ ಮೇಲೆ ಬಿದ್ದುದನ್ನೂ ಕಂಡೆನು. ಮತ್ತು ರಾವಣನನ್ನು ಒಬ್ಬ ಹೆಂಗಸು ದರದರನೆ ಎಳೆಯುತ್ತಿರುವುದನ್ನೂ ಕಂಡೆನು. ಕತ್ತೆಯನ್ನು ಕಟ್ಟಿದ ಒಂದು ರಥದ ಮೇಲೆ ಕುಳಿತು ರಕ್ತಚಂದನವನ್ನೂ ರಕ್ತಮಾಲಿಕೆಯನ್ನೂ ಧರಿಸಿ, ಆಗಾಗ ಎಣ್ಣೆಯನ್ನು ಕುಡಿಯುತ್ತಲೂ, ನಗುತ್ತಲೂ, ಕುಣಿಯುತ್ತಲೂ, ಹುಚ್ಚು ಹಿಡಿದವನಂತೆಯೂ, ಇಂದ್ರಿಯಗಳು ಕಲಗಿದವನಂತೆಯೂ, ಆ ರಥದಲ್ಲಿ ಕುಳಿತಂತೆಯೇ ದಕ್ಷಿಣಾಭಿಮುಖವಾಗಿ ಹೋಗುವುದನ್ನೂ ಕಂಡೆನು. ಮತ್ತೊಮ್ಮೆ ರಾಕ್ಷಸೇಶ್ವರನಾದ ನಮ್ಮ ರಾವಣನು ಕತ್ತೆಯಮೇಲೆ ಕುಳಿತು ಹೋಗುತ್ತಿರುವಾಗ, ಇದ್ದಕ್ಕಿದ್ದ–ಹಾಗೆ ಬೆಚ್ಚಿ ಬಿದ್ದು, ಆ ಕತ್ತೆಯಿಂದ ತಲೆಕೆಳಗಾಗಿ ನೆಲಕ್ಕೆ ಬಿದ್ದನು. ಆ ಕ್ಷಣವೇ ಬೆಜ್ಜರದಿಂದೆದ್ದು ನಿಂತು, ಭಯದಿಂದಲೂ ಮದದಿಂದಲೂ ಮೈಮರೆತು, ದಿಗಂಬರನಾಗಿ ಹುಚ್ಚನಂತೆ ನಾನಾವಿಧದಿಂದ ಪ್ರಲಾಪಿಸುತ್ತಿದ್ದನು. ಹಾಗೆಯೇ ಅಲ್ಲಲ್ಲಿ ಸುತ್ತುತ್ತಾ ಬಂದು, ಸಹಿಸಲಾರದ ದುರ್ಗಂಧವುಳ್ಳದಾಗಿ, ಭಯಂಕರವಾಗಿ, ಅಂಧಕಾರಪೂರ್ಣವಾಗಿ, ನರಕದಂತಿದ್ದ ಒಂದು ಅಮೇಧ್ಯದ ಗುಂಡಿಯಲ್ಲಿ ಬಿದ್ದು ಮುಳುಗಿ ಹೋದನು. ಮತ್ತು ಕೆಂಪುಬಟ್ಟೆಯನ್ನುಟ್ಟು, ಮೈಗೆ ಕೆಸರನ್ನು ಬಳಿದುಕೊಂಡಿದ್ದ ಕರಿಬಣ್ಣವುಳ್ಳ ಹೆಂಗಸೊಬ್ಬಳು, ಈ ರಾವಣನ ಕೊರಳಿಗೆ ಹಗ್ಗ ಹಾಕಿ ಯಮದಿಕ್ಕಿನ ಕಡೆಗೆ ಎಳೆಯುತಿದ್ದಳು. ನಮ್ಮ ಕುಂಭಕರ್ಣನೆಂಬ ರಾಕ್ಷಸನೂ ಇದೇ ಅವಸ್ಥೆಯನ್ನು ಅನುಭವಿಸುವಂತೆ ನಾನು ಸ್ವಪ್ನದಲ್ಲಿ ಕಂಡೆನು. ರಾವಣನ ಮಕ್ಕಳುಗಳೆಲ್ಲರೂ ಹಾಗೆಯೇ ಎಣ್ಣೆಯನ್ನು ಸವರಿಕೊಂಡು ತಿರುಗುವ ಹಾಗೆ ಕಂಡೆನು. ಮತ್ತು ರಾವಣನು ಹಂದಿಯನ್ನೂ, ಇಂದ್ರಜಿತ್ತುವು ಮೊಸಳೆ

---

ಇಲ್ಲಿ ಪ್ರಕೃತಾಸಂಗತಗಳಾದ ಕೆಲವು ಶ್ಲೋಕಗಳು ಕೆಲವು ಕೋಶಗಳಲ್ಲಿ ಮಾತ್ರವೇ ಕಾಣುವುದರಿಂದ, ಅವು ಪ್ರಕ್ಷಿಪ್ತಗಳೆಂದು ಬಿಡಲ್ಪಟ್ಟಿವೆ.

ಯನ್ನೂ, ಕುಂಭಕರ್ಣನು ಒಂಟೆಯನ್ನೂ ಏರಿ. ಈ ಮೂವರೂ ಒಟ್ಟಿಗೆ ದಕ್ಷಿಣ ದಿಕ್ಕಿಗೆ ಹೋಗುತ್ತಿದ್ದರು. ಈ ರಾಕ್ಷಸಸಮೂಹದಲ್ಲಿ ವಿಭೀಷಣನೊಬ್ಬನು ಮಾತ್ರವೇ ಬಿಳೀಬಟ್ಟೆಯನ್ನುಟ್ಟು, ಬಿಳೀಪುಷ್ಪಮಾಲಿಕೆಯನ್ನು ಧರಿಸಿ, ಬಿಳೀ ಚಂದನವನ್ನು ಲೇಪಿಸಿಕೊಂಡು ಶ್ವೇತಚ್ಛತ್ರದೊಡನೆ ಬರುತಿದ್ದನು. ಇವನ ಮುಂದೆ ಮಹಾವೈಭವದಿಂದ ಶಂಖದುಂದುಭಿಗಳೇ ಮೊದಲಾದ ವಾದ್ಯಗಳ ಧ್ವನಿಗಳೂ, ನೃತ್ತಗೀತಗಳೂ ನಡೆಯುತ್ತಿದ್ದುವು. ಹೀಗೆ ಸರ್ವಾಲಂಕಾರಗಳಿಂದ ಶೋಭಿಸುತ್ತಿದ್ದ ವಿಭೀಷಣನು ಬೆಟ್ಟದಂತೆ ಮಹೋನ್ನತವಾಗಿಯೂ, ಮೇಘದಂತೆ ಗಂಭೀರಧ್ವನಿಯುಳ್ಳುದಾಗಿಯೂ ಇದ್ದ ನಾಲ್ಕು ಕೊಂಬುಳ್ಳ ಒಂದು ದಿವ್ಯಗಜವನ್ನೇರಿ. ನಾಲ್ಕು ಮಂತ್ರಿಗಳೊಡನೆ ಆಕಾಶಮಾರ್ಗದಲ್ಲಿ ಬರುತ್ತಿದ್ದನು. ಮತ್ತು ಬೇರೆ ಕೆಲವು ರಾಕ್ಷಸರು ಕೆಂಪುಬಟ್ಟೆಯನ್ನೂ, ಕೆಂಪು ಹೂಗಳನ್ನೂ ಧರಿಸಿ ಎಣ್ಣೆಯನ್ನು ಕುಡಿಯುತ್ತ ಗುಂಪುಗುಂಪಾಗಿ ಗಾನವಾದ್ಯಗಳೊಡನೆ ಬರುತ್ತಿದ್ದರು. ಮತ್ತು ಮನೋಹರವಾದ ಈ ಲಂಕಾನಗರಿಯೂ ಕೂಡ ತನ್ನಲ್ಲಿರುವ ರಥ ಗಜ ತುರಗಾದಿ ಸೈನ್ಯಗಳೊಡನೆ ಸೇರಿ ಸಮುದ್ರದಲ್ಲಿ ಮುಳುಗಿ ಹೋಗುವಂತೆಯೂ ಸ್ವಪ್ನವನ್ನು ಕಂಡೆನು. ರಾವಣರಕ್ಷಿತವಾದ ಈ ಲಂಕೆಯನ್ನು ರಾಮನಿಗೆ ದೂತನಾಗಿ ಬಂದ ಒಬ್ಬ ಕಪಿಯು, ಕ್ಷಣಮಾತ್ರದಲ್ಲಿ ಸುಟ್ಟುಬಿಟ್ಟಂತೆಯೂ ಸ್ವಪ್ನವನ್ನು ಕಂಡೆನು. ನಮ್ಮ ಕಡೆಯ ರಾಕ್ಷಸಸ್ತ್ರೀಯರನೇಕರು ಎಣ್ಣೆಯನ್ನು ಕುಡಿದು ನರ್ತಿಸುತ್ತಲೂ, ನಗುತ್ತಲೂ, ಕೂಗುತ್ತಲೂ, ಭಸ್ಮರಾಶಿಯಿಂದ ದುರ್ಗಮವಾದ ಈ ಲಂಕೆಗೆ ಪ್ರವೇಶಿಸುವುದನ್ನೂ ಕಂಡೆನು. ಕುಂಭಕರ್ಣನೇ ಮೊದಲಾದ ರಾಕ್ಷಸವೀರರೆಲ್ಲರೂ ಕೆಂಪುಬಟ್ಟೆಯನ್ನುಟ್ಟು ಗಂಜಲದ ಹಳ್ಳದಲ್ಲಿ ಮುಳುಗಿ ಹೋದಂತೆಯೂ ಸ್ವಪ್ನವನ್ನು ಕಂಡೆನು. ಎಲೆ ರಾಕ್ಷಸಿಯರೆ, ಈ ಅನರ್ಥಗಳನ್ನು ಕೇಳಿದಿರಲ್ಲವೆ? ಇನ್ನಾದರೂ ತೊಲಗಿ ಹೋಗಿರಿ! ನೀವೆಲ್ಲರೂ ನಿರ್ನಾಮವಾಗುವುದೇ ನಿಜವು. ರಾಮನು ಸೀತೆಯನ್ನು ಪಡೆದಂತೆಯೇ ತಿಳಿಯಿರಿ. ಆ ರಾಮನೋ ನಮ್ಮ ಕಡೆಯ ರಾಕ್ಷಸರಲ್ಲಿ ಬಹಳ ಕೋಪವನ್ನಿಟ್ಟಿರುವನು. ಸಮಸ್ತ ರಾಕ್ಷಸರೊಡನೆ ನಿಮ್ಮನ್ನೂ ಧ್ವಂಸಮಾಡಿಬಿಡುವನು. ತನಗೆ ಪ್ರಾಣಪ್ರಿಯಳಾಗಿಯೂ, ಮಾನ್ಯಳಾಗಿಯೂ, ಕಾಡಿನಲ್ಲಿಯೂ ತನ್ನನ್ನು ಬಿಡದೆ ಹಿಂಬಾಲಿಸಿ ಬಂದ ಮಹಾಪತಿವ್ರತೆಯಾಗಿಯೂ ಇರುವ ಈ ಸೀತೆಯನ್ನು ನೀವು ಹೀಗೆ ಹೆದರಿಸುವುದನ್ನಾಗಲಿ, ನಿಂದಿಸುವುದನ್ನಾಗಲಿ ಕಂಡರೆ, ಅವನು ಎಷ್ಟುಮಾತ್ರವೂ ಸಹಿಸಲಾರನು. ಆದುದರಿಂದ ಇನ್ನುಮೇಲೆ ನಿಮ್ಮ ಕ್ರೂರವಾಕ್ಯಗಳನ್ನು ನಿಲ್ಲಿಸಿರಿ! ಪ್ರಿಯವಾಕ್ಯಗಳನ್ನು ಹೇಳಿರಿ! ಇನ್ನುಮೇಲೆ ನಾವು ಈ ಸೀತೆಯಲ್ಲಿಯೇ

ಶರಣಾಗತರಾಗಿ, ಅವಳ ಮನ್ನಣೆಯನ್ನು ಬೇಡಿಕೊಳ್ಳುವುದೇ ನನಗೆ ಮೇಲೆಂದು ತೋರಿರುವುದು. ಎಲೆ ರಾಕ್ಷಸಿಯರೆ! ಇವಳು ದುಃಖಿತೆಯಾಗಿರುವ ಸಮಯದಲ್ಲಿಯೇ ನಾನು ಈ ಭಯಂಕರವಾದ ಸ್ವಪ್ನವನ್ನು ಕಂಡಿರುವೆನು. ಆದುದರಿಂದ ಈ ಸ್ವಪ್ನದ ಫಲವೇನೆಂದು ವಿಚಾರಿಸುವ ಪಕ್ಷದಲ್ಲಿ ಇವಳಿಗೆ ಸಂಭವಿಸಿರುವ ಸಮಸ್ತದುಃಖಗಳೂ ನೀಗಿ ಸುಖವುಂಟಾಗುವುದರಲ್ಲಿ ಸಂದೇಹವಿಲ್ಲ. ಎಲೆ ರಾಕ್ಷಸಿಯರೆ! ನೀವು ಇದುವರೆಗೂ ಇವಳನ್ನು ಹೆದರಿಸಿ ಕ್ರೂರವಾಕ್ಯಗಳನ್ನಾಡಿದ್ದರೂ ಚಿಂತೆಯಿಲ್ಲ. ಈಗಲೂ ನಾವು ಅವಳ ದಯೆಯನ್ನು ಸಂಪಾದಿಸಬಹುದು. ಸುಮ್ಮನೆ ಮನಸ್ಸಿನಲ್ಲಿ ಚಿಂತಿಸುವುದರಿಂದ ಫಲವಿಲ್ಲ. ಈಗಲಾದರೋ ನಮ್ಮ ಕಡೆಯ ಸಮಸ್ತರಾಕ್ಷಸರಿಗೂ, ರಾಮನಿಂದಲೇ ಮಹಾಭಯವು ಪ್ರಾಪ್ತವಾಗಿರುವುದು. ಈಗಲೇ ನೀವೆಲ್ಲರೂ ಈ ಸೀತೆಯನ್ನು ನಮಸ್ಕರಿಸಿ ಬೇಡಿಕೊಂಡರೆ, ಅವಳ ದಯೆಯನ್ನು ಸಂಪಾದಿಸಬಹುದು. ರಾಮನಿಂದ ನಮಗೆ ಯಾವ ಭಯವೂ ಇಲ್ಲದಂತೆ ರಕ್ಷಿಸುವುದಕ್ಕೂ ಈಕೆಗೆ ಶಕ್ತಿಯುಂಟು. ಇನ್ನೊಂದು ವಿಷಯವನ್ನು ಹೇಳುವೆನು ಕೇಳಿರಿ! ವಿಶಾಲಾಕ್ಷಿಯಾದ ಈ ಸೀತೆಯ ಅವಯವಗಳಲ್ಲಿ ದುರ್ಲಕ್ಷಣವನ್ನು ಸೂಚಿಸತಕ್ಕ ರೇಖೆಯು ಸ್ವಲ್ಪಮಾತ್ರವಾದರೂ ನನಗೆ ಕಂಡುಬರುವುದಿಲ್ಲ. ಆದುದರಿಂದ ಇವಳು ಎಷ್ಟುಮಾತ್ರವೂ ದುಃಖವನ್ನನುಭವಿಸತಕ್ಕವಳಲ್ಲ. ದೇವಭೋಗಗಳನ್ನೇ ಅನುಭವಿಸತಕ್ಕವಳು. ಹೀಗೆ ಸಮಸ್ತಶುಭಲಕ್ಷಣಗಳಿಂದಲೂ ಕೂಡಿದ ಈ ಸೀತಾದೇವಿಗೆ ದೇಹಚ್ಛಾಯೆಯಲ್ಲಿ ಮಾತ್ರ ಸ್ವಲ್ಪವಾಗಿ ನ್ಯೂನತೆಯು ಕಂಡುಬರುವುದರಿಂದ, ಅದೊಂದೇ ಹೀಗೆ ದುಃಖಹೇತುವಾಗಿರುವುದೆಂದು ಶಂಕಿಸುವೆನು. ರಾಕ್ಷಸೇಂದ್ರನಾದ ನಮ್ಮ ರಾವಣನ ನಾಶಕ್ಕೂ, ರಾಮನ ಜಯಕ್ಕೂ ಹಾರೈಸುತ್ತಿರುವ ಈ ಸೀತೆಯ ಕೋರಿಕೆಯು ಶೀಘ್ರದಲ್ಲಿಯೇ ಈಡೇರುವುದರಲ್ಲಿ ತಡೆಯಿಲ್ಲ. ಈಗ ನಾನು ಕಂಡ ಸ್ವಪ್ನವೇ ಈ ಸೀತೆಯು ಇನ್ನು ಶೀಘ್ರದಲ್ಲಿಯೇ ದೊಡ್ಡ ಪ್ರಿಯವಾರ್ತೆಯನ್ನು ಕೇಳುವಳೆಂಬುದಕ್ಕೆ ಶುಭಸೂಚಕವಾಗಿರುವುದು. ಮತ್ತು ಕಮಲದಂತೆ ವಿಸ್ತಾರವಾದ ಈಕೆಯ ಎಡದ ಕಣ್ಣು ಆಗಾಗ ಅದಿರುವುದನ್ನೂ ನೋಡುತ್ತಿರುವೆನು. ಮತ್ತು ಇವಳ ಎಡಭುಜವು ನಿಷ್ಕಾರಣವಾಗಿ ಅದಿರುವುದನ್ನೂ ನೋಡಿದೆನು. ಆಗಾಗ ಇವಳ ತೋಳಿನಲ್ಲಿ ರೋಮಾಂಚವು ಹುಟ್ಟುತ್ತಿರುವುದು. ಆನೆಯ ಸೊಂಡಿಲಿಗೆ ಸಮಾನವಾದ ಈಕೆಯ ಎಡದ ತೊಡೆಯೂ ಆಗಾಗ ಅದಿರುತ್ತಿರುವುದು. ಇವೆಲ್ಲವನ್ನೂ ನೋಡಿದರೆ, ಈಗಾಗಲೇ ಆ ರಾಮನು ಇವಳಿಗಿದಿರಾಗಿ ಬಂದು ನಿಂತಿರುವಂತೆ ಸೂಚನೆಯನ್ನು ಕೊಡು

ತ್ತಿರುವುದು. ಎಲೆ ರಾಕ್ಷಸಿಯರೆ! ಅದೋ! ನೋಡಿರಿ. [1] ಪಿಂಗಳವೆಂಬ ಶಕುನ ಪಕ್ಷಿಯೂ ಕೂಡ, ಮರದ ಕೊನೆಯಲ್ಲಿ ಕುಳಿತು, ಬಹಳ ಸಂತೋಷದಿಂದ ಮೇಲಿ

---

1. ಇಲ್ಲಿ "ಪಕ್ಷೀಚ ಶಾಖಾನಿಲಯಃ ಪ್ರಹೃಷ್ಟಃ। ಪುನಃ ಪುನಶ್ಚೋತ್ತಮಸಾಂತ್ವವಾದೀ। ಸುಸ್ವಾಗತಾಂ ವಾಚಮುದೀರಯಾನ। ಪುನಃಪುನಃ ಚೋದಯತೀವ ಹೃಷ್ಟಃ॥" ಎಂದು ಮೂಲವು. ವಿಶೇಷಾರ್ಥವು. ಈ ರಾಮಾಯಣವು ಉತ್ತಮಕಾವ್ಯವೆನಿಸಿರುವುದು. ವ್ಯಂಗ್ಯಪ್ರಧಾನವಾಗಿರುವುದೇ ಉತ್ತಮಕಾವ್ಯದ ಲಕ್ಷಣವು. ವ್ಯಂಗ್ಯದಲ್ಲಿ ಪದಗತವೆಂದೂ, ವಾಕ್ಯಗತವೆಂದೂ, ಪ್ರಬಂಧಗತವೆಂದೂ ಮೂರು ವಿಧವು. ಈ ಸುಂದರಕಾಂಡವೆಂಬ ಪ್ರಬಂಧದಲ್ಲಿ, ಅನಾದಿಭಗವತ್ಸಂಬಂಧವುಳ್ಳ ಚೇತನನನ್ನು ಉಜ್ಜೀವಿಸುವಂತೆ ಮಾಡುವುದಕ್ಕಾಗಿ ಆಚಾರ್ಯನ ಪ್ರವೃತ್ತಿಯು ವ್ಯಂಗ್ಯವಾಗಿ ಪ್ರತಿಪಾದಿಸಲ್ಪಟ್ಟಿರುವುದು. ಈ ಅರ್ಥವು "ತತೋ ರಾವಣನೀತಾಯಾಃ" ಎಂಬ ಈ ಕಾಂಡದ ಪ್ರಥಮ ಶ್ಲೋಕದಲ್ಲಿಯೇ ಸೂಚಿತವಾಗಿರುವುದು. ಈ ಕಾಂಡದಲ್ಲಿ ಲಂಕೆಯೆಂಬ ಪದದಿಂದ ಚೇತನಶರೀರವು ಸೂಚಿತವಾಗುವುದು. ಹೀಗೆಯೇ ಏಕಾಕ್ಷಮೊದಲಾದ ಶಬ್ದಗಳಿಂದ ಇಂದ್ರಿಯಗಳೂ, ರಾವಣಕುಂಭಕರ್ಣರಿಂದ ಅಹಂಕಾರಮಮಕಾರಗಳೂ, ಇಂದ್ರಜಿತ್ತು ಮೊದಲಾದವರಿಂದ ಕಾಮಕ್ರೋಧಾದಿಗಳೂ ಸೂಚಿತವಾಗುವುವು. ದೇಹಬದ್ಧನಾದ ಚೇತನನು ಲಂಕೆಯಲ್ಲಿ ನಿರುದ್ಧಳಾದ ಸೀತೆಯನ್ನು ಹೋಲುವನು. ಆ ಚೇತನನಿಗೆ ಭಗವಂತನ ಜ್ಞಾನವನ್ನುಪದೇಶಿಸುವ ಆಚಾರ್ಯಸ್ಥಾನದಲ್ಲಿ, ಹನುಮಂತನನ್ನು ಗ್ರಹಿಸಬೇಕು. ಈ ಮೇಲಿನ ಶ್ಲೋಕದಿಂದ ಆ ಆಚಾರ್ಯಲಕ್ಷಣಗಳು ಸೂಚಿಸಲ್ಪಡುವುವು. ಹೇಗೆಂದರೆ (ಪಕ್ಷೀ) ಪಕ್ಷವುಳ್ಳವನು. ಪಕ್ಷಗಳು ಗಮನಸಾಧನಗಳಾದುದರಿಂದ ಇಲ್ಲಿನ ಪಕ್ಷಶಬ್ದದಿಂದ ಜ್ಞಾನಕರ್ಮಗಳು ಸೂಚಿಸಲ್ಪಡುವುವು. ಇದರಿಂದ "ಉಭಾಭ್ಯಾಮೇವಪಕ್ಷಾಭ್ಯಾಂ ಯಥಾಖೇ ಪಕ್ಷಿಣಾಂಗತಿಃ॥ ತಥೈವ ಜ್ಞಾನಕರ್ಮಾಭ್ಯಾಂ ನಿಯತಾ ಪರಮಾಗತಿಃ॥" ಪಕ್ಷಿಗಳಿಗೆ ರೆಕ್ಕೆಗಳಿಂದ ಹೇಗೆ ಗಗನಸಂಚಾರ ಶಕ್ತಿಯುಂಟಾಗುವುದೋ, ಹಾಗೆಯೇ ಪುರುಷನಿಗೆ ಜ್ಞಾನಕರ್ಮಗಳೆರಡರಿಂದಲೇ ಪರಗತಿಯುಂಟಾಗುವುದು. ಮತ್ತು "ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾ ನಾಶಕೇನ" ಎಂಬ ಶ್ರುತಿಯಂತೆ ಈ ಜ್ಞಾನಕರ್ಮಗಳೆರಡರಲ್ಲಿ ಒಂದಕ್ಕೊಂದಕ್ಕೆ ಅಂಗಾಂಗಿಭಾವವಿರುವುದರಿಂದ, ಇಲ್ಲಿ ಸಮುಚ್ಚಯವು ವಿವಕ್ಷಿತವು. ಇದರಿಂದ "ಆಚಿನೋತಿಹಿ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ ಸ್ವಯಮಾಚರತೇ ಯಸ್ಮಾತ್ತದಾಚಾರ್ಯ ಉಚ್ಯತೇ" ಎಂಬಂತೆ ಆಚಾರ್ಯಶಬ್ದಾರ್ಥವು ಹೇಳಲ್ಪಟ್ಟಿರುವುದು. (ಶಾಖಾನಿಲಯಃ) ವೇದಶಾಖೆಗಳನ್ನಾಶ್ರಯಿಸಿದವನು, ಎಂದರೆ ವೇದೈಕಪರನೆಂದು ಭಾವವು. ವೇದಾಧ್ಯಯನವನ್ನು ಮಾಡಿ ಅದನ್ನು ಬಿಡುವುದು ಪ್ರತ್ಯವಾಯಕರವೆಂದು ಶ್ರುತಿಯು. ಇದಲ್ಲದೆ ಶಿಕ್ಷೆಯುಕ್ತಿಯೂ, "ಅಧೀತ್ಯಾಪಿ ಯೋವೇದಂ ವಿಮುಂಚತಿನರಾಧಮಃ॥ ಭ್ರೂಣಹಾಸಃವಿಜ್ಞೇಯೋ ವಿಯೋನಿಮಧಿಗಚ್ಛತಿ॥" ಅಧ್ಯಯನಮಾಡಿದ ವೇದವನ್ನು ಬಿಟ್ಟುಬಿಡುವ ಮನುಷ್ಯಾಧ

ಮೇಲೆ ಮಧುರವಾದ ಸಾಂತ್ವವಾಕ್ಯಗಳನ್ನು ನುಡಿಯುವುದಲ್ಲದೆ, ಬಂಧುಗಳನ್ನು

---

ಮನು ಭ್ರೂಣಹತ್ಯಾಪಾತಕಕ್ಕೊಳಗಾಗುವನೆಂದು ಹೇಳಿರುವುದರಿಂದ, ಆ ಶಾಸ್ತ್ರಾರ್ಥವನ್ನು ತಿಳಿದು ಅನವರತವೂ ವೇದಾಧ್ಯಯನದಲ್ಲಿ ನಿರತನಾದವನೆಂದು ಭಾವವು. ಮತ್ತು (ನಿಲಯಃ) ಎಂಬುದರಿಂದ ವೇದಾರ್ಥಗಳನ್ನು ಶ್ರವಣಮನನನಿಧಿಧ್ಯಾಸನಾದಿಗಳಿಂದ ಅನುಷ್ಠಿಸುವವನೆಂದೂ ಅರ್ಥವು. ಇದರಿಂದ "ಆಚಾರ್ಯೋ ವೇದಸಂಪನ್ನೋ ವಿಷ್ಣುಭಕ್ತೋ ವಿಮತ್ಸರಃ। ಮಂತ್ರಜ್ಞೋ ಮಂತ್ರಭಕ್ತಶ್ಚ ಸದಾ ಮಂತ್ರಾಶ್ರಯಶ್ಶುಚಿಃ। ಗುರುಭಕ್ತಿಸಮಾಯುಕ್ತಃ ಪುರಾಣಜ್ಞೋ ವಿಶೇಷತಃ। ಏವಂ ಲಕ್ಷಣಸಂಪನ್ನೋ ಗುರುರಿತ್ಯಭಿಧೀಯತೇ" ವೇದಗಳನ್ನು ತಿಳಿದವನೂ, ವಿಷ್ಣುಭಕ್ತಿಯುಳ್ಳವನೂ, ಮಾತ್ಸರ್ಯವಿಲ್ಲದವನೂ, ಮಂತ್ರವನ್ನು ತಿಳಿದು ಮಂತ್ರಭಕ್ತಿಯುಳ್ಳವನಾಗಿ ಮಂತ್ರವನ್ನಾಶ್ರಯಿಸಿದವನೂ, ಶುದ್ಧಾತ್ಮನೂ, ಗುರುಭಕ್ತಿಯುಳ್ಳವನೂ, ವಿಶೇಷವಾಗಿ ಪುರಾಣವನ್ನು ಬಲ್ಲವನೂ, ಆಚಾರ್ಯನೆನಿಸುವನು. ಎಂಬ ಈ ಆಚಾರ್ಯ ಲಕ್ಷಣಗಳೆಲ್ಲವೂ ಸೂಚಿಸಲ್ಪಡುವುವು. (ಪ್ರಹೃಷ್ಟಃ) ಯಾವಾಗಲೂ ಸಂತುಷ್ಟಹೃದಯವುಳ್ಳವನು. ಇದರಿಂದ ಸಮಸ್ತಜನಗಳಿಗೂ ಸರ್ವದಾಸೇವ್ಯನೆಂದೂ ಸೂಚಿತವು. (ಪುನಃಪುನಶ್ಚೋತ್ತಮಸಾಂತ್ವವಾದೀ) ಇಲ್ಲಿ ಉತ್ತಮನೆಂದರೆ "ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ" ಎಂಬಂತೆ ಪರಮಾತ್ಮನೆಂದರ್ಥವು. ಪರಮಾತ್ಮವಿಷಯವಾದ ಸಾಂತ್ವವಾಕ್ಯಗಳನ್ನು ಶಿಷ್ಯರಿಗೆ ಹೇಳುವವನು. "ತ್ವಂ ಮೇಽಹಂ ಮೇ ಕುತಸ್ತತ್ತದಪಿ ಕುತ ಇದಂ? ವೇದಮೂಲಪ್ರಮಾಣಾದೇತಚ್ಚಾನಾದಿಸಿದ್ಧಾದನುಭವವಿಭವಾತ್ತರ್ಹಿ ಸಾಕ್ರೋಶ ಏವ। ಕ್ವಾಕ್ರೋಶಃ ಕಸ್ಯ ಗೀತಾದಿಷು ಮಮ ವಿದಿತಃ ಕೋಽತ್ರ ಸಾಕ್ಷೀ ಸುಧೀಸ್ಸ್ಯಾದ್ಧಂತ। ತ್ವತ್ಪಕ್ಷಪಾತೀ ಸ ಇತಿ ನೃಕಲಹೇ ಮೃಗ್ಯಮಧ್ಯಸ್ಥವತ್ತ್ವಂ" ಎಂಬ ಪರಾಶರಭಟ್ಟರ ಶ್ರೀಸೂಕ್ತಿಯಂತೆ, ಭಗವದ್ವಿಷಯವಾಗಿ ಮನುಷ್ಯನು ಮಾಡುವ ವಿವಾದದಲ್ಲಿ "ಯಮೋ ವೈವಸ್ವತೋ ರಾಜಾ ಯಸ್ತವೈಷ ಹೃದಿ ಸ್ಥಿತಃ। ತೇನ ಚೇದವಿವಾದಸ್ತೇ ಮಾ ಗಂಗಾಂ ಮಾ ಕುರೂನ್ ಗಮಃ" ಎಂದು ಹಿತವಾದದಿಂದ ಬೋಧಿಸುವ ಸ್ವಭಾವವುಳ್ಳವನೆಂದೂ ಅರ್ಥವು. (ಪುನಃಪುನಃ) ಎಂಬುದರಿಂದ ಕೃಷಿಮಾಡುವವನು ಒಮ್ಮೆ ಫಲಿಸದ ಮಾತ್ರಕ್ಕೆ ತನ್ನ ಕೃಷಿಯನ್ನು ಬಿಡದೆ, ತಿರುಗಿತಿರುಗಿ ಅದನ್ನು ನಡೆಸುವಂತೆ, ಶಿಷ್ಯನ ಬುದ್ಧಿಯು ಪರಿಪಕ್ವವಾಗುವವರೆಗೂ ಬಿಡದೆ ಹಿತವನ್ನೇ ಉಪದೇಶಿಸುವವನೆಂದು ಭಾವವು. ಇದರಿಂದ ಭಗವಂತನಿಗಿಂತಲೂ ಆಚಾರ್ಯನಲ್ಲಿ ಒಂದತಿಶಯವು ಸೂಚಿಸಲ್ಪಡುವುದು. ಹೇಗೆಂದರೆ, ಭಗವಂತನು ಅರ್ಜುನನಿಗೆ ಗೀತೆಯನ್ನುಪದೇಶಿಸಿದಮೇಲೆ, ಅಶ್ವಮೇಧಪರ್ವದಲ್ಲಿ ಅರ್ಜುನನು ಅದನ್ನು ಮರೆತು, ಪುನಃ ತನ್ನನ್ನು ಪ್ರಶ್ನೆಮಾಡಲು, ಆಗ ಕೃಷ್ಣನು. "ನೂನಮಶ್ರದ್ಧಧಾನೋಽಸಿ ದುರ್ಮೇಧಾಹ್ಯಸಿ ಪಾಂಡವ" ಎಂಬುದಾಗಿ ಕೋಪದಿಂದ ನಿಂದಿಸಿದ

ಕುರಿತು, ಶುಭಾಗಮನವನ್ನು ಕೇಳುವಂತೆ ಕಲಕಲ ಧ್ವನಿಯನ್ನು ಮಾಡುತ್ತ, ಆ ರಾಮಾಗಮನವನ್ನೇ ಸೂಚಿಸುವಂತಿರುವುದು" ಎಂದಳು.

ಇಲ್ಲಿಗೆ ಇಪ್ಪತ್ತೇಳನೆಯ ಸರ್ಗವು.

---

ಸೀತೆಯು ರಾಕ್ಷಸಿಯರ ಹಾವಳಿಯನ್ನು ತಡೆಯಲಾರದೆ ಪರಮ ದುಃಖಿತೆಯಾಗಿ, ತನ್ನ ಜಡೆಯನ್ನು ಕೊರಲಿಗೆ ಸುತ್ತಿಕೊಂಡು ನೇಣುಹಾಕಿಕೊಳ್ಳುವುದಕ್ಕೆ ಯತ್ನಿಸಿದುದು. ಇಷ್ಟರಲ್ಲಿ ಅವಳಿಗೆ ಶುಭನಿಮಿತ್ತಗಳು ತೋರಿದುದು.

ರಾವಣನು ಹೇಳಿಹೋದ ಕ್ರೂರವಾಕ್ಯಗಳನ್ನು ಕೇಳಿದಾಗಿನಿಂದಲೂ ಸೀತೆಯು ದುಃಖಪೀಡಿತೆಯಾಗಿ, ಕಾಡಿನಲ್ಲಿ ಸಿಂಹಗಳನಡುವೆ ಸಿಕ್ಕಿಬಿದ್ದ ಹೆಣ್ಣಾನೆಯಂತೆ ಭಯದಿಂದ ತತ್ತಳಿಸುತ್ತಿದ್ದಳು. ಈಕೆಯಾದರೋ ಮೊದಲೇ ಭೀರುಸ್ವಭಾವವುಳ್ಳವಳು! ಇದರಮೇಲೆ ರಾಕ್ಷಸಿಯರ ನಡುವೆ ಸಿಕ್ಕಿಬಿದ್ದು ಅವರ ಕ್ರೂರವಾಕ್ಯಗಳನ್ನು ಕೇಳುವುದೊಂದು! ಆಗಾಗ ರಾವಣನು ಬಂದು ಹೆದರಿಸುತ್ತಿರುವುದೊಂದು! ಹೀಗೆ ನಾನಾವಿಧ ಕಷ್ಟಗಳಿಗೆ ಸಿಕ್ಕಿ, ದಿಕ್ಕುತೋರದೆ ನಿರ್ಜನವಾದ ಘೋರಾರಣ್ಯಮಧ್ಯದಲ್ಲಿ ಒಂಟಿಯಾಗಿ ಸಿಕ್ಕಿಬಿದ್ದ ಬಾಲೆಯಂತೆ ರೋದಿಸತೊಡಗಿದಳು. ಅಯ್ಯೋ! ಭಾಗ್ಯಹೀನೆಯಾದ ನಾನು ಹೀಗೆ ಈ ಘೋರರಾಕ್ಷಸಿಯರಿಂದ ಹೆದರಿಸಲ್ಪಡುತಿದ್ದರೂ ಕ್ಷಣಮಾತ್ರವಾದರೂ ಬದುಕಿರುವೆನಲ್ಲಾ!

---

ನಲ್ಲವೆ? ಹಾಗಿಲ್ಲದೆ, ಯಾವಾಗಲೂ ಸಾಂತ್ವವಾಕ್ಯದಿಂದಲೇ ಉಪದೇಶಿಸತಕ್ಕವನು. (ಸುಸ್ವಾಗತಾಂ) "ಸಂಪ್ರದಾಯವಿಚ್ಛೇದವಿಲ್ಲದಂತೆಯೂ (ಸ್ವ+ಆಗತಾಂ) ಆಚಾರ್ಯಪರಂಪರೆಯಿಂದ ತನಗೆ ಬಂದುದಾಗಿಯೂ ಇರುವ (ವಾಚಂ) ಅಷ್ಟಾಕ್ಷರಾದಿಮಂತ್ರ ರಾಜರೂಪವಾದ ವಾಕ್ಯವನ್ನು (ಉದೀರಯಾನಃ) ಹೇಳುವವನು. ಇದರಿಂದ "ಆಚಾರ್ಯಾಣಾಮಸಾವಸಾವಿತ್ಯಾಭಗವತ್ತಃ" ಎಂಬಂತೆ ಗುರುಪರಂಪರೆಯೋ ಅನುಸಂಧೇಯವೆಂದು ಸೂಚಿತವು. (ಪುನಃಪುನಶ್ಚೋದಯತೀವ) ಉಪದೇಶಿಸಿದ ಅರ್ಥವನ್ನು ಅನುಷ್ಠಿಸುವುದಕ್ಕಾಗಿ, ಆಗಾಗ ಚೋದನಮಾಡುವವನು ಎಂದರ್ಥವು. ಹಾಗಿಲ್ಲದಿದ್ದರೆ ಉಪದೇಶವೇ ನಿರರ್ಥಕವಾಗುವುದರಿಂದ "ಸ್ಖಾಲಿತ್ಯೇಶಾಸಿತಾರಂ" ಎಂಬಂತೆ, ತಪ್ಪಿನಡೆದ ಶಿಷ್ಯರನ್ನು ಆಗಾಗ ತಿದ್ದುವುದೇ ಸದಾಚಾರ್ಯಲಕ್ಷಣವು. (ಹೃಷ್ಟಃ) ಶಿಷ್ಯರನ್ನು ಶಿಕ್ಷಿಸುವುದೇ ಸ್ವಪ್ರಯೋಜನವೆಂದು ಸಂತೋಷಿಸುವವನು. (ತನಿಶ್ಲೋಕಿ.)

ಆದುದರಿಂದ ಲೋಕದಲ್ಲಿ ಅಕಾಲಮರಣವು ಯಾವಾಗಲೂ ಲಭಿಸದೆಂದು ಸತ್ಪುರು ಷರು ಹೇಳುವ ಮಾತು ಸುಳ್ಳಲ್ಲ! ಈ ನನ್ನ ಹೃದಯವು ಯಾವಾಗಲೂ ಸುಖ ವೆಂಬುದನ್ನೇ ಕಾಣದೆ ಕೇವಲ ದುಃಖಪೂರ್ಣವಾಗಿಯೇ ಇರುವುದು. ಹೀಗೆ ಇದು ವಜ್ರಾಹತವಾದ ಪರ್ವತಶಿಖರದಂತೆ ಸಹಸ್ರಭಾಗವಾಗಿ ಸೀಳಿ ಹೋಗದು ದನ್ನು ನೋಡಿದರೆ, ಇದಕ್ಕೆ ಎಂದಿಗೂ ನಾಶವೇ ಇಲ್ಲವೆಂದು ತೋರುವುದು. ಈಗ ನಾನು ಆತ್ಮಹತ್ಯೆಯನ್ನು ಮಾಡಿಕೊಂಡರೂ ದೋಷವಿಲ್ಲ! ಹೇಗಿದ್ದರೂ ನಾನು ಅಸಹ್ಯಸ್ವರೂಪವುಳ್ಳ ಆ ರಾಕ್ಷಸನಕೈಯಿಂದ ಸಾಯಬೇಕಾಗಿರುವುದು! ಅವನ ಕೈಯಿಂದ ಸಾಯುವುದಕ್ಕಿಂತಲೂ ಆತ್ಮಹತ್ಯೆಯೇ ಮೇಲು! ಹೇಗಿದ್ದರೂ ಇವೆರಡೂ ದುರ್ಮರಣಗಳೆನಿಸಿಕೊಳ್ಳುವುವು. ಆದರೆ "ಹೇಗಾದರೂ ದೇಹ ವನ್ನುಳಿಸಿಕೊಳ್ಳುವುದರಿಂದ ಆ ದೋಷವನ್ನು ತಪ್ಪಿಸಿಕೊಳ್ಳಬಾರದೆ?" ಎಂದರೆ, ಬ್ರಾಹ್ಮಣನು ತನ್ನಲ್ಲಿರುವ ವೇದಮಂತ್ರವನ್ನು ಹೇಗೆ ಶೂದ್ರಾದಿಗಳಿಗೆ ಹೊರಪಡಿಸಬಾರದೋ. ಹಾಗೆಯೇ ನಾನೂ ನನ್ನ ಮನಸ್ಸನ್ನು ಎಂದಿಗೂ ರಾವಣನಿಗೊಪ್ಪಿಸಬಾರದು! ಹೇಗಿದ್ದರೂ ಇನ್ನೆರಡು ತಿಂಗಳೊಳಗಾಗಿ ಲೋಕ ನಾಥನಾದ ಆ ರಾಮನು ಇಲ್ಲಿಗೆ ಬಾರದಿದ್ದರೆ. ಗರ್ಭದಿಂದ ಹೊರಕ್ಕೆ ಬಾರದ ಶಿಶುವನ್ನು ಶಸ್ತ್ರದಿಂದ ತುಂಡುಮಾಡಿಬಿಡುವಂತೆ, ನೀಚನಾದ ರಾವಣನು ತೀಕ್ಷ್ಣ ಶಸ್ತ್ರಗಳಿಂದ ನನ್ನ ದೇಹವನ್ನು ತುಂಡುತುಂಡಾಗಿ ಛೇದಿಸುವುದೇನೋ ನಿಜವು. ಬಹುಕಾಲದಿಂದ ಇದುವರೆಗೂ ನಾನು ಅಪಾರವಾದ ದುಃಖಗಳೆಲ್ಲ ವನ್ನೂ ಅನುಭವಿಸಿದೆನು! ಆ ದುಃಖವು ಸಂಪೂರ್ಣವಾಗಿ ತೀರುವುದಕ್ಕೆ ಇನ್ನೆರಡು ತಿಂಗಳು ಮಾತ್ರವೇ ಉಳಿದಿರುವುದು! ಅಯ್ಯೋ! ಈ ಎರಡು ತಿಂಗಳು ಮುಗಿದಮೇಲೆ ನನಗುಂಟಾಗುವ ಮಹಾನರ್ಥವೂ ಕೂಡ, ರಾಜಾಪರಾಧವನ್ನು ಮಾಡಿದುದಕ್ಕಾಗಿ ಪಾಶದಿಂದ ಕಟ್ಟಲ್ಪಟ್ಟು ಬೆಳಗಾದ ಕೂಡಲೆ ಶೂಲಕ್ಕೇರಿಸಲ್ಪ ಡುವ ಕಳ್ಳನ ಸ್ಥಿತಿಯನ್ನು ಹೋಲುವಂತಾಯಿತಲ್ಲಾ! ಹಾ ರಾಮಾ! ಹಾ ಸುಮಿತ್ರೇ! ಹಾ ರಾಮಮಾತೆಯಾದ ಕೌಸಲ್ಯೇ! ಹಾ ಜನನೀ! ಅಯ್ಯೋ! ನನಗೇನು ಗತಿ! ಸಮುದ್ರಮಧ್ಯದಲ್ಲಿ ಬಿರುಗಾಳಿಗೆ ಸಿಕ್ಕಿ ಮುಳುಗಿ ಹೋಗುವ ಹಡಗಿನಂತೆ, ನನಗೆ ಈ ಮಹಾನರ್ಥವು ಬಂದೊದಗಿರುವುದಲ್ಲಾ! ಸಿಡಿಲಿಗೆ ಸಿಕ್ಕಿ ಬಿದ್ದ ಎರಡು ಮಹಾಸಿಂಹಗಳಂತೆ, ರಾಮಲಕ್ಷ್ಮಣರೆಂಬ ರಾಜಪುತ್ರರಿಬ್ಬರೂ ನನ್ನ ನಿಮಿತ್ತವಾಗಿ, ಮಾಯಾಮೃಗರೂಪದಿಂದ ಬಂದ ಆ ರಾಕ್ಷಸನಿಂದಲೇ ಸಂಹೃತರಾಗಿರಬಹುದು! ಮೃತ್ಯುವೇ ಹಾಗೆ ಜಿಂಕೆಯ ರೂಪದಿಂದ ಬಂದು ಮಂದಭಾಗ್ಯೆಯಾದ ನನ್ನನ್ನು ಮರುಳುಗೊಳಿಸಿರಬೇಕು! ಆದರಿಂದಲೇ ನಾನು

ಬುದ್ಧಿಗೆಟ್ಟು, ನನ್ನ ಪ್ರಿಯನಾದ ರಾಮನನ್ನೂ ಲಕ್ಷ್ಮಣನನ್ನೂ ಹೊರಕ್ಕೆ ಕಳುಹಿಸಿಬಿಟ್ಟೆನು! ಹಾ ರಾಮಾ! ಹಾ ಸತ್ಯವ್ರತಾ! ಹಾ ದೀರ್ಘಬಾಹೂ! ಹಾ ಪೂರ್ಣಚಂದ್ರಮುಖಾ! ನೀನು ಸಮಸ್ತಜೀವರಾಶಿಗೂ ಹಿತವನ್ನು ಕೋರುವವನಲ್ಲವೆ? ಸಮಸ್ತ ಜಗತ್ತಿಗೂ ನೀನು ಪ್ರಿಯನಲ್ಲವೇ? ಹಾಗಿದ್ದರೂ ಹೀಗೆ ನಾನು ರಾಕ್ಷಸರ ಕೊಲೆಗೀಡಾಗಿರುವುದನ್ನು ಕಾಣೆಯಾ? ಅಯ್ಯೋ! ಇದುವರೆಗೆ ಪತಿಯಲ್ಲದೆ ಬೇರೆ ದೈವವಿಲ್ಲವೆಂದು ನಂಬಿದ್ದ ನನ್ನ ನಂಬಿಕೆಯೂ ವ್ಯರ್ಥವಾಯಿತು. ಪತಿಸಾಹಚರ್ಯವೇ ಪರಮಸುಖವೆಂದು ನಂಬಿ, ಸಮಸ್ತ ರಾಜಭೋಗಗಳನ್ನೂ ಬಿಟ್ಟು ಬಂದು, ಇದುವರೆಗೆ ಭೂಶಯನಮಾಡಿದುದೂ ನಿಷ್ಫಲವಾಯಿತು! ಧರ್ಮದ ವಿಷಯದಲ್ಲಿ ನಾನು ಹಿಡಿದಿದ್ದ ನಿಯಮವೂ ನಿರರ್ಥಕವಾಯಿತು! ಪಾತಿವ್ರತ್ಯಕ್ಕೂ ಫಲವಿಲ್ಲದೆ ಹೋಯಿತು! ಕೃತಘ್ನರಿಗೆ ಮಾಡಿದ ಉಪಕಾರದಂತೆ ಇವುಗಳಲ್ಲಿ ಯಾವುದೊಂದೂ ಕೆಲಸಕ್ಕೆ ಬಾರದೆ ಹೋಯಿತಲ್ಲಾ! ಹಾ ನನ್ನ ದೌರ್ಭಾಗ್ಯವೇ! ಹಾ ನಾಥಾ! ನಿನ್ನನ್ನಗಲಿ ಕಂದಿಕುಂದಿ ಕೃಶಳಾಗಿ, ಪುನಃ ನಿನ್ನನ್ನು ಸೇರುವ ಆಸೆಯೂ ಇಲ್ಲದ ಮೇಲೆ, ನಾನು ನಡೆಸಿದ ಧರ್ಮಕ್ಕೂ, ನಾನು ಹಿಡಿದಿರುವ ಏಕಪತ್ನೀವ್ರತಕ್ಕೂ ಏನು ಫಲವುಂಟಾದಂತಾಯಿತು? ನಿನ್ನನ್ನಗಲಿದ್ದಾಗಲೂ, ತಿರುಗಿ ನಿನ್ನನ್ನು ಸೇರಬಹುದೆಂಬ ಆಸೆಯಿಂದಲೇ ಇದುವರೆಗೆ ಅವೆಲ್ಲವನ್ನೂ ಅನುಸರಿಸುತ್ತ ಬಂದೆನು. ಯಾವುದೂ ಫಲಿಸದೆ ಹೋಯಿತು. ಮೊದಲು ನಾನು ರಾವಣನ ಕೈಗೆ ಸಿಕ್ಕಿಬಿದ್ದಾಗಲೇ, ಈ ದೇಹವನ್ನು ನೀಗಿಬಿಟ್ಟಿದ್ದರೆ, ಇದುವರೆಗೆ ಈ ಮಹಾನರ್ಥಗಳನ್ನನುಭವಿಸುವುದಾದರೂ ತಪ್ಪುತ್ತಿತ್ತು! ಹಾ ಪ್ರಾಣನಾಥನೇ! ನೀನಾದರೋ ಪಿತೃವಾಕ್ಯಪರಿಪಾಲನವೆಂಬ ನಿನ್ನ ವ್ರತವನ್ನು ನಿಯಮದಿಂದ ಮುಗಿಸಿಕೊಂಡು, ಕಾಡಿನಿಂದ ಹಿಂತಿರುಗಿ ಅಯೋಧ್ಯೆಗೆ ಹೋಗಿ, ವಿಶಾಲನೇತ್ರೆಯರಾದ ಬಹಳಮಂದಿಸ್ತ್ರೀಯರೊಡನೆ ನಿರಾತಂಕವಾಗಿ ವಿಹರಿಸುತ್ತಿರಬಹುದು! ನೀನಂತೂ ಕೃತಾರ್ಥನೆನಿಸಿಕೊಳ್ಳುವೆ! ಮಂದಭಾಗ್ಯಳಾದ ನನ್ನ ಗತಿಯೇನು? ಹಾ ರಾಮಾ! ನಾನು ಬಹುಕಾಲದಿಂದಲೂ ನಿನ್ನಲ್ಲಿ ಪೂರ್ಣ ಪ್ರೇಮವನ್ನಿಟ್ಟು ಪರೀಕ್ಷಿಸುತ್ತಿದ್ದುದೂ ವಿಫಲವಾಯಿತು! ಈಗ ಸಾವಿಗಾಗಿ ಸೆರಗೊಡ್ಡಿ ಕಾಯಬೇಕಾಯಿತು! ನಾನು ನಡೆಸಿದ ತಪಸ್ಸೂ, ವ್ರತಾನುಷ್ಠಾನವೂ ನಿರರ್ಥಕವಾಯಿತು! ಹಾ ಕಷ್ಟವೆ! ಕೊನೆಗೆ ಈ ಹಾಳುಜೀವವನ್ನು ಈ ರೀತಿಯಲ್ಲಿ ಕಳೆದುಕೊಳ್ಳಬೇಕಾಯಿತೇ? ಶೀಘ್ರದಲ್ಲಿಯೋ ನಾನು ವಿಷದಿಂದಲೋ, ತೀಕ್ಷ್ಣವಾದ ಶಸ್ತ್ರದಿಂದಲೋ ಪ್ರಾಣವನ್ನು ಬಿಡುವುದೇ ಮೇಲು! ಆದರೆ ಈ ರಾಕ್ಷಸಗೃಹದಲ್ಲಿ ನನಗೆ ವಿಷವನ್ನಾಗಲಿ, ಶಸ್ತ್ರವನ್ನಾ

ಗಲಿ ತಂದುಕೊಡತಕ್ಕ ಮಹಾತ್ಮನಾವನು? ನನ್ನ ದೌರ್ಭಾಗ್ಯಕ್ಕೆ ಅಂತಹ ದಾತನೂ ನನಗೆ ಸಿಕ್ಕಲಾರನಲ್ಲಾ!" ಎಂದು ಸೀತಾದೇವಿಯು ನಾನಾವಿಧದಲ್ಲಿ ವಿಲಪಿಸಿ, ಸರ್ವವಿಧದಿಂದಲೂ ತನ್ನ ಮನಸ್ಸಿನಲ್ಲಿ ರಾಮನನ್ನು ಸ್ಮರಿಸುತ್ತ, ಭಯದಿಂದಲೂ, ಸಂಕಟದಿಂದಲೂ ನಡುಗುತ್ತ, ಬಾಯೊಣಗಿದವಳಾಗಿ, ಪುಷ್ಪಿತವಾದ ಆ ಶಿಂಶುಪಾವೃಕ್ಷದ ಬಳಿಗೆ ಬಂದಳು. ಹೀಗೆ ಸೀತೆಯು ಅತಿ ದುಃಖದಿಂದ ತಪಿಸುತ್ತ, ನಾನಾವಿಧದಿಂದ ಕೊರಗಿ, ಮರಣಕ್ಕೆ ನಿಶ್ಚಯಿಸಿಕೊಂಡು, ಉದ್ದವಾದ ತನ್ನ ತಲೆಯ ಕೂದಲನ್ನೇ ಕೊರಲಿಗೆ ಸುತ್ತುಹಾಕಿಕೊಳ್ಳುತ್ತ, "ಇದೋ! ಈ ಕೂದಲನ್ನೇ ಕೊರಲಿಗೆ ಸುತ್ತಿ, ಈ ಮರದಕೊಂಬೆಯಲ್ಲಿ ನೇಣು ಹಾಕಿಕೊಂಡು, ಶೀಘ್ರದಲ್ಲಿಯೇ ಯಮಪುರಿಗೆ ಹೋಗುವೆನು" ಎಂದು ಹೇಳುತ್ತ, ಆ ಗಿಡದ ಕೊಂಬೆಯ ಬಳಿಯಲ್ಲಿಯೇ ನಿಂತಿದ್ದಳು. ಹೀಗೆ ತನ್ನ ಮನಸ್ಸಿನಲ್ಲಿ ಆಗಾಗ ರಾಮನನ್ನೂ, ಲಕ್ಷ್ಮಣನನ್ನೂ ಧ್ಯಾನಮಾಡುತ್ತ, ಅಂತಹ ವೀರರಿದ್ದರೂ ತನಗೆ ಈ ಕಷ್ಟದಶೆಯು ತಪ್ಪಲಿಲ್ಲವೆಂದು ಕೊರಗುತ್ತ, ತನ್ನ ಪವಿತ್ರವಾದ ಕುಲವನ್ನೂ, ತನಗುಂಟಾದ ದುರವಸ್ಥೆಯನ್ನೂ ನೆನೆನೆನೆದು ದುಃಖಿಸುತ್ತಿದ್ದಳು. ಇಷ್ಟರಲ್ಲಿಯೇ ಅವಳಿಗೆ ಧೈರ್ಯವನ್ನುಂಟುಮಾಡುವಂತೆ ಅನೇಕ ಶುಭಶಕುನಗಳು ತೋರಿಬಂದುವು. ಲೋಕಪ್ರಸಿದ್ಧಗಳಾಗಿಯೂ, ಇದುವರೆಗೆ ಎಷ್ಟೋ ಆವರ್ತಿ ಫಲಕಾರಿಗಳಾಗಿ ಕಂಡುಬಂದುವುಗಳಾಗಿಯೂ ಇದ್ದ, ಆ ಶುಭನಿಮಿತ್ತಗಳು ಅವಳ ಮನಸ್ಸಿಗೆ ಸ್ವಲ್ಪವಾಗಿ ಧೈರ್ಯವನ್ನುಂಟುಮಾಡುತಿದ್ದುವು.

ಇಲ್ಲಿಗೆ ಇಪ್ಪತ್ತೆಂಟನೆಯ ಸರ್ಗವು.

---

## ಸೀತೆಗೆ ಶುಭನಿಮಿತ್ತಗಳು ತೋರಿದುದು.

1 ಹೀಗೆ ಮಹಾವ್ಯಸನದಿಂದ ಪೀಡಿತಳಾಗಿ, ಮನಸ್ಸಿನಲ್ಲಿ ಸ್ವಲ್ಪವೂ ಹರ್ಷವಿಲ್ಲದೆ ದುಃಖದಿಂದ ಕಂದಿಕುಂದಿ ಕೊರಗುತ್ತಿರುವ ಸೀತೆಗೆ, ಹಣಗಾರ

---

1. ಇಲ್ಲಿ "ತಥಾಗತಾಂ ತಾಂ ವ್ಯಥಿತಾಮನಿಂದಿತಾಂ ವ್ಯಪೇತಹರ್ಷಾಂ ಪರಿದೀನಮಾನಸಾಮ್। ಶುಭಾಂ ನಿಮಿತ್ತಾನಿ ಶುಭಾನಿ ಭೇಜಿರೇ ನರಂಶ್ರಿಯಾಜುಷ್ಟಮಿವೋಪಜೀವಿನಃ" ಎಂದುಮೂಲವು. ಇಲ್ಲಿ (ತಥಾಗತಾಂ) ಎಂಬುದರಿಂದ "ರಹಸ್ಯಂಚ ಪ್ರಕಾಶಂಚ" ಎಂಬಂತೆ, ಸೀತಾರಾಮವೃತ್ತಾಂತಗಳೆಲ್ಲವನ್ನೂ ಇದ್ದುದಿದ್ದಂತೆ ಸಾಕ್ಷಾತ್ಕರಿಸಿದ ಮಹಾಪ್ರಭಾವವುಳ್ಳ, ವಾಲ್ಮೀಕಿಗೂ ಕೂಡ, ಆಗ ಸೀತೆಯು ಮನಸ್ಸಿನಲ್ಲಿದ್ದ ದುಃಖಾ

ನನ್ನು ಸೇರಿ ಬದುಕುವ ಉಪಜೀವಿಗಳಂತೆ, ಕೆಲಕೆಲವು ಶುಭನಿಮಿತ್ತಗಳು ತಲೆದೋರುತ್ತಿದ್ದುವು. ಶುಭಲಕ್ಷಣಗಳುಳ್ಳುದಾಗಿಯೂ, ಬಾಗಿದ ರೆಪ್ಪೆಗಳಿಂದ ಕೂಡಿದುದಾಗಿಯೂ, ಕಪ್ಪಾದ ಕಣ್ಣಾಲಿಯುಳ್ಳುದಾಗಿಯೂ, ಸ್ವಚ್ಛವಾಗಿಯೂ, ವಿಸ್ತಾರವಾಗಿಯೂ ಇದ್ದ ಆ ಸೀತೆಯ ಎಡಗಣ್ಣು, ಮೀನುಗಳಿಂದಲುಗಿಸಲ್ಪಟ್ಟ ಕಮಲದಂತೆ ಅದಿರಿತು. ಅಂದವಾಗಿಯೂ, ದುಂಡಗೆ ಉಬ್ಬಿದುದಾಗಿಯೂ, ಸರ್ವೋತ್ತಮವಾದ ಕೃಷ್ಣಾಗರುಚಂದನಾನುಲೇಪನಕ್ಕೆ ಯೋಗ್ಯವಾಗಿಯೂ, ಪುರುಷೋತ್ತಮನಾದ ಶ್ರೀರಾಮನ ಕರಾಲಿಂಗನಸುಖವನ್ನು ಬಹುಕಾಲದಿಂದನುಭವಿಸಿದುದಾಗಿಯೂ ಇದ್ದ ಆಕೆಯ ಎಡದ ತೋಳು ಕ್ಷಣಕ್ಷಣಕ್ಕೂ ಅದಿರುತ್ತಿತ್ತು. ಒಂದಕ್ಕೊಂದಕ್ಕೆ ಅನುರೂಪವಾಗಿದ್ದ ಆಕೆಯ ತೊಡೆಗಳಲ್ಲಿ, ಆನೆಯ ಸೊಂಡಲಿಗೆ ಸಮಾನವಾಗಿಯೂ, ದಪ್ಪನಾಗಿಯೂ, ಸುಂದರವಾಗಿಯೂ ಇದ್ದ ಎಡತೊಡೆಯು ಕ್ಷಣಕ್ಷಣಕ್ಕೂ ಅದಿರುತ್ತ, ಶ್ರೀರಾಮನು ಪ್ರತ್ಯಕ್ಷದಲ್ಲಿಯೇ ಬಂದು ನಿಂತಿರುವನೆಂಬುದನ್ನು ಸೂಚಿಸುವಂತಿತ್ತು. ಮತ್ತು ಅಂದವಾದ ಹಲ್ಲಿನ ಸಾಲುಗಳಿಂದ ಕೂಡಿದ ಆ ಸುಂದರಾಂಗಿಯು, ಮೇಲೆ ಹೊದೆದಿದ್ದ ಸ್ವಲ್ಪ ಮಲಿನವಾದ ಹೊಂಬಣ್ಣದ ದುಕೂಲವು, ಆಗಲೇ ಅವಳಿಗೆ ತನ್ನ ಪ್ರಿಯಸಮಾಗಮವನ್ನು ಸೂಚಿಸುವಂತೆ ಸ್ವಲ್ಪವಾಗಿ ಜಾರಿತು. ಇದುವರೆಗೆ ಅನೇಕಾವರ್ತಿ ಫಲಸಿದ್ಧಿಯನ್ನು ತೋರಿಸಿರತಕ್ಕ ಇವೇ ಮೊದಲಾದ ಇನ್ನೂ ಕೆಲವು ಶುಭಶಕುನಗಳು ದುಃಖಿತೆಯಾದ ಆಕೆಯನ್ನು ಎಚ್ಚರಗೊಳಿಸುತ್ತಿದ್ದುವು. ಗಾಳಿಗೂ, ಬಿಸಿಲಿಗೂ ಒಣಗಿ ಕೆಟ್ಟುಹೋಗುತ್ತಿರುವ ಪೈರುಗಳು, ಮಳೆಬಿದ್ದೊಡನೆ ಚಿಗುರಿ

---

ತಿಶಯವನ್ನು ಇಷ್ಟೆಂದು ನಿರ್ಣಯಿಸಿ ಹೇಳಲು ಸಾಧ್ಯವಿಲ್ಲದೆ ಹೋಯಿತೆಂದು ಭಾವವು. (ಅನಿಂದಿತಾಂ) ರಾಮವಿರಹದಲ್ಲಿ ತಾನು ಹೇಗಿರಬೇಕೋ ಹಾಗೆಯೇ ಇದ್ದುದರಿಂದ ತನ್ನ ಪಾತಿವ್ರತ್ಯಕ್ಕೆ ಸ್ವಲ್ಪವೂ ನಿಂದೆಯನ್ನು ಕಾಣಿಸದವಳೆಂದರ್ಥವು (ವ್ಯಪೇತಹರ್ಷಾಮ್) ಮೊದಲು ಯಾವಾಗಲೋ ಹರ್ಷವನ್ನನುಭವಿಸಿದವಳಾದರೂ, ಈಗ ಅದರ ಸೂಚನೆಯೇ ತೋರದಂತೆ ಸಂಪೂರ್ಣವಾಗಿ ತೊರೆದ ಮನಸ್ಸಂತೋಷವುಳ್ಳವಳು, (ಪರಿದೀನಮಾನಸಾಂ) ಒಮ್ಮೆ ಅಕಸ್ಮಾತ್ತಾಗಿ ಹರ್ಷವು ಬರುವಹಾಗಿದ್ದರೂ, ಅದಕ್ಕಾಶ್ರಯವನ್ನು ಕೊಡದಂತೆ ಎಡೆಬಿಡದೆ ದುಃಖಾವೃತವಾದ ಮನಸ್ಸುಳ್ಳವಳು. (ಶುಭಾಂ) ಲೋಕೋತ್ತರ ಗುಣವುಳ್ಳ ಮಹಾಪುರುಷನನ್ನುದ್ದೇಶಿಸಿ ಕೊರಗುವ ಆಕೆಯ ವಿರಹವಿಕಾರಗಳೂ ಅತಿ ಮನೋಜ್ಞಗಳಾಗಿಯೇ ಇರುವುವೆಂದು ಭಾವವು. ಇಂತಹ ಸೀತೆಯನ್ನು (ನಿಮಿತ್ತಾನಿ ಶುಭಾನಿ ಭೇಜಿರೇ) ಶಕುನಗಳೆಲ್ಲವೂ ಶುಭಕರಗಳಾಗಿಯೇ ಸೇರಿದುವು. ಎಂದರೆ, ಅರ್ಥಿಗಳು ಭಾಗ್ಯವಂತರಲ್ಲಿ ಸೇರಿ ತಮ್ಮ ಪ್ರಯೋಜನಗಳನ್ನು ಪಡೆಯುವಂತೆ, ಆ ನಿಮಿತ್ತಗಳೂ ಸೀತೆಯನ್ನು ಸೇರಿದುದರಿಂದ ಶುಭಕರಗಳಾದುವೆಂದು ಭಾವವು.

ಉಲ್ಲಾಸಹೊಂದುವಂತೆ, ದುಃಖದಿಂದ ಕಂದಿದ ಆಕೆಯ ಮನಸ್ಸಿನಲ್ಲಿ ಸ್ವಲ್ಪ ವಾಗಿ ಸಂತೋಷವೂ ತಲೆದೋರಿತು. ತೊಂಡೆಹಣ್ಣಿನಂತಿರುವ ತುಟಿಯಿಂದಲೂ, ಅಂದವಾದ ಕಣ್ಣಿವೆಗಳಿಂದಲೂ, ಸುಂದರವಾದ ಮುಂಗುರುಳಿನಿಂದಲೂ, ಬಾಗಿದ ಹುಬ್ಬುಗಳಿಂದಲೂ, ಎಸಳಾದ ಬಿಳೀಹಲ್ಲುಗಳಿಂದಲೂ ಕೂಡಿದ, ಆಕೆಯ ಮುಖ ಬಿಂಬವು ರಾಹುವಿನ ಬಾಯಿಯಿಂದ ಬಿಡಲ್ಪಟ್ಟ ಚಂದ್ರಬಿಂಬದಂತೆ ಕಳೆಯೇರಿತು. ಆವಳ ಮನಸ್ಸಿನಲ್ಲಿದ್ದ ಶೋಕವೂ ಕ್ರಮಕ್ರಮವಾಗಿ ತಗ್ಗುತಿತ್ತು. ಅವಳಿಗಿದ್ದ ಬೇಸರವೂ, ಆವಳಿಗಿದ್ದ ಸಂತಾಪವೂ ಕಡಿಮೆಯಾಯಿತು. ಹೀಗೆ ಉಲ್ಲಾಸಗೊಂಡ ಮುಖದಿಂದ ಕೂಡಿದ ಆ ಸೀತೆಯು, ಚಂದ್ರನಿಂದ ಕೂಡಿದ ಶುಕ್ಲಪಕ್ಷರಾತ್ರಿ ಯಂತೆ ಶೋಭಿಸುತಿದ್ದಳು.

ಇಲ್ಲಿಗೆ ಇಪ್ಪತ್ತೊಂಭತ್ತನೆಯ ಸರ್ಗವು.

---

—{ ಶಿಂಶುಪಾವೃಕ್ಷದಮೇಲೆ ಕುಳಿತಿದ್ದ ಹನುಮಂತನು, ಆಗಲೇ ತಾನು ಕೆಳಗಿಳಿದುಬಂದು, ತಾನೇ ಸೀತೆಯನ್ನು ಸಮಾಧಾನಪಡಿಸುವ ವಿಷಯದಲ್ಲಿ ಔಚಿತ್ಯಾನೌಚಿತ್ಯಗಳನ್ನು ವಿಚಾರಿಸಿದುದು. }—

ಹನುಮಂತನು ಮರದಮೇಲೆ ಕುಳಿತಂತೆಯೇ ಸೀತೆಯ ವಿಲಾಪವನ್ನೂ, ತ್ರಿಜಟೆಯ ಸಮಾಧಾನವಾಕ್ಯಗಳನ್ನೂ, ರಾಕ್ಷಸಿಯರ ಬೆದರಿಕೆಯ ಮಾತುಗ ಳನ್ನೂ ಚೆನ್ನಾಗಿ ಕೇಳುತಿದ್ದನು. ನಂದನವನದಲ್ಲಿರುವ ದೇವತಾ ಸ್ತ್ರೀಯಂತೆ, ಅಶೋಕವನದಲ್ಲಿ ಕುಳಿತಿದ್ದ ಆ ಸೀತೆಯನ್ನು ನೋಡುತ್ತಿರುವಾಗ, ಆತನಿಗೆ ಮನಸ್ಸಿ ನಲ್ಲಿ ನಾನಾವಿಧವಾದ ಚಿಂತೆಯು ಹುಟ್ಟಿತು. ಆಗ ಅವನು ತನ್ನಲ್ಲಿ ತಾನು ಈಗಲೂ ಯಾವಳನ್ನು ಲಕ್ಷೋಪಲಕ್ಷಸಂಖ್ಯೆಯುಳ್ಳ ಕಪಿಗಳು ನಾನಾದಿಕ್ಕುಗಳಲ್ಲಿಯೂ ಹುಡುಕುತ್ತಿರುವರೋ, ಆಕೆಯು ಈಗ ನನ್ನ ಕಣ್ಣಿಗೆ ಗೋಚರಿಸಿಬಿಟ್ಟಳು. ಇದು ವರೆಗೆ ನಾನು ಎಷ್ಟೋ ಎಚ್ಚರಿಕೆಯಿಂದ ಈ ಲಂಕೆಯಲ್ಲಿ ಯಾರಿಗೂ ತಿಳಿಯದಂತೆ ಸಂಚರಿಸಿ, ಗೂಢಚಾರನಂತೆ ಶತ್ರುವಿನ ಬಲವನ್ನೂ ತಿಳಿದು, ಇಲ್ಲಿನ ಇನ್ನೂ ಅನೇಕ ರಹಸ್ಯಗಳನ್ನೂ ಕಂಡುಕೊಂಡೆನು. ಇಲ್ಲಿನ ರಾಕ್ಷಸರಲ್ಲಿರುವ ವಿಶೇಷವನ್ನೂ ಈ ಪಟ್ಟ ಣದ ಸ್ಥಿತಿಯನ್ನೂ, ರಾಕ್ಷಸಚಕ್ರವರ್ತಿಯಾದ ರಾವಣನ ಪ್ರಭಾವವನ್ನೂ ತಿಳಿದೆನು. ಇನ್ನು ಮುಂದೆ ನಾನು ಮಾಡಬೇಕಾದ ಮೊದಲಿನ ಕಾರ್ಯವೇನೆಂದರೆ, ಎಣೆಯಿಲ್ಲದ ಮಹಿಮೆಯುಳ್ಳವನಾಗಿಯೂ, ಸಮಸ್ತಭೂತಗಳಲ್ಲಿಯೂ ದಯೆಯುಳ್ಳವನಾಗಿಯೂ

ಇರುವ ರಾಮನ ಪ್ರಿಯಪತ್ನಿಯಾದ ಈ ಸೀತೆಯನ್ನು ಕಂಡು, ತನ್ನ ಪ್ರಿಯನನ್ನು ನೋಡುವುದರಲ್ಲಿ ಆತ್ಯಾತುರದಿಂದ ಕುದಿಯುವ ಈಕೆಯನ್ನು ಸಮಾಧಾನಪಡಿಸುವುದುತ್ತಮವು. ಪೂರ್ಣಚಂದ್ರಮುಖಿಯಾದ ಈ ಸೀತೆಯಾದರೋ ಎಂದಿಗೂ ದುಃಖಕ್ಕೆ ಕೊನೆಯನ್ನು ಕಾಣದೆ ತತ್ತಳಿಸುತ್ತಿರುವಳು. ಆದುದರಿಂದ ಈಗಲೇ ಈಕೆಗೆ ರಾಮವೃತ್ತಾಂತವನ್ನು ತಿಳಿಸಿ ಸಮಾಧಾನಪಡಿಸಬೇಕಾದುದೇ ಉಚಿತವು. ಹೀಗೆ ದುಃಖದಿಂದ ಎದೆಗೆಟ್ಟಿರುವ ಈ ಸೀತಾದೇವಿಯನ್ನು ಈಗ ನಾನು ಸಮಾಧಾನಪಡಿಸದೆ ಹೀಗೆಯೇ ಬಿಟ್ಟು ಹಿಂತಿರುಗಿ ರಾಮನ ಬಳಿಗೆ ಹೋದರೆ, ಅದರಿಂದ ಬಹಳ ಅಪಾಯಗಳುಂಟು. ನಾನು ಈ ಸ್ಥಿತಿಯಲ್ಲಿಯೇ ಇವಳನ್ನು ಬಿಟ್ಟು ಅತ್ತಲಾಗಿ ಹೋದರೆ, ಯಶಸ್ವಿನಿಯಾದ ಈ ರಾಜಕುಮಾರಿಯು ಇಲ್ಲಿ ತನಗೆ ರಕ್ಷಕರಾರೂ ಇಲ್ಲದುದಕ್ಕಾಗಿ ತನ್ನ ಪ್ರಾಣವನ್ನು ಬಿಟ್ಟುಬಿಡುವಳು. ಆದರೆ, ಅತ್ತಲಾಗಿ ರಾಮನೂ ಈಕೆಯನ್ನು ನೋಡುವುದರಲ್ಲಿ ಆತ್ಯಾತುರವುಳ್ಳವನಾಗಿರುವುದರಿಂದ, ನಾನು ಬೇಗನೆ ಹಿಂತಿರುಗಿ, ಆತನಿಗೂ ಶೀಘ್ರದಲ್ಲಿಯೇ ಈ ಸೀತಾವೃತ್ತಾಂತವನ್ನು ತಿಳಿಸಿ ಸಮಾಧಾನಪಡಿಸಬೇಕಾದುದೂ ನ್ಯಾಯವು. ಆದರೆ ಈಗಲೇ ಸೀತೆಯನ್ನು ಕಂಡು ರಾಕ್ಷಸಸ್ತ್ರೀಯರ ಮುಂದೆ ನಾನು ಇವಳೊಡನೆ ಮಾತಾಡುವುದು ಹೇಗೆ? ಇವಳನ್ನು ಮಾತಾಡಿಸದೆ ಬಿಟ್ಟು ಹೋಗುವುದಕ್ಕೂ ಇಲ್ಲ. ಈಗ ನಾನು ಮಾಡುವುದೇನು? ಬಹಳ ಕಷ್ಟದಲ್ಲಿ ಸಿಕ್ಕಿಕೊಳ್ಳಬೇಕಾಯಿತಲ್ಲಾ! ಸ್ವಲ್ಪವಾಗಿ ಉಳಿದಿರುವ ಈ ರಾತ್ರಿಯು ಕಳೆದು ಬೆಳಗಾಗುವುದರೊಳಗಾಗಿ ನಾನು ಇವಳನ್ನು ಸಮಾಧಾನಪಡಿಸದಿದ್ದರೆ ಇವಳು ಪ್ರಾಣವನ್ನೇ ಬಿಡುವಳು. ಇದರಲ್ಲಿ ಸಂದೇಹವೇ ಇಲ್ಲ. ಅಥವಾ ಈಗ ಇವಳನ್ನು ನಾನು ಮಾತಾಡಿಸದೆಯೇ ಹಿಂತಿರುಗಿ ರಾಮನ ಬಳಿಗೆ ಹೋದರೆ, ಅವನು ನನ್ನನ್ನು ಕುರಿತು "ಸೀತೆಯು ನನಗೆ ಏನು ಹೇಳಿ ಕಳುಹಿಸಿರುವಳು?" ಎಂದು ಕೇಳಿದರೆ, ಅವನಿಗೆ ನಾನು ಯಾವ ಪ್ರತ್ಯುತ್ತರವನ್ನು ಕೊಡಲಿ? ನಾನು ಈ ಸೀತೆಯ ಸಂದೇಶವನ್ನು ಕೇಳಿಕೊಳ್ಳದೆ, ಎಷ್ಟೇ ತ್ವರೆಯಿಂದ ರಾಮನ ಬಳಿಗೆ ಹೋದರೂ ಅವನು ನನ್ನ ವಿಷಯದಲ್ಲಿ ಸಂತೋಷಪಡಲಾರನು. ಇಷ್ಟೇ ಅಲ್ಲ. ಇದರಿಂದ ಆತನು ಬಹಳ ಕ್ರುದ್ಧನಾಗಿ ತನ್ನ ಕ್ರೂರದೃಷ್ಟಿಯಿಂದಲೇ ನನ್ನನ್ನು ದಹಿಸಿದರೂ ದಹಿಸಬಹುದು. ಇಲ್ಲವೇ ನಾನು ಈಗ ಸೀತೆಯನ್ನೂ ಕಾಣದೆ, ಅತ್ತಲಾಗಿ ರಾಮನ ಬಳಿಗೂ ಹೋಗದೆ, ನನ್ನ ಪ್ರಭುವಾದ ಸುಗ್ರೀವನನ್ನೇ ರಾಮನಿಗಾಗಿ ಇಲ್ಲಿಗೆ ಕರೆತಂದರೂ, ಅದುವರೆಗೂ ಈ ಸೀತೆಯು ಬದುಕಿರುವಳೆಂಬ ನಿಜವಿಲ್ಲ. ಸುಗ್ರೀವನು ಸೇನಾಸಮೇತನಾಗಿ ಬಂದರೂ ವ್ಯರ್ಥವಾಗುವುದು.

ಆದುದರಿಂದ ಕಾದಿದ್ದು, ಇಲ್ಲಿನ ರಾಕ್ಷಸಸ್ತ್ರೀಯರಿಗೆ ಎಚ್ಚರಿಕೆಯಿಲ್ಲದಿದ್ದ ಸಮಯವನ್ನು ನೋಡಿ, ಆ ಸಂದರ್ಭದಲ್ಲಿ ಕೆಳಗಿಳಿದು, ದುಃಖದಿಂದ ಕುದಿಯುತ್ತಿರುವ ಈ ಸೀತೆಯನ್ನು ಮೆಲ್ಲಗೆ ಸಮಾಧಾನಪಡಿಸಿ ಬರುವೆನು. ನಾನು ಮೊದಲೇ ಅತಿಸೂಕ್ಷ್ಮದೇಹದಿಂದಿರುವೆನು. ಇದರಮೇಲೆ ವಾನರನು! ಆದುದರಿಂದ ನಾನು ರಾಮದೂತನೆಂಬುದನ್ನು ಹೇಗೂ ಈ ರಾಕ್ಷಸರು ಕಂಡುಕೊಳ್ಳಲಾರರು. ಅದೂ ಅಲ್ಲದೆ ಮನುಷ್ಯರು ಮಾತಾಡತಕ್ಕ ಸಂಸ್ಕೃತಭಾಷೆಯನ್ನೇ ಅವಲಂಬಿಸಿ ಇವಳೊಡನೆ ಮಾತಾಡುವೆನು. ಆದರೆ ನಾನು ಬ್ರಾಹ್ಮಣನಂತೆ ಸಂಸ್ಕೃತಭಾಷೆಯಿಂದಲೇ ಮಾತಾಡಿದರೆ, ಸೀತೆಯು ಕಪಿಯಾದ ನಾನು ಸಂಸ್ಕೃತದಿಂದ ಮಾತಾಡುವುದನ್ನು ನೋಡಿ, ನನ್ನನ್ನು ರಾವಣನೆಂದು ಭ್ರಾಂತಿಗೊಂಡು ಭಯಪಡಬಹುದು. "ಈ ಕಪಿಯೆಂದರೇನು? ಸಂಸ್ಕೃತ ಭಾಷೆಯನ್ನಾಡುವುದೆಂದರೇನು? ಇದು ರಾವಣನ ಮಾಯೆಯೇ" ಎಂದು ಶಂಕಿಸುವುದರಲ್ಲಿ ಸಂದೇಹವಿಲ್ಲ. ಆದುದರಿಂದ ಈಗ ಸಂಸ್ಕೃತಭಾಷೆಯಿಂದ ಇವಳೊಡನೆ ಮಾತಾಡುವುದೂ ಯುಕ್ತವಲ್ಲ. ಇದಕ್ಕಾಗಿ ಈಗ ನಾನು, ಸಾಮಾನ್ಯವಾಗಿ 1 ಕೋಸಲದೇಶದ ಜನರೆಲ್ಲರೂ ಆಡುವ ಮನುಷ್ಯಭಾಷೆಯಿಂದಲೇ ಅರ್ಥಯುಕ್ತವಾಗಿ ಇವಳನ್ನು ಮಾತಾಡಿಸಿ ಸಮಾಧಾನಪಡಿಸಬೇಕೇ ಹೊರತು ಬೇರೆ ಉಪಾಯವಿಲ್ಲ. ಮೊದಲೆ ಇವಳು ನಾನಾವಿಧವಾದ ರಾಕ್ಷಸಮಾಯೆಯಿಂದ ವಂಚಿತಳಾಗಿ ಭಯಗೊಂಡಿರುವಳು. ಈಗ ಈ ನನ್ನ ವೇಷವನ್ನೂ, ನನ್ನ ಮಾತನ್ನೂ ನೋಡಿದ ಪಕ್ಷದಲ್ಲಿ ಇವಳ ಭಯವು ಮಿತಿಮೀರಿ ಹೋಗುವುದು. ನನ್ನನ್ನು ಕಂಡೊಡನೆ ಭಯದಿಂದ ಗಟ್ಟಿಯಾಗಿ ಕೂಗಿಬಿಡುವಳು. ವಿಶಾಲಾಕ್ಷಿಯಾದ ಈ ಸೀತೆಯು ಕಾಮರೂಪಿಯಾದ ರಾವಣನ ಶಕ್ತಿಯನ್ನು ಚೆನ್ನಾಗಿ ಬಲ್ಲವಳಾದುದರಿಂದ ನನ್ನನ್ನು ನೋಡಿದೊಡನೆ ಭಯಪಟ್ಟು ಕೂಗಿಡುವುದರಲ್ಲಿ ಸಂದೇಹವಿಲ್ಲ. ಇವಳು ಹಾಗೆ ಭಯದಿಂದ ಕೂಗಿಕೊಳ್ಳುವುದನ್ನು ಕೇಳಿದೊಡನೆ, ಈ ರಾಕ್ಷಸಿಯರೆಲ್ಲರೂ ಗುಂಪುಗೂಡಿ ವಿವಿಧಾಯುಧಗಳನ್ನು ಹಿಡಿದು ಮೃತ್ಯುದೇವತೆಗಳಂತೆ ಭಯಂಕರಸ್ವರೂಪವುಳ್ಳವರಾಗಿ ಸುತ್ತಲೂ ಮುತ್ತಿಕೊಳ್ಳುವರು. ನಾನು ಸೀತೆಯಮುಂದೆ ನಿಂತಿರುವುದನ್ನು ಕಂಡರೆ, ವಿಕಾರಮುಖವುಳ್ಳ ಈ ರಾಕ್ಷಸಿ

---

1. ಇಲ್ಲಿ ಮನುಷ್ಯರೆಂದರೆ ಕೋಸಲದೇಶದವರೆಂದೂ, ಅವರಾಡುವ ಭಾಷೆಯೇ ಸೀತೆಗೆ ಪರಿಚಿತವಾದುದರಿಂದ ಆ ಭಾಷೆಯನ್ನೇ ನುಡಿಯುವುದಾಗಿಯೂ ಹನುಮಂತನ ಅಭಿಪ್ರಾಯವೆಂದು ಗ್ರಾಹ್ಯವು.

ಯರೆಲ್ಲರೂ ನನ್ನ ಮೇಲೆ ಬಿದ್ದು ತಮ್ಮಿಂದ ಸಾಧ್ಯವಾಗುವವರೆಗೂ ನನ್ನನ್ನು ಕೊಲ್ಲುವುದಕ್ಕೋ, ಹಿಡಿಯುವುದಕ್ಕೋ ಪ್ರಯತ್ನಿಸುವರು. ಒಂದುವೇಳೆ ನಾನೂ ಆತ್ಮಸಂರಕ್ಷಣಾರ್ಥವಾಗಿ ಅವರೊಡನೆ ಹೋರಾಡುವುದಕ್ಕೆ ತೊಡಗಿ, ಇಲ್ಲಿನ ಮರದ ಕೊಂಬೆಗಳನ್ನೂ ಕಿತ್ತುಕೊಂಡು ಅವರನ್ನು ಬೆನ್ನಟ್ಟಿ ಓಡುವಪಕ್ಷ ದಲ್ಲಿ, ಅವರೆಲ್ಲರೂ ನನ್ನನ್ನು ನೋಡಿ ಭಯಪಡುವರು. ವಿಕಾರಮುಖವುಳ್ಳ ಈ ರಾಕ್ಷಸಿಯರು ಈ ಅಶೋಕವನದಲ್ಲಿ ಹಿಂದೆ ಯಾವಾಗಲೂ ಕಾಣದ ಈ ನನ್ನದೊಡ್ಡ ರೂಪವನ್ನು ನೋಡಿದಾಗಲೇ ಭಯದಿಂದ ನಡುಗುವರಲ್ಲದೆ, ಅಲ್ಲಲ್ಲಿ ರಾವಣನ ಅರಮನೆಯಲ್ಲಿ ಕಾವಲಿರುವ ಬೇರೆ ರಾಕ್ಷಸರನ್ನೂ ಸಹಾಯಕ್ಕಾಗಿ ಕರೆತರುವರು. ಆ ರಾಕ್ಷಸರೂ ಶೂಲಗಳನ್ನೂ, ಶಕ್ತ್ಯಾಯುಧಗಳನ್ನೂ, ಕತ್ತಿಮೊದಲಾದ ನಾನಾ ಯುಧಗಳನ್ನೂ ಹಿಡಿದು, ನೋಡುವಾಗಲೇ ಭಯವನ್ನು ಹುಟ್ಟಿಸುವಂತೆ ಗುಂಪು ಗುಂಪಾಗಿ ಬಂದು ಜಗಳಕ್ಕೆ ನಿಲ್ಲುವರು. ಹೀಗೆ ಅನೇಕ ರಾಕ್ಷಸರು ನಾಲ್ಕು ಕಡೆಗಳಲ್ಲಿಯೂ ನನ್ನನ್ನು ಸುತ್ತಿಕೊಂಡರೆ, ರಾಕ್ಷಸ ಸೈನ್ಯವೆಲ್ಲವನ್ನೂ ಅಡಗಿ ಸುವುದರಲ್ಲಿಯೇ ನನಗೆ ಸಾಕಾಗಿ ಹೋಗುವುದು. ಅದರಮೇಲೆ ನಾನು ಈ ಸಮುದ್ರವನ್ನು ದಾಟಿ ಹಿಂತಿರುಗಿ ಹೋಗಬೇಕೆಂದರೆ ನನಗೆ ಸಾಧ್ಯವೇ ಆಗದು. ಹಾಗೂ ಒಂದು ವೇಳೆ ನಾನು ಈ ಸಮುದ್ರವನ್ನು ದಾಟುವುದಕ್ಕೆ ಪ್ರಯತ್ನಪಟ್ಟರೂ, ದಾಟುವಾಗ ನಡುದಾರಿಯಲ್ಲಿ ಕೆಲವು ರಾಕ್ಷಸರು ಆಕಾಶಕ್ಕೆ ಹಾರಿ, ಅಲ್ಲಿ ನನ್ನನ್ನು ಹಿಡಿದರೂ ಹಿಡಿಯಬಹುದು. ಇವೆಲ್ಲವನ್ನೂ ತಪ್ಪಿಸಿ ಕೊಂಡು ಹೋಗುವುದು ಕಷ್ಟವು. ನಾನು ಬಂದ ಕೆಲಸವೂ ಕೆಟ್ಟು, ರಾಕ್ಷಸರ ಕೈಯಲ್ಲಿಯೂ ಸಿಕ್ಕಿಬೀಳಬೇಕಾಗುವುದು. ರಾಕ್ಷಸರಿಗೆ ಯಾವಾಗಲೂ ಪ್ರಾಣಿಹಿಂಸೆಯಲ್ಲಿಯೇ ಅಭಿರುಚಿಯು ಹೆಚ್ಚಾದುದರಿಂದ, ಅವರು ನನ್ನ ಮೇಲಿನ ಕೋಪದಿಂದ ಜನಕಪುತ್ರಿಯಾದ ಸೀತೆಯನ್ನೇ ಕೊಂದರೂ ಕೊಂದುಬಿಡ ಬಹುದು. ಹಾಗಾದರೆ ನಾನು ಈಗ ಉದ್ದೇಶಿಸಿ ಬಂದಿರುವ ರಾಮಸುಗ್ರೀವರ ಕಾರ್ಯಗಳೆಲ್ಲವೂ ಕೆಟ್ಟುಹೋಗುವುವು. ಈ ಸೀತೆಯಿರುವ ಸ್ಥಲವಾದರೋ ಬೇರೊಬ್ಬ ರಿಗೆ ಪ್ರವೇಶಿಸುವುದಕ್ಕೆ ದಾರಿಯೇ ತಿಳಿಯದಂತೆ ದುರ್ಗಮವಾಗಿರುವುದು. ಇದರ ಸುತ್ತಲೂ ಅನೇಕರಾಕ್ಷಸರು ಕಾವಲಿರುವರು. ಇದು ಸಮುದ್ರಮಧ್ಯದಲ್ಲಿ ಯಾರಿಗೂ ತಿಳಿಯದ ರಹಸ್ಯಸ್ಥಳವಾಗಿರುವುದು. ಒಂದುವೇಳೆ ನಾನು ಸಾಧ್ಯವಾದ ಮಟ್ಟಿಗೂ ಈ ರಾಕ್ಷಸರೊಡನೆ ಯುದ್ಧದಲ್ಲಿ ಹೋರಾಡಿ, ಕೊನೆಗೂ ಕೈಸಾಗದೆ ಪ್ರಾಣವನ್ನು ಬಿಟ್ಟರೆ, ಅಥವಾ ಇವರಲ್ಲಿ ಸೆರೆಸಿಕ್ಕಿದರೆ, ಆಮೇಲೆ ರಾಮನಿಗೆ ಸಹಾಯಕನಾಗಿ ಮುಂದಿನಕಾರ್ಯವನ್ನು ಸಾಧಿಸುವನಾರು? ಇದಕ್ಕೆ ಬೇರೊಬ್ಬನೂ ಸಮರ್ಥನಲ್ಲ

ವೆಂದೇ ತೋರುವುದು. ಎಷ್ಟೆಷ್ಟು ಯೋಚಿಸಿದರೂ, ನಾನು ಹತ್ತಮೇಲೆ ನೂರು ಯೋಜನವಿಸ್ತಾರವುಳ್ಳ ಮಹಾಸಮುದ್ರವನ್ನು ದಾಟಬಲ್ಲ ವಾನರನು ಬೇರೆ ಯಾರೆಂದು ನನ್ನ ಬುದ್ಧಿಗೆ ತೋರಲಿಲ್ಲ. ಆದರೆ ನಾನು ಮಾತ್ರ ಈ ರಾಕ್ಷಸರಿಗೆ ಹೆದರುವವನಲ್ಲ. ಎಷ್ಟೋ ಸಹಸ್ರರಾಕ್ಷಸರನ್ನಾದರೂ ಕೊಲ್ಲುವ ಶಕ್ತಿಯು ನನಗುಂಟು. ಆದರೆ ಹಾಗೆ ಯುದ್ಧದಲ್ಲಿ ಬಳಲಿದಮೇಲೆ ಈ ಸಮುದ್ರವನ್ನು ದಾಟಿ ಹಿಂತಿರುಗಿ ಹೋಗುವುದಕ್ಕೆಮಾತ್ರ ನನಗೆ ಸಾಧ್ಯವಿಲ್ಲ. ಅಥವಾ ಯುದ್ಧದಲ್ಲಿ ಸಂಭವಿಸುವ ಜಯಾಪಜಯಗಳನ್ನು ಈಗ ನಿಶ್ಚಯಿಸುವುದೂ ಸಾಧ್ಯವಿಲ್ಲ. ನಾನೇ ಅಪಜಯವನ್ನು ಹೊಂದಿದರೂ ಹೊಂದಬಹುದು. ಹೀಗೆ ಸಂದೇಹಗ್ರಸ್ತವಾದ ಕಾರ್ಯವನ್ನಾರಂಭಿಸುವುದೇ ನನಗಿಷ್ಟವಿಲ್ಲ. ಪ್ರಾಜ್ಞನಾದ ಯಾವ ಮನುಷ್ಯನು ತಾನೇ ಹೀಗೆ ಸಂದೇಹ ವಿಶಿಷ್ಟವಾದ ಕಾರ್ಯವನ್ನು ಹಿಂದು ಮುಂದು ನೋಡದೆ ಆರಂಭಿಸುವನು? ಯಾರೂ ಹಾಗೆ ಪ್ರಯತ್ನಿಸಲಾರರು. ಇಷ್ಟಾದರೂ ಸೀತೆಯನ್ನು ಮಾತಾಡಿಸದೆ ಹೋಗುವುದೇನೋ ಯುಕ್ತವಲ್ಲ! ಇನ್ನು ಸ್ವಲ್ಪಕಾಲಹೋಗಾಗಿ ಇವಳು ಪ್ರಾಣವನ್ನು ಬಿಡುವುದೇನೋ ನಿಜವು. ಇವಳನ್ನು ಮಾತಾಡಿಸಿದರೋ, ಈ ಅನರ್ಥಗಳೆಲ್ಲಕ್ಕೂ ಕಾರಣವಾಗುವುದು. ಆದುದಾಗಲಿ! ಹೇಗೋ ಒಂದು ವಿಧದಲ್ಲಿ ಈ ಕಾರ್ಯವನ್ನು ಮುಗಿಸಬೇಕಲ್ಲವೆ? ಎಂದರೆ, ಚೆನ್ನಾಗಿ ಪರ್ಯಾಲೋಚಿಸದೆ ಮಾಡಿದ ಕಾರ್ಯಕ್ಕೆ ಮೂಲಹಾನಿಯುಂಟಾಗುವುದು. ಕೈಗೂಡಿ ಬರುತ್ತಿರುವ ಕಾರ್ಯವೂಕೂಡ ಅವಿವೇಕಿಯಾದ ದೂತನ ಕೈಗೆ ಸಿಕ್ಕಿದರೆ, ಕಾಲದೇಶಸ್ಥಿತಿಗಳಿಗೆ ವಿರುದ್ಧವಾಗಿ, ಸೂರ್ಯೋದಯಕಾಲದ ಕತ್ತಲೆಯಂತೆ ಯಾರಿಗೂ ತಿಳಿಯದ ಹಾಗೆ ಕೆಟ್ಟುಹೋಗುವುದು. ರಾಜನು ಸಮರ್ಥರಾದ ಮಂತ್ರಿಗಳೊಡನೆ ಸೇರಿ, ಕಾರ್ಯಾಕಾರ್ಯಗಳನ್ನು ಚೆನ್ನಾಗಿ ಪರ್ಯಾಲೋಚಿಸಿ, ಹೀಗೆಯೇ ಮಾಡಬೇಕೆಂದು ನಿಶ್ಚಯಿಸಿದ ಕಾರ್ಯವೂ ಕೂಡ, ವಿವೇಕವಿಲ್ಲದ ದೂತನ ಕೈಗೆ ಸೇರಿದರೆ, ಎಷ್ಟು ಮಾತ್ರವೂ ಫಲಕಾರಿಯಾಗದು. ಅಂತಹ ಅವಿವೇಕಿಗಳಾದ ದೂತರು ತಮಗೇನೂ ತಿಳಿಯದಿದ್ದರೂ, ತಾವೇ ಪಂಡಿತರೆಂಬ ಹೆಮ್ಮೆಯುಳ್ಳವರಾಗಿ ಕಾರ್ಯಗಳನ್ನು ಕೆಡಿಸುವರು. ಆದುದರಿಂದ ಈಗ ನಾನು ಹಿಡಿಯಬೇಕಾದ ಮುಂದಿನ ದಾರಿಯೇನು? ಮುಖ್ಯವಾಗಿ ಸ್ವಾಮಿಕಾರ್ಯವೂ ಕೆಡಬಾರದು. ನಾನೂ ಅವಿವೇಕಿಯೆನಿಸಿಕೊಳ್ಳಬಾರದು! ನಾನು ಮಾಡಿದ ಈ ಸಮುದ್ರಲಂಘನವೂ ವ್ಯರ್ಥವಾಗಬಾರದು! ಸೀತೆಯೂ ನನ್ನನ್ನು ಕಂಡು ಭಯಪಡಬಾರದು! ಅವಳು ನಾನು ಹೇಳುವ ಮಾತನ್ನೂ ಲಾಲಿಸಿ ಕೇಳಬೇಕು! ಇದಕ್ಕೆ ಯಾವ ಉಪಾಯವನ್ನು ಮಾಡಬಹುದು!” ಎಂದು, ಆ ಹನುಮಂತನು ನಾನಾವಿಧದಿಂದ ಮನಸ್ಸಿನಲ್ಲಿ

ಚಿಂತಿಸುತಿದ್ದನು. ಅವನು ಬಹಳ ಧೀಮಂತನಾದುದರಿಂದ, ಕೊನೆಗೆ ಅವನ ಮನಸ್ಸಿಗೆ ಒಂದು ನಿರ್ಧಾರವು ಹುಟ್ಟಿತು. "ಈಗ ಅಕಸ್ಮಾತ್ತಾಗಿ ನನ್ನ ಈ ರೂಪವನ್ನೇ ಸೀತೆಗೆ ತೋರಿಸಿ, ಇವಳಿಗೆ ಭಯವನ್ನುಂಟುಮಾಡುವುದೇನೋ ಯುಕ್ತವಲ್ಲ. ಈಕೆಯಾದರೋ ತನ್ನ ಪ್ರಿಯಬಂಧುವಾದ ರಾಮನಲ್ಲಿಯೇ ನಟ್ಟ ಮನಸ್ಸುಳ್ಳವಳಾಗಿ ಆತನನ್ನೇ ಚಿಂತಿಸುತ್ತಿರುವಳು. ಆದುದರಿಂದ ನಾನು ಇಲ್ಲಿಯೇ ಇದ್ದು ಈಕೆಗೆ ಇಷ್ಟನಾಗಿಯೂ, ಸರ್ವಭೂತಹಿತನಾಗಿಯೂ, ಇರುವ ಆ ರಾಮನ ಗುಣಗಳನ್ನೇ ಇವಳ ಕಿವಿಗೆ ಬೀಳುವಂತೆ ಎತ್ತಿ ಹೇಳುವೆನು. ಆಗ ಈ ಸೀತೆಯು ಭಯಪಡುವುದಕ್ಕೂ ಕಾರಣವಿಲ್ಲ. ಇವಳ ಮನಸ್ಸಿಗೂ ಸ್ವಲ್ಪವಾಗಿ ಆಪ್ಯಾಯನವುಂಟಾಗುವುದು. ಇಕ್ಷ್ವಾಕುಕುಲಶ್ರೇಷ್ಠನಾಗಿಯೂ, ಆತ್ಮಜ್ಞನಾಗಿಯೂ ಇರುವ ಆ ರಾಮನು ಸೀತೆಗೆ ಹೇಳಿಕಳುಹಿಸಿರುವ ಶುಭವಾಕ್ಯಗಳನ್ನೂ ಇಲ್ಲಿಂದಲೇ ಹೇಳಿ, ಆವಳಿಗೆ ನನ್ನಲ್ಲಿ ನಂಬಿಕೆಯುಂಟಾಗುವಂತೆ ಮಾಡಿಕೊಳ್ಳುವೆನು" ಎಂದು ನಿಶ್ಚಯಿಸಿಕೊಂಡನು. ಹೀಗೆ ಮಹಾತ್ಮನಾದ ಹನುಮಂತನು, ಮರದಮೇಲೆ ಮರೆಯಾಗಿ ಕುಳಿತು, ನಾನಾವಿಧವಾಗಿ ಚಿಂತಿಸಿ, ಕೊನೆಗೆ ಸೀತೆಯ ಕಿವಿಗೆ ಬೀಳುವಂತೆ, ಕಿವಿಗಿಂಪಾಗಿಯೂ, ಸಾರವತ್ತಾಗಿಯೂ ಇರುವ ಮಾತನ್ನು ಹೇಳತೊಡಗಿದನು.

ಇಲ್ಲಿಗೆ ಮೂವತ್ತನೆಯ ಸರ್ಗವು.

---

{ ಹನುಮಂತನು ಶಿಂಶುಪಾವೃಕ್ಷದಲ್ಲಿ ಕುಳಿತಹಾಗೆಯೇ, ಸೀತೆಯ ಕಿವಿಗೆ ಬೀಳುವಂತೆ ರಾಮನ ವೃತ್ತಾಂತವನ್ನು ಹೇಳುತ್ತಿದ್ದುದು. ಸೀತೆಯು ತಲೆಯೆತ್ತಿ ಮೇಲೆ ನೋಡಿದುದು. }

ಹೀಗೆ ಹನುಮಂತನು ನಾನಾವಿಧವಾಗಿ ಚಿಂತಿಸಿ ಸೀತೆಗೆ ಸಮೀಪವಾಗಿ ಅವಳಿಗೆ ಮಾತ್ರ ಕೇಳುವಂತೆ ಇಂಪಾದ ಮಾತುಗಳನ್ನು ಹೇಳತೊಡಗಿದನು. "ರಥಗಜತುರಗಾದಿ ಚತುರಂಗ ಬಲಸಮೇತನಾದ ದಶರಥನೆಂಬ ರಾಜನಿದ್ದನು. ಅವನು ಬಹಳ ಪುಣ್ಯಶೀಲನು. ಲೋಕವಿಖ್ಯಾತವಾದ ಯಶಸ್ಸುಳ್ಳವನು. ಆತನಲ್ಲಿ ಕಪಟಸ್ವಭಾವವೆಂಬುದು ಸ್ವಲ್ಪಮಾತ್ರವೂ ಇಲ್ಲ. ಮತ್ತು ಆತನು ಔದಾರ್ಯದಲ್ಲಿಯೂ, ವೀರ್ಯದಲ್ಲಿಯೂ ವಿಶೇಷವಾದ ಖ್ಯಾತಿಯನ್ನು ಹೊಂದಿದ್ದನು. ಗುಣದಿಂದ ರಾಜ

ಋಷಿಗಳಲ್ಲಿ ತಾನೇ ಮೇಲೆನಿಸಿಕೊಂಡು, ತಪಸ್ಸಿನಲ್ಲಿ ಮಹರ್ಷಿಗಳಿಗೆ ಸಮಾನನಾಗಿದ್ದನು. ಚಕ್ರವರ್ತಿಕುಲದಲ್ಲಿ ಹುಟ್ಟಿದವನು. ಬಲದಲ್ಲಿ ದೇವೇಂದ್ರನಿಗೆ ಸಮನಾದವನು. ಯಾವಪ್ರಾಣಿಯನ್ನೂ ಹಿಂಸೆಮಾಡಿದವನಲ್ಲ. ಉದಾರಸ್ವಭಾವವುಳ್ಳವನು. ದಯಾಶೀಲನು. ಎಲ್ಲಿಯೂ ಚ್ಯುತಿಯಿಲ್ಲದ ಪರಾಕ್ರಮವುಳ್ಳವನು. ಇಕ್ಷ್ವಾಕುವಂಶಕ್ಕೆ ಪ್ರಮುಖನಾಗಿ ಸಮಸ್ತಸಂಪತ್ತಿನಿಂದಲೂ ಕೂಡಿದ್ದನು. ಆಶ್ರಿತರ ಭಾಗ್ಯವನ್ನು ಮೇಲೆಮೇಲೆ ಹೆಚ್ಚಿಸುವ ಸ್ವಭಾವವುಳ್ಳವನು. ಸಮಸ್ತ ರಾಜಲಕ್ಷಣಗಳಿಂದಲೂ ಕೂಡಿದ್ದವನು. ಸಮಸ್ತ ಭಾಗ್ಯಸಮೃದ್ಧಿಯಿಂದ ಶೋಭಿಸುತಿದ್ದವನು. ಸಮಸ್ತರಾಜರಿಗೂ ತಾನೇ ಮೇಲುಪಙ್ಕ್ತಿಯೆನಿಸಿಕೊಂಡಿದ್ದವನು. ಚತುಸ್ಸಮುದ್ರಾಂತವಾದ ಈ ಭೂಪ್ರದೇಶವನ್ನೆಲ್ಲಾ ವ್ಯಾಪಿಸಿದ ಪ್ರಸಿದ್ಧಿಯುಳ್ಳವನು. ಸಮಸ್ತ ಪ್ರಜೆಗಳಿಗೂ ಸೌಖ್ಯವನ್ನುಂಟುಮಾಡಿ, ತಾನೂ ಯಥೇಚ್ಛವಾದ ಸುಖಗಳನ್ನನುಭವಿಸುತ್ತಿದ್ದವನು. ಅವನಿಗೆ ಪರಮಪ್ರೇಮಪಾತ್ರನಾಗಿದ್ದ ರಾಮನೆಂಬ ಜ್ಯೇಷ್ಠಕುಮಾರನುಂಟು. ಅವನೋ ಚಂದ್ರಬಿಂಬದಂತೆ ಸೌಮ್ಯವಾದ ಮುಖವುಳ್ಳವನು. ಸಮಸ್ತ ಧರ್ಮವಿಶೇಷಗಳನ್ನೂ ತಿಳಿದವನು. ಸಮಸ್ತ ಧನುರ್ಧಾರಿಗಳಲ್ಲಿಯೂ ತಾನೇ ಶ್ರೇಷ್ಠನೆನಿಸಿಕೊಂಡಿರುವನು. ಅವನು ತನ್ನ ಕ್ಷತ್ರಿಯಧರ್ಮವನ್ನೂ, ತನ್ನ ಪ್ರಜೆಗಳ ವರ್ಣಾಶ್ರಮಧರ್ಮವನ್ನೂ ಚೆನ್ನಾಗಿ ರಕ್ಷಿಸುತ್ತಿರುವವನು. ಹಾಗೆಯೇ ಸಮಸ್ತ ಪ್ರಾಣಿಗಳ ಧರ್ಮವನ್ನೂ ರಕ್ಷಿಸತಕ್ಕವನು. ವೀರನಾಗಿಯೂ, ಸತ್ಯಪ್ರತಿಜ್ಞೆಯುಳ್ಳವನಾಗಿಯೂ ಇರುವ ಆ ರಾಮನು, ವೃದ್ಧನಾದ ತನ್ನ ತಂದೆಯ ಆಜ್ಞೆಯಮೇಲೆ, ತನ ಪತ್ನಿಯನ್ನೂ, ತಮ್ಮನನ್ನೂ ಸಂಗಡ ಕರೆದುಕೊಂಡು ಕಾಡಿಗೆ ಹೊರಟುಬಂದನು. ಮಹಾರಣ್ಯದಲ್ಲಿ ಬೇಟೆಯಾಡುತ್ತಿರುವಾಗ ಕಾಮರೂಪಿಗಳಾಗಿಯೂ, ಶೂರರಾಗಿಯೂ ಇರುವ ಅನೇಕ ರಾಕ್ಷಸರನ್ನೂ ಕೊಂದನು. ಹೀಗೆ ರಾಮನು ಜನಸ್ಥಾನದಲ್ಲಿ ನಡೆಸಿದ ರಾಕ್ಷಸವಧವನ್ನೂ, ಖರದೂಷಣರೆಂಬ ಮಹಾವೀರರಾಕ್ಷಸರಿಬ್ಬರು ಇವನಿಂದ ಹತರಾದುದನ್ನೂ ಕೇಳಿ, ಲಂಕೇಶ್ವರನಾದ ರಾವಣನು ಕೋಪಗೊಂಡು, ಮಾಯಾಮೃಗರೂಪದಿಂದ ಆ ಕಾಡಿನಲ್ಲಿ ರಾಮನನ್ನು ಮೋಸಪಡಿಸಿ, ಅವನ ಪತ್ನಿಯಾದ ಸೀತೆಯನ್ನು ಕದ್ದು ತಂದನು. ಅತ್ತಲಾಗಿ ರಾಮನಾದರೋ, ನಿರ್ದುಷ್ಟವಾದ ನಡತೆಯುಳ್ಳ ತನ್ನ ಪ್ರಿಯೆಯಾದ ಸೀತೆಯನ್ನು ಕಾಣದೆ ಅಲ್ಲಲ್ಲಿ ಹುಡುಕುತ್ತಾ, ಕೊನೆಗೆ ಸುಗ್ರೀವನೆಂಬ ವಾನರನನ್ನು ಕಂಡು ಅವನೊಡನೆ ಸ್ನೇಹವನ್ನು ಬೆಳೆಸಿದನು. ಆಮೇಲೆ ಮಹಾಬಲಾಢ್ಯನಾಗಿಯೂ, ಶತ್ರುಸೂದನನಾಗಿಯೂ ಇರುವ ಆ ರಾಮನು, ವಾಲಿಯನ್ನು ಕೊಂದು, ಅವನ ವಶದಲ್ಲಿದ್ದ ಕಪಿರಾಜ್ಯವನ್ನು ಸುಗ್ರೀವನಿಗೆ

ಕೊಡಿಸಿದನು. ಆ ಸುಗ್ರೀವನ ಆಜ್ಞೆಯಿಂದ ಕಾಮರೂಪಿಗಳಾದ ಕಪಿಗಳು ಸಾವಿರಾರು ಸಂಖ್ಯೆಯಿಂದ ದಿಕ್ಕು ದಿಕ್ಕುಗಳಿಗೆ ಹೊರಟು ಈಗಲೂ ಆ ಸೀತಾದೇವಿಯನ್ನು ಹುಡುಕುತ್ತಿರುವರು. ನಾನೂ ಆ ವಿಶಾಲಾಕ್ಷಿಗಾಗಿಯೇ ಸಂಪಾತಿಯ ಮಾತಿನಮೇಲೆ ನೂರು ಯೋಜನದಗಲವುಳ್ಳ ಮಹಾಸಮುದ್ರವನ್ನೂ ವೇಗದಿಂದ ದಾಟಿಬಂದೆನು. ರಾಮನು ಯಾವ ವರ್ಣವನ್ನೂ ಯಾವ ದೇಹಕಾಂತಿಯನ್ನೂ ಸೀತೆಗೆ ಗುರುತಾಗಿ ಹೇಳಿದ್ದನೋ ಅವೆಲ್ಲವೂ ಈಕೆಯಲ್ಲಿ ಕಾಣುವುದರಿಂದ ಆ ಸೀತೆಯನ್ನೇ ನಾನು ಇಲ್ಲಿ ನೋಡಿದಂತಾಯಿತು." ಎಂದು ಹನುಮಂತನು ತನಗೆ ತಾನೇ ಇಷ್ಟುಮಾತ್ರವನ್ನು ಹೇಳಿ ಸುಮ್ಮನಿದ್ದನು. ಈ ಮಾತುಗಳು ಸೀತೆಯ ಕಿವಿಗೂ ಬಿದ್ದುವು. ಇವುಗಳನ್ನು ಕೇಳಿದೊಡನೆಯೇ ಆವಳಿಗೆ ಪರಮಾಶ್ಚರ್ಯವುಂಟಾಯಿತು. ಆಕೆ ಹತ್ತೈಗಾಗಿ ಕೂದಲನ್ನು ಕೊರಲಿಗೆ ಸುತ್ತಿದಹಾಗೆಯೇ, ಆ ಸೀತೆಯು ಮೇಲೆ ತಲೆಯೆತ್ತಿ, ಶಿಂಶುಪಾವೃಕ್ಷವನ್ನು ನೋಡಿದಳು. ಅನವರತವೂ ರಾಮಧ್ಯಾನವನ್ನು ಮಾಡುತಿದ್ದ ಸೀತೆಯು, ಆ ಮರದಮೇಲಿದ್ದ ಕಪಿಯ ಮಾತುಗಳಲ್ಲಿಯೂ, ರಾಮಗುಣಕೀರ್ತನವನ್ನೇ ಕೇಳಿ, ನಾಲ್ಕುಕಡೆಗಳಿಗೂ ದೃಷ್ಟಿಯಿಟ್ಟು ದಿಕ್ಕುದಿಕ್ಕುಗಳನ್ನೆಲ್ಲಾ ನೋಡುತ್ತ ತನ್ನ ಮನಸ್ಸಿನಲ್ಲಿಯೇ ತಾನು ಸಂತೋಷದಿಂದುಕ್ಕುತ್ತಿದ್ದಳು. ಯಾವ ಕಡೆಯಲ್ಲಿಯೂ ಯಾವಪ್ರಾಣಿಯೂ ಇವಳ ದೃಷ್ಟಿಗೆ ಬೀಳಲಿಲ್ಲ. [1] ಆಶ್ಚರ್ಯವಶಳಾದ ಆ ಸೀತೆಯೋ ಒಮ್ಮೆ ಪಕ್ಕದಲ್ಲಿ ತಿರುಗಿ ನೋಡುವಳು. ಒಮ್ಮೆ ಮೇಲೆ ನೋಡುವಳು. ಒಮ್ಮೆ ಬಗ್ಗಿ ಕೆಳಗೆ ನೋಡುವಳು. ಹೀಗೆ ನಾಲ್ಕುಕಡೆಗಳನ್ನೂ ಹುಡುಕಿ ನೋಡಿದಮೇಲೆ, ಎಣೆಯಿಲ್ಲದ ಬುದ್ಧಿಯುಳ್ಳವನಾಗಿಯೂ, ಸುಗ್ರೀವನಿಗೆ ಮುಖ್ಯಮಂತ್ರಿಯಾಗಿಯೂ ಇದ್ದ ಆ ಹನುಮಂತನು, ಉದಯಪರ್ವತದಲ್ಲಿರುವ ಸೂರ್ಯನಂತೆ ಆ ಶಿಂಶುಪಾವೃಕ್ಷದಮೇಲೆ ಕುಳಿತಿರುವುದನ್ನು ಕಂಡಳು.

ಇಲ್ಲಿಗೆ ಮೂವತ್ತೊಂದನೆಯ ಸರ್ಗವು.

---

1. ಇಲ್ಲಿ "ಸಾತಿರ್ಯಗೂರ್ಧ್ವಂಚ ತಥಾಪ್ಯಧಸ್ತಾನ್ನಿರೀಕ್ಷಮಾಣಾ ತಮಚಿಂತ್ಯಬುದ್ಧಿಂ। ದದರ್ಶ ಪಿಂಗಾಧಿಪತೇರಮಾತ್ಯಂ ವಾತಾತ್ಮಜಂ ಸೂರ್ಯಮಿವೋದಯಸ್ಥಮ್" ಎಂದು ಮೂಲವು. ಇಲ್ಲಿನ ವಿಶೇಷಣಗಳಿಂದ ಸೀತೆಯು ಆಂಜನೇಯನನ್ನು ಪ್ರತ್ಯಕ್ಷವಾಗಿ ನೋಡುವುದಕ್ಕೆ ಮೊದಲೇ, ಆಕೆಗೆ ಅವನ ವಿಷಯವಾಗಿ ಈ ಅಭಿಪ್ರಾಯಗಳುಂಟಾದುವೆಂದೂ

ಸೀತೆಯು ಮರದಮೇಲಿದ್ದ ಹನುಮಂತನನ್ನು ನೋಡಿ ಭಯಪಟ್ಟು, ದುಸ್ಸ್ವಪ್ನವೆಂದು ಭ್ರಮಿಸಿ, ಆ ವೃತ್ತಾಂತವೆಲ್ಲವೂ ಸತ್ಯವಾಗಿರಲೆಂದು ದೇವತಾಪ್ರಾರ್ಥನೆಯನ್ನು ಮಾಡಿದುದು.

ಹೀಗೆ ಆ ಮರದ ಕೊನೆಯಲ್ಲಿ ಮರೆಯಾಗಿ ಕುಳಿತಿದ್ದ ಕಪಿಯನ್ನು ಕಂಡೊಡನೆ ಸೀತೆಯ ಮನಸ್ಸು ನಡುಗಿಹೋಯಿತು. ಆದರೂ ಕುತೂಹಲದಿಂದ ಆ ವಾನರನನ್ನೇ ಚೆನ್ನಾಗಿ ನೋಡುತ್ತಿದ್ದಳು. ಆ ಕಪಿಗಾದರೋ ನಡುವಿನಲ್ಲಿ ಕಟ್ಟಿದ ಬಿಳೀ ಪಟ್ಟೆಮಡಿ! ಮಿಂಚಿನಂತೆ ಪಿಂಗಳವರ್ಣವಾಗಿ ಹೊಳೆಯುವ ಮೈ! ಅರಳಿದ ಚೆನ್ನಸುಗೆಯ ಹೂವಿನಂತೆ ಥಳಥಳಿಸುವ ದೇಹಕಾಂತಿ! ಪುಟಹಾಕಿದ ಚಿನ್ನದಂತೆ ಮಿರುಗುವ ಕಣ್ಣಾಲಿಗಳು! ಹೀಗೆ ವಿಚಿತ್ರರೂಪದಿಂದ ಕೂಡಿದ ಆ ಕಪಿಯು, ಬಹಳ ವಿನಯಭಾವದಿಂದ ಪ್ರಿಯವಾಕ್ಯಗಳನ್ನಾಡುತ್ತ ಮೇಲೆ ಮರೆಯಾಗಿ ಕುಳಿತಿರುವುದನ್ನು ನೋಡಿದಳು. ಹೀಗೆ ವಿನಯಭಾವದಿಂದ ಪ್ರಿಯವಾಕ್ಯಗಳನ್ನು ನುಡಿಯುತ್ತಿರುವಾಗಲೂ, ಆ ಕಪಿಯನ್ನು ನೋಡಿ ಸೀತೆಗೆ ಮೇಲೆಮೇಲೆ ಭೀತಿಯೂ, ಆಶ್ಚರ್ಯವೂ ಹೆಚ್ಚಿಹೋಯಿತು. ಹೀಗೆ ಆಶ್ಚರ್ಯಪರವಶಳಾಗಿ, ತನ್ನಲ್ಲಿ ತಾನು "ಅಬ್ಬಾ! ಈ ಕಪಿಯ ರೂಪವೇನಿದು! ಬಹಳ ಭಯಂಕರವಾಗಿರುವುದಲ್ಲಾ! ಸಮೀಪದಲ್ಲಿ ನಿಲ್ಲುವುದಕ್ಕಾಗಲಿ, ಕಣ್ಣಿಟ್ಟು ನೋಡುವುದಕ್ಕಾಗಲಿ ಸಾಧ್ಯವಿಲ್ಲದಂತಿರುವುದು! ನನಗೆ ಇದೊಂದನರ್ಥವು ಬೇರೆ ಬಂದೊದಗಿತೆ?" ಎಂದು ಭಯಪಟ್ಟು ನಡುಗುತ್ತ ಪ್ರಜ್ಞೆತಪ್ಪಿದಂತಾದಳು. ದುಃಖಪೀಡಿತೆಯಾದ ಆ ಸೀತೆಗಾದರೋ, ಅತ್ತಲಾಗಿ ಕಪಿಯ ಭಯವೊಂದು! ಇತ್ತಲಾಗಿ ರಾಕ್ಷಸಿಯರ ಭಯವೊಂದು; ಇವೆರಡರಿಂದ ಬಾಯಿಬಿಟ್ಟು ಅಳುವುದಕ್ಕೂ ತೋರದಿರಲು, ಬಹಳ ಮಂದಸ್ವರದಿಂದ "ರಾಮಾ ರಾಮಾ! ಲಕ್ಷ್ಮಣಾ!" ಎಂದು ನಾನಾವಿಧವಾಗಿ ಕೂಗಿ ರೋದಿಸುತ್ತಿದ್ದಳು. ತನಗೆ ಸಮೀಪವಾಗಿ ಮರದ ಮೇಲೆ ವಿನಯದಿಂದ

---

ಸೂಚಿತವಾಗುವುವು. ಹೇಗೆಂದರೆ:—(ಅಚಿಂತ್ಯಬುದ್ಧಿಂ) ಆ ಲಂಕೆಯನ್ನು ಪ್ರವೇಶಿಸಿ ರಾಕ್ಷಸಾಂತಃಪುರದ ನಡುವೆ ಇರುವ ಅಶೋಕವನಕ್ಕೆ ಬಂದುದರಿಂದಲೇ ಅವನು ಮಹಾಧೀಮಂತನೆಂದೂ, ದೈನ್ಯದಿಂದ ಕೂಡಿದ ಅವನ ಕಂಠಸ್ವರದಿಂದ, ಅವನು ಅಸ್ವತಂತ್ರವಾದ ವಾನರನೆಂದೂ, ಅವನ ವಾಕ್ಚಾತುರ್ಯದಿಂದ, ರಾಜಕಾರ್ಯಧುರೀಣನಾದ ಮಂತ್ರಿಯಾಗಿರಬಹುದೆಂದೂ, ತನಗೆ ಪ್ರಾಣದಾನಮಾಡುತ್ತಿರುವುದರಿಂದ ಸಮಸ್ತಪ್ರಾಣಿಗಳಿಗೂ ಪ್ರಾಣಧಾರಕನಾದ ವಾಯುವಿನ ಪುತ್ರನೆಂದೂ, ರಾಮಾಗಮನಕ್ಕೆ ಸೂಚಕನಾದುದರಿಂದ ರಾಮನೆಂಬ ಸೂರ್ಯೋದಯಕ್ಕೆ ಅರುಣೋದಯದಂತಿರುವನೆಂದೂ ನಿಶ್ಚಯಿಸಿದುದಾಗಿ ಭಾವವು.

ಕುಳಿತಿದ್ದ ದೊಡ್ಡ ಕಪಿಯನ್ನು ಕಂಡಾಗ, ಅವಳಿಗೆ ಅದೊಂದು ಸ್ವಪ್ನವೆಂದೇ ತೋರಿತು. ಬಾರಿಬಾರಿಗೂ ತಿರುಗಿತಿರುಗಿ ಆ ಕಡೆಗೆ ದೃಷ್ಟಿಯಿಟ್ಟು, ವಕ್ರವಾದ ದೊಡ್ಡ ಮುಖವುಳ್ಳವನಾಗಿಯೂ, ಸುಗ್ರೀವನ ಆಜ್ಞಾವಾಹಕನಾಗಿಯೂ, ಅವನಿಗೆ ಮಂತ್ರಿಯಾಗಿಯೂ, ಬುದ್ಧಿವಂತರಲ್ಲಿ ಮೇಲೆನಿಸಿಕೊಂಡವನಾಗಿಯೂ ಇದ್ದ ಆ ವಾಯುಕುಮಾರನನ್ನೇ ನೋಡುತಿದ್ದಳು. ವಿಶಾಲಾಕ್ಷಿಯಾದ ಸೀತೆಯು ಆ ವಾನರಾಕೃತಿಯನ್ನು ನೋಡಿದೊಡನೆ, ಪ್ರಜ್ಞೆ ತಪ್ಪಿ ಮೃತಪ್ರಾಯಳಾಗಿದ್ದು, ಬಹಳ ಹೊತ್ತಿನಮೇಲೆ ಚೇತರಿಸಿಕೊಂಡು ತಿರುಗಿ ತನ್ನಲ್ಲಿ ತಾನು ಚಿಂತಿಸುವಳು. "ಅಯ್ಯೋ! ಇದೇನು? ನಾನು ಸ್ವಪ್ನದಲ್ಲಿ ಈ ವಿಕಾರರೂಪವುಳ್ಳ ಕೋತಿಯನ್ನು ಕಂಡೆನಲ್ಲಾ! ಇನ್ನೇನು ಗತಿ! ಶಾಸ್ತ್ರನಿಷಿದ್ಧವಾದ ಈ ಭಯಂಕರ ಸ್ವಪ್ನಕ್ಕೆ ಇನ್ನು ಯಾವ ಫಲವನ್ನನುಭವಿಸಬೇಕೋ ಕಾಣೆನಲ್ಲಾ! ಹೇಗಾದರೂ ಲಕ್ಷ್ಮಣಸಹಿತನಾದ ಶ್ರೀರಾಮನೂ, ನನ್ನ ತಂದೆಯಾದ ಜನಕಮಹಾರಾಜನೂ ಕ್ಷೇಮದಿಂದಿದ್ದರೆ ಸಾಕು! ಆದರೆ ಇದನ್ನು ಸ್ವಪ್ನವೆಂದೂ ಹೇಳುವುದಕ್ಕಿಲ್ಲ! ದುಃಖದಿಂದಲೂ ಸಂಕಟದಿಂದಲೂ ಕುದಿಯುತ್ತಿರುವ ನನಗೆ ನಿದ್ರೆಯೇ ಇಲ್ಲದಿರುವಾಗ ಈ ಸ್ವಪ್ನವುಂಟಾಗುವುದು ಹೇಗೆ? ಪೂರ್ಣಚಂದ್ರನಿಗೆಣೆಯಾದ ಮುಖವುಳ್ಳ ಆ ನನ್ನ ಪ್ರಿಯಪತಿಯನ್ನಗಲಿದ ನನಗೆ ಕ್ಷಣಮಾತ್ರವಾದರೂ ಸುಖನಿದ್ರೆಯೆಂಬುದೆಲ್ಲಿ? ಆದುದರಿಂದ ಇದು ಸ್ವಪ್ನವಾಗಿರದು. ಒಂದುವೇಳೆ ನನ್ನ ಭಾವನೆಯೇ ನನಗೆ ಈ ಭ್ರಾಂತಿಯನ್ನು ಹುಟ್ಟಿಸಿರಬಹುದೆ? ನಾನಾದರೋ ಯಾವಾಗಲೂ "ರಾಮಾ! ರಾಮಾ!" ಎಂದು ಆ ರಾಮನನ್ನೇ ನೆನೆಸಿಕೊಳ್ಳುತ್ತಿರುವೆನು! ಬಾಯಿಂದಲೂ ಆ ಶಬ್ದಗಳನ್ನೇ ಹೇಳುತ್ತಿರುವೆನು. ಈಗಲೂ ಅದಕ್ಕನುಗುಣವಾಗಿ ರಾಮಕಥೆಯನ್ನೇ ಕೇಳಿದುದರಿಂದ, ನಾನು ಕಂಡುದು ಕೇಳಿದುದೆಲ್ಲವೂ ನನಗೆ ರಾಮಮಯವಾಗಿಯೇ ತೋರುತ್ತಿರಬಹುದೆ? ನಾನು ರಾಮನನ್ನಗಲಿ ಬಂದುದು ಮೊದಲು, ಅನವರತವೂ ಅವನ ವಿಷಯವಾದ ಮನ್ಮಥತಾಪವೇ ನನ್ನನ್ನು ಪೀಡಿಸುತ್ತಿರುವುದು. ನನ್ನ ಮನಸ್ಸೆಲ್ಲವೂ ಅವನಲ್ಲಿಯೇ ನಟ್ಟು ಹೋಗಿರುವುದು. ಯಾವಾಗಲೂ ಅವನನ್ನೇ ಚಿಂತಿಸಿ ಹಂಬಲಿಸುತ್ತಿರುವೆನು. ಆದುದರಿಂದ ಈಗಲೂ ನಾನು ಕಂಡುದು ಕೇಳಿದುದೆಲ್ಲವೂ ರಾಮವಿಷಯವಾಗಿಯೇ ನನಗೆ ತೋರುತ್ತಿರಬಹುದೇ. ಹೊರತು ಇದು ನಿಜವಲ್ಲ! ನನ್ನ ಮನೋರಥವೇ ನನ್ನನ್ನು ಹೀಗೆ ಭ್ರಮೆಗೊಳಿಸುತ್ತಿರುವುದೆಂದು ನನಗೆ ತೋರುವುದು. ಆದರೆ ಬುದ್ಧಿಯಿಂದ ಚೆನ್ನಾಗಿ ವಿಮರ್ಶಿಸಿ ನೋಡುವ ಪಕ್ಷದಲ್ಲಿ ಮಾತ್ರ, ಮನೋರಥವೆಂಬುದಕ್ಕೆ ರೂಪವಿಲ್ಲ! ಅದು ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳುವುದೂ ಅಲ್ಲ! ಇಲ್ಲಿ ಈ ಕಪಿಯು

ರೂಪವಾದರೋ ಪ್ರತ್ಯಕ್ಷವಾಗಿ ಕಾಣಿಸುತ್ತಿರುವುದು. ಇದರ ಕಂಠಸ್ವರವೂ ಚೆನ್ನಾಗಿ ಕೇಳಿಸುತ್ತಿರುವುದು! ಇದು ನನ್ನನ್ನು ಕುರಿತು ಹೀಗೆ ಸ್ಪಷ್ಟವಾಗಿ ಮಾತಾಡುವುದಕ್ಕೆ ಕಾರಣವೇನಿರಬಹುದು! ಒಂದುವೇಳೆ ಯಾವನೋ ವಾನರನು ನಿಜವಾಗಿಯೇ ಇಲ್ಲಿಗೆ ಬಂದು ಹೀಗೆ ಹೇಳಿದ್ದರೂ ಇರಬಹುದು! ಹೇಗಾದರೂ ಆಗಲಿ! ಇದೋ! ದೇವೇಂದ್ರನಿಗೂ ಬೃಹಸ್ಪತಿಗೂ, ಬ್ರಹ್ಮದೇವನಿಗೂ ಅಗ್ನಿದೇವತೆಗೂ. ಕೈಮುಗಿದು ನಮಸ್ಕರಿಸುವೆನು. ನನ್ನ ಮುಂದೆ ಈ ವಾನರನು ಹೇಳಿದುದೆಲ್ಲವೂ, ಸ್ವಪ್ನಾದಿಗಳಂತೆ ಸುಳ್ಳಾಗದೆ ಸತ್ಯವಾಗಿಯೇ ಇರಲಿ" ಎಂದು ಪ್ರಾರ್ಥಿಸಿದಳು.

ಇಲ್ಲಿಗೆ ಮೂವತ್ತೆರಡನೆಯ ಸರ್ಗವು.

---

{ ಹನುಮಂತನು ಕೆಳಗಿಳಿದು ಸೀತೆಗೆ ಕೈಮುಗಿದುನಿಂತು ಏನೂ ತಿಳಿಯದವನಂತೆ ಆಕೆಯನ್ನು ಕುರಿತು ಅವಳ ಪೂರ್ವೋತ್ತರಗಳನ್ನು ವಿಚಾರಿಸಿದುದು. ಸೀತೆಯು ತನ್ನ ಪೂರ್ವವೃತ್ತಾಂತವನ್ನು ಹನುಮಂತನಲ್ಲಿ ಹೇಳಿಕೊಂಡುದು. }

ಇತ್ತಲಾಗಿ ಸೀತೆಯನ್ನು ಹೆದರಿಸುತಿದ್ದ ರಾಕ್ಷಸಸ್ತ್ರೀಯರೆಲ್ಲರೂ, ತ್ರಿಜಟೆಯು ಹೇಳಿದ ಸ್ವಪ್ನವೃತ್ತಾಂತವನ್ನು ಕೇಳಿದಮೇಲೆ ಭಯದಿಂದ ಸುಮ್ಮನಾಗಿ, ಹಾಗೆಯೇ ಮಲಗಿಬಿಟ್ಟರು. ದೈವವಶದಿಂದ ಅವರೆಲ್ಲರಿಗೂ ಮೈಮರೆಯುವವಂತೆ ನಿದ್ರೆಯೂ ಹತ್ತಿತು. ಹವಳದಂತೆ ಕೆಂಪಗೆ ಹೊಳೆಯುವ ಮುಖವುಳ್ಳವನಾಗಿಯೂ, ಮಹಾವೀರನಾಗಿಯೂ ಇರುವ ವಾಯುಪುತ್ರನಾದ ಆ ಹನುಮಂತನು, ಸೀತೆಯ ದುಸ್ಥಿತಿಗಾಗಿ ದುಃಖಿಸುತ್ತಿದ್ದು, ಅಲ್ಲಿ ಕಾವಲಿದ್ದ ರಾಕ್ಷಸಸ್ತ್ರೀಯರು ಮೈಮರೆತು ಮಲಗಿರುವುದನ್ನು ಕಂಡು, ಸೀತೆಯನ್ನು ಮಾತಾಡಿಸಿ ಬರುವುದಕ್ಕೆ ಇದೇ ತಕ್ಕ ಸಮಯವೆಂದು ನಿಶ್ಚಯಿಸಿ ಅಲ್ಲಿಂದ ಕೆಳಕ್ಕಿಳಿದನು. ದೂರದಿಂದಲೇ ಸೀತೆಗೆ ಸಾಷ್ಟಾಂಗವಾಗಿ ನಮಸ್ಕರಿಸಿ, ವಿನಯದಿಂದ ಆ ಸೀತೆಯನ್ನು ಸಮೀಪಿಸಿ, ತಲೆಯಮೇಲೆ ಕೈಜೋಡಿಸಿ ಬದ್ಧಾಂಜಲಿಯಾಗಿ ನಿಂತು, ಬಹಳ ಮಧುರವಾಕ್ಯಗಳಿಂದ ಆವಳನ್ನು ಪ್ರಶ್ನೆಮಾಡುವನು. "ಎಲೆ ಭದ್ರೆ! ನೀನು ಯಾರು? ಕಮಲದಳದಂತೆ ಕಣ್ಣುಳ್ಳ ನಿನಗೆ ಈ ಮಾಸಿದ ಬಟ್ಟೆಯೇನು? ಇಲ್ಲಿ ಈ ಮರದ ಕೊಂಬೆಯನ್ನು ಹಿಡಿದು ಹೀಗೆ ದೈನ್ಯದಿಂದ ನೀನು ನಿಂತಿರುವುದೇಕೆ?

ತಾವರೆಯೆಸಳುಗಳಿಂದ ಸುರಿಯುವ ನೀರಿನಂತೆ ಈ ನಿನ್ನ ಕಣ್ಣುಗಳಿಂದ ದುಃಖ ಬಾಷ್ಪವು ಸುರಿಯುವುದೇಕೆ? ಯಾರ ಕುಲಚ್ಛೇದಕ್ಕಾಗಿ ಈ ಅನರ್ಥವುಂಟಾಗಿರುವುದು? ಎಲೆ ಶೋಭನಾಂಗಿ? ನೀನು ದೇವತೆಗಳಲ್ಲಿ ಸೇರಿದವಳೆ? ದಾನವರಲ್ಲಿ ಸೇರಿದವಳೆ? ನಾಗ ಗಂಧರ್ವ ಯಕ್ಷ ರಾಕ್ಷಸ ಕಿನ್ನರರೆಂಬ ಬೇರೆ ಯಾವ ದೇವಜಾತಿಯಲ್ಲಾದರೂ ಸೇರಿದವಳೆ? ಏಕಾದಶರುದ್ರರಿಗಾಗಲಿ, ಸಪ್ತಮರುತ್ತುಗಳಿಗಾಗಲಿ ಸೇರಿದವಳೆ? ಅಷ್ಟವಸುಗಳಿಗೆ ಸೇರಿದವಳೆ? ನೀನಾರು? ದೇವಸ್ತ್ರೀಯಂತೆಯೇ ಕಾಣುತ್ತಿರುವೆಯಲ್ಲಾ! ಒಂದುವೇಳೆ ನೀನು ಚಂದ್ರನನ್ನಗಲಿ ಸ್ವರ್ಗದಿಂದ ಕೆಳಗೆ ಬಿದ್ದ ಜ್ಯೋತಿರ್ಮಂಡಲಗಳಲ್ಲಿ ಮೇಲೆನಿಸಿಕೊಂಡ ರೋಹಿಣಿಯಾಗಿರಬಹುದೆ? ಉತ್ತಮಗುಣಗಳಿಂದ ಕೂಡಿದ ನೀನು ಯಾರು? ಎಲೆ ಕಲ್ಯಾಣಿ! ಯಾವ ಕಂದುಕುಂದುಗಳೂ ಇಲ್ಲದ ಈ ನಿನ್ನ ಕಣ್ಣುಗಳ ಅಂದವೇ ಅಂದವು! ನೀನೆಲ್ಲಿಯವಳು? ಕೋಪದಿಂದಲೋ, ಅಜ್ಞಾನದಿಂದಲೋ ವಸಿಷ್ಠನಿಗೆ ಕೋಪವನ್ನು ಹುಟ್ಟಿಸಿ, ಸ್ವರ್ಗದಿಂದ ಹೊರಟುಬಂದ ಅರುಂಧತಿಯಾಗಿರಬಹುದೆ? ಎಲೆ ಸುಂದರಾಂಗಿ! ನೀನು ಯಾರಿಗಾಗಿ ದುಃಖಿಸುತ್ತಿರುವೆ? ನಿನ್ನ ಮಗನಾಗಲಿ, ತಂದೆಯಾಗಲಿ, ಒಡಹುಟ್ಟಿದವನಾಗಲಿ ಈ ಲೋಕವನ್ನು ಬಿಟ್ಟು ಪರಲೋಕವನ್ನು ಸೇರಿದುದಕ್ಕಾಗಿ ಶೋಕಿಸುತ್ತಿರುವೆಯಾ? ಹಾಗೆ ನಿನ್ನನ್ನಗಲಿಹೋದ ನಿನ್ನ ಪ್ರಿಯಬಂಧುವಾರು? ಹೀಗೆ ನೀನು ಅಳುವುದರಿಂದಲೂ, ನಿಟ್ಟುಸಿರು ಬಿಡುವುದರಿಂದಲೂ, ಭೂಮಿಯನ್ನು ಸ್ಪರ್ಶಿಸಿ ಹೊರಳುವುದರಿಂದಲೂ, ನಿನ್ನಲ್ಲಿ ಕಾಣುವ ಈ ರಾಜಲಕ್ಷಣಗಳಿಂದಲೂ, ನಿನ್ನನ್ನು ದೇವಸ್ತ್ರೀಯೆಂದೂ ಹೇಳುವುದಕ್ಕಿಲ್ಲ! ನೀನು ರಾಜಸ್ತ್ರೀಯಾಗಿಯೇ ಇರಬೇಕು. ನಿನ್ನ ಅವಯವಸನ್ನಿವೇಶಗಳನ್ನೂ, ನಿನ್ನ ದೇಹಲಕ್ಷಣಗಳನ್ನೂ ನೋಡಿದರೆ, ನೀನು ರಾಜಸ್ತ್ರೀಯೆಂಬುದನ್ನೇ ಸ್ಪಷ್ಟವಾಗಿ ತಿಳಿಸುವುವು. ಒಂದುವೇಳೆ ರಾವಣನು ಜನಸ್ಥಾನದಿಂದ ಕದ್ದುತಂದ ಆ ಸೀತೆಯೇ ನೀನಾಗಿದ್ದ ಪಕ್ಷದಲ್ಲಿ—ಎಲೆ ಭದ್ರೆ! ನಿನಗೆ ಮಂಗಳವಾಗಲಿ!—ಅದನ್ನು ಮೊದಲು ನನಗೆ ಹೇಳು! ಅಪರಿ ನಿನ್ನ ಈ ದೀನದಶೆಯನ್ನೂ, ಮನುಷ್ಯದುರ್ಲಭವಾದ ಈ ನಿನ್ನ ರೂಪವನ್ನೂ, ಈ ನಿನ್ನ ತಾಪಸವೇಷವನ್ನೂ ನೋಡಿದರೆ, ನೀನು ರಾಮಪತ್ನಿಯೆಂದೇ ಚೆನ್ನಾಗಿ ನಿರ್ಧರಿಸಬಹುದು" ಎಂದನು. ಹೀಗೆ ಶ್ರೀರಾಮನ ಗುಣವರ್ಣನಪೂರ್ವಕವಾಗಿ ಹನುಮಂತನು ಹೇಳಿದ ಮಾತನ್ನು ಕೇಳಿ, ಸೀತೆಗೆ ಬಹಳ ಸಂತೋಷವುಂಟಾಯಿತು. ಆಗ ಆ ಶಿಂಶುಪಾವೃಕ್ಷದ ಕೆಳಗೆ ಕೈಮುಗಿದು ನಿಂತಿದ್ದ ಆ ಹನುಮಂತನನ್ನು ನೋಡಿ, "ಎಲೈ! ಲೋಕದಲ್ಲಿ ಸಮಸ್ತರಾಜಶ್ರೇಷ್ಠರಿಗೂ

ಮೇಲೆನಿಸಿಕೊಂಡು, ಆತ್ಮವಿದನಾಗಿ, ತನ್ನ ಸಮಸ್ತಶತ್ರುಗಳನ್ನೂ ನಿರ್ಮೂಲ ಮಾಡತಕ್ಕ ಮಹಾವೀರ್ಯವುಳ್ಳವನೆನಿಸಿದ್ದ ದಶರಥರಾಜನಿಗೆ ನಾನು ಸೊಸೆಯು! ವಿದೇಹದೇಶಾಧಿಪತಿಯಾದ ಮಹಾತ್ಮನಾದ ಜನಕರಾಜನ ಮಗಳು. ನನಗೆ ಸೀತೆಯೆಂದು ಹೆಸರು. ಧೀಮಂತನಾದ ರಾಮನ ಪತ್ನಿಯು. ನಾನು ರಾಮನನ್ನು ವಿವಾಹವಾದ ಮೇಲೆ, ಹನ್ನೆರಡು ವರ್ಷಗಳ ವರೆಗೂ ದಶರಥರಾಜನ ಮನೆಯಲ್ಲಿ ಬೇಕುಬೇಕಾದ ಭೋಗಗಳನ್ನನುಭವಿಸುತ್ತ ಸುಖದಿಂದಿದ್ದೆನು. ಮನುಷ್ಯಯೋಗ್ಯವಾದ ಸಮಸ್ತಭೋಗಗಳನ್ನೂ ಅನುಭವಿಸಿದೆನು. ಹದಿಮೂರನೆಯ ವರ್ಷದಲ್ಲಿ ನನ್ನ ಮಾವನಾದ ದಶರಥರಾಜನು ಇಕ್ಷ್ವಾಕುಕುಲನಂದನನಾದ ನನ್ನ ಪತಿಯಾದ ಶ್ರೀರಾಮಚಂದ್ರನಿಗೆ ರಾಜ್ಯಾಭಿಷೇಕವನ್ನು ಮಾಡಬೇಕೆಂದು ನಮ್ಮ ಪುರೋಹಿತರಾದ ವಸಿಷ್ಠರೊಡನೆ ಕಲೆತು, ಅದಕ್ಕೆ ತಕ್ಕ ಸನ್ನಾಹಗಳನ್ನು ಮಾಡುತಿದ್ದನು. ಹೀಗೆ ಪಟ್ಟಾಭಿಷೇಕಕ್ಕೆ ಬೇಕಾದ ಸಾಧನಗಳನ್ನು ಸಿದ್ಧಪಡಿಸುತ್ತಿರುವಾಗ, ಆ ದಶರಥರಾಜನ ಪತ್ನಿಯರಲ್ಲಿ ಕೈಕೆಯೆಂಬವಳು ತನ್ನ ಪತಿಯನ್ನು ನೋಡಿ “ನೀನು ರಾಮನಿಗೆ ಪಟ್ಟಾಭಿಷೇಕವನ್ನು ನಡೆಸುವುದಾದರೆ ಇನ್ನು ಮೇಲೆ ನಾನು ಅನ್ನಪಾನಗಳನ್ನೇ ಮುಟ್ಟುವವಳಲ್ಲ! ಈ ಪಟ್ಟಾಭಿಷೇಕವೇ ನನ್ನ ಪ್ರಾಣಕ್ಕೆ ಕೊನೆಯೆಂದು ತಿಳಿ! ನಾನು ನ್ಯಾಯತಪ್ಪಿ ಈ ಮಾತನ್ನಾಡುವೆನೆಂದೆಣಿಸಬೇಡ! ಪೂರ್ವದಲ್ಲಿ ನೀನು ನನ್ನ ಮೇಲೆ ಎಷ್ಟೋ ಪ್ರೀತಿಯನ್ನು ತೋರಿಸಿ ನನಗೆ ಎರಡುವರಗಳನ್ನು ಕೊಟ್ಟಿರುವೆ! ಎಲೈ ರಾಜೇಂದ್ರನೆ! ಆ ಮಾತನ್ನು ಸುಳ್ಳಾಗಿಸಬಾರದೆಂಬ ಅಭಿಪ್ರಾಯವು ನಿನಗಿದ್ದಪಕ್ಷದಲ್ಲಿ, ರಾಮನು ಈಗ ಕಾಡಿಗೆ ಹೋಗಲಿ!” ಎಂದಳು. ಸತ್ಯಸಂಧನಾದ ಆ ರಾಜನಾದರೋ ತಾನು ಕೈಕೇಯಿಗೆ ಕೊಟ್ಟ ವರವನ್ನು ಜ್ಞಾಪಿಸಿಕೊಂಡು, ಅಪ್ರಿಯವಾಗಿಯೂ, ಕ್ರೂರವಾಗಿಯೂ ಇದ್ದ ಆ ಮಾತನ್ನು ಕೇಳಿದೊಡನೆ ಪ್ರಜ್ಞೆತಪ್ಪಿ ಮೂರ್ಛೆ ಬಿದ್ದನು. ವೃದ್ಧನಾದ ಆ ದಶರಥನು ಸತ್ಯಧರ್ಮಗಳನ್ನು ಎಂದಿಗೂ ತಪ್ಪಿದವನಲ್ಲವಾದುದರಿಂದ, ಕೀರ್ತಿಮಂತನಾದ ತನ್ನ ಹಿರಿಯಮಗನಾದ ರಾಮನನ್ನು ಕರೆದು, ತಾನು ಆತನಿಗೆ ಕೊಡುವುದಾಗಿ ನಿಶ್ಚಯಿಸಿದ್ದ ರಾಜ್ಯವನ್ನು ಹಿಂತಿರುಗಿ ತನಗೇ ಕೊಡಬೇಕೆಂದು ಯಾಚಿಸಿಕೊಂಡನು. ಶ್ರೀಮಂತನಾದ ಆ ರಾಮನಾದರೋ ತನ್ನ ಪಟ್ಟಾಭಿಷೇಕಕ್ಕಿಂತಲೂ ಪಿತೃವಾಕ್ಯಪರಿಪಾಲನವನ್ನೇ ಹೆಚ್ಚಾಗಿ ಪ್ರೀತಿಸಿ, ಅವನ ಮಾತಿನಂತೆಯೇ ನಡೆಸುವಂತೆ ಮನಸ್ಸಿನಲ್ಲಿ ಮೊದಲು ನಿಶ್ಚಯಿಸಿಕೊಂಡು, ಬಾಯಿಂದಲೂ ಹಾಗೆಯೇ ಆಗಲೆಂದು ಹೇಳಿ ಒಪ್ಪಿಕೊಂಡನು. ಎಲೆ ಭದ್ರನೆ! ಸತ್ವಪರಾಕ್ರಮನಾದ ಆ ರಾಮನ ಗುಣಗಳನ್ನು ನಾನೇನು ಹೇಳಲಿ!

ಬೇರೆಯವರಿಗೆ ಕೊಡುವನೇ ಹೊರತು ಇತರರಲ್ಲಿ ಕೈನೀಡಿ ತೆಗೆಯತಕ್ಕವನಲ್ಲ. ತನಗೆ ಪ್ರಾಣಾಪಾಯವೇ ಬರುವಂತಿದ್ದರೂ ಅಪ್ರಿಯವಾದ ಮಾತನ್ನು ಯಾರಲ್ಲಿಯೂ ಸ್ವಲ್ಪವಾದರೂ ನುಡಿಯತಕ್ಕವನಲ್ಲ! ಇಂತಹ ಮಹಾತ್ಮನಾದ ರಾಮನು, ಆ ಕ್ಷಣವೇ ತಾನು ಧರಿಸಿದ್ದ ರಾಜಯೋಗ್ಯವಾದ ವಸ್ತ್ರಗಳನ್ನು ತೆಗೆದುಹಾಕಿ, ನಾರುಬಟ್ಟೆಯನ್ನುಟ್ಟು ಮನಸ್ಸಿನಲ್ಲಿಯೂ ಆ ರಾಜ್ಯವನ್ನು ಕೋರದೆ, ವನಪ್ರಯಾಣಕ್ಕೆ ಸಿದ್ಧನಾಗಿ ನನ್ನನ್ನು ಕರೆದು, ತನ್ನ ತಾಯಿಯಾದ ಕೌಸಲ್ಯೆಯ ಬಳಿಯಲ್ಲಿರುವಂತೆ ನಿಯಮಿಸಿದನು. ನಾನಾದರೋ ಈ ಮಾತನ್ನು ಕೇಳಿದೊಡನೆ ಅವನಿಗಿಂತಲೂ ಮೊದಲೇ ವೇಗದಿಂದ ವನಕ್ಕೆ ಹೊರಟುಬಿಟ್ಟೆನು. ಆ ಪತಿಯನ್ನು ಬಿಟ್ಟು ಸ್ವರ್ಗದಲ್ಲಿಯಾದರೂ ನನಗೆ ವಾಸವು ರುಚಿಸಲಿಲ್ಲ! ಮತ್ತು ನನ್ನಂತೆಯೇ [1] ರಾಮಕೈಂಕರ್ಯವೇ ಮಹಾಭಾಗ್ಯವೆಂದೆಣಿಸಿದ ಮಿತ್ರನಂದನನಾದ ಸುಮಿತ್ರಾಪುತ್ರನಾದ ಲಕ್ಷ್ಮಣನೂ ಕೂಡ, ಅಣ್ಣನಿಗೆ ಮೊದಲೇ ವನಪ್ರಯಾಣಕ್ಕೆ ಸಿದ್ಧನಾಗಿ ನಾರುಬಟ್ಟೆಯನ್ನುಟ್ಟು ಹೊರಟನು. ಹೀಗೆ ನಾವು ಮೂವರೂ ರಾಜಾಜ್ಞೆಯನ್ನು ತಲೆಯಲ್ಲಿ ಧರಿಸಿ, ದೃಢವಾದ ವ್ರತವನ್ನು ಹಿಡಿದು, ಎಂದೂ ನೋಡಿಲ್ಲದ ಭಯಂಕರವಾದ ಒಂದುಕಾಡಿಗೆ ಬಂದೆವು. ಆ ರಾಮನು

---

1. ಇಲ್ಲಿ "ಪ್ರಾಗೇವತು ಮಹಾಭಾಗ ಸೌಮಿತ್ರಿರ್ಮಿತ್ರನಂದನಃ । ಪೂರ್ವಜಸ್ಯಾನುಯಾತ್ರಾರ್ಥೇ ದ್ರುಮಚೀರೈರಲಂಕೃತಃ" ಎಂದು ಮೂಲವು. ವಿಶೇಷಾರ್ಥವು:—(ಪ್ರಾಗೇವ) ರಾಮನಿಗೆ ಮೊದಲೇ ಎಂದರೆ, ರಾಮನಿಗಿಂತಲೂ ಆತುರವುಳ್ಳವನಾಗಿ ಲಕ್ಷ್ಮಣನು ನಾರುಬಟ್ಟೆಯನ್ನುಟ್ಟು ಕಾಡಿಗೆ ಹೊರಟುದಾಗಿ ಭಾವವು. ರಾಮನು ನಾರುಬಟ್ಟೆಯನ್ನುಟ್ಟ ಮೇಲೆಯೇ ಲಕ್ಷ್ಮಣನು ತಾನೂ ನಾರುವಸ್ತ್ರವನ್ನು ಧರಿಸಿದುದಾಗಿ ಹಿಂದೆ ಹೇಳಲ್ಪಟ್ಟಿರುವುದರಿಂದ, ಇಲ್ಲಿ ಆ ಲಕ್ಷ್ಮಣನ ತ್ವರಾತಿಶಯವನ್ನು ಸೂಚಿಸುವುದಕ್ಕಾಗಿಯೇ ಹೀಗೆ ಹೇಳಿರುವುದಾಗಿ ಗ್ರಾಹ್ಯವು. (ಮಹಾಭಾಗಃ) "ಅಹಂ ಸರ್ವಂ ಕರಿಷ್ಯಾಮಿ" ಎಂದು ರಾಮನನ್ನುಪಚರಿಸುವ ವಿಷಯದಲ್ಲಿ ತಾನುಮಾಡಿದ ಪ್ರತಿಜ್ಞೆಯನ್ನನುಸರಿಸಿ, ಆತನ ಸರ್ವವಿಧಸೇವೆಯನ್ನೂ ಮಾಡುವುದಕ್ಕೆ ತಕ್ಕಂತೆ ತಾನೊಬ್ಬನೇ ಆತನೊಡನೆ ಸೇರಿ, ವನವಾಸಕಾಲದಲ್ಲಿಆತನಶುಶ್ರೂಷೆಯನ್ನು ನಡೆಸತಕ್ಕಮಹಾಭಾಗ್ಯವುಳ್ಳವನು.(ಸೌಮಿತ್ರಿಃ) ಸುಮಿತ್ರಾಪುತ್ರನು, "ಸೃಷ್ಟಸ್ತ್ವಂ ವನವಾಸಾಯ" ನೀನು ರಾಮನೊಡನೆ ವನವಾಸಕ್ಕಾಗಿಯೇ ಸೃಷ್ಟಿಸಲ್ಪಟ್ಟವನೆಂದು ಹೇಳಿದ ಮಹಾತ್ಮಳಾದ ಆ ಸುಮಿತ್ರೆಗೆ ತಕ್ಕ ಸುಪುತ್ರನು. (ಮಿತ್ರನಂದನಃ) ಭಗವತ್ಕೈಂಕರ್ಯನಿರ್ವಾಹದಲ್ಲಿ ತದನುಕೂಲರಾದ ಭಕ್ತರ ಮನಸ್ಸನ್ನಾನಂದಪಡಿಸತಕ್ಕವನು. ಇಂತಹ ಲಕ್ಷ್ಮಣನು (ದ್ರುಮಚೀರೈರಲಂಕೃತಃ) ತನ್ನಣ್ಣನಾದ ರಾಮನ ವೇಷಕ್ಕನುಗುಣವಾಗಿ ಆ ನಾರುಬಟ್ಟೆಯನ್ನೇ ತನಗಲಂಕಾರವೆಂದು ಭಾವಿಸಿ ಧರಿಸಿದನೆಂದೂ ಭಾವವು.

ದಂಡಕಾರಣ್ಯದಲ್ಲಿರುವಾಗ, ಅವನ ಪತ್ನಿಯಾದ ನನ್ನನ್ನು ದುರಾತ್ಮನಾದ ರಾವಣನು ಇಲ್ಲಿಗೆ ಕದ್ದು ತಂದನು. ನನ್ನನ್ನು ಪ್ರಾಣದಿಂದುಳಿಸುವುದಕ್ಕೆ ಆ ದುರಾತ್ಮನು ಇನ್ನೆರಡೇ ತಿಂಗಳ ಅವಧಿಯನ್ನಿಟ್ಟಿರುವನು. ಆ ಎರಡುತಿಂಗಳು ತೀರಿದೊಡನೆ ನಾನು ಅವನಿಗೆ ಪ್ರಾಣವನ್ನೊಪ್ಪಿಸಬೇಕಾಗಿರುವುದು" ಎಂದಳು.

ಇಲ್ಲಿಗೆ ಮೂವತ್ತುಮೂರನೆಯ ಸರ್ಗವು.

---

ಹನುಮಂತನು ಸೀತೆಗೆ ರಾಮಲಕ್ಷ್ಮಣರ ಕ್ಷೇಮವನ್ನು ಹೇಳಿ, ಅವಳನ್ನು ಸಂತೋಷಪಡಿಸಲು, ಆಕೆಗೂ ಇವನಲ್ಲಿ ನಂಬಿಕೆಹುಟ್ಟಿ, ಸಮೀಪಕ್ಕೆ ಕರೆಸಿಕೊಂಡುದು. ತಿರುಗಿ ಅವನನ್ನು ರಾವಣನೆಂದು ಭ್ರಮಿಸಿ, ಆ ಸಂಶಯವನ್ನು ಪರಿಹರಿಸಿಕೊಳ್ಳುವುದಕ್ಕಾಗಿ, ರಾಮನಲ್ಲಿರುವ ಅಸಾಧಾರಣಗುಣಗಳನ್ನು ಹೇಳೆಂದು ಕೇಳಲು, ಹನುಮಂತನು ರಾಮಗುಣಗಳನ್ನು ವರ್ಣಿಸಿದುದು.

ಕಪಿಶ್ರೇಷ್ಠನಾದ ಹನುಮಂತನು ದುಃಖಿತೆಯಾದ ಆ ಸೀತೆಯ ವಾಕ್ಯವನ್ನು ಕೇಳಿ, ತಾನೂ ದುಃಖಿತನಾಗಿ ಸೀತೆಯ ಮನಸ್ಸಿಗೆ ಸಮಾಧಾನವಾಗುವಂತೆ ಅವಳನ್ನು ಕುರಿತು "ಅಮ್ಮಾ! ನಾನು ರಾಮನ ಮಾತಿನಿಂದಲೇ ಅವನಿಗೆ ದೂತನಾಗಿ ನಿನ್ನ ಬಳಿಗೆ ಬಂದಿರುವೆನು. ನಿನ್ನ ಪತಿಯಾದ ರಾಮನು ಕ್ಷೇಮದಿಂದಿರುವನು. ತನ್ನ ಕ್ಷೇಮವನ್ನು ನಿನಗೆ ತಿಳಿಸುವಂತೆಯೂ ಹೇಳಿ ಕಳುಹಿಸಿರುವನು. ಯಾವನು ಬ್ರಹ್ಮಾಸ್ತ್ರವನ್ನೂ, ಸಮಸ್ತವೇದಗಳನ್ನೂ ಬಲ್ಲವನಾಗಿ, ವೇದವಿತ್ತುಗಳಲ್ಲಿ ಮೇಲೆನಿಸಿಕೊಂಡಿರುವನೋ, ಆ ರಾಮನೇ ನಿನಗೆ ತನ್ನ ಕ್ಷೇಮವನ್ನು ಹೇಳಿ ಕಳುಹಿಸಿರುವನು. ಆ ನಿನ್ನ ಪತಿಗೆ ಪ್ರಿಯಕಿಂಕರನಾಗಿ ಮಹಾತೇಜಸ್ವಿಯೆನಿಸಿಕೊಂಡ ಲಕ್ಷ್ಮಣನೂಕೂಡ, ನಿನ್ನ ಸ್ಥಿತಿಯನ್ನು ಕುರಿತು ದುಃಖದಿಂದ ತಪಿಸುತ್ತ, ನಿನಗೆ ತನ್ನ ನಮಸ್ಕಾರವನ್ನು ಹೇಳಿ ಕಳುಹಿಸಿರುವನು" ಎಂದನು. ಪುರುಷೋತ್ತಮರಾದ ಆ ರಾಮಲಕ್ಷ್ಮಣರ ಕ್ಷೇಮವಾರ್ತೆಯನ್ನು ಕೇಳಿದೊಡನೆ ಸೀತೆಯ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು. ಅವಳ ದೇಹವೆಲ್ಲವೂ ರೋಮಾಂಚಿತವಾಯಿತು. ಈ ಸಂತೋಷಾತಿಶಯದಿಂದ ಅವಳು ಹನುಮಂತನನ್ನು ಕುರಿತು "ಆಃ! ಮನುಷ್ಯನು ಸಾಯದೆ ಬದುಕಿದ್ದರೆ, ನೂರಾರುವರುಷಗಳಿಗಾದರೂ ಒಮ್ಮೆ ಸುಖಸಂತೋಷಗಳನ್ನು ಕಾಣುವನು" ಎಂಬೀ ಲೋಕವಾರ್ತೆಯು ನಿಜವೆಂದೇ ನನಗೆ ತೋರುವುದು" ಎಂದು ಹೇಳಿ, ಆ ಆಂಜನೇಯನಲ್ಲಿ ಅದ್ಭುತ

ಪ್ರೀತಿಯನ್ನು ತೋರಿಸುತಿದ್ದಳು. ಅವರಿಬ್ಬರಿಗೂ ಪರಸ್ಪರವಾಗಿ ನಂಬಿಕೆಯು ಹುಟ್ಟಿ, ಇಬ್ಬರೂ ಅನ್ಯೋನ್ಯಾಲಾಪಗಳನ್ನು ನಡೆಸುತಿದ್ದರು. ದುಃಖದಿಂದ ಕೂಡಿದ ಆ ಸೀತೆಯು ಹೇಳುವ ಮಾತುಗಳನ್ನು ಕೇಳುತ್ತ ವಾನರೋತ್ತಮನಾದ ಆಂಜನೇಯನು, ಮೆಲ್ಲಗೆ ಸ್ವಲ್ಪಸ್ವಲ್ಪವಾಗಿ ಅವಳ ಸಮೀಪಕ್ಕೆ ಸರಿಯುತಿದ್ದನು. ಆಂಜನೇಯನು, ಮುಂದೆಮುಂದೆ ಸರಿದು ಬಂದಹಾಗೆಲ್ಲಾ, ಸೀತೆಗೆ ಅವನಲ್ಲಿ ರಾವಣನೆಂಬ ಶಂಕೆಯೂ ಭಯವೂ ಹೆಚ್ಚಿ ಹಿಂದೆ ಸರಿಯುತಿದ್ದಳು. ಹೀಗೆ ಭಯಾ ಕ್ರಾಂತೆಯಾದ ಸೀತೆಯು ತನ್ನಲ್ಲಿ ತಾನು "ಛೀ! ನಾನು ಮಾಡಿದುದು ಬಹಳ ತಪ್ಪು! ಇವನೊಡನೆ ನಾನು ಇಷ್ಟು ಸಲಿಗೆಯಿಂದ ಮಾತಾಡುತ್ತಿರುವೆನಲ್ಲಾ! ಇದೇನು! ಆ ರಾವಣನೇ ಹೀಗೆ ರೂಪಾಂತರದಿಂದ ಬಂದಿರಬೇಕು!" ಎಂದೆಣಿಸಿ ದುಃಖದಿಂದ ಕಂದಿದವಳಾಗಿ, ಅದುವರೆಗೆ ತಾನು ಒರಗಿನಿಂತಿದ್ದ[1] ಅಶೋಕವೃಕ್ಷದ ಶಾಖೆಯನ್ನು ಬಿಟ್ಟು, ಅಲ್ಲಿಯೇ ಬರೀ ನೆಲದಮೇಲೆ ಕುಳಿತುಬಿಟ್ಟಳು. ಹೀಗೆ ಸೀತೆಯು ದುಃಖಪೀಡಿತೆಯಾಗಿ ಭಯದಿಂದ ಮೈಮರೆತು ಕುಳಿತಿರುವುದನ್ನು ಕಂಡು ಹನುಮಂತನು, ಮತ್ತೊಮ್ಮೆ ಆಕೆಗೆ ವಿನಯದಿಂದ ತಲೆಬಗ್ಗಿ ನಮಸ್ಕರಿಸಿದನು. ಭಯವಶಳಾದ ಆ ಸೀತೆಯಾದರೋ ತಿರುಗಿ ಆತನನ್ನು ಕಣ್ಣೆತ್ತಿಯೂ ನೋಡಲಿಲ್ಲ. ಹನುಮಂತನಾದರೋ ಬಹಳ ಹೊತ್ತಿನವರೆಗೆ ಹಾಗೆಯೇ ತಲೆಬಗ್ಗಿ ನಮಸ್ಕರಿಸುತ್ತ ನಿಂತಿದ್ದನು. ಹಾಗಿದ್ದರೂ ಚಂದ್ರಮುಖಿಯಾದ ಸೀತೆಯು, ದುಃಖದಿಂದ ದೊಡ್ಡದಾಗಿ ನಿಟ್ಟುಸಿರನ್ನು ಬಿಟ್ಟು, ಮೃದುಸ್ವರದಿಂದ ಆತನನ್ನು ಕುರಿತು ಹೇಳುವಳು. - ರಾವಣಾ! ಇದು ನಿನಗೆ ತರವಲ್ಲ! ಮಾಯಾವಿಯಾದ ನೀನು ಈಗ ತಿರುಗಿ ಇದೊಂದು ಮಾಯೆಯನ್ನವಲಂಬಿಸಿ ನನ್ನನ್ನು ಸಂಕಟಪಡಿಸಬೇಕೆಂದು ಬಂದೆಯಾ? ಬೇಡ ಹೋಗು! ಮೊದಲು ನಾನು ಜನಸ್ಥಾನದಲ್ಲಿದ್ದಾಗ, ನಿಜ ರೂಪವನ್ನು ಬಿಟ್ಟು ಸನ್ಯಾಸಿ ವೇಷದಿಂದ ನನಗೆ ಕಾಣಿಸಿಕೊಂಡ ರಾವಣನೇ ನೀನಲ್ಲವೆ? ಎಲೆ ರಾಕ್ಷಸಾ! ನೀನು ಕಾಮರೂಪಿಯೆಂಬುದನ್ನು ನಾನು ಕಾಣೆನೆ? ನಾನು ಮೊದಲೇ ಆಹಾರವಿಲ್ಲದೆ ಕೃಶಳಾಗಿರುವೆನು. ಇದರಮೇಲೆ ದುಃಖದಿಂದ ಎಡೆಬಿಡದೆ ಕೊರಗುತ್ತಿರುವೆನು. ಹೀಗೆ ಸಂಕಟದಿಂದ ಬೇಯುತ್ತಿರುವ ನನ್ನನ್ನು

---

1. ಸೀತೆಯು ಮೊದಲು ಶಿಂಶುಪಾಶಾಖೆಯನ್ನು ಹಿಡಿದು ನಿಂತುದಾಗಿ ಹೇಳಲ್ಪಟ್ಟಿರುವಾಗ ಈಗ ಅಶೋಕಶಾಖೆಯೆಂದು ಹೇಳಿದುದು ಹೇಗೆಂದರೆ, ಆ ವೃಕ್ಷಶಾಖೆಗಳೆರಡೂ ಒಂದಕ್ಕೊಂದಕ್ಕೆ ಹೆಣೆದುಕೊಂಡಂತೆ ಬೆಳೆದಿದ್ದುದರಿಂದ, ಒಂದು ಕಡೆಯಲ್ಲಿ ಶಿಂಶುಪಾಶಾಖೆಯೂ ಮತ್ತೊಂದು ಕಡೆಯಲ್ಲಿ ಅಶೋಕಶಾಖೆಯೂ ಹೇಳಲ್ಪಟ್ಟಿರುವುದಾಗಿ ಗ್ರಾಹ್ಯವು.

ಇನ್ನೂ ಮೇಲೆಮೇಲೆ ಸಂಕಟಪಡಿಸುವುದು ನಿನಗೆ ತರವಲ್ಲ !'' ಎಂದು ಹೇಳುತ್ತಿರು ವಾಗಲೇ ಅವಳಿಗೆ ಆ ಶಂಕೆಯು ತಗ್ಗಲು, ತಿರುಗಿ ಸೌಮ್ಯವಾಕ್ಯದಿಂದ ಆ ಹನು ಮಂತನನ್ನು ಕುರಿತು "ಎಲೆ ಕಪಿಶ್ರೇಷ್ಠನೆ ! ನಿನ್ನನ್ನು ನಾನು ಮೊದಲು ನೋಡಿ ದಾಗಲೇ ನಿನ್ನಲ್ಲಿ ನನಗೆ ಒಂದು ವಿಧವಾದ ಪ್ರೀತಿಯು ಹುಟ್ಟಿರುವುದರಿಂದ, ನಿನ್ನಲ್ಲಿ ನನಗಿರುವ ರಾವಣನೆಂಬ ಶಂಕೆಯು ನಿಜವಾಗಿರದು ! ಹೇಗಾದರೂ ಆಗಲಿ! ಎಲೆ ಭದ್ರನೆ! ನೀನು ನಿಜವಾಗಿ ರಾಮದೂತನಾಗಿಯೇ ಬಂದಿರುವ ಪಕ್ಷದಲ್ಲಿ ನಿನಗೆ ಮಂಗಳವಾಗಲಿ ! ಹಾಗಿದ್ದರೆ ಮೊದಲು ನಾನು ನಿನ್ನಲ್ಲಿ ಒಂದು ವಿಷಯವನ್ನು ಕೇಳಿಕೊಳ್ಳುವೆನು ! ರಾಮಕಥೆಯನ್ನು ಕೇಳುತ್ತಿರುವುದರಲ್ಲಿ ನನಗೆ ಬಹಳಪ್ರಿಯವು. ಮತ್ತೊಮ್ಮೆ ನೀನು ನನ್ನ ಪ್ರಿಯನಾದ ಆ ರಾಮನ ಗುಣಗಳನ್ನು ಹೇಳುವೆಯಾ! ಎಲೆ ಸೌಮ್ಯನೆ ! ಪ್ರವಾಹವೇಗವು ನದಿಯ ದಡವನ್ನು ಹೇಗೋ ಹಾಗೆ ನಿನ್ನ ಸಾಧುಸ್ವಭಾವವೇ ನನ್ನ ಮನಸ್ಸನ್ನೆಳೆಯುತ್ತಿರುವುದು !'' ಎಂದು ಹೇಳುತ್ತಿರು ವಷ್ಟರಲ್ಲಿಯೇ ಅವಳಿಗೆ ತಿರುಗಿ ಸಂದೇಹವು ತೋರಿ "ಆಹಾ ! ಇದೇನು ? ನಾನು ಹೀಗೆ ದುಸ್ಸ್ವಪ್ನವನ್ನು ಕಾಣುತ್ತಿರುವೆನು ? ನನ್ನ ಪ್ರಿಯಪತಿಯಾದ ರಾಮನು ನನ್ನಲ್ಲಿಗೆ ಯಾವುದೋ ಒಂದು ಕಪಿಯನ್ನು ಕಳುಹಿಸಿದಂತೆಯೂ, ಅದರಿಂದ ನಾನು ರಾಮನ ಕಥೆಯನ್ನು ಕೇಳುವಂತೆಯೂ, ಏನೇನೋ ಆಸೆಯನ್ನು ಹುಟ್ಟಿಸಿ, ಈ ಸ್ವಪ್ನವು ಬಹಳಹೊತ್ತಿನಿಂದ ನನ್ನನ್ನು ಮರುಳುಮಾಡಿಬಿಟ್ಟಿತಲ್ಲಾ ! ಇದು ದುಸ್ಸ್ವಪ್ನವಾದರೂ ಚಿಂತೆಯಿಲ್ಲ. ಈ ಸ್ವಪ್ನದಲ್ಲಿಯಾದರೂ ವೀರನಾದ ಆ ರಾಮನ ನ್ನು ಲಕ್ಷ್ಮಣಸಹಿತನನ್ನಾಗಿ ನೋಡಿದ್ದಪಕ್ಷದಲ್ಲಿ ಸ್ವಲ್ಪವಾದರೂ ತೃಪ್ತಿಯಾ ಗುತ್ತಿತ್ತು, ಅಯ್ಯೋ ! ಆ ಸ್ವಪ್ನಕ್ಕೂ ನನ್ನಲ್ಲಿ ವೈರಬುದ್ಧಿಯೆ ? ಆದರೆ ಇದನ್ನು ಸ್ವಪ್ನವೆಂದೂ ಹೇಳುವುದಕ್ಕಿಲ್ಲ. ಸ್ವಪ್ನದಲ್ಲಿ ಕಪಿಯನ್ನು ಕಂಡಮೇಲೆ ಸಂತೋಷ ವೆಂದರೇನು ? ನನಗಾದರೋ ಈಗ ಮೇಲೆ ಮೇಲೆ ಸಂತೋಷಸೂಚನೆಗಳು ತಲೆ ದೋರುವುವು. ಇದೇನು ನನ್ನ ಬುದ್ಧಿಭ್ರಮವೆ ? ಅಥವಾ ವಾಯುಚೇಷ್ಟೆಯೋ ! ನಿರಂತರವೂ ರಾಮನ ಕ್ಷೇಮವಾರ್ತೆಯನ್ನು ಕೇಳಬೇಕೆಂದು ತವಕದಿಂದಿರುವ ನನಗೆ ಆ ಚಿಂತೆಯೇ ಹೀಗೆ ಭ್ರಮೆಯನ್ನುಂಟುಮಾಡಿರಬಹುದೇ ? ಉಪವಾಸದಿಂದ ನನ್ನ ಧಾತುಬಲವು ಕೆಟ್ಟಿರುವುದರಿಂದ, ದೇಹದಲ್ಲಿ ಪ್ರಬಲಿಸಿದ ವಾಯುಚೇಷ್ಟೆ ಯಿಂದ ಹೀಗೆ ತೋರುತ್ತಿರಬಹುದೆ ? ಅಥವಾ ಇದು ಉನ್ಮಾದದಿಂದುಂಟಾದ ಚಿತ್ತ ಭ್ರಮವೋ ? ಅಥವಾ ಬಿಸಿಲ್ಗೊರೆಯಂತೆ ಇದು ನನ್ನನ್ನು ಮೋಸಗೊಳಿಸುತ್ತಿರು ವುದೋ ? ಇದನ್ನು ಉನ್ಮಾದವೆಂದೂ ಹೇಳುವುದಕ್ಕಿಲ್ಲ ! ಏಕೆಂದರೆ, ನನ್ನ ದೇಹದ ಮೇಲೆ ನನಗೆ ಚೆನ್ನಾಗಿ ಪ್ರಜ್ಞೆಯಿರುವುದು ! ಮುಂದಿರುವ ಈ ದಾನರನನ್ನೂ

ನಾನು ಚೆನ್ನಾಗಿ ತಿಳಿಯುತ್ತಿರುವೆನು. ಆದುದರಿಂದ ಇದು ಉನ್ಮಾದಾವಸ್ಥೆಯೂ ಅಲ್ಲ" ಎಂದು ನಾನಾವಿಧವಾಗಿ ಚಿಂತಿಸುತ್ತ, ತನ್ನ ಮುಂದೆ ನಡೆಯುತ್ತಿರುವುದೆಲ್ಲವೂ ನಿಜವೋ, ಅಲ್ಲವೋ ಎಂಬುದನ್ನು ಕುರಿತೇ ಬಹಳ ಹೊತ್ತಿನವರೆಗೆ ಬಲಾಬಲಗಳನ್ನು ಪರ್ಯಾಲೋಚಿಸುತ್ತಿದ್ದಳು. ಕೊನೆಗೂ ಆಕೆಯು ರಾಕ್ಷಸರು ಕಾಮರೂಪಿಗಳೆಂಬುದನ್ನು ಸ್ಮರಿಸಿಕೊಂಡು, ನಿಂತಿದ್ದ ಆ ವಾನರೋತ್ತಮನನ್ನು ರಾವಣನೆಂದೇ ನಿಶ್ಚಯಿಸಿಬಿಟ್ಟಳು. ಜನಕಪುತ್ರಿಯಾದ ಸೀತೆಗೆ ಈ ನಿಶ್ಚಯವು ಹುಟ್ಟಿದಮೇಲೆ, ಅವಳು ಆ ವಾನರನ ಯಾವ ಮಾತಿಗೂ ಪ್ರತ್ಯುತ್ತರವನ್ನು ಕೊಡದೆ ಸುಮ್ಮನಿದ್ದುಬಿಟ್ಟಳು. ಹೀಗೆ ಸೀತೆಯು ಮಾತಾಡದೆ ಮೌನದಿಂದಿರುವುದನ್ನೂ, ಅವಳ ಭಯವನ್ನೂ ನೋಡಿ, ಹನುಮಂತನು ಆಕೆಯ ಮನೋಭಾವವನ್ನು ತಿಳಿದುಕೊಂಡು, ತಿರುಗಿ ಅವಳ ಮನಸ್ಸನ್ನಾಕರ್ಷಿಸುವುದಕ್ಕಾಗಿ, ಕಿವಿಗಿಂಪಾದ ವಾಕ್ಯಗಳಿಂದ ಶ್ರೀರಾಮನ ಗುಣಗಳನ್ನೇ ಎತ್ತಿ ಹೇಳುವುದಕ್ಕೆ ತೊಡಗಿದನು. "ಅಹಾ! ಆ ಶ್ರೀರಾಮನ ಗುಣವನ್ನು ನಾನೇನೆಂದು ಹೇಳಲಿ! ಸೂರ್ಯನಂತೆ ಮಹಾತೇಜಸ್ವಿಯು. ಚಂದ್ರನಂತೆ ಸಮಸ್ತಲೋಕಗಳನ್ನೂ ಆಹ್ಲಾದಪಡಿಸತಕ್ಕವನು. ಕುಬೇರನಂತೆ ಸಮಸ್ತಲೋಕಕ್ಕೂ ರಾಜಾಧಿರಾಜನೆನಿಸಿಕೊಂಡಿರುವನು. ವಿಷ್ಣುವಿನಂತೆ ಲೋಕವಿಖ್ಯಾತವಾದ ಅಸಾಧಾರಣಪರಾಕ್ರಮವುಳ್ಳವನು. ಸತ್ಯಸಂಧನು. ಬೃಹಸ್ಪತಿಯಂತೆ ಮಧುರವಾಕ್ಯವುಳ್ಳವನು. ಮೂರ್ತಿಮಂತನಾದ ಮನ್ಮಥನಂತೆ ಸರ್ವೋತ್ತಮವಾದ ರೂಪಸಂಪತ್ತಿಯುಳ್ಳವನು. ಮನೋಹರವಾದ ಕಾಂತಿವಿಶೇಷವುಳ್ಳವನು. ಉಚಿತವಿಷಯಗಳಲ್ಲಿ ಮಾತ್ರವೇ ಕೋಪವನ್ನು ತೋರಿಸತಕ್ಕವನು. ಕೋಪಪಾತ್ರರಾದವರನ್ನು ಕೊಂದುಬಿಡುವನೇ ಹೊರತು, ಅವನ ಕೋಪವು ವ್ಯರ್ಥವಾಗತಕ್ಕುದಲ್ಲ. ಸಮಸ್ತಲೋಕಗಳಿಗೂ ತಾನೇ ಶ್ರೇಷ್ಠನೆನಿಸಿಕೊಂಡಿರುವನು. ಮಹಾತ್ಮನಾದ ಆತನ ಭುಜದ ನೆರವನ್ನಾಶ್ರಯಿಸಿಯೇ ಸಮಸ್ತಲೋಕವೂ ಸುಖದಿಂದಿರುವುದು. ಎಲೆಭದ್ರೆ! ಅಂತಹ ಮಹಾತ್ಮನಾದ ರಾಮನನ್ನು ಮಾಯಾಮೃಗರೂಪದಿಂದ ಆಶ್ರಮವನ್ನು ಬಿಟ್ಟು ಹೊರಡಿಸಿ, ಅವನಿಲ್ಲದ ವೇಳೆಯಲ್ಲಿ ನಿನ್ನನ್ನು ಕದ್ದು ತಂದಿರುವ ಈ ರಾವಣನು, ಅದಕ್ಕೆ ತಕ್ಕ ಫಲವನ್ನು ಅನುಭವಿಸದಿರಲಾರನು. ಅದನ್ನು ನಿನ್ನ ಕಣ್ಣಾರೆ ನೀನೇ ನೋಡುವೆ. ಇನ್ನು ಶೀಘ್ರಕಾಲದಲ್ಲಿಯೇ, ಯಾವ ಮಹಾವೀರನು ಉರಿಯುವ ಬೆಂಕಿಯಂತಿರುವ ತನ್ನ ಬಾಣಗಳಿಂದ ಯುದ್ಧದಲ್ಲಿ ನೀಚನಾದ ರಾವಣನನ್ನು ಕೊಲ್ಲುವನೋ, ಆ ರಾಮನಿಗೆ ದೂತನಾಗಿಯೇ ನಾನು ನಿನ್ನಲ್ಲಿಗೆ ಬಂದಿರುವೆನು. ಅತ್ತಲಾಗಿ ರಾಮನೂ ನಿನ್ನ ವಿರಹದಿಂದ ಕೊರಗಿ ಸಂಕಟಪಡುತ್ತಿರುವನು. ನಿನ್ನ ಕ್ಷೇಮ

ವನ್ನು ವಿಚಾರಿಸಿ ಬರುವಂತೆಯೂ ಹೇಳಿ ಕಳುಹಿಸಿರುವನು. ಮಹಾತೇಜಸ್ವಿಯಾಗಿಯೂ, ಮಹಾಬಾಹುವಾಗಿಯೂ ಇರುವ ಸುಮಿತ್ರಾನಂದನನಾದ ಲಕ್ಷ್ಮಣನೂ ನಿನ್ನ ಪಾದಗಳಿಗೆ ನಮಸ್ಕರಿಸಿ ನಿನ್ನ ಕ್ಷೇಮವನ್ನು ವಿಚಾರಿಸಿರುವನು. ಎಲೆ ದೇವಿ! ಸಮಸ್ತವಾನರರಿಗೂ ಪ್ರಭುವಾಗಿ, ಈಗ ನಿನ್ನ ಪತಿಯಾದ ರಾಮನಿಗೆ ಪ್ರಿಯಮಿತ್ರನಾದ ಸುಗ್ರೀವನೆಂಬ ವಾನರನೂಕೂಡ ನಿನ್ನ ಕ್ಷೇಮವನ್ನು ವಿಚಾರಿಸುವಂತೆ ಹೇಳಿರುವನು. ಆ ರಾಮನೂ, ಲಕ್ಷ್ಮಣನೂ, ಸುಗ್ರೀವನೂ, ಯಾವಾಗಲೂ ನಿನ್ನನ್ನೇ ಸ್ಮರಿಸುತ್ತಿರುವರು. ಅಮ್ಮಾ! ನೀನು ಹೀಗೆ ರಾಕ್ಷಸಿಯರ ಕೈಗೆ ಸಿಕ್ಕಿಯೂ ಬದುಕಿರುವುದು ಭಾಗ್ಯವಶವೇ ಹೊರತು ಬೇರೆಯಲ್ಲ! ರಾಮನನ್ನೂ, ಮಹಾಬಲಾಢ್ಯನಾದ ಲಕ್ಷ್ಮಣನನ್ನೂ, ತೇಜಸ್ವಿಯಾದ ಸುಗ್ರೀವನನ್ನೂ ಅನೇಕಕೋಟಿವಾನರರ ಮಧ್ಯದಲ್ಲಿರುವಾಗ ಶೀಘ್ರದಲ್ಲಿಯೇ ನೀನು ನೋಡುವೆ! ನಾನು ಸುಗ್ರೀವನ ಮಂತ್ರಿಯು! ನನಗೆ ಹನುಮಂತನೆಂದು ಹೆಸರು. ಮಹಾಸಮುದ್ರವನ್ನು ದಾಟಿ ಈ ಲಂಕೆಗೆ ಬಂದಿರುವೆನು. ದುರಾತ್ಮನಾದ ಈ ರಾವಣನ ತಲೆಯನ್ನು ಕಾಲಿನಿಂದ ಮೆಟ್ಟಿ ನಿನ್ನನ್ನು ನೋಡಿಹೋಗಬೇಕೆಂದೇ ಬಂದೆನು. ನೀನು ನನ್ನನ್ನು ಕುರಿತು ಯಾವವಿಧವಾಗಿ ಭ್ರಮಿಸುವೆಯೋ ನಾನು ಅಂತವನಲ್ಲ. ಈ ಶಂಕೆಯನ್ನು ಬಿಡು. ನನ್ನಮಾತಿನಲ್ಲಿ ನಂಬಿಕೆಯನ್ನಿಡು" ಎಂದನು.

ಇಲ್ಲಿಗೆ ಮೂವತ್ತನಾಲ್ಕನೆಯ ಸರ್ಗವು.

---

ಸೀತೆಯು ತನಗೆ ನಂಬಿಕೆ ಹುಟ್ಟುವುದಕ್ಕಾಗಿ
ಹನುಮಂತನನ್ನು ಕುರಿತು ರಾಮನ ಗುಣಲಕ್ಷಣಾದಿಗಳನ್ನು
ಕೇಳಿದುದು. ಹನುಮಂತನು ಅವೆಲ್ಲವನ್ನೂ ತಿಳಿಸಿ
ಸೀತೆಯನ್ನು ಸಮಾಧಾನಪಡಿಸಿದುದು.

ಹೀಗೆ ವಾನರೋತ್ತಮನಾದ ಹನುಮಂತನ ಮುಖದಿಂದ ಹೊರಟ ರಾಮಕಥೆಯನ್ನು ಕೇಳಿದೊಡನೆ, ಸೀತೆಗೆ ಮೊದಲಿದ್ದ ಶಂಕೆಯು ಸ್ವಲ್ಪವಾಗಿ ತಗ್ಗಿತು. ಆಗ ಅವಳು ಹನುಮಂತನನ್ನು ಕುರಿತು, ಮಧುರಸ್ವರದಿಂದ ಬಹಳ ಸಾಂತ್ವಪೂರ್ವಕವಾಗಿ ಹೇಳುವಳು. "ಎಲೈ ವಾನರೋತ್ತಮನೆ! ನೀನು ಆ ರಾಮನನ್ನು ಕಂಡುದೆಲ್ಲಿ? ನೀನು ಆ ಲಕ್ಷ್ಮಣನನ್ನು ಹೇಗೆ ಬಲ್ಲೆ? ಕಪಿಗಳಿಗೂ ಮನುಷ್ಯರಿಗೂ ಈ ಸಂಬಂಧವು ಹೇಗೆ ಘಟಿಸಿತು? ರಾಮನಿಗೆ ಯಾವ ಗುರುತುಗಳುಂಟೋ,

ಲಕ್ಷ್ಮಣನಿಗೆ ಯಾವ ಚಿಹ್ನಗಳುಂಟೋ ಅವೆಲ್ಲವನ್ನೂ ನನಗೆ ಹೇಳು? ಅವುಗಳನ್ನು ಕೇಳುತ್ತಿರುವುದರಿಂದ ನನ್ನ ದುಃಖವೂ ಶಾಂತವಾಗುವುದಲ್ಲದೆ ನನಗಿರುವ ಸಂದೇಹವೂ ನೀಗುವುದು. ಆ ರಾಮನ ಮೈಕಟ್ಟಿನ ರೀತಿಯು ಹೇಗೆ? ಅವನ ತೋಳುಗಳು ಹೇಗಿರುವುವು? ಹಾಗೆಯೇ ಲಕ್ಷ್ಮಣನ ಅವಯವಲಕ್ಷಣಗಳನ್ನೂ ತಿಳಿಸು!" ಎಂದಳು. ಸೀತೆಯ ಈ ಮಾತನ್ನು ಕೇಳಿ, ಹನುಮಂತನು ರಾಮನ ರೂಪಗುಣಾದಿಗಳನ್ನು ಯಥಾವಸ್ಥಿತವಾಗಿ ಹೇಳತೊಡಗಿದನು. "ಎಲೆ ಕಮಲಾಕ್ಷಿ! ನಾನು ರಾಮದೂತನೆಂಬುದನ್ನು ಇದುವರೆಗೇ ತಿಳಿದಿದ್ದರೂ, ಈಗ ನನ್ನನ್ನು ಕೇಳುವುದು ನನ್ನ ಭಾಗ್ಯವಶವೇ ಹೊರತು ಬೇರೆಯಲ್ಲ. ಆಃ! ರಾಮಲಕ್ಷ್ಮಣರನ್ನು ಕೀರ್ತಿಸುವ ಪುಣ್ಯವು ನನಗೆ ಲಭಿಸಿತು. ಎಲೆ ಸೀತೆ! ನೀನು ಆ ರಾಮನಲ್ಲಿಯೂ ಲಕ್ಷ್ಮಣನಲ್ಲಿಯೂ ಯಾವಯಾವ ಚಿಹ್ನಗಳನ್ನು ನೋಡಿರುವೆಯೋ ಅವುಗಳನ್ನೇ ಹೇಳುವೆನು ಕೇಳು! 1 ಆ ರಾಮನು ಕಮಲದಳದಂತೆ ಕಣ್ಣುಳ್ಳವನು! ಸಮಸ್ತ ಪ್ರಾಣಿಗಳ ಮನಸ್ಸನ್ನೂ ಅಪಹರಿಸತಕ್ಕ ಸೌಂದರ್ಯವುಳ್ಳವನು. ಸೌಂದರ್ಯದಿಂದಲೂ, ದಾಕ್ಷಿಣ್ಯಾದಿಗುಣಗಳಿಂದಲೂ ತುಂಬಿದವನು. ಆತನು ಈ ಸಮಸ್ತಗುಣಗಳೊಡ

---

1. ಇಲ್ಲಿ "ರಾಮಃ ಕಮಲಪತ್ರಾಕ್ಷಸ್ಸರ್ವಸತ್ತ್ವಮನೋಹರಃ । ರೂಪದಾಕ್ಷಿಣ್ಯಸಂಪನ್ನಃ ಪ್ರಸೂತೋ ಜನಕಾತ್ಮಜೇ" ಎಂದು ಮೂಲವು. ವಿಶೇಷಾರ್ಥವು. (ರಾಮಃ) "ರಮಯತೀತಿರಾಮಃ" ಎಂಬಂತೆ ಸರ್ವಾಂಗಸುಂದರನು, ಇದರಮೇಲೆ (ಕಮಲಪತ್ರಾಕ್ಷಃ) ಮಹಾ ಪ್ರವಾಹದಲ್ಲಿ ವೇಗದಿಂದ ತೇಲಿಬರುವ ವಸ್ತುವನ್ನು ಆ ಪ್ರವಾಹದೊಳಗಿನ ಸುಳಿಯು ಅತ್ತಿತ್ತ ಬಿಡದೆ ತನ್ನಲ್ಲಿ ಮುಳುಗಿಸಿಕೊಳ್ಳುವಂತೆ, ಆತನ ದೇಹಸೌಂದರ್ಯಪ್ರವಾಹದಿಂದ ಸೆಳೆಯಲ್ಪಡುವ ಜನರ ಕಣ್ಣುನೋಟಗಳನ್ನು ತನ್ನಲ್ಲಿ ನಿಲ್ಲಿಸಿಬಿಡತಕ್ಕ ದೇಹಸೌಂದರ್ಯವುಳ್ಳವನು. (ಸರ್ವಸತ್ತ್ವಮನೋಹರಃ) ಮನುಷ್ಯರಿಗೆ ಮಾತ್ರವೇ ಅಲ್ಲದೆ ಕಾಡು ಕಪಿಗಳಾದ ನಮ್ಮಂತಹ ತಿರ್ಯಗ್ಜಂತುಗಳ ಮನಸ್ಸನ್ನೂ ಆಕರ್ಷಿಸತಕ್ಕ ದಿವ್ಯಸೌಂದರ್ಯವುಳ್ಳವನು. (ರೂಪದಾಕ್ಷಿಣ್ಯ ಸಂಪನ್ನಃ) ದೇಹಲಕ್ಷಣಗಳಾದ ಸೌಂದರ್ಯಾದಿಗಳೇ ಅಲ್ಲದೆ, ಆತ್ಮಗುಣಗಳಾದ ದಾಕ್ಷಿಣ್ಯಾದಿಗಳಿಂದಲೂ ಪೂರ್ಣನಾದವನು, (ಪ್ರಸೂತಃ) ಹುಟ್ಟುವಾಗಲೇ ಈ ವಿಧಗಳಾದ ಸಮಸ್ತಗುಣಗಳಿಂದಲೂ ಜನಿಸಿದವನು. "ಇಂತಹ ಗುಣಸಂಪನ್ನನು ಬೇರೆಲ್ಲಿಯೂ ಹುಟ್ಟಲಿಲ್ಲವೆ" ಎಂದರೆ (ಜನಕಾತ್ಮಜೇ) ಜನಕಪುತ್ರಿಯಾದ ನೀನೊಬ್ಬಳು ಹೊರತು ಇಷ್ಟುಗುಣಾಢ್ಯರಾಗಿ ಹುಟ್ಟಿದವರು ಬೇರೊಬ್ಬರೂ ಇಲ್ಲವೆಂದು ಭಾವವು.

ತೆಯೇ ಹುಟ್ಟಿದವನು. ಅವನು ತೇಜಸ್ಸಿನಲ್ಲಿ ಸೂರ್ಯನಿಗೆ ಸಮಾನನು. ಕ್ಷಮೆಯಲ್ಲಿ ಭೂಮಿಗೆ ಸಮಾನನು. ಬುದ್ಧಿಯಲ್ಲಿ ಬೃಹಸ್ಪತಿಗೆಣೆಯಾದವನು. ಯಶಸ್ಸಿನಲ್ಲಿ ಇಂದ್ರನನ್ನು ಹೋಲುವವನು. ಸಮಸ್ತ ಪ್ರಾಣಿಲೋಕಗಳನ್ನೂ ಪ್ರೀತಿಯಿಂದ ಪೋಷಿಸತಕ್ಕವನು. ಅದರಲ್ಲಿಯೂ ಸ್ವಜನವನ್ನು ಚೆನ್ನಾಗಿ ರಕ್ಷಿಸತಕ್ಕವನು. ತನ್ನ ಕ್ಷತ್ರಿಯಜಾತಿಗೆ ತಕ್ಕ ವೃತ್ತಿಯನ್ನೂ, ಧರ್ಮವನ್ನೂ ತಪ್ಪದೆ ರಕ್ಷಿಸುವವನು. ಪರಂತಪನು. ಲೋಕದಲ್ಲಿರುವ ಚತುರ್ವರ್ಣಗಳನ್ನೂ ರಕ್ಷಿಸತಕ್ಕವನು. ಲೋಕಮರ್ಯಾದೆಯನ್ನು ತಾನಾಗಿ ಅನುಷ್ಠಿಸುವನಲ್ಲದೆ ಪ್ರಜೆಗಳಿಂದಲೂ ಅವುಗಳನ್ನು ಕ್ರಮವಾಗಿ ನಡೆಯಿಸತಕ್ಕವನು. ಮಹಾತೇಜಸ್ವಿಯು. ಸಜ್ಜನರಿಗೆಲ್ಲಾ ಪೂಜ್ಯನು. [1] ಬ್ರಹ್ಮಚರ್ಯವ್ರತದಲ್ಲಿಯೇ ಸ್ಥಿರವಾಗಿರುವನು. ಸಾಧುಗಳಿಗೆ ಮಾಡಬೇಕಾದ ಉಪಕಾರಗಳನ್ನು ಚೆನ್ನಾಗಿ ತಿಳಿದವನು. ಮತ್ತು ಆತನು ಆನ್ವೀಕ್ಷಕಿ ತ್ರಯೀ, ವಾರ್ತೆ, ದಂಡನೀತಿಗಳೆಂಬ ನಾಲ್ಕು ರಾಜವಿದ್ಯೆಗಳಲ್ಲಿಯೂ ಚೆನ್ನಾಗಿ ಶಿಕ್ಷಿತನು. ಬ್ರಾಹ್ಮಣರನ್ನು ಚೆನ್ನಾಗಿ ಸೇವಿಸುವವನು. ಸಮಸ್ತ ವಿದ್ಯೆಗಳನ್ನೂ ಕೇಳಿ ತಿಳಿದವನು. ಸದಾಚಾರಸಂಪನ್ನನು. ಗುರುಗಳಲ್ಲಿ ವಿಧೇಯತೆಯುಳ್ಳವನು. ಯಾವ ಶತ್ರುಗಳನ್ನಾದರೂ ಧ್ವಂಸಮಾಡತಕ್ಕವನು. ಯಜುರ್ವೇದದಲ್ಲಿ ಚೆನ್ನಾಗಿ ಶಿಕ್ಷಿತನು. ವೇದವಿತ್ತುಗಳಿಗೂ ಪೂಜಾರ್ಹನು. ಧನುರ್ವೇದದಲ್ಲಿಯೂ, ಇತರ ವೇದಗಳಲ್ಲಿಯೂ, ಶಿಕ್ಷೆ ಮೊದಲಾದ ಆರು ವೇದಾಂಗಗಳಲ್ಲಿಯೂ ಪಂಡಿತನು. ಎಲೆ ದೇವಿ! ಆ ರಾಮನ ಅವಯವಲಕ್ಷಣಗಳನ್ನೂ ಹೇಳುವೆನು ಕೇಳು. ವಿಸ್ತಾರವಾದ ಹೆಗಲುಳ್ಳವನು. ನೀಡಿದ ತೋಳುಗಳುಳ್ಳವನು. ಅವನ ಕಂಠವು ಶಂಖದಂತಿರುವುದು. ಅವನ ಮುಖದಲ್ಲಿ ಶುಭವಾದ ಒಂದು ಕಳೆಯಿರುವುದು. ಮತ್ತು ಅವನು ಮಾಂಸಪುಷ್ಟವಾದ ಭುಜದ ಕೀಲುಳ್ಳವನು. ಚಕ್ರವರ್ತಿಲಕ್ಷಣವನ್ನು ಸೂಚಿಸುವಂತೆ ಕೆಂಪಾದ ಕಣ್ಣುಳ್ಳವನು. ಲೋಕದಲ್ಲಿ ರಾಮನೆಂಬ ಅವನ ಹೆಸರನ್ನು ಕೇಳಿ ತಿಳಿಯದವರೇ ಇಲ್ಲ. ಭೇರೀಧ್ವನಿಯಂತೆ ಕಂಠಸ್ವರವುಳ್ಳವನು.

---

1. ಬ್ರಹ್ಮಚರ್ಯವೆಂದರೆ "ಷೋಡಶರ್ತುನಿಶಾಸ್ತ್ರೀಣಾಂ ತಸ್ಮಿನ್ ಯುಗ್ಮಾಸು ಸಂವಿಶೇತ್। ಬ್ರಹ್ಮಚಾರ್ಯೇವ ಪರ್ವಾಣ್ಯಾದ್ಯಾಶ್ಚತಸ್ರಶ್ಚ ವಿವರ್ಜಯೇತ್" ಎಂಬಂತೆ ಬ್ರಹ್ಮಚರ್ಯೆಯಲ್ಲಿರುವವನು ಸ್ತ್ರೀಯರಿಗೆ ನಿರ್ಣೀತಗಳಾದ ಹದಿನಾರು ಋತುದಿನಗಳಲ್ಲಿ ಸಮ ದಿವಸಗಳಲ್ಲಿ ಮಾತ್ರವೇ ಪ್ರವೇಶಿಸಬೇಕು. ನಾಲ್ಕು ಪರ್ವದಿನಗಳಲ್ಲಿ ಸೇರಬಾರದು. ಋತು ದಿನಗಳು ಹೊರತು ಬೇರೆದಿನಗಳಲ್ಲಿ ಸ್ತ್ರೀಸಂಗವನ್ನು ಮಾಡಬಾರದು. ಎಂಬೀ ವಿಧಿಯನ್ನನುಸರಿಸಿರುವುದೇ ಗೃಹಸ್ಥರು ನಡೆಸತಕ್ಕ ಬ್ರಹ್ಮಚರ್ಯೆಯೆನಿಸುವುದು.

ನುಣುಪಾಗಿ ಹೊಳೆಯುವ ಮೈಬಣ್ಣವುಳ್ಳವನು. ಮೇಲಾದ ಪರಾಕ್ರಮವುಳ್ಳವನು. ಸಮಪ್ರಮಾಣದಿಂದಿರುವ ಆಕಾರವುಳ್ಳವನು. ಅವನ ಸರ್ವಾವಯವಗಳೂ ಒಂದಕ್ಕೊಂದಕ್ಕೆ ಹೆಚ್ಚುಕಡಿಮೆಯಿಲ್ಲದೆ ಅನುರೂಪವಾಗಿರುವುವು. ಶ್ಯಾಮವರ್ಣದಿಂದ ಕೂಡಿದ ಮೈಯುಳ್ಳವನು. [1] ಸಾಮುದ್ರಿಕಲಕ್ಷಣವನ್ನನುಸರಿಸಿ ಅವನ 1 ಎದೆ, ಮಣಿಕಟ್ಟು, ಮುಷ್ಟಿ, ಇವು ಮೂರೂ ಸ್ಥಿರವಾಗಿರುವುವು. 2 ಅವನಹುಬ್ಬುಗಳೂ, ಅಂಡಕೋಶಗಳೂ, ತೋಳುಗಳೂ ಇವು ಮೂರೂ ಉದ್ದವಾಗಿ ತೊಂಗುತ್ತಿರುವುವು, 3 ಅವನ ಕೇಶಾಗ್ರಗಳೂ, ವೃಷಣಗಳೂ, ಮೊಳ

---

[1] ಇಲ್ಲಿಂದ "ತ್ರಿಸ್ಥಿರಸ್ತ್ರಿಪ್ರಲಂಬಶ್ಚ ತ್ರಿಸಮಸ್ತ್ರಿಷುಚೋನ್ನತಃ । ತ್ರಿತಾಮ್ರಸ್ತ್ರಿಷು ಚಸ್ನಿಗ್ಧೋ ಗಂಭೀರಸ್ತ್ರಿಷು ನಿತ್ಯಶಃ ॥ ತ್ರಿವಲೀವಾಂಸ್ತ್ರ್ಯವನತಶ್ಚತುರ್ವ್ಯಂಗಸ್ತ್ರಿಶೀರ್ಷವಾನ್ । ಚತುಷ್ಕಲಶ್ಚತುರ್ಲೇಖಶ್ಚತುಷ್ಕಿಷ್ಕುಶ್ಚತುಸ್ಸಮಃ ॥ ಚತುರ್ದಶ ಸಮದ್ವಂದ್ವಶ್ಚತುರ್ದಂಷ್ಟ್ರಶ್ಚತುರ್ಗತಿಃ । ಮಹೋಷ್ಠಹನುನಾಸಶ್ಚ ಪಂಚಸ್ನಿಗ್ಧೋಷ್ಟವಂಶವಾನ್ ॥ ದಶಪದ್ಮೋದಶಬೃಹತ್ತ್ರಿಭಿರ್ವ್ಯಾಪ್ತೋ ದ್ವಿಶುಕ್ಲವಾನ್ । ಷಡುನ್ನತೋನವತನುಸ್ತ್ರಿಭಿರ್ವ್ಯಾಪ್ನೋತಿ ರಾಘವಃ" ಎಂದು ಮೂಲವು. ಇವುಗಳಿಂದ ಶ್ರೀರಾಮನಲ್ಲಿ ಸಾಮುದ್ರಿಕಶಾಸ್ತ್ರೋಕ್ತವಾದ ಅವಯವಲಕ್ಷಣಗಳೆಲ್ಲವೂ ಹೇಳಲ್ಪಡುವುವು. ಹೇಗೆಂದರೆ.

1. (ತ್ರಿಸ್ಥಿರಃ) "ಉರಶ್ಚಮಣಿಬಂಧಶ್ಚ ಮುಷ್ಟಿಶ್ಚ ನೃಪತೇಃ ಸ್ಥಿರಾಃ" ಅರಸರಿಗೆ ಎದೆ, ಮಣಿಕಟ್ಟು, ಮುಷ್ಟಿ ಇವು ಮೂರೂ ಸ್ಥಿರವಾದುವುಗಳೆಂದು ಸಾಮುದ್ರಿಕವು.

2. (ತ್ರಿಪ್ರಲಂಬಃ) "ದೀರ್ಘಭ್ರೂಬಾಹುಮುಷ್ಕಸ್ತು ಚಿರಜೀವೀ ಧನೀ ನರಃ" ಹುಬ್ಬುಗಳೂ, ತೋಳುಗಳೂ, ವೃಷಣಗಳೂ ಯಾವನಿಗೆ ಉದ್ದವಾಗಿರುವುವೋ, ಆ ಮನುಷ್ಯನು ಚಿರಜೀವಿಯೂ ಧನಿಕನೂ ಆಗುವನೆಂದು ಸಾಮುದ್ರಿಕವಿಧಿಯು. ಇದೇ ವಿಷಯವಾಗಿ "ತ್ರಯಶ್ಚ ಯಸ್ಯ ವಿಖ್ಯಾತೇ ಪ್ರಲಂಬಾ ಮೇಢ್ರಬಾಹವಃ" ಯಾವನಿಗೆ ಮೇಢ್ರವೂ, ತೋಳುಗಳೂ ಉದ್ದವಾಗಿರುವುವೋ, ಅವನು ಭಾಗ್ಯಶಾಲಿಯೆಂದು ಬೇರೆ ಪ್ರಮಾಣವೂ ಉಂಟು.

3. (ತ್ರಿಸಮಃ) ಇಲ್ಲಿ "ಕೇಶಾಗ್ರಂ ವೃಷಣಂ ಜಾನು ಸಮಾಯಸ್ಯ ಸ ಭೂಪತಿಃ" ಕೇಶಗಳ ಕೊನೆಯೂ, ಎರಡು ವೃಷಣಗಳೂ, ಮೊಳಕಾಲುಗಳೂ ಹೆಚ್ಚುಕಡಿಮೆಯಿಲ್ಲದೆ ಒಂದೇ ಅಳತೆಯಲ್ಲಿದ್ದರೆ ಅಂತವನು ರಾಜನೆನಿಸುವನು.

ಕಾಲುಗಳೂ ಸಮಪ್ರಮಾಣದಿಂದಿರುವುವು. 1 ಅವನ ಹೊಟ್ಟೆ, ಹೊಕ್ಕುಳು, ಎದೆ, ಇವು ಮೂರೂ ಮೇಲಕ್ಕೆ ಉಬ್ಬಿರುವುವು. 2 ಅವನ ಕಡೆಗಣ್ಣು, ಉಗುರು, ಅಂಗೈ, ಅಂಗಾಲುಗಳೆಂಬಿವು ಮೂರೂ ಕೆಂಪಾಗಿರುವುವು. 3 ಅವನ ಪಾದರೇಖೆ, ಕೂದಲು, ಲಿಂಗವೆಂಬಿವು ಮೂರೂ ನುಣುಪಾಗಿರುವುವು. 4 ಅವನ ಕಂಠಸ್ವನಿ, ನಡೆ, ಹೊಕ್ಕುಳು, ಇವು ಮೂರೂ ಗಂಭೀರವಾಗಿರುವುವು. 5 ಅವನ ಉದರಕಂಠ ಪ್ರದೇಶಗಳೆರಡೂ ಸ್ಪಷ್ಟವಾದ ತ್ರಿವಳಿರೇಖೆಗಳಿಂದ ಶೋಭಿಸುತ್ತಿರುವುವು. 6 ಅವನ ಸ್ತನ, ಸ್ತನಾಗ್ರ, ಪಾದರೇಖೆಗಳೆಂಬಿವು ಮೂರೂ ಆಳಕ್ಕಿಳಿದಿರುವುವು.

---

1. (ತ್ರಿಷು ಚೋನ್ನತಃ) "ನಾಭ್ಯಂಶು ಕುಕ್ಷಿವಕ್ಷೋಭಿರುನ್ನತಃ ಕ್ಷಿತಿಪೋಭವೇತ್" ಎಂಬಂತೆ ಹೊಕ್ಕುಳು, ಹೊಟ್ಟೆ, ಎದೆ, ಇವು ಮೂರೂ ಮೇಲುಮುಖವಾಗಿ ಉಬ್ಬಿದ್ದರೆ ರಾಜನಾಗುವನೆಂಬ ಸಾಮುದ್ರಿಕವಚನವು. ಮತ್ತು "ಉನ್ನತಕುಕ್ಷಿಃ ಕ್ಷಿತಿಪಃ ಪರಿಮಂಡಲೋನ್ನತನಾಭಯಃ ಕ್ಷಿತಿಪಾಃ। ಹೃದಯಾನ ವೇಪನಂ ಪೃಥು ಸಮೋನ್ನತಂ ಮಾಂಸಲಂಚ ನೃಪತೀನಾಂ" ಎಂದು ಈ ವಿಷಯದಲ್ಲಿ ವರಾಹಮಿಹಿರವಾಕ್ಯವೂ ಉಂಟು.

2. (ತ್ರಿತಾಮ್ರಃ) ಇಲ್ಲಿ "ನೇತ್ರಾಂತ ನಖ ಪಾಣ್ಯಂಘ್ರಿತಲೈಸ್ತಾಮ್ರೈಸ್ತ್ರಿಭಿಸ್ಸುಖೀ" ಎಂದೂ, "ಶ್ಲಿಂಷ್ಟಾಂಗುಳೀ ರುಚಿರತಾಮ್ರನಖೌ ಸುಪಾರ್ಷ್ಣೀ ಪಾದೌ ಕರಾವಪಿ ನರಸ್ಯ ನಖಾತ್ಮರೇಖೌ" ಎಂದೂ ವಚನಗಳುಂಟು.

3. (ತ್ರಿಷುಚ ಸ್ನಿಗ್ಧಃ) ಇಲ್ಲಿ "ಸ್ನಿಗ್ಧಾಭವಂತಿ ವೈ ಯೇಷಾಂ ಪಾದರೇಖಾಶ್ಶಿರೋರುಹಾಃ। ತಥಾ ಲಿಂಗಮಣಿಸ್ತೇಷಾಂ ಮಹಾಭಾಗ್ಯಂ ವಿನಿರ್ದಿಶೇತ್" ಎಂದು ಸಾಮುದ್ರಿಕವಚನವು.

4. (ಗಂಭೀರಸ್ತ್ರಿಷು) ಇಲ್ಲಿ "ಸ್ವರಸ್ಸತ್ವಂಚ ನಾಭಿಶ್ಚ ಗಂಭೀರಶ್ಶಸ್ಯತೇ ಬುಧೈಃ" ಎಂದು ವರರುಚಿವಚನವು. ಮತ್ತು "ಸ್ವರೇ ಗತೌಚ ನಾಭೌಚ ಗಂಭೀರಸ್ತ್ರಿಷು ಶಸ್ಯತೇ" ಎಂದು ಬ್ರಾಹ್ಮದಲ್ಲಿಯೂ ಹೇಳಲ್ಪಟ್ಟಿದೆ.

5. (ತ್ರಿವಳೀವಾನ್) "ಸ್ಥಿರಾ ತ್ರಿರೇಖಾ ಸುಭಗೋಪಪನ್ನಾಸ್ನಿಗ್ಧಾಸುವಾಂಸೋಪಚಿತಾ ಸುವೃತ್ತಾ। ನಚಾತಿದೀರ್ಘಾ ಚತುರಂಗುಲಾಚ ಗ್ರೀವಾಸುದೀರ್ಘಾ ಭವತೀಹ ಧನ್ಯಾ" ಎಂಬಂತೆ ಉದರಕಂಠಪ್ರದೇಶಗಳಲ್ಲಿ ತ್ರಿವಳಿಗಳಿದ್ದರೆ ಭಾಗ್ಯಸೂಚಕವೆಂದು ಸಾಮುದ್ರಿಕವಚನವು

6. (ತ್ರ್ಯವನತಃ) "ಪೀನೋಪಚಿತೈರ್ನಿಮ್ನೈಃ ಕ್ಷಿತಿಪತಯಶ್ಚೂಚುಕೈಸ್ತ್ರಿಭಿಸ್ಸುಖಿನಃ। ಸ್ನಿಗ್ಧಾ ನಿಮ್ನಾ ರೇಖಾ ಧನಿನೋಃ ತದ್ವ್ಯತ್ಯಯೇನ ನಿಸ್ಸ್ವಾನಾಂ" ಎಂಬ ಮಿಹಿರವಚನದಂತೆ, ಸ್ತನದ ತೊಟ್ಟುಗಳು ಹಳ್ಳಕ್ಕಿಳಿದಿದ್ದರೆ ರಾಜರಾಗುವರೆಂದೂ, ಸ್ತನ

1 ಆವನ ಕೊರಲು, ಲಿಂಗ, ಬೆನ್ನು, ಮೊಳಕಾಲು, ಇವು ನಾಲ್ಕೂ ಹ್ರಸ್ವವಾಗಿರುವುವು. 2 ಆವನ ತಲೆಯಲ್ಲಿ ಶುಭಲಕ್ಷಣಸೂಚಕಗಳಾದ ಮೂರು ಸುಳಿಗಳಿರುವುವು. ಮತ್ತು ಆವನ ತಲೆಯು ದುಂಡಗೆ, ಸಮವಾಗಿ, ಛತ್ರದಂತೆ ವಿಶಾಲವಾಗಿ, ಈ ಲಕ್ಷಣತ್ರಯದಿಂದ ಶೋಭಿಸುವುದು. 3 ಆವನ ಅಂಗುಷ್ಠಮೂಲದಲ್ಲಿ ನಾಲ್ಕು ವೇದರೇಖೆಗಳುಂಟು. 4 ಮತ್ತು ಆವನ ಹಣೆ, ಅಂಗೈ, ಅಂಗಾಲು, ಇವುಗಳಲ್ಲಿ

---

ಗಳು ನಿಮ್ನವಾಗಿದ್ದರೆ ಸುಖಿಗಳೆಂದೂ, ಹೆಚ್ಚಾಗಿರುವ ರೇಖೆಗಳುಳ್ಳವರು ಧನಾಢ್ಯರೆಂದೂ, ಇದಕ್ಕೆ ವ್ಯತ್ಯಸ್ತವಾಗಿದ್ದರೆ ದರಿದ್ರರಾಗುವರೆಂದೂ ಸಾಮುದ್ರಿಕವು.

1. (ಚತುರ್ವ್ಯಂಗ್ಯಃ) ಇಲ್ಲಿ "ಗ್ರೀವಾ ಪ್ರಜನನಂ ಪೃಷ್ಠಂ ಹ್ರಸ್ವಂ ಜಂಘೇ ಚ ಪೂಜ್ಯತೇ" ಎಂದು ವರರುಚಿವಚನವು. ಅಥವಾ ಇಲ್ಲಿ "ಪಾದೈಃ ಪ್ರಸ್ವೇದರಹಿತೈಃ ಸಿರಾಹೀನೈಶ್ಚ ಪಾರ್ಥಿವಃ। ಏಕರೋಮಾ ಭವೇದ್ರಾಜಾ ದ್ವಿರೋಮಾ ಪಂಡಿತೋ ಭವೇತ್। ತ್ರಿರೋಮಾ ಚತುರೋಮಾ ಚ ಭವೇದ್ಭಾಗ್ಯ ವಿವರ್ಜಿತಃ॥ ಸಮಪಾದೋಪವಿಷ್ಟಸ್ಯ ಗುಲ್ಫಂ ಸ್ಪೃಶತಿ ಮೇಹನಂ। ಯಸ್ಯೇಶ್ವರಂ ತಂ ಜಾನೀಯಾತ್ಸುಖಿನಂ ಚೈವ ಮಾನವಂ। ನಿರ್ಮಾಂಸಸ್ಸಂಹತೋವಸ್ತಿರ್ಯೇಷಾಂ ತೇ ಸುಖಭಾಗಿನಃ" ಎಂಬ ನಾರದವಚನದಂತೆ ವ್ಯಂಗ್ಯವೆಂದರೆ ವಿಕಲ್ಪ (ಶೂನ್ಯ)ವೆಂಬ ಅರ್ಥಾಂತರವನ್ನೂ ಗ್ರಹಿಸಬಹುದು.

2. (ತ್ರಿಶೀರ್ಷವಾನ್) ಮೂರುಲಕ್ಷಣ (ಸುಳಿ)ಗಳಿಂದ ಕೂಡಿದ ತಲೆಯುಳ್ಳವನು. "ಆವರ್ತತ್ರಯರುಚಿರಂ ಯಸ್ಯ ಶಿರಸ್ಸ ಕ್ಷಿತಿಭೃತಾಂ ನೇತಾ" ಎಂದು ಸಾಮುದ್ರಿಕವಚನವು. ಅಥವಾ "ಸಮವೃತ್ತಶಿರಾಶ್ಚೈವ ಛತ್ರಾಕಾರಶಿರಾಸ್ತಥಾ। ಏಕಛತ್ರಾಂ ಮಹೀಂ ಭುಂಕ್ತೇ ದೀರ್ಘಮಾಯುಶ್ಚ ವಿಂದತಿ" ಎಂಬಂತೆ ದುಂಡಗೆ ಸಮವಾಗಿ ಕೊಡೆಯಂತಿರುವ ತಲೆಯುಳ್ಳವನೆಂದೂ ಗ್ರಹಿಸಬಹುದು.

3 (ಚತುಷ್ಕಲಃ) ನಾಲ್ಕುವೇದರೇಖೆಯುಳ್ಳವನು "ಮೂಲೇಂಗುಷ್ಠಸ್ಯ ವೇದಾನಾಂ ಚತಸ್ರಸ್ತಿಸ್ರ ಏವ ವಾ। ಏಕಂ ದ್ವೇ ವಾ ಯಥಾಯೋಗಂ ರೇಖಾಜ್ಞೇಯಾ ದ್ವಿಜನ್ಮನಾಮ್" ಎಂಬ ಪ್ರಮಾಣವನ್ನನುಸರಿಸಿ ಹೆಬ್ಬೆರಳಿನ ಕೆಳಗೆ ವೇದಸೂಚಕಗಳಾದ ರೇಖೆಗಳು ನಾಲ್ಕಾಗಲಿ, ಮೂರಾಗಲಿ, ಎರಡಾಗಲಿ, ಒಂದೇ ಆಗಲಿ ದ್ವಿಜರಿಗಿರುವುದುಂಟು.

4. (ಚತುರ್ಲೇಖಃ) "ಲಲಾಟೇ ಯಸ್ಯ ದೃಶ್ಯಂತೇ ಚತ್ವಸ್ತ್ರಿದ್ವ್ಯೇಕರೇಖಿಕಾಃ। ಶತದ್ವಯಂ ಶತಂ ಷಷ್ಟಿಸ್ತಸ್ಯಾಯುರ್ವಿಂಶತಿಸ್ತಥಾ" ಎಂಬ ಕಾತ್ಯಾಯನವಚನದಂತೆ ಹಣೆಯಲ್ಲಿ ನಾಲ್ಕು, ಮೂರು, ಎರಡು ಅಥವಾ ಒಂದೇ ರೇಖೆಯುಳ್ಳವರು ಕ್ರಮವಾಗಿ ಇನ್ನೂರು, ನೂರು, ಅರವತ್ತು, ಇಪ್ಪತ್ತು ವರ್ಷಗಳವರೆಗೆ ಬದುಕಿರುವರೆಂದು ಗ್ರಾಹ್ಯವು. ಮತ್ತು "ಯಸ್ಯ ಪಾದತಲೇ ವಜ್ರಧ್ವಜಶಂಖಾಂಕುಶೋಪಮಾ। ರೇಖಾಸ್ಸಮ್ಯಕ್ಪ್ರಕಾಶಂತೇ ಮನುಜೇಂದ್ರಂ ತಮಾದಿಶೇತ್" ಎಂಬ ನಾರದವಚನದಂತೆ, ಅಂಗಾಲಿನಲ್ಲಿ ವಜ್ರ, ಧ್ವಜ, ಶಂಖ, ಅಂಕುಶಗಳೆಂಬ ಈ ನಾಲ್ಕು ರೇಖೆಯುಳ್ಳವರು ರಾಜಪದವಿಯಲ್ಲಿರುವರೆಂದೂ "ಪಾಣೌ ಚತಸ್ರೋ ರೇಖಾಶ್ಚ ಯಸ್ಯ ತಿಷ್ಠಂತ್ಯಭಂಗುರಾಃ" ಎಂಬ ಬ್ರಹ್ಮವಚನದಂತೆ ಅಂಗೈಯಲ್ಲಿ ಈ ನಾಲ್ಕು ರೇಖೆಯನ್ನುಳ್ಳವರು ರಾಜರಾಗುವರೆಂದೂ ಗ್ರಾಹ್ಯವು.

ಅವನ ಆಯುಸ್ಸೂಚಕಗಳಾದ ನಾಲ್ಕು ರೇಖೆಗಳುಂಟು. 1 ಅವನ ದೇಹವು ನಾಲ್ಕುಕಿಷ್ಕು (ತೊಂಬತ್ತಾರಂಗುಲ) ಗಳ ಪ್ರಮಾಣವುಳ್ಳದಾಗಿರುವುದು. 2 ಅವನ ತೋಳು, ತೊಡೆ, ಮೊಳಕಾಲು, ಕೆನ್ನೆ. ಇವು ನಾಲ್ಕೂ ಸಮವಾಗಿರುವುವು. 3 ಅವನ ಹುಬ್ಬು, ಮೂಗಿನ ರಂಧ್ರಗಳು, ಕಣ್ಣು, ಕಿವಿ, ತುಟಿ, ಸ್ತನಾಗ್ರ. ಮೊಳಕೈ, ಮಣಿಕಟ್ಟು. ಮೊಳಕಾಲು, ಅಂಡಗಳು, ಕಟಿಸ್ಥಲಗಳು, ಕೈ, ಕಾಲು, ಪಕ್ಕೆ. ಈ ಹದಿನಾಲ್ಕು ದ್ವಂದ್ವಾವಯವಗಳೂ ಒಂದಕ್ಕೊಂದು ಸಮಪ್ರಮಾಣದಿಂದಿರುವುವು. 4 ಅವನಿಗೆ ಕೋರೆದಾಡೆಗಳಂತಿರುವ ನಾಲ್ಕು ಹಲ್ಲುಗಳುಂಟು. 5 ಅವನ ನಡೆಯು, ಸಿಂಹದ ನಡೆಯಂತೆಯೂ, ಹುಲಿಯ ನಡೆಯಂತೆಯೂ, ಆನೆಯ ನಡೆಯಂತೆಯೂ, ವೃಷಭದ ನಡೆಯಂತೆಯೂ ನಾಲ್ಕುತರದ

---

1. (ಚತುಃಕಿಷ್ಕುಃ) ಕಿಷ್ಕುವೆಂದರೆ ಇಪ್ಪತ್ತುನಾಲ್ಕಂಗುಲಗಳು, ನಾಲ್ಕುಕಿಷ್ಕು ಪ್ರಮಾಣವೆಂದರೆ ತೊಂಭತ್ತಾರಂಗುಲಗಳು; ಇಲ್ಲಿ "ಷಣ್ಣವತ್ಯಂಗುಲೋತ್ಸೇಧೋಯಃ ಪುಮಾನ್ ಸ ದಿವೌಕಸಃ" ಎಂದು ಬ್ರಾಹ್ಮಪುರಾಣವಚನವು.

2. (ಚತುಸ್ಸಮಃ) ಇಲ್ಲಿ "ಬಾಹುಜಾನೂರುಗಂಡಾಶ್ಚ ಚತ್ವಾರ್ಯಥಸಮಾನಿಚ" ಎಂದು ಸಾಮುದ್ರಿಕವಚನವು.

3. (ಚತುರ್ದಶಸಮದ್ವಂದ್ವಃ) ಮೇಲೆ ಹೇಳಿದ ಹದಿನಾಲ್ಕು ದ್ವಂದ್ವಾವಯವಗಳೆಂದರೆ ಎಡಬಲದ ಅವಯವಗಳೆರಡೂ ಒಂದಕ್ಕೊಂದು ಸಮವಾಗಿರಬೇಕಾದುದು ಶುಭಲಕ್ಷಣವೆನಿಸುವುದು. ಇದಕ್ಕೆ "ಭ್ರುವೌ ನಾಸಾಪುಟೇ ನೇತ್ರೇ ಕರ್ಣಾವೋಷ್ಠೌಚ ಚೂಚುಕೇ। ಕೂರ್ಪರೌ ಮಣಿಬಂಧೌಚ ಜಾನುನೀ ವೃಷಣೌಕಟೀ। ಕರೌಪಾದೌ ಸ್ಫಿಚೌ ಯಸ್ಯ ಸಮೌಜ್ಞೇಯಸ್ಸಭೂಪತಿಃ" ಈ ದ್ವಂದ್ವಾವಯವಗಳು ಸಮವಾಗಿದ್ದರೆ ಅರಸರಾಗುವರೆಂದು ಸಾಮುದ್ರಿಕವು.

4. ಚತುರ್ದಂಷ್ಟ್ರಃ—ಇಲ್ಲಿ "ಸ್ನಿಗ್ಧಾಘನಾಶ್ಚ ದಶನಾಸ್ಸುತೀಕ್ಷ್ಣದಂಷ್ಟ್ರಾಸ್ಸಮಾಶ್ಚಶುಭಾಃ" ಎಂದು ಮಿಹಿರವಾಕ್ಯವು. ಹಲ್ಲುಗಳಲ್ಲಿ ಮೇಲಿನ ಮತ್ತು ಕೆಳಗಿನ ಸಾಲುಗಳೆರಡರಲ್ಲಿಯೂ, ಮಧ್ಯಭಾಗದ ನಾಲ್ಕು ಹಲ್ಲುಗಳಿಗೆ ಪಕ್ಕಗಳಲ್ಲಿರುವ ಎರಡೆರಡು ಹಲ್ಲುಗಳಾಗಲಿ, ಅಥವಾ ಆ ಎರಡುಸಾಲುಗಳಲ್ಲಿ ದವಡೆಯ ಒತ್ತಿಗಿರುವ ಎರಡೆರಡು ಹಲ್ಲುಗಳಾಗಲಿ ದಂಷ್ಟ್ರಗಳೆನಿಸುವುವು.

5. ಚತುರ್ಗತಿಃ—ಗಜಸಿಂಹಗತೀ ವೀರೌ ಶಾರ್ದೂಲವೃಷಭೋಪಮೌ" ಎಂದು ಬಾಲಕಾಂಡದಲ್ಲಿ ಹೇಳಿದಂತೆ, ಆನೆ, ಹುಲಿ, ಸಿಂಹ, ಎತ್ತು, ಈ ನಾಲ್ಕು ಮೃಗಗಳಂತೆ ನಡೆಯುಳ್ಳವನೆಂದು ಭಾವವು.

ಗಾಂಭೀರ್ಯದಿಂದ ಕೂಡಿರುವುದು. 1 ಅವನ ತುಟಿ, ಮುಸುಡಿ, (ಹನು) ಮೂಗು, ಇವು ಮೂರೂ ಉಬ್ಬಿರುವುವು. 2 ಅವನ ಕಣ್ಣು, ಹಲ್ಲುಗಳಸಾಲು, ಮೈಮೇಲಿನ ತೊಗಲು, ಕಾಲುಕೂದಲು, ಇವೈದೂ ನುಣುಪಾಗಿ ಮಿರುಗುತ್ತಿರುವುವು. 3 ಅವನ ಬೆನ್ನೆಲುಬು, ಮೈ, ಬೆರಳುಗಳು, ಕೈ, ಮೂಗು, ಕಣ್ಣು, ಕಿವಿ, ಮೇಢ್ರ, ಇವೆಂಟೂ ನೀಡಿರುವುವು. 4 ಅವನ ಮುಖ, ಕಣ್ಣು, ಬಾಯಿ, ನಾಲಗೆ, ತುಟಿ, ದವಡೆ, ಮೊಲೆ, ಉಗುರು, ಕೈ, ಕಾಲು, ಈ ಹತ್ತವಯವಗಳೂ ಪದ್ಮಾಕಾರದಿಂದೊಪ್ಪುವುವು. 5 ಅವನ ಎದೆ, ತಲೆ, ಹಣೆ, ಕೊರಲು, ತೋಳು, ಹೊಕ್ಕುಳು,

---

1. ಮುಹೋಷ್ಠಹನುನಾಸಶ್ಚ:— ಇಲ್ಲಿ "ಬಂಧುಜೀವಕುಸುಮೋಪಮೋಧರೋ। ಮಾಂಸಲೋರುಚಿರ ಬಿಂಬರೂಪಧೃತ್। ಪೂರ್ಣಮಾಂಸಲಹನುಸ್ತು ಭೂಮಿಪ। ಸ್ತುಂಗತುಂಡರುಚಿರಾಕೃತಿಸ್ತಥಾ" ಎಂಬ ಸಂಹಿತಾವಾಕ್ಯದಂತೆ ತುಟಿಯು ದಾಸವಾಳದ ಹೂವಿನಂತೆಯೂ, ತೊಂಡೆಯ ಹಣ್ಣಿನಂತೆಯೂ, ಕೆಂಪಗೆ ಉಬ್ಬಿರಬೇಕೆಂದೂ, ದವಡೆಯು ಮಾಂಸ ತುಂಬಿರಬೇಕೆಂದೂ, ಮೂಗು ಉದ್ದವಾಗಿರಬೇಕೆಂದೂ ಭಾವವು.

2. ಪಂಚಸ್ನಿಗ್ಧ:—ಮಾತು, ಉಗುರು, ಕೂದಲು, ಚರ್ಮ, ಈ ಐದರಲ್ಲಿಯಾಗಲಿ, ಕೂದಲು, ಕಣ್ಣು, ಹಲ್ಲು, ಚರ್ಮ, ಅಂಗಾಲು ಇವೈದರಲ್ಲಿಯಾಗಲಿ ಸ್ನಿಗ್ಧತೆಯೆಂದರೆ ನುಣುಪಿರಬೇಕೆಂದರ್ಥವು. ಇಲ್ಲಿ "ಚಕ್ಷುಸ್ನೇಹೇನ ಸೌಭಾಗ್ಯಂ ದಂತಸ್ನೇಹೇನ ಭೋಜನಂ। ತ್ವಚಸ್ನೇಹೇನ ಶಯನಂ ಪಾದಸ್ನೇಹೇನ ವಾಹನಂ" ಎಂದು ವರರುಚಿ ವಾಕ್ಯವೂ, "ಸ್ನಿಗ್ಧನೀಲ ಮೃದುಕುಂಚಿತಾಸ್ತಥಾ ಮೂರ್ಧಜಾಸ್ಸುಖಕರಾಃ ಸಮಂಶಿನಃ" ಎಂದು ಮಿಹಿರವಾಕ್ಯವೂ ಪ್ರಮಾಣಗಳು. ಮೊದಲು "ತ್ರಿಷು ಸ್ನಿಗ್ಧಃ" ಎಂದು ಹೇಳಿದುದಾಗಲೂ ಇಲ್ಲಿ ಪುನಃ "ಪಂಚಸ್ನಿಗ್ಧಃ" ಎಂದು ಹೇಳಿರುವುದು ಮತಭೇದವೆಂದು ಗ್ರಾಹ್ಯವು.

3. ಅಷ್ಟವಂಶವಾನ್:—ಇಲ್ಲಿ "ಪೃಷ್ಠಃ ವಂಶಶ್ಶರೀರಂಚ ಹಸ್ತಪಾದಾಂಗುಲೀಕರಾ, ನಾಸಿಕಾ ಚಕ್ಷುಷೀ ಕರ್ಣೌಪ್ರಜನೋಯಸ್ಯಚಾಯತಾಃ" ಎಂದು ಸಾಮುದ್ರಿಕವು. ಮೇಢ್ರಕ್ಕೆ ಆಯತತ್ವವೆಂದರೆ ಇಲ್ಲಿ ಋಜುತ್ವವೆಂದು ಗ್ರಾಹ್ಯವು.

4. ದಶಪದ್ಮ:—ಇಲ್ಲಿ "ಮುಖನೇತ್ರಾಸ್ಯಜಿಹ್ವೋಷ್ಠ ತಾಲುಸ್ತನನಖಾಃ ಕರಾ, ಪಾದೌಚದಶಪದ್ಮಾನಿ ಪದ್ಮಾಕಾರಾಣಿಯಸ್ಯಚ" ಎಂದು ಸಾಮುದ್ರಿಕಪ್ರಮಾಣವು.

5. (ದಶಬೃಹತ್) "ಉರಶ್ಶಿರೋ ಲಲಾಟಂಚ ಗ್ರೀವಾ ಬಾಹ್ವಂಸನಾಭಯಃ। ಪಾರ್ಶ್ವ, ಪೃಷ್ಠಸ್ವರಾಶ್ಚೇತಿ ವಿಶಾಲಾಸ್ತೇ ಶುಭಪ್ರದಾಃ॥" ಎಂದು ಸಾಮುದ್ರಿಕಪಲ್ಲಿಯೂ, "ಶಿರೋಲಲಾಟೇ ಶ್ರವಣೇಗ್ರೀವಾ ವಕ್ಷಶ್ಚ ಹೃತ್ತದಾ। ಉದರಂ ಪಾಣಿಪಾದೌಚ ಪೃಷ್ಠಂ ದಶಬೃಹಂತಿಚ" ಎಂದು ಬ್ರಾಹ್ಮದಕ್ಷಿಯೂ ಪ್ರಮಾಣವಿರುವುದರಿಂದ ಈ ಹತ್ತವಯವಗಳು ದೊಡ್ಡವಾಗಿರಬೇಕೆಂದು ಭಾವವು.

ಆಳ್ವೆ, ಬೆನ್ನು, ಕಂಠಧ್ವನಿ, ಇವು ಹತ್ತೂ ಉಬ್ಬಿ ದೊಡ್ಡದಾಗಿರುವುವು. 1 ಅವನು ತೇಜಸ್ಸಿನಿಂದಲೂ, ಯಶಸ್ಸಿನಿಂದಲೂ, ಭಾಗ್ಯದಿಂದಲೂ ಲೋಕವಿಖ್ಯಾತನು. 2 ಆವನ ದಂತಪಙ್ಕ್ತಿ, ಕಣ್ಣು, ಇವೆರಡೂ ಬಹಳ ಶುಭ್ರವಾಗಿರುವುವು. 3 ಅವನ ಕೌಂಕುಳು, ಕುಕ್ಷಿ, ಎದೆ, ಮೂಗು, ಹೆಗಲು, ಹಣೆ, ಇವಾರೂ ಉನ್ನತವಾಗಿರುವುವು. 4 ಆವನ ತಲೆಕೂದಲು, ಮೀಸೆ, ಉಗುರು, ಬೆರಳಿನ ಗಿಣ್ಣು, ಮೈಕೂದಲು, ಲಿಂಗ, ದೃಷ್ಟಿ, ಬುದ್ಧಿ, ಇವೊಂಭತ್ತೂ ಸೂಕ್ಷ್ಮಗಳಾಗಿರುವುವು. 5 ರಘುವಂಶೋತ್ತಮನಾದ ಆ ರಾಮನು, ಪೂರ್ವಾಹ್ಣ, ಮಧ್ಯಾಹ್ನ, ಅಪರಾಹ್ಣಗಳೆಂಬೀ ಮೂರುಕಾಲಗಳಲ್ಲಿಯೂ ಕ್ರಮವಾಗಿ, ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗಗಳನ್ನು ಸಾಧಿಸುತ್ತಿರುವನು. ಸತ್ಯದಲ್ಲಿಯೂ, ಧರ್ಮದಲ್ಲಿಯೂ, ನಿತ್ಯಾಸಕ್ತಿ

---

1. (ತ್ರಿಭಿರ್ವ್ಯಾಪ್ತಃ) "ತ್ರಿಭಿರ್ವ್ಯಾಪ್ತಿಶ್ಚ ಯಸ್ಯಸ್ಯಾತ್ತೇಜಸಾಯಶಸಾಶ್ರಿಯಾ" ಎಂಬ ಬ್ರಾಹ್ಮವಚನದಂತೆ, ತೇಜಸ್ಸು, ಯಶಸ್ಸು, ಸಂಪತ್ತು, ಇವು ಮೂರೂ ಲೋಕವಿಖ್ಯಾತಗಳಾಗಿರಬೇಕೆಂದು ಭಾವವು.

2. (ದ್ವಿಶುಕ್ಲವಾನ್) ಹಲ್ಲು, ಕಣ್ಣು, ಇವೆರಡೂ ಬಿಳುಪಾಗಿರುವುವೆಂದಾಗಲಿ ಮಾತೃಪಿತೃವಂಶಗಳೆರಡೂ ಶುದ್ಧವಾಗಿರುವುವೆಂದಾಗಲಿ ಗ್ರಹಿಸಬಹುದು

3. (ಷಡುನ್ನತಃ) ಇಲ್ಲಿ "ಕಕ್ಷಃ ಕುಕ್ಷಿಶ್ಚ ವಕ್ಷಶ್ಚ ಘ್ರಾಣಂ ಸ್ಕಂಧೋ ಲಲಾಟಕಂ। ಸರ್ವಭೂತೇಷು ನಿರ್ದಿಷ್ಟಾ ಉನ್ನತಾಸ್ತು ಶುಭಪ್ರದಾಃ" ಎಂದು ವರರುಚಿವಾಕ್ಯವು. ಇಲ್ಲಿ ಕೆಲವು ವಿಷಯಗಳು ಪುನರುಕ್ತಿಯಂತೆ ತೋರಿಬಂದರೂ, ಮತಭೇದದಿಂದ ಇದನ್ನು ಹೇಳಿರುವುದಾಗಿ ಗ್ರಹಿಸಿ, ರಾಮನಲ್ಲಿ ಸರ್ವಶಾಸ್ತ್ರೋಕ್ತಮಹಾಪುರುಷಲಕ್ಷಣಗಳೂ ಪೂರ್ಣವಾಗಿರುವುವೆಂದು ಸೂಚಿಸುವುದಕ್ಕಾಗಿಯೇ ಹೀಗೆ ಹೇಳಿದುದಾಗಿ ಗ್ರಾಹ್ಯವು.

4. (ನವತನುಃ) ಇಲ್ಲಿ "ಸೂಕ್ಷ್ಮಾಣ್ಯಂಗುಳಿಪರ್ವಾಣಿ ಕೇಶಲೋಮನಖತ್ವಚಃ। ಶೇಫಶ್ಚಯೇಷಾಂ ಸೂಕ್ಷ್ಮಾಣಿ ತೇ ನರಾ ದೀರ್ಘಜೀವಿನಃ" ಎಂಬ ವರರುಚಿವಾಕ್ಯದಂತೆ, ಮೇಲೆಕಂಡ ಒಂಬತ್ತವಯವಗಳೂ ಸೂಕ್ಷ್ಮಗಳಾಗಿದ್ದರೆ, ಆ ಮನುಷ್ಯರು ಚಿರಜೀವಿಗಳಾಗಿರುವರೆಂದು ಗ್ರಾಹ್ಯವು ಮತ್ತು ಇಲ್ಲಿ "ಅಸ್ಫುಟಿತಾಗ್ರಂ ಸೂಕ್ಷ್ಮಂ ಶ್ಮಶ್ರುಶುಭಂ ಮೃದುಚ ಸನ್ತತಂ ಸ್ನಿಗ್ಧಂ" "ಸೂಕ್ಷ್ಮದೃಕ್ಸೂಕ್ಷ್ಮಬುದ್ಧಿಶ್ಚಯೋ ನರಸ್ಸಸುಖೀ ಭವೇತ್" ಎಂಬೀ ಪ್ರಮಾಣಗಳೂ ಅನುಸಂಧೇಯವು.

5. (ತ್ರಿಭಿರ್ವ್ಯಾಪ್ನೋತಿ) ಇಲ್ಲಿ "ಧರ್ಮಾರ್ಥಕಾಮಾಃ ಕಾಲೇಷು ತ್ರಿಷು ಯಸ್ಯಸ್ವನುಷ್ಠಿತಾಃ" ಎಂದು ಬ್ರಾಹ್ಮವಾಕ್ಯವು.

ಯುಳ್ಳವನು. ಶ್ರೀಮಂತನು. ಯಾವಾಗಲೂ ಧನಾದಿಗಳನ್ನಾರ್ಜಿಸುತ್ತ ಅದನ್ನು ಯಾಚಕರಿಗೆ ಕೊಟ್ಟು ಪೋಷಿಸುತ್ತಿರುವನು. ಅವನು ದೇಶಕಾಲ ಭೇದಗಳನ್ನು ಚೆನ್ನಾಗಿ ತಿಳಿದವನು. ಸಮಸ್ತಜನಗಳಲ್ಲಿಯೂ ಪ್ರಿಯವನ್ನು ನುಡಿಯತಕ್ಕವನು. ಆ ರಾಮನಿಗೆ 1 ಸವತಿತಾಯಿಯ (ಇಬ್ಬರು ಮಾತೆಯರಿಗೆ) ಮಗನಾದ ಮತ್ತು ಯಾರಿಂದಲೂ ಪರಾಜಯವನ್ನು ಹೊಂದದ ಲಕ್ಷ್ಮಣನೂ ಕೂಡ ಅನುರಾಗದಿಂದಲೂ, ರೂಪದಿಂದಲೂ, ಇತರ ಗುಣಗಳಿಂದಲೂ ಆ ರಾಮನನ್ನೇ ಹೋಲುತ್ತಿರುವನು. ಪುರುಷಸಿಂಹರಾದ ಆ ರಾಮಲಕ್ಷ್ಮಣರಿಬ್ಬರೂ ಆತ್ಮಾತುರದಿಂದ ನಿನ್ನನ್ನು ಹುಡುಕುವುದಕ್ಕಾಗಿ ಈ ಸಮಸ್ತಭೂಮಿಯನ್ನೂ ಸುತ್ತಿಬರುವಾಗ, ನಮಗೂ ಅವರಿಗೂ ಸಮಾಗಮವುಂಟಾಯಿತು. ಅವರಿಬ್ಬರೂ ನಿನ್ನನ್ನು ಹುಡುಕುತ್ತ ಬರುವಾಗಲೇ, ನಮ್ಮೊಡೆಯನಾದ ಸುಗ್ರೀವನೆಂಬ ವಾನರಾಧಿಪತಿಯನ್ನು ಕಂಡರು. ಆ ಸುಗ್ರೀವನು ತನ್ನಣ್ಣನಾದ ವಾಲಿಯಿಂದೋಡಿಸಲ್ಪಟ್ಟು ರಾಜ್ಯಭ್ರಷ್ಟನಾಗಿ, ಅವನ ಭಯದಿಂದ ಋಷ್ಯಮೂಕಪರ್ವತದಮೇಲೆ ಅನೇಕ ವೃಕ್ಷಗಳಿಂದ ನಿಬಿಡವಾದ ಒಂದು ತಪ್ಪಲಲ್ಲಿರುತ್ತಿದ್ದನು. ಹೀಗೆ ಅಣ್ಣನಿಂದೋಡಿಸಲ್ಪಟ್ಟು ಪರ್ವತಾಗ್ರದಲ್ಲಿದ್ದ ಸತ್ಯಸಂಧನಾದ ಆ ವಾನರಶ್ರೇಷ್ಠನಿಗೆ, ನಾವು ಬೆಂಬಲವಾಗಿ ಸೇವೆಯನ್ನು ಮಾಡುತಿದ್ದೆವು. ಇಷ್ಟರಲ್ಲಿಯೇ ವಲ್ಕಲಧಾರಿಗಳಾಗಿಯೂ, ಉತ್ತಮಧನುಸ್ಸನ್ನು ಕೈಯಲ್ಲಿ ಹಿಡಿದವರಾಗಿಯೂ ಇದ್ದ ರಾಮಲಕ್ಷ್ಮಣರಿಬ್ಬರೂ ಋಷ್ಯಮೂಕಪರ್ವತದಲ್ಲಿ ನಾವಿದ್ದ ಆ ರಮ್ಯಸ್ಥಳಕ್ಕೆ ಬಂದು ಸೇರಿದರು. ನಮ್ಮೊಡೆಯನಾದ ಸುಗ್ರೀವನು, ಧನುರ್ಧಾರಿಗಳಾದ ಆ ಪುರುಷಶ್ರೇಷ್ಠರಿಬ್ಬರನ್ನೂ ನೋಡಿ ಭಯಪಟ್ಟು ಯಾವುದೊಂದೂ ತೋರದೆ ವಾಲಿಯು ತನ್ನನ್ನು ಕೊಲ್ಲುವುದಕ್ಕಾಗಿಯೇ ಅವರನ್ನು ಕಳುಹಿಸಿರಬಹುದೆಂದೆಣಿಸಿ, ಆ ಕ್ಷಣವೇ ಆ ಪರ್ವತಶಿಖರಕ್ಕೆ ಹಾರಿಬಿಟ್ಟನು. ಆ ಸುಗ್ರೀವನು ಪರ್ವತ ಶಿಖರದಲ್ಲಿದ್ದ ಹಾಗೆಯೇ ನನ್ನನ್ನು ಕರೆದು, ಆ ರಾಮಲಕ್ಷ್ಮಣರ ನಿಜಸ್ಥಿತಿಯನ್ನು ತಿಳಿದು ಬರುವುದಕ್ಕಾಗಿ ಅವರ ಬಳಿಗೆ ಕಳುಹಿಸಿದನು. ನಾನು ಆ ಸುಗ್ರೀವಾಜ್ಞೆಯಂತೆ ಪುರುಷಸಿಂಹರಾಗಿಯೂ, ರೂಪಲಕ್ಷಣಸಂಪನ್ನರಾಗಿಯೂ ಇದ್ದ ಆ ರಾಜಕುಮಾರರ ಬಳಿಗೆ ಬಂದು, ಅವರ ಮುಂದೆ ಕೈಮುಗಿದು ನಿಂತೆನು. ಅವರ ಪೂರ್ವ

---

1. ಸುಮಿತ್ರಾಪುತ್ರನಾದ ಲಕ್ಷ್ಮಣನು ಹುಟ್ಟಿದುದು ಮೊದಲು, ರಾಮನಿಗೆ ಸಮಾನವಾಗಿ ಕೌಸಲ್ಯೆಯಿಂದಲೂ ರಕ್ಷಿಸಲ್ಪಟ್ಟವನಾದುದರಿಂದ, ಇಲ್ಲಿ (ದ್ವೈಮಾತ್ರಃ) ಎಂದರೆ ಇಬ್ಬರು ಮಾತೆಯರಿಗೆ ಮಗನೆಂದು ಹೇಳಿದುದಾಗಿಯೂ ಗ್ರಹಿಸಬಹುದು.

ವೃತ್ತಾಂತಗಳೆಲ್ಲವನ್ನೂ ವಿಚಾರಿಸಿ ತಿಳಿದುಕೊಂಡೆನು. ಅವರಿಗೂ ಬಹಳ ಸಂತೋಷವುಂಟಾಯಿತು. ನಮ್ಮಿಬ್ಬರಿಗೂ ಒಬ್ಬರಿಗೊಬ್ಬರಿಗೆ ನಂಬಿಕೆಯೂ ಹುಟ್ಟಿತು. ಆಮೇಲೆ ಅವರಿಬ್ಬರನ್ನೂ ನಾನು ನನ್ನ ಭುಜದಮೇಲೇರಿಸಿಕೊಂಡು, ಸುಗ್ರೀವನಿದ್ದ ಸ್ಥಳಕ್ಕೆ ಕರೆತಂದೆನು. ಆ ರಾಮಲಕ್ಷ್ಮಣರ ಸಂಗತಿಯೆಲ್ಲವನ್ನೂ ಯಥಾಸ್ಥಿತವಾಗಿ ಸುಗ್ರೀವನಿಗೂ ತಿಳಿಸಿದೆನು. ರಾಮಸುಗ್ರೀವರಿಬ್ಬರೂ ಪರಸ್ಪರಸಲ್ಲಾಪಗಳನ್ನು ಮಾಡಿಕೊಂಡರು. ಕೊನೆಗೆ ಅವರಿಬ್ಬರಿಗೂ ಪರಸ್ಪರಪ್ರೇಮವೂ ಹೆಚ್ಚಿತು. ಹೀಗೆ ಅವರಿಬ್ಬರೂ ಪರಸ್ಪರಪ್ರೀತಿಯನ್ನು ಹೊಂದಿ, ತಮತಮಗೆ, ಅದುವರೆಗೂ ಸಂಭವಿಸಿದ ಕಷ್ಟಗಳೆಲ್ಲವನ್ನೂ ಒಬ್ಬರಿಗೊಬ್ಬರು ವಿಸ್ತರಿಸಿ ಹೇಳಿಕೊಂಡು, ತಮಗೆ ತಾವೇ ಸಮಾಧಾನವನ್ನು ಹೊಂದಿದರು. ಸುಗ್ರೀವನು ಸ್ತ್ರೀನಿಮಿತ್ತವಾಗಿ ತನ್ನ ಅಣ್ಣನಾದ ವಾಲಿಯಿಂದ ಅವಮಾನಿತನಾಗಿರುವುದನ್ನು ನೋಡಿ, ಲಕ್ಷ್ಮಣಾಗ್ರಜನಾದ ರಾಮನು ವಾಲಿಯನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿಕೊಟ್ಟು ಅವನನ್ನು ಸಮಾಧಾನಪಡಿಸಿದನು. ಆಮೇಲೆ ಲಕ್ಷ್ಮಣನು ನಿನ್ನನ್ನಗಲಿದುದರಿಂದ ರಾಮನಿಗುಂಟಾಗಿರುವ ಮಹಾದುಃಖವನ್ನು ವಾನರೇಂದ್ರನಾದ ಸುಗ್ರೀವನಿಗೆ ತಿಳಿಸಿದನು. ಲಕ್ಷ್ಮಣನು ಹೇಳಿದ ಮಾತನ್ನು ಕೇಳಿದೊಡನೆ ಸುಗ್ರೀವನಿಗೆ, ತನ್ನ ಮಿತ್ರನಾದ ರಾಮನ ದುಃಖವನ್ನು ಕೇಳಿ ಬಹಳ ವ್ಯಸನವುಂಟಾಯಿತು. ರಾಹುಗ್ರಸ್ತನಾದ ಸೂರ್ಯನಂತೆ ಅವನ ಮುಖವು ಕಳೆಗುಂದಿತು. [1] ಆಮೇಲೆ ಅಲ್ಲಿದ್ದ ವಾನರರು, ರಾಕ್ಷಸನು ನಿನ್ನನ್ನು ಕೊಂಡುಹೋಗುತಿದ್ದಾಗ ನೀನು ನಿನ್ನ ಮೈಯಿಂದ ತೆಗೆದು ಕೆಳಕ್ಕೆ ಬಿಸುಟ ಸರ್ವಾಭರಣಗಳನ್ನೂ ತಂದು ಸಂತೋಷದಿಂದ ರಾಮನಿಗೆ ತೋರಿಸಿದರು. ಆದರೆ ನೀನಿರುವ ಸ್ಥಳವು ಮಾತ್ರ ಯಾರಿಗೂ ತಿಳಿಯದು. [2] ರಾವಣನು ಅಜ್ಞಾನವಶನಾಗಿರುವಾಗ ಆಕಾಶದಿಂದ

---

1. "ಮೊದಲು ಸುಗ್ರೀವನೇ ಈ ಆಭರಣಗಳನ್ನು ತಂದುಕೊಟ್ಟುದಾಗಿ ಹೇಳಿರುವಾಗ. ಈಗ ಅವುಗಳನ್ನು ವಾನರಯೂಥಪತಿಗಳು ತಂದುಕೊಟ್ಟುದಾಗಿ ಹೇಳುವುದಕ್ಕೆ ಕಾರಣವೇನು? ಎಂದರೆ, ಸುಗ್ರೀವನು ವಾನರಯೂಥಪತಿಗಳ ಮೂಲಕವಾಗಿಯೇ ಅವುಗಳನ್ನು ತರಿಸಿ ತನ್ನ ಕೈಯಿಂದ ರಾಮನಿಗೆ ಕೊಟ್ಟುದಾಗಿ ತಿಳಿಯಬೇಕು.

2. ಇಲ್ಲಿ "ತಾನಿ ರಾಮಾಯ ದತ್ತಾನಿ ಮಯ್ಯೈವೋಪಹೃತಾನಿಚ। ಸ್ವನವಂತ್ಯವಕೀರ್ಣಾನಿ ತಸ್ಮಿನ್ ವಿಗತಚೇತಸಿ" ಎಂದು ಮೂಲವು. ಇದಕ್ಕೆ "ರಾಮನಿಗೆ ಆ ಒಡವೆಗಳನ್ನು ಕೊಟ್ಟಮೇಲೆ, ಅವನು ಅವುಗಳನ್ನು ನೋಡಿ ಪ್ರಜ್ಞೆತಪ್ಪಿ ಮೂರ್ಛೆಬೀಳಲು, ಅವೆಲ್ಲವೂ ಅವನ ಕೈಗಳಿಂದ ಜಾರಿ ಘಲ್ಲಲನೆ ಕೆಳಗೆ ಬಿದ್ದುವು. ಆಗ ನಾನೇ ಅವುಗಳನ್ನೆತ್ತಿ ತಂದಿಟ್ಟೆನು" ಎಂದೂ ಅರ್ಥಾಂತರವನ್ನು ಹೇಳುವರು.

ಘಳ್ಳುಲನೆ ಉದಿರಿಬಿದ್ದ ಆಭರಣಗಳೆಲ್ಲವನ್ನೂ ನಾನೇ ನನ್ನ ಕೈಯಿಂದ ರಾಮನ ಮುಂದೆ ತಂದಿರಿಸಿದೆನು. ಅದನ್ನು ಸುಗ್ರೀವನು ತೆಗೆದು ರಾಮನ ಕೈಗೆ ಕೊಟ್ಟನು. ರಾಮನಾದರೋ ಆ ಆಭರಣಗಳನ್ನು ನೋಡಿದೊಡನೆ ದುಃಖದಿಂದ ಪ್ರಜ್ಞೆತಪ್ಪಿ ಮೂರ್ಛೆಬಿದ್ದನು. ದೇವಸಮಾನನಾದ ಆ ನಿನ್ನ ಪತಿಯು, ಅಂದವಾದ ಆ ಒಡವೆಗಳೆಲ್ಲವನ್ನೂ ತೆಗೆದು ತನ್ನ ತೊಡೆಯುಲ್ಲಿರಿಸಿಕೊಂಡು, ಬಹುವಿಧದಿಂದ ವಿಲಪಿಸು ತ್ತಿದ್ದನು. ಆಗ ಆ ರಾಮನ ಸಂಕಟವನ್ನು ನಾನೇನು ಹೇಳಲಿ! ಆ ಒಡವೆಗಳನ್ನು ಬಾರಿಬಾರಿಗೂ ತೆಗೆದು ನೋಡುವನು! ಅವುಗಳನ್ನು ನೋಡಿನೋಡಿ ಅಳುವನು! ಮನಸ್ಸಿನಲ್ಲಿಯೇ ಸಂಕಟದಿಂದ ಕುದಿಯುತ್ತಿರುವನು! ಹೀಗೆ ಆ ನಿನ್ನ ಆಭರಣಗಳು ರಾಮನ ದುಃಖಾಗ್ನಿಯನ್ನು ಮತ್ತಷ್ಟು ಉರುಬಿ ಹತ್ತಿಸಿದಂತೆ ಉತ್ತೇಜನಗೊಳಿ ಸಿತು. ಆ ಮಹಾತ್ಮನು ಬಹಳ ಹೊತ್ತಿನವರೆಗೆ ಆ ದುಃಖದಿಂದ ಮೂರ್ಛೆಬಿದ್ದು ನಿಶ್ಚೇಷ್ಟಿತನಾಗಿದ್ದುದನ್ನು ನೋಡಿ, ಲಕ್ಷ್ಮಣನೂ, ಸುಗ್ರೀವನೂ, ನಾನೂ, ಅವನನ್ನು ಅನೇಕವಿಧದಿಂದ ಸಮಾಧಾನಗೊಳಿಸಿದೆವು. ಕೊನೆಗೆ ರಾಮನು ಎಷ್ಟೋ ಕಷ್ಟದಿಂದ ಚೇತರಿಸಿಕೊಂಡಿದ್ದನು. ಮಹಾಬಾಹುವಾದ ರಾಮನೂ, ಲಕ್ಷ್ಮಣನೂ, ಕ್ಷಣಕ್ಷಣಕ್ಕೂ ಆ ಒಡವೆಗಳನ್ನೆತ್ತಿ ನೋಡುತ್ತ, ಸುಗ್ರೀವನಿಗೂ ತೋರಿಸಿ, ಕೊನೆಗೆ ಅವನ ಕೈಗೇ ಕೊಟ್ಟುಬಿಟ್ಟರು. ಎಲೆ ಆರ್ಯೆ? ನಾನೇನು ಹೇಳಲಿ! ಆ ರಾಮನು ನಿನ್ನನ್ನು ಕಾಣದಂದಿನಿಂದ, ದೊಡ್ಡ ಬೆಂಕಿಯುರಿಯಿಂದಾವೃತ ವಾದ 1 ಅಗ್ನಿಪರ್ವತದಂತೆ, ಎಡೆಬಿಡದೆ ತಪಿಸುತ್ತಿರುವನು. ನಿನ್ನ ನಿಮಿತ್ತವಾಗಿ ಹಗಲುರಾತ್ರಿಯೂ ನಿದ್ರೆಯಿಲ್ಲದುದೊಂದು, ದುಃಖವೊಂದು, ಚಿಂತೆಯೊಂದು, ಇವು ಮೂರರಿಂದ ರಾಮನು, ಪಂಚಾಗ್ನಿಗಳಿಂದ ಕೂಡಿದ ಅಗ್ನಿಜ್ವಾಲೆಯಂತೆ ಕುದಿಯುತ್ತಿರುವನು. ನಿನ್ನನ್ನು ಕಾಣದುದಕ್ಕಾಗಿ ಆತನು ಭೂಕಂಪದಿಂದ ನಡುಗುವ ಬೆಟ್ಟದಂತೆ ನಡುಗುತ್ತಿರುವನು. ಎಲೆ ರಾಜಕುಮಾರಿ! ನಿನ್ನನ್ನು ಕಾಣದೆ ರಾಮನು ಮನೋಹರಗಳಾದ ವನಗಳಲ್ಲಿಯಾಗಲಿ, ನದಿಗಳಲ್ಲಿಯಾಗಲಿ,

---

1. ಅಗ್ನಿಪರ್ವತವೆಂಬುದು ಮೇರುಶಿಖರದಲ್ಲಿರುವ ಒಂದು ಪರ್ವತವು. ಇದೇ ಭಾರತದಲ್ಲಿ 'ಅಶ್ರುಮಾಲ್ಯವತ ಶೃಂಗೇ ದೃಶ್ಯತೇ ಹವ್ಯವಾಟ್ಸದಾ। ನಾಮ್ನಾ ಸಂವರ್ತಕೋ ನಾಮ ಕಾಲಾಗ್ನಿರ್ಭರತರ್ಷಭ'' ಎಂದು ಸೂಚಿಸಲ್ಪಟ್ಟಿದೆ.

ಗಿರಿನದಿಗಳಲ್ಲಿಯಾಗಲಿ, ಎಲ್ಲೆಲ್ಲಿ ಸುತ್ತಿದರೂ ಎಷ್ಟುಮಾತ್ರವೂ ಮನಸ್ಸಿಗೆ ನೆಮ್ಮದಿಯಿಲ್ಲದೆ ಕೊರಗುತ್ತಿರುವನು. ಎಲೆ ಜನಕಪುತ್ರಿ! ಇನ್ನು ನೀನು ದುಃಖಿಸಬೇಡ! ಪುರುಷೋತ್ತಮನಾದ ಆ ರಾಮನು ಶೀಘ್ರದಲ್ಲಿಯೇ ಇಲ್ಲಿಗೆ ಬಂದು, ಈ ರಾವಣನನ್ನು, ಅವನ ಬಂಧುಮಿತ್ರಪರಿವಾರಗಳೊಡನೆ ಕೊಂದು, ನಿನ್ನನ್ನು ಪಡೆಯುವನು. ರಾಮಸುಗ್ರೀವರಿಬ್ಬರೂ ಸೇರಿದಾಗಲೇ ಸುಗ್ರೀವನಿಗಾಗಿ ರಾಮನು ವಾಲಿಯನ್ನು ಕೊಲ್ಲುವುದಾಗಿಯೂ, ರಾಮನಿಗಾಗಿ ಸುಗ್ರೀವನು ನಿನ್ನನ್ನು ಹುಡುಕಿಸುವುದಾಗಿಯೂ, ಪರಸ್ಪರಪ್ರತಿಜ್ಞೆಯನ್ನು ಮಾಡಿಕೊಂಡಿರುವರು. ಅದರಂತೆಯೇ ಸುಗ್ರೀವನು ವೀರರಾದ ಆ ಇಬ್ಬರು ರಾಜಕುಮಾರರೊಡನೆ ಕಿಷ್ಕಿಂಧೆಗೆ ಬಂದು ವಾಲಿಯನ್ನು ಕೊಲ್ಲಿಸಿದನು. ಒಡನೆಯೇ ರಾಮನು ಸಮಸ್ತವಾನರಭಲ್ಲೂಕಸಮೂಹಗಳಿಗೂ ಸುಗ್ರೀವನನ್ನು ರಾಜನನ್ನಾಗಿಯೂ ಮಾಡಿಬಿಟ್ಟನು. ಎಲೆ ದೇವಿ! ಇದೀಗ ರಾಮಸುಗ್ರೀವರಿಬ್ಬರಿಗೂ ಸ್ನೇಹವುಂಟಾಗುವುದಕ್ಕೆ ಕಾರಣವು. ನನ್ನನ್ನು ಹನುಮಂತನೆನ್ನುವರು. ಅವರಿಬ್ಬರ ಆಜ್ಞೆಯ ಮೇಲೆಯೇ ನಾನು ದೂತನಾಗಿ ಇಲ್ಲಿಗೆ ಬಂದಿರುವೆನು! ಸುಗ್ರೀವನು ತನ್ನ ರಾಜ್ಯವನ್ನು ಕೈಸೇರಿಸಿಕೊಂಡೊಡನೆ ತನ್ನ ಕಡೆಯ ಕಪಿವೀರರನ್ನು ಕರೆಸಿ, ನಿನ್ನನ್ನು ಹುಡುಕುವುದಕ್ಕಾಗಿ ಅವರನ್ನು ಹತ್ತುದಿಕ್ಕುಗಳಿಗೂ ಕಳುಹಿಸಿದನು. ಮಹಾತೇಜಸ್ವಿಯೆನಿಸಿದ ವಾನರೇಂದ್ರನಾದ ಆ ಸುಗ್ರೀವನ ಆಜ್ಞೆಯಿಂದ, ಬೆಟ್ಟದಂತೆ ಮಹಾದೇಹವುಳ್ಳ ಅನೇಕ ವಾನರವೀರರು ನಿನ್ನನ್ನು ಹುಡುಕುವುದಕ್ಕಾಗಿ ನಾನಾದಿಕ್ಕುಗಳಿಗೂ ಹೊರಟರು. ಆ ಸುಗ್ರೀವಾಜ್ಞೆಗೆ ಭಯಪಟ್ಟು, ನಾವೂ, ಇನ್ನೂ ಕೆಲವು ವಾನರರೂ ನಿನ್ನನ್ನು ಹುಡುಕುತ್ತ ಭೂಮಿಯೆಲ್ಲವನ್ನೂ ಸುತ್ತುವುದಕ್ಕೆ ಹೊರಟೆವು. ಆ ವಾನರವೀರರಲ್ಲಿ ಶ್ರೀಮಂತನಾಗಿಯೂ ಮಹಾಬಲಾಢ್ಯನಾಗಿಯೂ ಕಪಿಶ್ರೇಷ್ಠನಾಗಿಯೂ ಇರುವ ವಾಲಿಪುತ್ರನಾದ ಅಂಗದನೆಂಬವನು, ಸುಗ್ರೀವರಾಜನಿಗೆ ಸೇರಿದ ವಾನರಸೈನ್ಯದಲ್ಲಿ ಮೂರರಲ್ಲೊಂದು ಪಾಲು ಸೈನ್ಯವನ್ನು ಸಂಗಡ ಕರೆದುಕೊಂಡು ಹೊರಟನು. ನಾನೂ ಆ ಗುಂಪಿನಲ್ಲಿ ಸೇರಿದೆನು. ಹೀಗೆ ನಾವೆಲ್ಲರೂ ನಿನ್ನನ್ನು ಹುಡುಕಿಕೊಂಡು ಬರುವಾಗ, ವಿಂಧ್ಯಪರ್ವತದ ಒಂದಾನೊಂದು ಗುಹೆಯಲ್ಲಿ, ಯಾರಿಗೂ ಕಾಣದಂತೆ ಸಿಕ್ಕಿಬಿದ್ದು, ಹಿಂತಿರುಗಿ

ಬರುವುದಕ್ಕೂ ದಾರಿತೋರದೆ ದುಃಖಾಕ್ರಾಂತರಾಗಿ ಎಷ್ಟೋ ಹಗಲಿರುಳುಗಳನ್ನು ಕಳೆದೆವು. ನಮಗೆ ಮುಂದಿನ ಕಾರ್ಯದಾಸೆಯೂ ತಪ್ಪಿತು. ಸುಗ್ರೀವನು ನಮಗೆ ನಿರ್ಣಯಿಸಿ ಕೊಟ್ಟಿದ್ದ ಕಾಲಾವಧಿಯೂ ಮಿಂಚಿಹೋಯಿತು! ಮಾಡುವುದೇನು? ಆಗ ನಾವು ಹಿಂತಿರುಗಿ ಕಿಷ್ಕಿಂಧೆಗೆ ಹೋದರೂ, ಸುಗ್ರೀವನಿಂದ ಕ್ರೂರಶಿಕ್ಷೆಯನ್ನನುಭವಿಸಬೇಕಾಗುವುದೆಂದೆಣಿಸಿ, ಆ ಭಯಕ್ಕಾಗಿ ಅಲ್ಲಿಯೇ ಪ್ರಾಣವನ್ನು ಬಿಡುವುದಾಗಿಯೂ ನಿಶ್ಚಯಿಸಿಬಿಟ್ಟೆವು. ನಾವು ಅದುವರೆಗೆ ಎಷ್ಟೋ ಅರಣ್ಯಗಳನ್ನೆಲ್ಲಾ ಹುಡುಕಿದೆವು. ಎಷ್ಟೋ ದುರ್ಗಗಳನ್ನು ನೋಡಿ ಬಂದೆವು. ಎಷ್ಟೋ ಬೆಟ್ಟಗುಡ್ಡಗಳನ್ನೆಲ್ಲಾ ತಿರುಗಿದೆವು. ಕಂಡಕಂಡ ನದಿಗಳನ್ನೆಲ್ಲಾ ಇಳಿದು ನೋಡಿದೆವು. ನೀನಿರುವ ಸ್ಥಳವೇ ಗೊತ್ತಾಗಲಿಲ್ಲ. ಹೀಗೆ ನಾವು ನಿನ್ನನ್ನೂ ಕಾಣದೆ, ಕ್ಲುಪ್ತಕಾಲಕ್ಕೂ ಹಿಂತಿರುಗದಿದ್ದುದನ್ನು ನೋಡಿದರೆ, ಸುಗ್ರೀವನಾದರೂ ನಮಗೆ ಮರಣಶಿಕ್ಷೆಯನ್ನೇ ವಿಧಿಸುವನೆಂದೆಣಿಸಿ, ಅಲ್ಲಿ ನಾವೇ ಪ್ರಾಣವನ್ನು ಬಿಡುವುದಾಗಿ ನಿಶ್ಚಯಿಸಿಬಿಟ್ಟೆವು. ಎಲೆ ದೇವಿ! ಈ ನಿಶ್ಚಯದಿಂದ ಪ್ರಾಯೋಪವೇಶಮಾಡಿ ಮಲಗಿದ್ದ ಸಮಸ್ತ ವಾನರರನ್ನೂ ನೋಡಿ, ನಮ್ಮ ಯುವರಾಜನಾದ ಅಂಗದನು, ದುಃಖವೆಂಬ ಮಹಾಸಾಗರದಲ್ಲಿ ಮುಳುಗಿದಂತಾಗಿ, ಗಟ್ಟಿಯಾಗಿ ಅಳುವುದಕ್ಕೆ ತೊಡಗಿದನು, ಆಗ ಅಂಗದನಾದರೋ ನೀನು ಅಪಹೃತಳಾದುದೊಂದು; ತನ್ನ ತಂದೆಯಾದ ವಾಲಿಯು ಹತನಾದುದೊಂದು; ವಾನರರೆಲ್ಲರೂ ಪ್ರಾಯೋಪವೇಶದಲ್ಲಿ ಸಾಯುವುದಕ್ಕೆ ಸಿದ್ಧವಾಗಿರುವುದೊಂದು; ಜಟಾಯುವಿನ ಮರಣವೊಂದು; ಇವೆಲ್ಲವನ್ನೂ ಕ್ರಮವಾಗಿ ಜ್ಞಾಪಿಸಿಕೊಂಡು, ಅದನ್ನೇ ಬಾಯಿಂದಾಡುತ್ತ ವಿಲಪಿಸುತ್ತಿದ್ದನು. ನಮಗೆ ಸುಗ್ರೀವನು ಒಂದುತಿಂಗಳ ಅವಧಿಯನ್ನು ಮಾತ್ರಕೊಟ್ಟು, ಅದಕ್ಕೆ ಮೇಲೆ ಕಾಲವನ್ನು ಮೀರಿ ಬಂದವರನ್ನು ಕೊಂದುಬಿಡುವುದಾಗಿಯೇ ದೃಢಶಾಸನವನ್ನು ಮಾಡಿದ್ದುದರಿಂದ, ಪ್ರಾಣದಮೇಲೆ ಆಸೆಯನ್ನು ಬಿಟ್ಟು ಸಾಯುವುದಕ್ಕೆ ಸಿದ್ಧರಾಗಿದ್ದ ನಮಗೆ ಕಾರ್ಯಸಿದ್ಧಿಯೇ ಕಣ್ಣಿದಿರಿಗೆ ಬಂದಂತೆ, ವೀರ್ಯಶಾಲಿಯಾದ ಒಂದು ದೊಡ್ಡ ಪಕ್ಷಿರಾಜು ಅಲ್ಲಿಗೆ ಬಂದು ಸೇರಿತು. ಅದು ಸಾಮಾನ್ಯಪಕ್ಷಿಯಲ್ಲ! ಅವನಿಗೆ ಸಂಪಾತಿಯೆಂದು ಹೆಸರು. ಗೃಧ್ರರಾಜನಾದ ಜಟಾಯುವಿಗೆ ಒಡಹುಟ್ಟಿದ ಅಣ್ಣನು. ಅಂಗದನು ಹೇಳುತಿದ್ದ ಈ ಜಟಾಯುವಿನ ಮರಣವಾರ್ತೆಯನ್ನು ಕೇಳಿದೊಡನೆ, ಆ ಸಂಪಾತಿಯು ಬೆಜ್ಜರಗೊಂಡು, ನಮ್ಮನ್ನು ನೋಡಿ "ಎಲೆ ವಾನರೋತ್ತಮರೆ! ನನ್ನ ತಮ್ಮನಾದ ಜಟಾಯುವನ್ನು ಕೊಂದಪಾಪಿ ಯಾರು? ಅವನನ್ನು ಕೊಂದುದೆಲ್ಲಿ? ಈ ಸಂಗತಿಯನ್ನು ನನಗೆ ಹೇಳಬೇಕು" ಎಂದು ಕೇಳಿದನು. ಆಗ ಅಂಗದನು ಜನಸ್ಥಾನದಲ್ಲಿ ನಿನಗಾಗಿ

ಆ ಜಟಾಯುವಿಗೆ ಘೋರ ರಾಕ್ಷಸನಿಂದ ಸಂಭವಿಸಿದ ದೊಡ್ಡ ಕೊಲೆಯನ್ನು ಯಥಾಸ್ಥಿತವಾಗಿ ವಿವರಿಸಿದನು. ಈ ಜಟಾಯುವಧವನ್ನು ಕೇಳಿ ಅರುಣಪುತ್ರನಾದ ಆ ಸಂಪಾತಿಯು, ಬಹಳ ದುಃಖಿತನಾಗಿ ಕೊನೆಗೆ ನೀನು ಈ ರಾವಣನ ಮನೆಯಲ್ಲಿರುವ ಸಂಗತಿಯನ್ನು ತಿಳಿಸಿಬಿಟ್ಟನು. ಅಂಗದನು ಮುಂತಾಗಿ ನಾವೆಲ್ಲರೂ ಕರ್ಣಾನಂದಕರವಾದ ಆ ಸಂಪಾತಿಯ ಮಾತನ್ನು ಕೇಳಿದೊಡನೆ ವೇಗದಿಂದ ಹೊರಟುಬಿಟ್ಟೆವು. ಆ ವಿಂಧ್ಯಪರ್ವತದಿಂದ ಸಮುದ್ರದ ಉತ್ತರತೀರಕ್ಕೆ ಬಂದೆವು. ನಮ್ಮ ಕಡೆಯ ವಾನರರೆಲ್ಲರೂ ನಿನ್ನನ್ನು ನೋಡುವ ಕುತೂಹಲದಿಂದ ಎಷ್ಟೋ ಉತ್ಸಾಹಗೊಂಡವರಾಗಿ, ಸಮುದ್ರತೀರದವರೆಗೂ ಓಡಿಬಂದರು. ಆ ಮಹಾಸಮುದ್ರವನ್ನು ನೋಡಿದಮೇಲೆ ಅವರೆಲ್ಲರಿಗೂ ಭಯವು ಹುಟ್ಟಿತು. ಅದನ್ನು ದಾಟುವ ಬಗೆಯೇನೆಂದು ಹಿಂದುಮುಂದು ತೋರದೆ ಚಿಂತಿಸುತ್ತಿರುವ ವಾನರಸೈನ್ಯವನ್ನು ನೋಡಿ, ನಾನು ಅವರನ್ನು ಸಮಾಧಾನಪಡಿಸಿ, ಅವರ ಭಯವನ್ನು ನೀಗಿಸಿ, ಆಗಲೇ ನೂರು ಯೋಜನದೂರವುಳ್ಳ ಈ ಸಮುದ್ರವನ್ನು ಹಾರಿಬಿಟ್ಟೆನು. ಆ ರಾತ್ರಿಯಲ್ಲಿಯೇ ನಾನು ರಾಕ್ಷಸರಿಂದ ನಿಬಿಡವಾದ ಈ ಲಂಕೆಯನ್ನು ಪ್ರವೇಶಿಸಿ ರಾವಣನನ್ನೂ ನೋಡಿದೆನು. ಇಲ್ಲಿ ದುಃಖಿತೆಯಾದ ನಿನ್ನನ್ನೂ ನೋಡಿದೆನು. ಎಲೆ ದೇವಿ! ಇದುವರೆಗೆ ನಡೆದಸಂಗತಿಯನ್ನು ನಿನಗೆ ಯಥಾಸ್ಥಿತವಾಗಿ ತಿಳಿಸಿರುವೆನು. ನಾನು ಅನ್ಯನಲ್ಲ. ರಾಮಾಜ್ಞೆಯಿಂದ ಬಂದ ದೂತನು. ಆದುದರಿಂದ ನನ್ನೊಡನೆ ವಿಶ್ವಾಸವಿಟ್ಟು ಮಾತಾಡು! ನಿನ್ನ ನಿಮಿತ್ತವಾಗಿಯೇ ನಾನು ರಾಮನಿಂದ ಕಳುಹಿಸಲ್ಪಟ್ಟ ದೂತನೆಂದು ತಿಳಿ! ನಾನು ಸುಗ್ರೀವನ ಮಂತ್ರಿಯು! ವಾಯುವಿನ ಮಗನು! ಶಸ್ತ್ರಧಾರಿಗಳೆಲ್ಲರಿಗೂ ಮೇಲೆನಿಸಿಕೊಂಡ ನಿನ್ನ ಪತಿಯಾದ ರಾಮನು ಕ್ಷೇಮದಿಂದಿರುವನು. ಅಣ್ಣನ ಸೇವೆಯಲ್ಲಿ ನಿರತನಾದ ಶುಭಲಕ್ಷಣಗಳುಳ್ಳ ಲಕ್ಷ್ಮಣನೂ ಸುಖದಿಂದಿರುವನು. ವೀರ್ಯವಂತನಾದ ನಿನ್ನ ಪತಿಯ ಹಿತಕ್ಕಾಗಿಯೇ ಸುಗ್ರೀವಾಜ್ಞೆಯಿಂದ ನಾನೊಬ್ಬನು ಮಾತ್ರ ಇಲ್ಲಿಗೆ ಬಂದಿರುವೆನು. ನಾನೊಬ್ಬನೇ ಅಸಹಾಯನಾಗಿ ನಿನ್ನ ದಾರಿಯನ್ನು ಹುಡುಕುತ್ತ ಕಾಮರೂಪಿಯಾಗಿ ಈ ದಕ್ಷಿಣದಿಕ್ಕನ್ನು ಸೇರಿದೆನು. ಈಗಲೂ ನಿನ್ನನ್ನು ಕಾಣದೆ ದುಃಖಿಸುತ್ತಿರುವ ವಾನರಸೈನ್ಯಕ್ಕೆ ಈ ಶುಭವೃತ್ತಾಂತವನ್ನು ತಿಳಿಸಿ, ಅವರ ದುಃಖವನ್ನು ಹೋಗಲಾಡಿಸುವ ಭಾಗ್ಯಕ್ಕೆ ಈಗ ನಾನೊಬ್ಬನೇ ಭಾಗಿಯಾದೆನು. ನಾನು ಸಮುದ್ರವನ್ನು ದಾಟಿ ಇಷ್ಟು ದೂರಕ್ಕೆ ಬಂದುದೂ ಈಗ ನನ್ನ ಭಾಗ್ಯವಶದಿಂದ ಸಾರ್ಥಕವಾಯಿತು. ನನ್ನ ಭಾಗ್ಯವಶದಿಂದಲೇ ನಿನ್ನನ್ನು ನೋಡುವ ಮಹಾಕೀರ್ತಿಗೂ ನಾನು ಭಾಗಿಯಾದೆನು. ವೀರ್ಯವಂತನಾದ ಶ್ರೀರಾಮನೂಕೂಡ ಶೀಘ್ರದಲ್ಲಿಯೇ ರಾವಣನನ್ನು ಅವನ ಬಂಧು

ಮಿತ್ರರೊಡನೆ ಕೊಂದು ನಿನ್ನನ್ನು ಪಡೆಯುವನು. ಎಲೆ ದೇವಿ! ಇನ್ನು ನನ್ನ ಜನ್ಮವೃತ್ತಾಂತವನ್ನೂ ನಿನಗೆ ತಿಳಿಸುವೆನು ಕೇಳು. ಪರ್ವತಗಳಲ್ಲಿ ಮೇಲೆನಿಸಿಕೊಂಡ [1] ಮಾಲ್ಯವಂತವೆಂಬ ಬೆಟ್ಟವೊಂದುಂಟು. ಅಲ್ಲಿದ್ದ ಕೇಸರಿಯೆಂಬ ವಾನರನು ಒಮ್ಮೆ ಅಲ್ಲಿಂದ ಗೋಕರ್ಣಪರ್ವತಕ್ಕೆ ಹೋದನು. ಆ ಮಹಾಕಪಿಯೇ ನನ್ನ ತಂದೆಯು. ಅವನು ಅಲ್ಲಿ ದೇವರ್ಷಿಗಳ ಆಜ್ಞೆಯಿಂದ ಪವಿತ್ರವಾದ ಒಂದು ಸಮುದ್ರತೀರಪ್ರದೇಶದಲ್ಲಿ ಶಂಬಸಾದನನೆಂಬ ರಾಕ್ಷಸನೊಬ್ಬನನ್ನು ಕೊಂದನು. ಹೀಗೆ ಕೇಸರಿಯು ಗೋಕರ್ಣಕ್ಕೆ ಹೋಗಿದ್ದಾಗ, ನಾನು ಅವನ ಪತ್ನಿಯಲ್ಲಿ ವಾಯುದೇವನ ಅನುಗ್ರಹದಿಂದ ಹುಟ್ಟಿದೆನು. ನಾನು ಹುಟ್ಟಿದಾಗ ನಡೆಸಿದ ಒಂದು ಕಾರ್ಯಕ್ಕೆ ಗುರುತಾಗಿಯೇ ನನಗೆ ಲೋಕದಲ್ಲಿ ಹನುಮಂತನೆಂಬ ಹೆಸರುಂಟಾಯಿತು. ಎಲೆ ವೈದೇಹಿ! ನಿನ್ನ ನಂಬಿಕೆಗಾಗಿ ನಾನು ನಿನ್ನ ಪತಿಯಾದ ರಾಮನ ಗುಣಗಳನ್ನು ಹೇಳಿದೆನಷ್ಟೆ? ಶೀಘ್ರದಲ್ಲಿಯೇ ಆ ರಾಮನು ನಿನ್ನನ್ನು ಇಲ್ಲಿಂದ ಕರೆದುಕೊಂಡು ಹೋಗುವನು!'' ಎಂದನು. ಹೀಗೆ ಹನುಮಂತನು ದುಃಖಿತೆಯಾದ ಸೀತೆಗೆ ತಕ್ಕ ಕಾರಣಗಳಿಂದ ನಂಬಿಕೆಯನ್ನು ಹುಟ್ಟಿಸಲು, ಅವನು ಹೇಳಿದ ಗುರುತುಗಳಲ್ಲಿ ಸೀತೆಗೂ ನಂಬಿಕೆಯು ತೋರಿತು. ಅವನು ರಾಮದೂತನೆಂದೇ ನಿಶ್ಚಯಿಸಿಕೊಂಡಳು. ಅವಳ ಹರ್ಷಕ್ಕೆ ಪಾರವೇ ಇಲ್ಲದಂತಾಯಿತು. ಅವಳ ಕಣ್ಣುಗಳಿಂದ ಆನಂದಬಾಷ್ಪವು ತುಳುಕುತಿತ್ತು. ಅಂದವಾದ ವಿಶಾಲನಯನಗಳಿಂದ ಕೂಡಿದ ಅವಳ ಮುಖವು ರಾಹುವಿನಿಂದ ಬಿಡಲ್ಪಟ್ಟ ಚಂದ್ರನಂತೆ ಕಳೆಗೊಂಡಿತು. ಆ ಹನುಮಂತನು ನಿಜವಾಗಿ ರಾಮದೂತನಾಗಿ ಬಂದ ಕಪಿಯೇ ಹೊರತು ಬೇರೆಯಲ್ಲವೆಂದೇ ನಿಶ್ಚಯಿಸಿಕೊಂಡಳು. ಆಗ ಹನುಮಂತನು ಹರ್ಷದಿಂದರಳಿದ ಮುಖವುಳ್ಳ ಆ ಸೀತೆಯನ್ನು ನೋಡಿ ''ಎಲೆ ದೇವಿ! ಇದ್ದ ಸಂಗತಿಯೆಲ್ಲವನ್ನೂ ತಿಳಿಸಿಬಿಟ್ಟೆನು. ಇನ್ನಾದರೂ ನೀನು ದುಃಖವನ್ನು ಬಿಟ್ಟು ಸಮಾಧಾನವನ್ನು ಹೊಂದು! ಮುಂದೆ ನಾನು ಮಾಡಬೇಕಾದುದೇನು? ನಿನ್ನ ಇಷ್ಟವು ಹೇಗೆ? ಬೇಗನೆ ಆಜ್ಞೆಯನ್ನು ಕೊಡು! ನಾನು ಹಿಂತಿರುಗಿ ಹೋಗಬೇಕಾಗಿರುವುದು. ಎಲೆ ದೇವಿ! ನನ್ನನ್ನು ಸಾಮಾನ್ಯನೆಂದು ತಿಳಿಯಬೇಡ!

---

1. ಇಲ್ಲಿ ''ಕಾರಂಜಂನಾಮ ವೈದೇಹಿ'' ಎಂದೂ, ''ಮಾಲ್ಯವಾನ್ನಾಮ ವೈದೇಹಿ'' ಎಂದೂ ಎರಡು ಪಾಠಗಳುಂಟು. ಮೊದಲನೆಯ ಪಾಠದಿಂದ ಕಾರಂಜ ಪರ್ವತವೊಂದುಂಟೆಂದು ಗ್ರಾಹ್ಯವು.

ಮಹರ್ಷಿಗಳ ಪ್ರೇರಣೆಯಿಂದ ನನ್ನ ತಂದೆಯಾದ ಕೇಸರಿಯು ಯುದ್ಧದಲ್ಲಿ ಶಂಬಸಾದನನೆಂಬ ರಾಕ್ಷಸನನ್ನು ಕೊಲ್ಲಲು, ಆ ಉಪಕಾರಕ್ಕೆ ಪ್ರತಿಫಲರೂಪವಾಗಿಯೇ ನಾನು ವಾಯುವಿನ ಅನುಗ್ರಹದಿಂದ ಅವನಿಗೆ ಹುಟ್ಟಿ, ಆ ವಾಯುವಿಗೆ ಸಮಾನವಾದ ಪ್ರಭಾವದಿಂದಲೇ ಕೂಡಿರುವೆನು" ಎಂದನು.

ಇಲ್ಲಿಗೆ ಮೂವತ್ತೈದನೆಯ ಸರ್ಗವು.

---

೦

ಹನುಮಂತನು ಸೀತೆಗೆ ರಾಮನ ಉಂಗುರವನ್ನು ಕೊಟ್ಟುದು. ಸೀತೆಯು ತನ್ನನ್ನು ರಾಮನು ಇದುವರೆಗೂ ಬಿಡಿಸಿಕೊಂಡು ಹೋಗದುದಕ್ಕೆ ಕಾರಣವೇನೆಂದು ಕೇಳಲು, ಹನುಮಂತನು ಅದಕ್ಕೆ ತಕ್ಕ ಕಾರಣವನ್ನು ಹೇಳಿದುದು.

ಮಹಾತೇಜಸ್ವಿಯಾಗಿಯೂ ವಾಯುಪುತ್ರನಾಗಿಯೂ ಇದ್ದ ಹನುಮಂತನು ಸೀತೆಗೆ ಇನ್ನೂ ಚೆನ್ನಾಗಿ ನಂಬಿಕೆಯನ್ನು ಹುಟ್ಟಿಸುವುದಕ್ಕಾಗಿ ತಿರುಗಿ ಆಕೆಯನ್ನು ಕುರಿತು ವಿನಯವಾಕ್ಯದಿಂದ "ಎಲೆ ಮಹಾಭಾಗೆ! ನಾನು ಮಹಾಧೀಮಂತನಾದ ಆ ರಾಮನಿಗೆ ದೂತನಾದ ವಾನರನು. ಇದೋ! ಇಲ್ಲಿ ರಾಮನ ಹೆಸರನ್ನು ಕೆತ್ತಿದ ಈ ಉಂಗುರವನ್ನು ನೋಡು! ನಿನ್ನ ನಂಬಿಕೆಗಾಗಿಯೇ ಮಹಾತ್ಮನಾದ ರಾಮನು ಇದನ್ನು ನನ್ನ ಕೈಗೆ ಕೊಟ್ಟು ಕಳುಹಿಸಿರುವನು. ಇನ್ನು ಸಮಾಧಾನಹೊಂದು! ನಿನಗೆ ಮಂಗಳವಾಗಲಿ! ಇನ್ನು ನಿನ್ನ ದುಃಖ ಫಲವು ತೀರಿತು!" ಎಂದನು. ಆಗ ಸೀತೆಯು ತನ್ನ ಪ್ರಾಣೇಶ್ವರನಿಗೆ ಹಸ್ತಭೂಷಣವಾಗಿದ್ದ ಉಂಗುರವನ್ನು ಕೈಗೆ ತೆಗೆದುಕೊಂಡು, ಬಾರಿಬಾರಿಗೂ ಅದನ್ನು ನೋಡುತ್ತಾ, ಆ ರಾಮನನ್ನೇ ತನ್ನ ಕೈಯಿಂದಾಲಿಂಗಿಸಿದಂತೆ ಪರಮಸಂತೋಷವನ್ನು ಹೊಂದಿದಳು. ಬಿಳುಪು ಮತ್ತು ಕೆಂಪುಬಣ್ಣವುಳ್ಳ ವಿಸ್ತಾರವಾದ ಕಣ್ಣುಗಳಿಂದ ಕೂಡಿದ ಅಂದವಾದ ಆ ವಿಶಾಲಾಕ್ಷಿಯ ಮುಖವು, ರಾಹುವಿನಿಂದ

ಬಿಡಲ್ಪಟ್ಟ ಚಂದ್ರನಂತೆ ಪ್ರಕಾಶಿಸಿತು. ಹೀಗೆ ತನ್ನ ಪತಿಯು ಹೇಳಿ ಕಳುಹಿಸಿದ ಕ್ಷೇಮವಾರ್ತೆಯನ್ನು ಕೇಳಿ ಸಂತೋಷಭರಿತಳಾದ ಆಕೆಯು, ಸ್ವಲ್ಪ ಲಜ್ಜಿತಳಾಗಿ, ಆ ಆಂಜನೇಯನನ್ನು ಪ್ರಿಯವಾಕ್ಯದಿಂದ ಮನ್ನಿಸುತ್ತ, ಆತನನ್ನು ಪ್ರಶಂಸೆ ಮಾಡತೊಡಗಿದಳು. "ಎಲೆ ವಾನರೋತ್ತಮನೆ! ಲೋಕದಲ್ಲಿ ನೀನೊಬ್ಬನೇ ಪರಾಕ್ರಮಶಾಲಿಯು! ನೀನೊಬ್ಬನೇ ಸಮರ್ಥನು! ನೀನೊಬ್ಬನೇ ಪ್ರಾಜ್ಞನು! ಇಂತಹ ಮಹಾಘೋರರಾಕ್ಷಸರಿಗೆಡೆಯಾದ ಈ ಲಂಕೆಯನ್ನು, ಯಾರನ್ನೂ ಲಕ್ಷ್ಯಮಾಡದೆ ನೀನೊಬ್ಬನೇ ಪ್ರವೇಶಿಸಿ ಬಂದಮೇಲೆ ನಿನ್ನ ಶಕ್ತಿಯನ್ನು ಹೇಳ ಬೇಕಾದುದೇನು? ಕ್ರೂರಮಕರಗಳಿಗಾಶ್ರಯವಾಗಿ, ನೂರುಯೋಜನದಗಲವುಳ್ಳ ಈ ಮಹಾಸಮುದ್ರವನ್ನೂ ಕೂಡ, ಒಂದು ಗೋಷ್ಪದದಂತೆಣಿಸಿ, ನಿರ್ಲಕ್ಷ್ಯವಾಗಿ ದಾಟಿಬಂದೆಯಲ್ಲಾ! ಲೋಕದಲ್ಲಿ ನಿನ್ನ ಪರಾಕ್ರಮವು ಪರಮಶ್ಲಾಘ್ಯವೆಂಬು ದನ್ನು ಹೇಳಬೇಕೆ? ಆ ರಾವಣನ ವಿಷಯದಲ್ಲಿಯೂ ಸ್ವಲ್ಪವಾದರೂ ಭಯ ವನ್ನಾಗಲಿ, ಬೆಜ್ಜರವನ್ನಾಗಲಿ ತೋರಿಸದೆ, ಧೈರ್ಯದಿಂದಿರುವ ನಿನ್ನನ್ನು ನೋಡಿ ದರೆ ಸಾಮಾನ್ಯಕಪಿಯೆಂದು ನನಗೆ ತೋರಲಿಲ್ಲ! ಎಲೆ ಕಪಿಶ್ರೇಷ್ಠನೆ! ನೀನು ರಾಮನ ¹ನೂತನನಮೇಲೆಯೇ ನನ್ನಲ್ಲಿಗೆ ಬಂದವನಾದಮೇಲೆ, ಧಾರಾಳವಾಗಿ ನಿನ್ನೊಡನೆ ಮಾತಾಡಬಹುದಲ್ಲವೆ? ನನಗೂ ನಿನ್ನಲ್ಲಿ ಸಂಪೂರ್ಣವಾದ ನಂಬಿ ಕೆಯು ಹುಟ್ಟಿರುವುದು. ಆ ರಾಮನು ಸಾಮಾನ್ಯನಲ್ಲ! ಮಹಾಧೀಮಂತನು! ಆತನು ಯಾವನನ್ನಾಗಲಿ ಪರೀಕ್ಷಿಸದೆಯೂ ಅವನ ಪರಾಕ್ರಮವನ್ನು ಚೆನ್ನಾಗಿ ತಿಳಿದುಕೊಳ್ಳದೆಯೂ, ದೂತ್ಯಕಾರ್ಯದಲ್ಲಿ ನಿಯಮಿಸಲಾರನು. ಅದರಲ್ಲಿಯೂ ವಿಶೇಷವಾಗಿ ನನ್ನಲ್ಲಿಗೆ ಸಾಮಾನ್ಯಜನರನ್ನು ಕಳುಹಿಸಲೇ ಆರನು. ಅಂತಹ ರಾಮನೇ ನಿನ್ನನ್ನು ಕಳುಹಿಸಿರುವುದರಿಂದ ನೀನು ಸಾಮಾನ್ಯನಲ್ಲವೆಂದೇ ತೋರು ವುದು. ಧರ್ಮಾತ್ಮನಾಗಿಯೂ, ಸತ್ಯಸಂಧನಾಗಿಯೂ ಇರುವ ಆ ರಾಮನು, ಮಹಾ

---

1. ಇಲ್ಲಿ "ಕುಶಲೀಯದಿ ಕಾಕುತ್ಸ್ಥಃ ಕಿಂನು ಸಾಗರಮೇಖಲಾಮ್। ಮಹೀಂ ದಹತಿ ಕೋಪೇನ ಯುಗಾನ್ತಾಗ್ನಿರಿವೋತ್ಥಿತಃ" ಎಂದು ಮೂಲವು. ವಿಶೇಷಾರ್ಥವು. (ಕಾಕುತ್ಸ್ಥಃ) ಬೇರೆಯವರಿಗುಂಟಾದ ಪರಿಭವವನ್ನು ಸಹಿಸಲಾರದ ಕಕುತ್ಸ್ಥಕುಲದಲ್ಲಿ ಹುಟ್ಟಿದಮಾತ್ರಕ್ಕೆ ಆ ರಾಮನಿಗೆ, ಬೇರೆಯವರ ಪರಿಭವವನ್ನು ಮಾತ್ರವೇ ಪರಿಹರಿಸ ಬೇಕೇಹೊರತು ತನ್ನ ಪರಿಭವವನ್ನು ತಾನು ಪರಿಹರಿಸಿಕೊಳ್ಳಬಾರದೆಂಬ ನಿಯಮ

ತೇಜಸ್ವಿಯೆನಿಸಿಕೊಂಡ ಸುಮಿತ್ರಾನಂದವರ್ಧನನಾದ ಲಕ್ಷ್ಮಣನೊಡಗೂಡಿ ಕ್ಷೇಮದಿಂದಿರುವುದೂ ನನ್ನ ಭಾಗ್ಯವೇ ಹೊರತು ಬೇರೆಯಲ್ಲ. ಎಲೆ ವಾನರೋತ್ತಮನೆ! ಕಕುತ್ಸ್ಥವಂಶಶಿಖಾಮಣಿಯಾದ ರಾಮನು ಹಾಗೆ ಕ್ಷೇಮದಿಂದಿದ್ದ ಪಕ್ಷದಲ್ಲಿ ರಾಕ್ಷಸನು ನನ್ನನ್ನು ಕದ್ದು ತಂದುದಕ್ಕಾಗಿ ಇದುವರೆಗೂ ಕೋಪಗೊಳ್ಳದಿರುವುದೇಕೆ? ಪ್ರಳಯಕಾಲಾಗ್ನಿಯಂತೆ ಕ್ರುದ್ಧನಾಗಿ, ಸಮುದ್ರಮೇಖಲೆಯಾದ ಈ ಸಮಸ್ತಭೂಮಿಯನ್ನೂ ದಹಿಸದೆ ಬಿಟ್ಟಿರುವುದೇಕೆ? ಎಲೆ ಕಪೀಂದ್ರನೆ! ರಾಮಲಕ್ಷ್ಮಣರೆಂಬ ಆ ಅಣ್ಣತಮ್ಮಂದಿರಿಬ್ಬರೂ ದೇವತೆಗಳನ್ನಾದರೂ ನಿಗ್ರಹಿಸುವುದಕ್ಕೆ ಶಕ್ತರೆಂಬುದರಲ್ಲಿ ಸಂದೇಹವಿಲ್ಲ. ಆದರೆ ನನ್ನ ದುಃಖಕ್ಕೆಮಾತ್ರ ಇನ್ನೂ ಪರಿಣಾಮಕಾಲವು ಬಂದೊದಗಲಿಲ್ಲವೆಂದೇ ಎಣಿಸಬೇಕಾಗಿದೆ. ಎಲೈ ಹನುಮಂತನೆ! ಅವೆಲ್ಲವೂ ಹಾಗಿರಲಿ! ನನ್ನ ವಿರಹದುಃಖದಿಂದ ರಾಮನು ಅಷ್ಟಾಗಿ ಕೃಶನಾಗಿಲ್ಲವಷ್ಟೆ? ನನಗಾಗಿ ವಿಶೇಷ ಸಂಕಟಪಡುವುದಿಲ್ಲವಷ್ಟೆ? ಪುರುಷೋತ್ತಮನಾದ ಆತನು ನನ್ನನ್ನು ಕರೆಸಿಕೊಳ್ಳುವುದಕ್ಕಾಗಿ ನಡೆಸಬೇಕಾದ ಮುಂದಿನ ಕಾರ್ಯಗಳನ್ನೂ ನಡೆಸುತ್ತಿರುವನಷ್ಟೆ? ಆ ರಾಜಕುಮಾರನು ನನ್ನ ವಿಷಯದಲ್ಲಿ ಅಷ್ಟಾಗಿ ದೈನ್ಯದಿಂದ ತತ್ತಳಿಸುವುದಿಲ್ಲವಷ್ಟೆ? ಆಗಾಗ ನಡೆಸಬೇಕಾದ ಕಾರ್ಯಗಳಲ್ಲಿಯೂ ಎಚ್ಚರಿಕೆಯನ್ನು ಬಿಟ್ಟಿಲ್ಲವಷ್ಟೆ? ಆಗಾಗ ನಡೆಸಬೇಕಾದ ಪುರುಷಪ್ರಯತ್ನಗಳನ್ನೂ ನಡೆಸುತ್ತಿರುವನಷ್ಟೆ? ಪರಂತಪನಾದ ಆ ರಾಮನು ಈಗಲೂ ೧ ತನ್ನ ಮಿತ್ರರಲ್ಲಿ ಸೌಹಾರ್ದವುಳ್ಳವನಾಗಿ, ಅವರಲ್ಲಿ ಸಾಮದಾನಗಳೆಂಬ ಎರಡು

---

ವುಂಟೇನು? (ಸಾಗರಮೇಖಲಾಂ ಮಹೀಂ) ಆ ರಾಮನು "ದ್ರವದ್ರವ್ಯರೂಪವಾದ ಸಮುದ್ರವನ್ನೂ, ಕಠಿಣದ್ರವ್ಯರೂಪವಾದ ಭೂಮಿಯನ್ನೂ ಕೆಡಿಸುವುದಕ್ಕಾಗಿ ಬೇರೆಬೇರೆ ಎರಡು ಬಾಣಗಳನ್ನೂ ಬಿಡಬೇಕಾಯಿತಲ್ಲಾ" ಎಂದು ಚಿಂತಿಸುವನೇ ಏನು? ಸಮುದ್ರಜಲವನ್ನೇ ತೈಲವನ್ನಾಗಿಮಾಡಿ ಆದರಲ್ಲಿಯೇ ಭೂಮಿಯನ್ನು ಹುರಿದುಬಿಡುವುದಕ್ಕೂ ಸಮರ್ಥನಲ್ಲವೆ? ಅಥವಾ ರಾಮನು ನನ್ನನ್ನಂತೂ ಹೀಗೆ ಅಲಕ್ಷ್ಯಮಾಡಿಬಿಟ್ಟಿರುವನು. ಭೂದೇವಿಯೂ ಆತನಿಗೆ ಪತ್ನಿಯಾದುದರಿಂದ, ಸಮುದ್ರರೂಪವಾದ ಅವಳ ಬಟ್ಟೆಯನ್ನಾದರೂ ಉಳಿಸಿ ಕಾಪಾಡುತ್ತಿರುವನೋ ಅಥವಾ ಅವಳನ್ನೂ ದಹಿಸಿಬಿಡುವನೋ?'' ಆದರೆ ಭೂಮಿಗೆ ಅನಾದಿಯಾಗಿ ಬಂದ ಈ ಮರ್ಯಾದೆಯನ್ನು ತಪ್ಪಿಸುವುದಕೆ ಅವನಿಂದತಾನೇ ಸಾಧ್ಯವೆ?'' ಎಂದರೆ, (ಯುಗಾಂತಾಗ್ನಿರಿವೋತ್ಥಿತಃ) ಆತನ ಕೋಪವು ಪ್ರಳಯಕಾಲಾಗ್ನಿಯೇ ಹೊರತು ಬೇರೆಯಲ್ಲ! ಭೂಮಿಗೆ ಅನಾದಿಸಿದ್ಧವಾದ ಮರ್ಯಾದೆಯನ್ನೂ ಕಾಲಾಗ್ನಿಯು ಕೆಡಿಸುವಂತೆ ಅವನಿಗೆ ಯಾವುದೂ ತಡೆಯಿಲ್ಲವೆಂದು ಭಾವವು.

1. ಇದರಿಂದ ಮಿತ್ರರಲ್ಲಿ ಭೇದದಂಡಗಳನ್ನೂ, ಶತ್ರುಗಳಲ್ಲಿ ಸಾಮವನ್ನೂ ಯಾವಾಗಲೂ ಪ್ರಯೋಗಿಸಬಾರದೆಂದು ಸೂಚಿತವು.

ಪಾಯಗಳನ್ನೂ ಕ್ರಮವಾಗಿ ನಡೆಸುತ್ತಿರುವನಷ್ಟೆ? ಶತ್ರುಗಳ ವಿಷಯದಲ್ಲಿ
ದಾನಭೇದದಂಡಗಳೆಂಬ ಮೂರುಪಾಯಗಳನ್ನೂ ಕಾಲೋಚಿತವಾಗಿ ಪ್ರಯೋ
ಗಿಸುವನಷ್ಟೆ? ಮಿತ್ರರಿಗೆ ಆಗಾಗ ಉಪಕರಿಸುತ್ತಿರುವನಷ್ಟೆ? ಅಯಾಮಿತ್ರರಿಗೆ
ತಕ್ಕಂತೆ ಸೌಹಾರ್ದವನ್ನು ತೋರಿಸುತ್ತಿರುವನಷ್ಟೆ? ಆಗಾಗ ತಕ್ಕಮಿತ್ರರನ್ನು
ಹೊಸದಾಗಿಯೂ ಸಂಪಾದಿಸುತ್ತಿರುವನಷ್ಟೆ? ತನ್ನ ಮಿತ್ರರಿಂದ ತಾನು ಪುರಸ್ಕರಿ
ಸಲ್ಪಡುವನಷ್ಟೆ? ತಕ್ಕ ಮಿತ್ರರನ್ನೇ ತನ್ನ ಸಹಾಯಕ್ಕಿಟ್ಟುಕೊಂಡಿರುವನಷ್ಟೆ?
ಆ ರಾಜಕುಮಾರನು ದೇವತಾನುಗ್ರಹವನ್ನು ಸಂಪಾದಿಸುವುದಕ್ಕಾಗಿ ಇಷ್ಟ
ದೇವತಾಪ್ರಾರ್ಥನೆಯನ್ನೂ ಮಾಡುತ್ತಿರುವನಷ್ಟೆ? ಪುರುಷಪ್ರಯತ್ನವನ್ನೂ
ದೈವಾನುಕೂಲ್ಯವನ್ನೂ ಅನುಸರಿಸಿ ನಡೆಯುತ್ತಿರುವನಷ್ಟೆ? ಬಹುದಿನದಿಂದಗಲಿದ
ನನ್ನಲ್ಲಿ ಇನ್ನೂ ಆತನಿಗೆ ಸ್ನೇಹವು ತಪ್ಪಿಲ್ಲವಷ್ಟೆ? ಎಲೆ ವಾನರೋತ್ತಮನೆ!
ಇನ್ನು ಮೇಲಾದರೂ ಆತನು ನನ್ನನ್ನು ಈ ದುಃಖದಿಂದ ಬಿಡಿಸಬಹುದಷ್ಟೆ? ಆ
ರಾಮನಾದರೋ ಯಾವಾಗಲೂ ಸುಖಾನುಭವಕ್ಕೇ ಅರ್ಹನಾದವನು! ಎಂದಿಗೂ
ದುಃಖವನ್ನನುಭವಿಸುವುದಕ್ಕೆ ತಕ್ಕವನಲ್ಲ. ಅಂತಹ ರಾಮನಿಗೂ ಈಗ ಈ ಮಹಾ
ದುಃಖವು ಬಂದೊದಗಿತು. ಇದಕ್ಕಾಗಿ ಆತನು ಬಹಳವಾಗಿ ಕೃಶಿಸಿಲ್ಲವಷ್ಟೆ?
ಆಗಾಗ ನನ್ನ ಪ್ರಿಯನು, ತನ್ನ ತಾಯಿಯಾದ ಕೌಸಲ್ಯೆಯ ಕ್ಷೇಮವನ್ನೂ
ಸುಮಿತ್ರೆಯ ಕುಶಲವನ್ನೂ, ಭರತನ ಶ್ರೇಯಸ್ಸನ್ನೂ ಕೇಳಿ ತಿಳಿಯುತ್ತಿರುವ
ನಷ್ಟೆ? ನನ್ನ ವಿಷಯವಾಗಿ ದುಃಖಿಸುವುದರಿಂದ ಆತನು ಮಾನ್ಯನಾಗಿರುವ
ನಷ್ಟೆ? ಕಾರ್ಯವನ್ನೇ ಮರೆತು, ಕಾರ್ಯಾಂತರದಲ್ಲಿ ನಿರತನಾಗಿಲ್ಲವಷ್ಟೆ? ನನ್ನನ್ನು
ಆತನು ಈ ಮಹಾವಿಪತ್ತಿನಿಂದ ತಪ್ಪಿಸಬಹುದಷ್ಟೆ? ನನ್ನ ಪ್ರಿಯನಿಗುಂ
ಟಾದ ಈಗಿನ ಕಷ್ಟದಶೆಯನ್ನು ನೋಡಿ ಭರತನು ತನ್ನ ಅಣ್ಣನಾದ
ರಾಮನಲ್ಲಿ ಸಹೋದರವಾತ್ಸಲ್ಯವನ್ನಿಟ್ಟು, ತನ್ನಲ್ಲಿರುವ 'ಸೈನ್ಯಗಳಲ್ಲಿ ಒಂದು
ಕ್ಷೋಹಿಣೀಸೈನ್ಯವನ್ನಾದರೂ, ಸಮರ್ಥರಾದ ಮಂತ್ರಿಗಳ ರಕ್ಷಣೆಯಲ್ಲಿ
ನನಗಾಗಿ ಇಲ್ಲಿಗೆ ಕಳುಹಿಸಿಕೊಡಬಹುದಷ್ಟೆ? ವಾನರಾಧಿಪತಿಯಾದ ಶ್ರೀಮಂತ
ನಾದ ಸುಗ್ರೀವನಾದರೂ, ದಂತನಖಗಳನ್ನೇ ಆಯುಧವಾಗಿ ಉಳ್ಳ ಕೆಲವು
ಕಪಿವೀರರೊಡನೆ ಸೇರಿ, ನನಗಾಗಿ ಇಲ್ಲಿಗೆ ಬರಬಹುದಷ್ಟೆ? ಶೂರನಾಗಿಯೂ,
ಸಮಸ್ತಶಸ್ತ್ರಾಸ್ತ್ರಗಳನ್ನು ತಿಳಿದವನಾಗಿಯೂ ಇರುವ ಸುಮಿತ್ರಾನಂದವರ್ಧನ
ನಾದ ಆ ಲಕ್ಷ್ಮಣನೂ, ನನಗಾಗಿ ಇಲ್ಲಿಗೆ ಬಂದು ತನ್ನ ಬಾಣಸಮೂಹ

ಗಳಿಂದ ಇಲ್ಲಿನ ರಾಕ್ಷಸರನ್ನು ಧ್ವಂಸಮಾಡಬಹುದಷ್ಟೆ ? ಎಲೈ ಆಂಜನೇಯನೆ! ಭಯಂಕರವಾಗಿ ಜ್ವಲಿಸುತ್ತಿರುವ ಆ ರಾಮನ ದಿವ್ಯಾಸ್ತ್ರದಿಂದ, ರಾವಣನು ಯುದ್ಧದಲ್ಲಿ ತನ್ನ ಮಿತ್ರಬಂಧುಗಳೊಡನೆ ಹತನಾಗಿ ಬಿದ್ದಿರುವುದನ್ನು ಶೀಘ್ರದಲ್ಲಿಯೇ ನನ್ನ ಕಣ್ಣಾರೆ ನಾನು ನೋಡಬಹುದಷ್ಟೆ ? ಬಂಗಾರದ ಬಣ್ಣವುಳ್ಳದಾಗಿಯೂ, ಕಮಲದಂತೆ ಸುವಾಸನೆಯುಳ್ಳದಾಗಿಯೂ ಇರುವ ಆ ರಾಮನ ಮುಖವು, ಕೊಳದಲ್ಲಿ ನೀರೊಣಗಿದ ಮೇಲೆ ಬಿಸಿಲಿನಿಂದ ಕಂದಿದ ತಾವರೆಯಂತೆ ನನ್ನ ವಿರಹದುಃಖದಿಂದ, ಬಹಳವಾಗಿ ಬಾಡಿಲ್ಲವಷ್ಟೆ ? [1] ಯಾವನು ಮೊದಲು ಧರ್ಮವನ್ನುದ್ದೇಶಿಸಿ, ಕೈಗೆ ಬಂದ ರಾಜ್ಯವನ್ನು ತೊರೆದಾಗಲೂ, ಕಾಡಿನಲ್ಲಿ ಅಲೆಯುವಾಗಲೂ, ಅತಿ ಕೋಮಲವಾದ ಮೈಯುಳ್ಳ ನನ್ನನ್ನು ಕಾಲುನಡೆಯಿಂದಲೇ ಸುತ್ತಿಸುವಾಗಲೂ ಸ್ವಲ್ಪವಾದರೂ ಚಿಂತೆಯನ್ನಾಗಲಿ, ಭಯವನ್ನಾಗಲಿ, ದುಃಖವನ್ನಾಗಲಿ, ತೋರಿಸದೆ ಧೈರ್ಯದಿಂದಿದ್ದನೋ ಅಂತಹ ಮಹಾಧೀರನಾದ ರಾಮನು ಈಗ ನನ್ನನ್ನಗಲಿದಮಾತ್ರಕ್ಕೆ ತನ್ನ ಧೈರ್ಯವನ್ನು ಬಿಟ್ಟಿಲ್ಲವಷ್ಟೆ ? ಎಲೈ ರಾಮದೂತನೆ! ಆ ನನ್ನ ಪ್ರಾಣಪ್ರಿಯನಾದ ರಾಮನನ್ನಗಲಿಯೂ, ನಾನು ಹೀಗೆ ಪ್ರಾಣವನ್ನಿಟ್ಟಿರುವೆನೆಂದು ನನ್ನಲ್ಲಿ ನೀನು ತಪ್ಪೆಣಿಸಬೇಡ ? [2] ರಾಮನಿಗೆ ಅವನ ತಾಯಿಯಲ್ಲಿಯಾಗಲಿ, ಅವನ ತಂದೆಯಲ್ಲಿಯಾಗಲಿ, ಬೇರೆ ಯಾವ ಬಂಧುಗಳಲ್ಲಿಯಾಗಲಿ, ನನ್ನಲ್ಲಿರುವ ಪ್ರೀತಿಗಿಂತಲೂ ಹೆಚ್ಚುಪ್ರೀತಿಯಿರದು ! ಕೊನೆಗೆ ನನ್ನಲ್ಲಿರುವ ಸ್ನೇಹದಷ್ಟಾದರೂ ಸ್ನೇಹವು ಆತನಿಗೆ ಬೇರೊಬ್ಬರಲ್ಲಿರದು. ಅವನ ಸಮಸ್ತಪ್ರೀತಿಗೂ ನಾನೇ ಮುಖ್ಯಾಶ್ರಯವಾಗಿರುವೆನು. ಆದುದರಿಂದ ಅವನಿಗೆ ಇಷ್ಟು ಪ್ರೇಮಾಸ್ಪದಳಾಗಿರುವ ನಾನು ಇಲ್ಲಿ ಪ್ರಾಣವನ್ನು ಬಿಟ್ಟರೆ, ಆ ರಾಮನು ಎಷ್ಟುಮಾತ್ರವೂ ಜೀವಿಸಲಾರನು. ಆದುದರಿಂದ ಆ ನನ್ನ ಪ್ರಿಯನು ನನ್ನನ್ನು ಕರೆಸಿಕೊಳ್ಳುವುದಕ್ಕಾಗಿ ಉದ್ಯೋಗಿಸುತ್ತಿರುವ ಪ್ರಿಯವಾರ್ತೆಯು ನನಗೆ ತಿಳಿಯುವ

---

1. ಇಲ್ಲಿ ಕ್ರಮವಾಗಿ ರಾಜ್ಯತ್ಯಾಗದಿಂದ ಚಿಂತೆ, ಅರಣ್ಯಸಂಚಾರದಿಂದ ಭೀತಿ, ತಾನು ಕಾಲ್ನಡೆಯಿಂದ ಬರುವುದನ್ನು ಕಾಣುವುದರಿಂದ ದುಃಖವೆಂದೂ ತಿಳಿಯಬೇಕು.

2. ಇಲ್ಲಿ "ನಚಾಸ್ಯಮಾತಾನಪಿತಾಚ ನಾನ್ಯಸ್ಸ್ನೇಹಾದ್ವಿಶಿಷ್ಟೋಽಸ್ತಿ ಮಯಾಸಮೋವಾ। ತಾವತ್ತ್ವಹಂ ದೂತ ಜಿಜೀವಿಷೇಯಂ। ಯಾವತ್ಪ್ರವೃತ್ತಿಂ ಶೃಣುಯಾಂ ಪ್ರಿಯಸ್ಯ।" ಎಂದು ಮೂಲವು. ವಿಶೇಷಾರ್ಥವು. ಈ ಶ್ಲೋಕದಲ್ಲಿ ಸೀತೆಯು ಪ್ರಣಯರೋಷದಿಂದ ಹೇಳಿದಂತೆ ಒಂದರ್ಥವೂ, ಪ್ರಣಯರೋಷವಿಲ್ಲದೆ ಸೌಹಾರ್ದದಿಂದ ಹೇಳಿದಂತೆ ಬೇರೊಂದರ್ಥವೂ ಸೂಚಿತವಾಗುವುದು. ಪ್ರಣಯರೋಷಪಕ್ಷದಲ್ಲಿ :—(ದೂತ)

ವರೆಗೂ ಬದುಕಿರಬೇಕೆಂಬುದೇ ನನ್ನ ಕೋರಿಕೆ" ಎಂದಳು. [1] ಹೀಗೆ ಸೀತೆಯು ಆ ವಾನರೇಂದ್ರನೊಡನೆ ಅರ್ಥಪಕ್ತಾಗಿಯೂ, ಮಧುರವಾಗಿಯೂ ಇರುವ ಮಾತು ಗಳನ್ನಾಡಿ, ತಿರುಗಿ ಆ ಆಂಜನೇಯನ ಮುಖದಿಂದ, ಶ್ರೀರಾಮವೃತ್ತಾಂತ ಹೊಡಗೂಡಿದ ಕಿವಿಗಿಂಪಾದ ಪ್ರತ್ಯುತ್ತರವನ್ನು ಕೇಳಬೇಕೆಂದು ತನ್ನ ಮಾತನ್ನು ನಿಲ್ಲಿಸಿ ಸುಮ್ಮನಿದ್ದಳು. ಭಯಂಕರಪರಾಕ್ರಮವುಳ್ಳ ಆಂಜನೇಯನು, ಸೀತೆಯ ಮಾತನ್ನು ಕೇಳಿ ಅವಳ ಮುಂದೆ ತಲೆಯ ಮೇಲೆ ಕೈಜೋಡಿಸಿ ನಿಂತು, ಅವಳಿಗೆ ಪ್ರತ್ಯುತ್ತರವನ್ನು ಕೊಡುವನು. "ಎಲೆ ಕಮಲಾಕ್ಷಿ! ಇನ್ನೂ ಆ ರಾಮನು ನೀನಿಲ್ಲಿರುವುದನ್ನು ಕಾಣನು. ಆದರಿಂದಲೇ ಆತನು ಇದುವರೆಗೆ ಸುಮ್ಮನಿರುವನು.

---

ಇದುವರೆಗೆ ಸೀತೆಯು "ವಾನರಾ" ಎಂದು ಸಂಬೋಧಿಸುತ್ತಿದ್ದು, ಈಗ ದೂತಶಬ್ದ ದಿಂದ ಸಂಬೋಧಿಸಿದುದರಿಂದಲೇ, ಆಕೆಗೆ ರಾಮನ ಮೇಲಿರುವ ಪ್ರಣಯರೋಷವು ಅವನ ದೂತನವರೆಗೂ ವ್ಯಾಪಿಸಿರುವುದಾಗಿ ಸೂಚಿತವು. ಇದರಿಂದ ಸೀತೆಯು ಆ ಹನುಮಂತ ನನ್ನು ಕುರಿತು, "ರಾಮನಿಂದ ಕಳುಹಿಸಿಸಲ್ಪಟ್ಟ ದೂತನಾದುದರಿಂದಲೇ ನೀನು ಅವನಿಗನು ಕೂಲವಾಗಿ ಮಾತಾಡುತ್ತಿರುವೆ" ಎಂದು ಹೇಳುವುದಾಗಿ ಭಾವವು. "ಎಲೈ ರಾಮ ದೂತನೆ! ನಿನ್ನ ಪ್ರಭುವಾದ ಆ ರಾಮನಿಗೆ ತಾಯಾಗಲಿ, ತಂದೆಯಾಗಲಿ, ಬೇರೆಯಾವ ಬಂಧುವೇ ಆಗಲಿ ಪ್ರೀತಿಗೆ ಪಾತ್ರರಲ್ಲ! ಹೊನೆಗೆ ನನ್ನನ್ನು ನೋಡುವಂತೆಯೂ ಬೇರೆ ಬಂಧುಗಳನ್ನು ದಾಕ್ಷಿಣ್ಯಬುದ್ಧಿಯಿಂದ ನೋಡುವವನಲ್ಲ. ನನ್ನನ್ನೇ ಹೀಗೆ ಗೋಳಾಡಿಸುವವು ದಕ್ಕಾಗಿಸ್ತಿರಾಜ್ಯವನ್ನು ಬಿಟ್ಟುಬಂದಿರುವಾಗ ಯಾವ ಬಂಧುಗಳಲ್ಲಿಯೂ ಸ್ವಲ್ಪವಾದರೂ ದಾಕ್ಷಿಣ್ಯಬುದ್ಧಿಯಿಲ್ಲದ, ಆ ರಾಮನು, ಪಿತೃವಚನಪರಿಪಾಲನಾರ್ಥವಾಗಿಯೇ ಕಾಡಿಗೆ ಹೊರಟುಬಂದನೆಂಬುದು ಸುಳ್ಳು! ಹೇಗಾದರೂ ಆಗಲಿ! ನಾನು ಅವನಿಗೆ ಪರತಂತ್ರ ಳಾಗಿರುವುದರಿಂದ ನನ್ನ ಈ ದೇಹವೂ ಅವನಿಗೆ ಸೇರಿದುದು. ಅದನ್ನು ಬಿಡುವುದಕ್ಕೆ ನಾನು ಸ್ವತಂತ್ರಳಲ್ಲ. ಅವನು ಬರುವವರೆಗೂ ನಾನು ಈ ದೇಹವನ್ನು ಕಾಪಾಡಿಟ್ಟಿರಬೇಕು. ಆದುದರಿಂದಲೇ ನಾನು ಈಗಲೂ ಈ ದೇಹವನ್ನು ಧರಿಸಿರುವೆನೇ ಹೊರತು ಬೇರೆಯಲ್ಲ. ಅವನು ಬಂದು ನನ್ನನ್ನು ಕರೆದುಕೊಂಡು ಹೋಗುವನೆಂಬ ಸುದ್ಧಿಯನ್ನು ಕೇಳುವವರೆ ಗಾದರೂ ನಾನು ಬದುಕಿರಲಪೇಕ್ಷಿಸುವೆನು" ಎಂದು ಭಾವವು. ಪ್ರಣಯರೋಷಾಭಾವ ಪಕ್ಷದಲ್ಲಿ ಮೇಲೆ ಸೂಚಿಸಲ್ಪಟ್ಟಿರುವ ಅರ್ಥವೇ ಗ್ರಾಹ್ಯವು.

1. ಇಲ್ಲಿ "ಇತೀವ ದೇವೀ ವಚನಂ ಮಹಾರ್ಥಂ ತಂ ವಾನರೇಂದ್ರಂ ಮಧುರಾರ್ಥ ಮುಕ್ತ್ವಾ। ಶ್ರೋತುಂ ಪುನಸ್ತಸ್ಯ ವಚೋಭಿರಾಮಂ ರಾಮಾರ್ಥಯುಕ್ತಂ ವಿರರಾಮ

ಪೂರ್ವದಲ್ಲಿ ಇಂದ್ರನು ಹ್ಲಾದನೆಂಬ ರಾಕ್ಷಸನ ಸೆರೆಯಲ್ಲಿ ಸಿಕ್ಕಿದ ಶಚಿಯನ್ನು ಕಾಣದುದಕ್ಕಾಗಿ, ಬಹುದಿನಗಳವರೆಗೆ ಸುಮ್ಮನೆ ಕಾದಿದ್ದಂತೆ, ರಾಮನು ನೀನಿರುವ ಸ್ಥಳವನ್ನು ತಿಳಿಯದುದಕ್ಕಾಗಿಯೇ ಸುಮ್ಮನಿರುವನು. ನಿನ್ನನ್ನು ಇದು ವರೆಗೂ ಕರೆಸಿಕೊಳ್ಳದಿರುವುದಕ್ಕೆ ಇದೇ ಕಾರಣವು. ನನ್ನಿಂದ ನಿನ್ನ ವೃತ್ತಾಂತ ವನ್ನು ಕೇಳಿದಕ್ಷಣವೇ, ಆ ರಾಮನು, ಅನೇಕ ವಾನರಭಲ್ಲೂಕವೀರರಿಂದ ತುಂಬಿದ ದೊಡ್ಡ ಸೇನೆಯೊಡನೆ ಅಕ್ಷೋಭ್ಯವಾದ ಈ ಮಹಾಸಾಗರವನ್ನೂ ತನ್ನ ಕ್ರೂರಬಾಣಗಳಿಂದ ಬಂಧಿಸಿ, ಈ ಲಂಕೆಗೆ ಬಂದು, ಇಲ್ಲಿ ರಾಕ್ಷಸರ ಹೆಸರೇ ಇಲ್ಲದಂತೆ ಮಾಡಿಬಿಡುವನು. ಈ ನಡುವೆ ರಾಮನಿಗೆ ಮೃತ್ಯುವಾಗಲಿ, ದೇವತೆ ಗಳಾಗಲಿ, ಅಸುರರಾಗಲಿ ಅಡ್ಡಲಾಗಿ ಬಂದು ತಡೆದರೂ ಅವರನ್ನೂ ಹುಟ್ಟಡಗಿಸಿ ಬಿಡುವನೆಂದು ತಿಳಿ! ಎಲೆ ಪೂಜ್ಯಳೆ! ರಾಮನು ನಿನ್ನನ್ನು ಕಾಣದುದಕ್ಕಾಗಿ ದುಃಖಸಮುದ್ರದಲ್ಲಿಯೇ ಮುಳುಗಿ ಹೋಗಿರುವನು. ಸಿಂಹದಿಂದ ಪೀಡಿತವಾದ ಆನೆಯಂತೆ ಸುಖವೆಂಬುದನ್ನೇ ಕಾಣನು ಎಲೆ ದೇವಿ! ನೀನು ಶೀಘ್ರದಲ್ಲಿಯೇ ಅಂದವಾದ ಕಣ್ಣುಗಳುಳ್ಳುದಾಗಿಯೂ, ತೊಂಡೆಯ ಹಣ್ಣಿನಂತೆ ತುಟಿಯುಳ್ಳ

---

ರಾಮಾ ||" ಎಂದು ಮೂಲವು. ವಿಶೇಷಾರ್ಥವು:—(ಇತೀವ) ಇಲ್ಲಿ ವಾಲ್ಮೀಕಿಯು ಮೊದಲು ಪ್ರಣಯಕೋಪದಿಂದ ಸೀತೆಯು ಹೇಳಿದ ಕೆಲವು ವಾಕ್ಯಗಳನ್ನು ಸ್ಪಷ್ಟವಾಗಿ ಹೇಳಿ, ಈಗ ಪ್ರಣಯಧಾರಾಸೂಕ್ಷ್ಮಕ್ಕೆ ಪರಿಚಿತನಲ್ಲವಾದುದರಿಂದ, ಅದನ್ನು ಹೇಳಲ ಶಕ್ತನಾಗಿ, (ಇತೀವ) ಹೀಗೆಯೇ" ಎಂದು ಅದನ್ನು ಸಾಮಾನ್ಯವಾಗಿ ಸೂಚಿಸಿ ಅಷ್ಟ ರಲ್ಲಿಯೇ ಬಿಟ್ಟುದಾಗಿ ಭಾವವು. ಇದಕ್ಕಾಗಿಯೇ (ದೇವಿ), ಅಂತಃಪುರದವಳು. ಆ ವೃತ್ತಾಂ ತವು ಇತರರಿಗೆ ತಿಳಿಯಲು ಶಕ್ಯವಲ್ಲವಲ್ಲವೇ? (ವಚನಂ ಮಹಾರ್ಥಂ) ಅಂತರಂಗರಾದ ವರಿಗೂ ತಿಳಿಯಲಸಾಧ್ಯವಾದ ಮಾತೆಂದು ಭಾವವು. (ವಾನರೇಂದ್ರಂ) ವಾನರೋತ್ತಮ ನಾದ ಹನುಮಂತನನ್ನು ಕುರಿತು, ಇಲ್ಲಿ ರಾಮವಿಷಯವಾಗಿ ಹನುಮಂತನಂತೆ ಕಾರ್ಯನಿರ್ವಾ ಹಕನು ಬೇರೊಬ್ಬನೂ ಇಲ್ಲವೆಂಬುದಕ್ಕಾಗಿ ವಾನರೇಂದ್ರನೆಂಬ ಶಬ್ದವು. ಅಥವಾ ಸುಗ್ರೀ ವನು ಶೇಷತ್ವಕಾಷ್ಠೆಯುಳ್ಳವನಾಗಿದ್ದರೂ, ಪಾರತಂತ್ರ್ಯಕಾಷ್ಠೆಯಲ್ಲಿ ಹನುಮಂತನು ಅವನಿಗಿಂತಲೂ ಪ್ರಧಾನನಾದುದರಿಂದ ವಾನರೇಂದ್ರಶಬ್ದವು. (ಮಧುರಾರ್ಥಂ) ಆದರಿಸಿ ನಡೆಸುವುದಕ್ಕೆ ಯೋಗ್ಯವಾದ ವಿಷಯವುಳ್ಳ ಮಾತನ್ನು (ಉಕ್ತ್ವಾ) ಹೇಳಿ, (ಶ್ರೋತುಂ ಪುನಸ್ತಸ್ಯ ವಚೋಭಿರಾಮಂ) ಸತ್ತವರನ್ನೂ ಬದುಕಿಸುವಂತಿರುವ ಅತನ ಇಂಪಾದ ಮಾತನ್ನು ಪುನಃ ಕೇಳಬೇಕೆಂಬ ಉದ್ದೇಶದಿಂದ, (ವಿರರಾಮ) ಸುಮ್ಮನಾದಳು. ಸ್ವಾಮಿ ವಾರ್ತೆಯನ್ನು ಹೇಳುವಾಗ ಅಡ್ಡಮಾತುಗಳನ್ನಾಡುವುದು ಯುಕ್ತವಲ್ಲದುದರಿಂದ ತಾನು ಸುಮ್ಮನಾಗಿ, ಹನುಮಂತನು ಹೇಳುವ ವಾರ್ತೆಗೆ ಅವಕಾಶವನ್ನು ಕೊಟ್ಟಳೆಂದು ಭಾವವು.

ದಾಗಿಯೂ ಮನೋಹರಗಳಾದ ಕುಂಡಲಗಳಿಂದ ಶೋಭಿತವಾಗಿಯೂ, ಪೂರ್ಣ ಚಂದ್ರನಿಗೆಣೆಯಾಗಿಯೂ ಇರುವ ಆ ಶ್ರೀರಾಮನ ಮುಖವನ್ನು ನೋಡುವುದರಲ್ಲಿ ಸಂದೇಹವಿಲ್ಲ! ಈ ವಿಷಯದಲ್ಲಿ ನಾನು ಇದೋ! ನನಗೆ ಜೀವನಾಧಾರವಾದ ಮಲಯಪರ್ವತದಮೇಲೆಯೂ, ವಿಂಧ್ಯಪರ್ವತದಮೇಲೆಯೂ, ಮೇರು ಮಂದರದ ದುರ್ದರಪರ್ವತಗಳಮೇಲೆಯೂ, ನನಗೆ ಆಹಾರವಾದ ಕಂದಮೂಲಫಲಗಳ ಮೇಲೆಯೂ ಆಣೆಯಿಟ್ಟು ಹೇಳುವೆನು. ಎಲೆ ವೈದೇಹಿ! ಇನ್ನು ಶೀಘ್ರದಲ್ಲಿಯೇ ನೀನು 1 ನಾಕಪೃಷ್ಠದಮೇಲಿರುವ ದೇವೇಂದ್ರನಂತೆ ಈ ಪ್ರಸ್ರವಣಪರ್ವತದ ಮೇಲೆ ಕುಳಿತ ರಾಮನನ್ನು ನೋಡುವೆ! ಎಲೆ ದೇವಿ! ರಾಮನು ನಿನ್ನನ್ನಗಲಿದಂದಿನಿಂದ ಮಹಾವ್ಯಸನಪೀಡಿತನಾಗಿ ಮಾಂಸವನ್ನೂ ಭುಜಿಸನು. ಮದ್ಯವನ್ನೂ ಸೇವಿಸನು. ಅತನು ಪ್ರತಿದಿನವೂ ಸಾಯಂಕಾಲದಲ್ಲಿ ಕಾಡಿನಲ್ಲಿ ಬೆಳೆಯುವ ವಾನಪ್ರಸ್ಥಯೋಗ್ಯವಾದ ಫಲಮೂಲಗಳನ್ನು ಸಂಗ್ರಹಿಸಿ, ಶರೀರ ಧಾರಣೆಗೆ ಬೇಕಾದಷ್ಟನ್ನುಮಾತ್ರವೇ ಭುಜಿಸುತ್ತಿರುವನು. ಆ ರಾಮನ ಮನಸ್ಸೆಲ್ಲವೂ ನಿನ್ನಲ್ಲಿಯೇ ಲಯಿಸಿಹೋಗಿರುವುದು. ಆದುದರಿಂದ ಅತನು ತನ್ನ ಮೈಮೇಲೆ ಬಂದುಬೀಳುವ ಕಾಡುನೊಣಗಳನ್ನಾಗಲಿ, ಸೊಳ್ಳೆಗಳನ್ನಾಗಲಿ, ಇತರ ಕೀಟಗಳನ್ನಾಗಲಿ, ಕೊನೆಗೆ ಹಾವುಗಳನ್ನಾಗಲಿ ಅಟ್ಟದೆ ದುಃಖಪರವಶನಾಗಿರುವನು. ಯಾವಾಗಲೂ ನಿನ್ನನ್ನೇ ಧ್ಯಾನಿಸುತ್ತಿರುವನು. ಯಾವಾಗಲೂ ನಿನ್ನ ವಿರಹದುಃಖದಲ್ಲಿಯೇ ತತ್ತಳಿಸುತ್ತಿರುವನು. ನಿನ್ನ ವಿಷಯವಾಗಿ ಕಾಮವಶನಾದ ಆತನು, ನಿನ್ನನ್ನುಹೊರತು ಬೇರೆಯಾವ ವಿಷಯವನ್ನೂ ಸ್ವಲ್ಪಮಾತ್ರವೂ ಚಿಂತಿಸುವನಲ್ಲ. ನಿನ್ನನ್ನಗಲಿದಂದಿನಿಂದ ಆತನಿಗೆ ನಿದ್ರೆಯೆಂಬುದೇ ಇಲ್ಲ. ಆಕಸ್ಮಿಕವಾಗಿ ನಿದ್ರೆಹೋದರೂ ಆಗಾಗ "ಹಾ ಸೀತೇ" ಎಂದು ಕನವರಿಸುತ್ತ ಎಚ್ಚರಗೊಳ್ಳುವನು. ಆತನು ಫಲವನ್ನಾಗಲಿ, ಪುಷ್ಪವನ್ನಾಗಲಿ, ಮನೋಹರವಾದ ಬೇರೆ ಯಾವವಸ್ತುವನ್ನಾಗಲಿ ನೋಡಿದಪಕ್ಷದಲ್ಲಿ, ಆಗಲೇ ನಿನ್ನನ್ನು ಸ್ಮರಿಸಿಕೊಂಡು "ಹಾ ಪ್ರಿಯೇ" ಎಂದು ಬಹುವಿಧದಿಂದ ವಿಲಪಿಸುತ್ತ ನಿಟ್ಟುಸಿರನ್ನು ಬಿಟ್ಟು, ತಪಿಸುತ್ತಿರುವನು. ಎಲೆ ದೇವಿ! ಪಿತ್ರಾಜ್ಞೆಯಿಂದ ವನವಾಸವ್ರತವನ್ನು ಹಿಡಿದಿರುವ ಆ ರಾಜಕುಮಾರನು, ಅನವರತವೂ ನಿನ್ನನ್ನೇ ಸ್ಮರಿಸಿ, ಸಂಕಟಪಡುತ್ತಿರುವನು. ಯಾವಾಗಲೂ "ಹಾ ಸೀತೇ" ಎಂದು ನಿನ್ನನ್ನೇ ಕೂಗುತ್ತಿರುವನು. ನಿನಗಾಗಿಯೇ ಯಾವಾಗಲೂ ಪ್ರಯತ್ನಿಸುತ್ತಿರುವನು" ಎಂದನು. ಹೀಗೆ ಹನು

1. ನಾಕಪೃಷ್ಠವೆಂದರೆ ಇಂದ್ರನಿಗೆ ಅಸಾಧಾರಣವಾದ ಒಂದು ಸ್ವರ್ಗಸ್ಥಾನ ವಿಶೇಷವು.

ಮಂತನು ಹೇಳಿದ ರಾಮವಾರ್ತೆಯನ್ನು ಕೇಳಿ ಸೀತೆಗೆ ಸ್ವಲ್ಪಸಮಾಧಾನವುಂಟಾ ದರೂ, ಆ ರಾಮನು ತನಗಾಗಿ ಅನುಭವಿಸುತ್ತಿರುವ ವಿರಹದುಃಖವನ್ನು ಕೇಳಿ, ಅದರಿಂದ ಅವಳು ಆತನೊಡನೆ ಸಮಾನ ದುಃಖವುಳ್ಳವಳಾಗಿ, ಶರತ್ಕಾಲಾರಂಭ ದಲ್ಲಿ ಮೇಘದಿಂದ ಸ್ವಲ್ಪವಾಗಿ ಮರೆಸಲ್ಪಟ್ಟ ಚಂದ್ರನಿಂದ ಕೂಡಿದ ರಾತ್ರಿಯಂತೆ, ಸ್ಪಷ್ಟಾಸ್ಪಷ್ಟವಾದ ಮುಖವಿಕಾಸವುಳ್ಳವಳಾಗಿದ್ದಳು.

ಇಲ್ಲಿಗೆ ಮೂವತ್ತಾರನೆಯ ಸರ್ಗವು.

---

ಸೀತೆಯು ತನಗೆ ರಾವಣನು ಹೇಳಿರುವ ಎರಡು ತಿಂಗಳ ಗಡುವನ್ನು ಹನುಮಂತನಿಗೆ ತಿಳಿಸಿದುದು. ಹನುಮಂತನು ತನ್ನ ಭುಜದಮೇಲೇರಿ ರಾಮನ ಬಳಿಗೆ ಬರುವಂತೆ ಸೀತೆಯನ್ನು ಕೇಳಲು, ಸೀತೆಯು ರಾಮನೇ ಇಲ್ಲಿಗೆ ಬಂದು ರಾವಣನನ್ನು ಕೊಂದು, ತನ್ನನ್ನು ಕರೆದು ಕೊಂಡು ಹೋಗುವುದುಚಿತವೆಂದು ಹೇಳಿದುದು.

ಪೂರ್ಣಚಂದ್ರಮುಖಿಯಾದ ಸೀತೆಯು, ಹನುಮಂತನ ವಾಕ್ಯವನ್ನು ಕೇಳಿ, ಸಾರವತ್ತಾಗಿಯೂ, ಧರ್ಮಯುಕ್ತವಾಗಿಯೂ ಇರುವ ಮಾತಿನಿಂದ ಆತನನ್ನು ಕುರಿತು “ಎಲೈ ವಾನರೋತ್ತಮನೆ! ರಾಮನು ಯಾವಾಗಲೂ ನನ್ನಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿರುವನೆಂಬ ಸಂತೋಷವಾರ್ತೆಯೊಡನೆ, ಆತನು ನನ್ನ ವಿಷಯವಾಗಿ ದುಃಖಪೀಡಿತನಾಗಿರುವನೆಂಬ ದುಃಖವಾರ್ತೆಯನ್ನೂ, ನೀನು ಹೇಳಿರುವುದರಿಂದ, ನಿನ್ನ ಮಾತು ನನಗೆ ವಿಷಸಂಬಂಧವುಳ್ಳ ಅಮೃತದಂತಾ ಗಿರುವುದು. ವಿಸ್ತಾರವಾದ ಐಶ್ವರ್ಯದಲ್ಲಿಯಾಗಲಿ, ಭಯಂಕರವಾದ ವ್ಯಸನದಲ್ಲಿ ಯಾಗಲಿ, ದೈವವೇ ಮನುಷ್ಯನನ್ನು ಹಗ್ಗದಿಂದ ಬಿಗಿದೆಳೆಯುವಂತೆ ಎಳೆಯುತ್ತಿರು ವುದೇ ಹೊರತು, ಮನುಷ್ಯನಿಗೆ ಯಾವವಿಧದಲ್ಲಿಯೂ ಸ್ವಾತಂತ್ರ್ಯವಿಲ್ಲ. ಯಾವ ಪ್ರಾಣಿಗಳಿಗೂ ದೈವವನ್ನು ತಡೆದಿಡುವುದು ಸಾಧ್ಯವೇ ಅಲ್ಲ. ಎಲೈ ಕಪಿಸತ್ತ ಮನೆ! ನನ್ನ ಅವಸ್ಥೆಯನ್ನು ನೋಡು! ಸುಮಿತ್ರಾಪುತ್ರನಾದ ಆ ಲಕ್ಷ್ಮಣನೂ, ನಾನೂ, ನನ್ನ ಪ್ರಿಯಪತಿಯಾದ ರಾಮನೂ, ಈಗ ಅನುಭವಿಸುತ್ತಿರುವ ಕಷ್ಟ ಪರಂಪರೆಗಳನ್ನು ನೋಡಿದೆಯಾ! ಮಹಾಸಮುದ್ರಮಧ್ಯದಲ್ಲಿ ಪ್ರವಾಹವೇಗಕ್ಕೆ ಸಿಕ್ಕಿ ಸಡಿಲಿಹೋದ ಹಡಗು, ದೈವಗತಿಯಿಂದ ದಡವನ್ನು ಮುಟ್ಟುವಂತೆ, ಆ

ನನ್ನ ಪ್ರಿಯನು. ಈ ಮಹಾದುಃಖಸಾಗರವನ್ನು ಇನ್ನೆಂದಿಗೆ ದಾಟುವನೋ! ನನ್ನ ಪತಿಯಾದ ರಾಮನು ಇಲ್ಲಿಗೆ ಬಂದು, ಇಲ್ಲಿನ ರಾಕ್ಷಸರೆಲ್ಲರನ್ನೂ ವಧಿಸಿ, ರಾವಣನನ್ನೂ ಕೊಂದು, ಈ ಲಂಕೆಯನ್ನೂ ನಿರ್ಮೂಲಮಾಡಿ, ತನ್ನ ಕಣ್ಣಾರೆ ನನ್ನನ್ನು ಇನ್ನೆಂದಿಗೆ ನೋಡುವನೋ ಕಾಣೆನು! ಅಯ್ಯಾ ವಾನರೇಂದ್ರನೆ! ನೀನು ಮಾತ್ರ ಶೀಘ್ರದಲ್ಲಿಯೇ ಹೋಗಿ ಆ ನನ್ನ ಪ್ರಿಯನನ್ನು ತ್ವರೆಪಡಿಸಬೇಕು! ಕ್ರೂರನಾದ ರಾವಣನು ನನಗಾಗಿ ನಿರ್ಣಯಿಸಿರುವ ಒಂದು ಸಂವತ್ಸರದ ಗಡುವಿನಲ್ಲಿ ಇನ್ನೆರಡು ತಿಂಗಳು ಮಾತ್ರವೇ ಉಳಿದಿರುವುವು. ಈಗ ಹತ್ತನೆಯ ತಿಂಗಳು ನಡೆಯುತ್ತಿರುವುದು. ಈ ಗಡುವು ಮುಗಿಯುವುದರೊಳಗಾಗಿಯೇ ಅತನನ್ನು ಇಲ್ಲಿಗೆ ಕರೆತರಬೇಕು! ಆ ರಾವಣನ ತಮ್ಮನಾದ ವಿಭೀಷಣನೂ ಕೂಡ, ನನ್ನನ್ನು ರಾಮನಬಳಿಗೆ ಹಿಂತಿರುಗಿ ಕಳುಹಿಸಿಬಿಡಬೇಕೆಂದು ತನ್ನಣ್ಣನಿಗೆ ಎಷ್ಟೋ ಹಿತವಾದಗಳನ್ನು ಹೇಳಿದನು. ಅವನು ಎಷ್ಟೆಷ್ಟೋ ಪ್ರಯತ್ನದಿಂದ ಸಮಾಧಾನ ಹೇಳಿದರೂ, ಮೂರ್ಖನಾದ ರಾವಣನು ನನ್ನನ್ನು ಕಳುಹಿಸಿಬಿಡುವುದಕ್ಕಿಷ್ಟಪಡಲಿಲ್ಲ. ರಾವಣನಿಗೆ ಆ ಬುದ್ಧಿಯೇ ಹುಟ್ಟಲಿಲ್ಲ. ಮುಖ್ಯವಾಗಿ ರಾವಣನು ಕಾಲವಶನಾಗಿರುವುದರಿಂದ, ಮೃತ್ಯುದೇವತೆಯು ಯುದ್ಧದಲ್ಲಿ ಅತನಮೇಲೆ ಕಣ್ಣಿಟ್ಟಿರುವುದು. ಎಲೆ ಕಪೀಂದ್ರನೆ! ವಿಭೀಷಣನಿಗೆ ಹಿರಿಯಮಗಳಾದ ಅನಲೆಯೆಂಬವಳು ತನ್ನ ತಾಯಿಯ ಮಾತಿನಮೇಲೆ ನನ್ನಲ್ಲಿಗೆ ಬಂದು, ಈ ವಿಷಯಗಳನ್ನೆಲ್ಲಾ ಸೂಚಿಸಿರುವಳು. ಇದಲ್ಲದೆ ಇಲ್ಲಿ ಆ ವಿಂಧ್ಯನೆಂಬ ವೃದ್ಧನಾದ ರಾಕ್ಷಸಪ್ರಧಾನನೊಬ್ಬನುಂಟು! ಅವನು ಬಹಳ ಮೇಧಾವಿಯು. ವಿದ್ಯಾವಂತನು. ಅವನು ರಾಕ್ಷಸನಾದರೂ ಅವನ ಮುಖದಲ್ಲಿ ಒಂದು ಶುಭಕಳೆಯುಂಟು! ಸದಾಚಾರಸಂಪನ್ನನು! ರಾವಣನಿಗೆ ಬಹಳ ಇಷ್ಟನಾಗಿಯೂ ಇರುವನು. ಅತನು ರಾಮನಿಂದ ಇಲ್ಲಿನ ರಾಕ್ಷಸರಿಗುಂಟಾಗಬಹುದಾದ ಹಾನಿಯನ್ನು ತಿಳಿಸಿ, ರಾವಣನಿಗೆ ಎಷ್ಟೋ ಹಿತವಾದಗಳನ್ನು ಹೇಳಿದನು. ದುಷ್ಟಾತ್ಮನಾದ ರಾವಣನು ಅವನ ಮಾತನ್ನು ಕೇಳಲಿಲ್ಲ. ಅದರೇನು! ಎಲೈ ಕಪಿಶ್ರೇಷ್ಠನೆ! ಮುಖ್ಯವಾಗಿ ನನ್ನ ಅಂತರಾತ್ಮವು ಬಹಳ ನಿಷ್ಕಲ್ಮಷವಾಗಿರುವುದರಿಂದ ಶೀಘ್ರದಲ್ಲಿಯೇ ಆ ನನ್ನ ಪ್ರಿಯನು ನನ್ನನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ಕಾರ್ಯೋತ್ಸಾಹವೂ, ಪೌರುಷವೂ, ಬಲವೂ, ದಯಾಸ್ವಭಾವವೂ, ಕೃತಜ್ಞತೆಯೂ, ಪರಾಕ್ರಮವೂ, ಅಸಾಧಾರಣವಾದ ಮಹಿಮೆಯೂ ಆ ನನ್ನ ಪ್ರಿಯನಲ್ಲಿ ಪೂರ್ಣವಾಗಿ ತುಂಬಿರುವುವು. ಜನಸ್ಥಾನದಲ್ಲಿ ತನ್ನ ತಮ್ಮನ ಸಹಾಯವನ್ನೂ ಅಪೇಕ್ಷಿಸದೆ, ತಾನೊಬ್ಬನೇ ನಿಂತು ಹದಿನಾಲ್ಕು ಸಹಸ್ರರಾಕ್ಷಸಸೈನ್ಯವನ್ನೂ ಧ್ವಂಸಮಾಡಿದ ಆ ಮಹಾಧೀರ

ನಿಗೆ ಬೇರೆ ಯಾವಶತ್ರುವು ತಾನೇ ಅಂಜದಿರುವನು? ಪುರುಷೋತ್ತಮನಾದ ರಾಮನು ಎಂತಹ ಕಷ್ಟದಶೆಗೆ ಸಿಕ್ಕಿದರೂ ಸ್ವಲ್ಪಮಾತ್ರವೂ ಧೈರ್ಯಗೆಡುವವ ನಲ್ಲ. ದೇವೇಂದ್ರನ ಮಹಿಮೆಯನ್ನು ಶಚೀದೇವಿಯು ಹೇಗೋ ಹಾಗೆ ಆತನ ಮಹಿಮೆಯನ್ನು ನಾನು ಚೆನ್ನಾಗಿ ಬಲ್ಲೆನು. ಎಲೈ ಕಪಿವೀರನೆ! ಆ ರಾಮನೆಂಬ ಸೂರ್ಯನು, ತನ್ನ ಬಾಣಗಳೆಂಬ ಕಿರಣಗಳಿಂದ, ತನಗೆ ಶತ್ರುಗಳಾದ ಇಲ್ಲಿನ ರಾಕ್ಷಸಸಮೂಹವೆಂಬ ನೀರನ್ನು ಕ್ಷಣಮಾತ್ರದಲ್ಲಿ ಹೀರಿಬಿಡುವನು" ಎಂದಳು. ಹೀಗೆ ಮಾತಾಡುತ್ತಿರುವಾಗಲೇ ಆಕೆಯು ರಾಮನನ್ನು ಸ್ಮರಿಸಿಕೊಂಡು ದುಃಖ ದಿಂದ ಕೊರಗಿ ಕಣ್ಣೀರನ್ನು ತುಂಬಿಕೊಂಡಳು. ತಿರುಗಿ ಹನುಮಂತನು ಆ ಸೀತೆ ಯನ್ನು ನೋಡಿ "ಅಮ್ಮಾ! ನೀನೇಕೆ ಚಿಂತಿಸುವೆ? ನಾನು ಇಲ್ಲಿಂದ ಹೋಗಿ ನಿನ್ನ ವೃತ್ತಾಂತವನ್ನು ತಿಳಿಸಿದ ಕ್ಷಣವೇ ರಾಮನು, ಅನೇಕ ವಾನರಭಲ್ಲೂಕ ಸೈನ್ಯಗಳೊಡನೆ ಇಲ್ಲಿಗೆ ಬಂದುಬಿಡುವುದರಲ್ಲಿ ತಡೆಯಿಲ್ಲ. ಅಥವಾ ನೀನು ಅದು ವರೆಗೆ ಕಾದಿರಬೇಕಾದುದೂ ಇಲ್ಲ. ನಾನೇ ಈಗ ನಿನ್ನ ಈ ದುಃಖವನ್ನು ಬಿಡಿಸ ಬಲ್ಲೆನು. ಇದೋ! ಈ ನನ್ನ ಹೆಗಲನ್ನೇರಿ ಕುಳ್ಳಿರು! ನಿನ್ನನ್ನು ಈ ಹೆಗಲಿನ ಮೇಲೇರಿಸಿಕೊಂಡೇ ಈ ಸಮುದ್ರವನ್ನು ದಾಟಿ ರಾಮನ ಬಳಿಗೆ ಹೋಗುವೆನು! ಕೊನೆಗೆ ರಾವಣಸಹಿತವಾಗಿ ಈ ಲಂಕಾನಗರಿಯನ್ನೇ ಹೊತ್ತುಕೊಂಡು ಸಮುದ್ರ ವನ್ನು ಹಾರಿಹೋಗುವುದಕ್ಕೂ ನನಗೆ ಶಕ್ತಿಯುಂಟೆಂದು ತಿಳಿ! ಎಲೆ ಸೀತೆ! ಹುತ ವಾದ ಹವಿಸ್ಸನ್ನು ಅಗ್ನಿಹೋತ್ರನು ಇಂದ್ರನಿಗೆ ತಂದೊಪ್ಪಿಸುವಂತೆ, ನಿನ್ನನ್ನು ನಾನು ಈಗಲೇ ಎತ್ತಿಕೊಂಡುಹೋಗಿ ಪ್ರಸ್ರವಣಪರ್ವತದಲ್ಲಿರುವ ರಾಮನಿಗೊಪ್ಪಿಸಿ ಬಿಡುವೆನು. ಎಲೆ ದೇವಿ! ದೈತ್ಯವಧಕ್ಕೆ ಪ್ರಯತ್ನಿಸುವ ವಿಷ್ಣುವಿನಂತೆ, ರಾಕ್ಷಸ ವಧಕ್ಕಾಗಿ ಉದ್ಯೋಗಿಸುತ್ತಿರುವ ಲಕ್ಷ್ಮಣಸಹಿತನಾದ ಆ ರಾಮನನ್ನು ಶೀಘ್ರ ದಲ್ಲಿಯೇ ನೀನು ನೋಡುವೆ! ನಿನ್ನನ್ನು ನೋಡುವ ಪ್ರಯತ್ನದಿಂದಲೇ ತವಕ ಪಡುತ್ತ, ನಾಕಪೃಷ್ಠದಲ್ಲಿರುವ ದೇವೇಂದ್ರನಂತೆ ಆಶ್ರಮದಲ್ಲಿರುವ ಮಹಾಬಲಾಢ್ಯ ನಾದ ರಾಮನನ್ನು ಈಗಲೇ ನೀನು ನೋಡಬಹುದು. ಎಲೆ ಕಲ್ಯಾಣಿ! ನನ್ನ ಭುಜ ವನ್ನೇರು! ನನ್ನ ಮಾತನ್ನು ಪೇಕ್ಷಿಸಬೇಡ! ರೋಹಿಣಿಯು ಚಂದ್ರನನ್ನು ಸೇರುವಂತೆ, ನೀನು ಶೀಘ್ರದಲ್ಲಿಯೇ ರಾಮನೊಡನೆ ಸೇರುವುದಕ್ಕೆ ಸಮ್ಮತಿಸು! ಈಗ ನೀನು ನನ್ನ ಭುಜದಮೇಲೆ ಕುಳಿತು ಚಂದ್ರನೊಡನೆಯೂ, ಮಹಾದೀಪ್ತಿ ಮಂತನಾದ ಸೂರ್ಯನೊಡನೆಯೂ ಮಾತಾಡಿಬರುವಂತೆ ಆಕಾಶಮಾರ್ಗ ದಿಂದಲೇ ವಿಸ್ತಾರವಾದ ಈ ಸಮುದ್ರಾಕಾಶಗಳೆರಡನ್ನೂ ದಾಟಿಬಿಡು! ಅಮ್ಮಾ! ನಾನು ನಿನ್ನನ್ನು ಅಂತರಿಕ್ಷಮಾರ್ಗದಿಂದೆತ್ತಿಕೊಂಡು ಹೋಗುವಾಗ, ಇಲ್ಲಿನ

ರಾಕ್ಷಸರಾದರೂ ಒಂದುವೇಳೆ ಅಡ್ಡಗಟ್ಟಿ ನನ್ನನ್ನು ತಡೆಯಬಹುದೆಂದು ನೀನು ಶಂಕಿಸಬೇಡ ! ನಾನು ಆಕಾಶದಲ್ಲಿ ವೇಗದಿಂದ ಹಾರುವಾಗ, ಈ ಲಂಕೆಯಲ್ಲಿರುವ ಯಾವನೊಬ್ಬ ರಾಕ್ಷಸನಾಗಲಿ ನನ್ನನ್ನು ಬೆನ್ನಟ್ಟಿ ಬರಲಾರನು. ಎಲೆ ವೈದೇಹಿ ! ನಾನು ಯಾವ ವೇಗದಿಂದ ಸಮುದ್ರವನ್ನು ಹಾರಿ ಇಲ್ಲಿಗೆ ಬಂದೆನೋ, ಅದೇ ವೇಗದಿಂದಲೇ ನಿನ್ನನ್ನೂ ಎತ್ತಿಕೊಂಡು ಆಕಾಶದಲ್ಲಿ ಹಾರಿ ಹಿಂತಿರುಗಿ ಹೋಗುವೆನು. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ " ಎಂದನು. ಕಪಿಶ್ರೇಷ್ಠನಾದ ಆ ಆಂಜನೇಯನ ಪರಾಕ್ರಮವಾಕ್ಯವನ್ನು ಕೇಳಿದೊಡನೆ, ಸೀತೆಗೆ ಅತ್ಯಾಶ್ಚರ್ಯವೂ ಸಂತೋಷವೂ ಹುಟ್ಟಿತು. ಈ ಸಂತೋಷಾಶ್ಚರ್ಯಗಳಿಂದ ರೋಮಾಂಚಿತವಾದ ಮೈಯುಳ್ಳವಳಾಗಿ ಸೀತೆಯು ತಿರುಗಿ ಆಂಜನೇಯನನ್ನು ಕುರಿತು, "ಹನುಮಂತಾ ! ಇದೀಗ ಬಹಳ ಚೆನ್ನಾಯಿತು ! ನೀನು ನನ್ನನ್ನೂ ಎತ್ತಿಕೊಂಡು ಅಷ್ಟುದೂರಕ್ಕೆ ಹಾರಬೇಕೆಂದೆಣಿಸಿರುವೆಯಲ್ಲಾ ! ಈ ಚಪಲಸ್ವಭಾವದಿಂದಲೇ ನಿನಗೆ ಕಪಿತ್ವವುಂಟಾಯಿತೆಂದು ತೋರುವುದು ! ಇಷ್ಟು ಸಣ್ಣ ಮೈಯುಳ್ಳ ನೀನು, ನನ್ನನ್ನೂ ಎತ್ತಿಕೊಂಡು ಆಕಾಶದಲ್ಲಿ ಹಾರಿ, ನನ್ನ ಪ್ರಿಯನಾದ ಆ ರಾಜೇಂದ್ರನ ಬಳಿಗೆ ಸೇರಿಸಬಲ್ಲೆಯಾ?" ಎಂದಳು. ವಾಯುಪುತ್ರನಾದ ಹನುಮಂತನು ಸೀತೆಯು ಹೇಳಿದ ಈ ಪರಿಹಾಸವಾಕ್ಯವನ್ನು ಕೇಳಿ, ಅದರಿಂದ ತನಗೆ ಹಿಂದೆ ಯಾವಾಗಲೂ ಇಲ್ಲದ ಪರಾಭವವುಂಟಾದುದನ್ನು ಕುರಿತು, ತನ್ನಲ್ಲಿ ತಾನು ಚಿಂತಿಸುವನು. "ಈ ಸೀತೆಯು ನನ್ನ ಶಕ್ತಿಯನ್ನಾಗಲಿ, ನನ್ನ ಪ್ರಭಾವವನ್ನಾಗಲಿ ತಿಳಿಯದೆ, ಹೀಗೆ ನನ್ನನ್ನು ಹಾಸ್ಯಮಾಡುತ್ತಿರುವಳಲ್ಲಾ ! ಇರಲಿ ! ನನ್ನ ಈ ಸೂಕ್ಷ್ಮರೂಪವನ್ನು ನೋಡಿ ಈಕೆಯು ಹಾಸ್ಯಮಾಡಿರಬಹುದು. ಈಗಲೇ ಇವಳಿಗೆ ನನ್ನ ನಿಜರೂಪವನ್ನು ತೋರಿಸುವೆನು " ಎಂದು ನಿಶ್ಚಯಿಸಿಕೊಂಡನು. ವಾನರೋತ್ತಮನಾದ ಹನುಮಂತನು ಹೀಗೆಂದು ಚಿಂತಿಸಿ, ಸೀತೆಯ ನಂಬಿಕೆಗಾಗಿ ತನ್ನ ನಿಜಸ್ವರೂಪವನ್ನು ತೋರಿಸಲಾರಂಭಿಸಿದನು. ಬಹಳ ಧೀಮಂತನಾದ ಆತನು, ತನ್ನ ಮೈಯನ್ನು ವಿಸ್ತಾರವಾಗಿ ಬೆಳೆಸುವುದಕ್ಕೆ ತಕ್ಕಂತೆ 1 ಆ ಮರದ ಕೊನೆಯನ್ನು ಬಿಟ್ಟು

---

1. ಇಲ್ಲಿ ತನ್ನ ಮೈಯನ್ನು ಬೆಳೆಸುವುದಕ್ಕಾಗಿ ಆಗಲೇ ಮರದಿಂದ ಕೆಳಕ್ಕಿಳಿದುದಾಗಿಯೂ, ಹಿಂದೆಯೇ ಮರದಿಂದ ಕೆಳಕ್ಕಿಳಿದುದಾಗಿ ಹೇಳಿದ್ದರೂ, ಅಲ್ಲಿ ಮರದ ತುದಿಯಿಂದ ಸೀತೆಗೆ ಸಮೀಪವಾಗಿದ್ದ ಕೆಳಗಿನ ಕೊಂಬೆಗೆ ಇಳಿದುದಾಗಿಯೂ ಅರ್ಥಮಾಡಬೇಕೆಂದು ಗೋವಿಂದರಾಜವ್ಯಾಖ್ಯಾನವು. ಮರದ ಕೆಳಗಿದ್ದಾಗಲೇ ಮೈಯನ್ನು ಬೆಳೆಸಿದರೆ, ಆಪರ ವೇಗಕ್ಕೆ ಆ ಮರದ ಕೊಂಬೆಗಳು ಮುರಿಯಬಹುದಾದುದರಿಂದ ಆದರಿಂದ ತಾನಿರುವ ಸಂಗತಿಯು ರಾಕ್ಷಸರಿಗೆ ತಿಳಿದು ಹೋಗಬಾರದೆಂದೆಣಿಸಿ ದೂರಕ್ಕೆ ಹೋದುದಾಗಿ ಮಹೇಶ್ವರತೀರ್ಥವ್ಯಾಖ್ಯಾನವು

ದೂರವಾಗಿ ನಿಂತು ತನ್ನ ಮೈಯನ್ನುಬ್ಬಿಸುವುದಕ್ಕೆ ತೊಡಗಿದನು. ಕ್ಷಣ ಮಾತ್ರದಲ್ಲಿಯೇ ಅವನ ದೇಹವು ಮೇರುಮಂದರಪರ್ವತಗಳಿಗೆ ಸಮಾನವಾಗಿ ಬೆಳೆಯಿತು. ಅವನ ತೇಜಸ್ಸು ಉರಿಯುವ ಬೆಂಕಿಗೆ ಸಮಾನವಾಗಿ ತೋರಿತು. ಈ ಸ್ವರೂಪದಿಂದಲೇ ಅತನು ಸೀತೆಯಮುಂದೆ ನಿಂತಿದ್ದನು. ಆಗ ಆ ಅಂಜ ನೇಯನಿಗುಂಟಾದ ಮಹಾದ್ಭುತರೂಪವನ್ನು ಕೇಳಬೇಕೆ? ಪರ್ವತಾಕಾರ ವಾದ ಮೈ! ರಕ್ತದಂತೆ ಕೆಂಪಾದ ಮುಸುಡಿ! ವಜ್ರದಂತೆ ಕಠಿನವಾದ ಕೋರೆದಾಡೆಗಳು! ತೀಕ್ಷ್ಣವಾದ ನಖಗಳು! ಈ ಘೋರಸ್ವರೂಪದಿಂದ ಮುಂದೆ ನಿಂತು ಹನುಮಂತನು, ಪುನಃ ಸೀತೆಯನ್ನು ಕುರಿತು, "ಅಮ್ಮಾ! ಈಗಲಾದರೂ ನಿನಗೆ ನನ್ನ ಶಕ್ತಿಯಲ್ಲಿ ನಂಬಿಕೆ ಹುಟ್ಟಿತೆ? ಎಲೆ ದೇವಿ! ನಾನು ಸಮಸ್ತಪರ್ವತಾರಣ್ಯಗಳಿಂದಲೂ, ಅಟ್ಟಲೆಗಳಿಂದಲೂ, ಪ್ರಾಕಾರಗಳಿಂದಲೂ, ಪುರದ್ವಾರಗಳಿಂದಲೂ, ಕೂಡಿದ ಈ ಲಂಕಾನಗರಿಯನ್ನೇ ಇಲ್ಲಿನ ಪ್ರಭುವಾದ ರಾವಣನೊಡನೆ ಎತ್ತಿಕೊಂಡು ಹೋಗಿ, ರಾಮನಿಗೆ ಸಮರ್ಪಿಸಬಲ್ಲೆನೆಂದು ತಿಳಿ! ಇನ್ನಾದರೂ ನಿನ್ನ ಭಯವನ್ನು ಬಿಡು! ನಿನ್ನ ಮನಸ್ಸನ್ನು ದೃಢಪಡಿಸು! ನನ್ನ ಮಾತನ್ನು ತಿರಸ್ಕರಿಸಬೇಡ! ರಾಮಲಕ್ಷ್ಮಣರಿಬ್ಬರನ್ನೂ ವ್ಯಸನರಹಿತರನ್ನಾಗಿ ಮಾಡು" ಎಂದನು. ಕಮಲಾಕ್ಷಿಯಾದ ಆ ಜನಕಪುತ್ರಿಯು ಭಯಂಕರ ಸ್ವರೂಪ ದಿಂದ ಮುಂದೆ ನಿಂತಿರುವ ಆ ವಾಯುಪುತ್ರನನ್ನು ನೋಡಿ "ಎಲೆ ಮಹಾಕಪೀ! ಈಗ ನಿನ್ನ ಧೈರ್ಯವೂ, ನಿನ್ನ ಬಲವೂ, ನನಗೆ ಚೆನ್ನಾಗಿ ವ್ಯಕ್ತವಾಯಿತು. ನಿಜವಾಗಿ ನೀನು ವೇಗದಲ್ಲಿ ವಾಯುವಿಗೆ ಸಮಾನನು! ಅಗ್ನಿಯಂತೆ ಅದ್ಭುತವಾದ ತೇಜಸ್ಸುಳ್ಳ ವನು. ಹಾಗಿಲ್ಲದಿದ್ದರೆ ಸಾಮಾನ್ಯನಾದ ಬೇರೊಬ್ಬ ವಾನರನು ಈ ಪ್ರದೇಶಕ್ಕೆ ಬರುವುದೆಂದರೇನು? ಅಪಾರವಾದ ಈ ಮಹಾಸಮುದ್ರವನ್ನು ದಾಟುವು ದೆಂದರೇನು? ನೀನು ಇಲ್ಲಿನ ರಾಕ್ಷಸರಿಗೆ ಸಿಕ್ಕದೆ ತಪ್ಪಿಸಿಕೊಂಡು ಹೋಗ ಬಲ್ಲೆಯೆಂಬುದೂ ನಿಜವು. ನೀನು ನನ್ನನ್ನೂ ಎತ್ತಿಕೊಂಡು ಈ ಸಮುದ್ರ ವನ್ನು ದಾಟಿ ರಾಮನ ಬಳಿಗೆ ಸೇರಿಸಬಲ್ಲೆಯೆಂಬುದರಲ್ಲಿಯೂ ಸಂದೇಹವಿಲ್ಲ. ಆದರೆ ಮಹಾತ್ಮನಾದ ಆ ರಾಮನು ನಡೆಸಬೇಕಾದ ಕಾರ್ಯಗಳು ಇನ್ನೂ ಅನೇಕವಾಗಿರುವುವು. ಅದಕ್ಕೆ ವಿಘ್ನ ಬಾರದಂತೆ ನಾವು ಕಾರ್ಯವನ್ನಾಲೋಚಿಸಬೇಕ ಲ್ಲವೆ? ಎಲೈ ಕಪಿವೀರನೆ! ನಾನು ನಿನ್ನೊಡನೆಯೇ ಇಲ್ಲಿಂದ ಹೊರಟು ಬರು ವುದು ಎಷ್ಟುಮಾತ್ರಕ್ಕೂ ಯುಕ್ತವಲ್ಲ. ಏಕೆಂದರೆ, ನಿನ್ನ ವೇಗವೋ ವಾಯು ವೇಗಕ್ಕೆ ಸಮಾನವಾದುದು. ನಿನ್ನ ವೇಗವನ್ನು ನೋಡಿದಾಗಲೇ ನನಗೆ ಸ್ಮರಣೆ ತಪ್ಪುವಂತಿರುವುದು. ನೀನು ನನ್ನನ್ನು ಭುಜದಮೇಲೇರಿಸಿಕೊಂಡು ಸಮುದ್ರದಮೇಲೆ

ಆಕಾಶಮಾರ್ಗವಾಗಿ ವೇಗದಿಂದ ಹೋಗುತ್ತಿರುವಾಗ, ನಾನು ಕೆಳಗೆ ಕಾಣುವ ಮಹಾಸಾಗರವನ್ನು ನೋಡಿದ ಮಾತ್ರಕ್ಕೆ, ಭಯದಿಂದ ಪ್ರಜ್ಞೆತಪ್ಪಿ ಸಮುದ್ರದಲ್ಲಿ ಬಿದ್ದು ಮುಳುಗಿಹೋದರೂ ಹೋಗಬಹುದು. ತಿಮಿತಿಮಿಂಗಿಲಾದಿಗಳಿಗೂ, ಮೊಸಳೆಗಳಿಗೂ ನಿತ್ಯಾಶ್ರಯವಾದ ಆ ಸಮುದ್ರದಲ್ಲಿ ಬಿದ್ದೊಡನೆ, ಅಲ್ಲಿನ ಜಲಜಂತುಗಳ ಬಾಯಿಗೆ ತುತ್ತಾಗಬೇಕಲ್ಲವೆ! ಆದುದರಿಂದಲೇ ನಾನು ನಿನ್ನೊಡನೆ ಬರಲಾರೆನು. ನೀನು ಯಾವ ಶತ್ರುಗಳನ್ನಾದರೂ ಧ್ವಂಸಮಾಡಬಲ್ಲವನೆಂಬುದರಲ್ಲಿ ಸಂದೇಹವಿಲ್ಲ. ಆದರೂ ಈಗ ನೀನು ನನ್ನನ್ನು ಕರೆದುಕೊಂಡು ಹೋಗುವುದು ಸರಿಯಲ್ಲ. ಲೋಕದಲ್ಲಿ ಒಂಟಿಯಾಗಿದ್ದವರಿಗೆ ಎಂದಿಗೂ ಯಾವಭಯವೂ ಇರುವುದಿಲ್ಲ. ರಕ್ಷಿಸಬೇಕಾದ ಬೇರೊಂದು ವಸ್ತುವನ್ನು ತನ್ನಲ್ಲಿಟ್ಟು ಕಾಪಾಡುವವನಿಗೆ, ಬೇರೆಯವರಿಂದ ಯಾವಾಗಲೂ ಭಯವು ಸಿದ್ಧವು. ಆ ರಕ್ಷ್ಯವಸ್ತುವಿನ ದೆಸೆಯಿಂದಲೇ ಅವನಿಗೂ ವಿಪತ್ತುಗಳು ಬರಬಹುದೆಂದೂ ಸಂದೇಹಿಸಬೇಕಾಗುವುದು. ಆದುದರಿಂದ ನೀನು ಏಕಾಕಿಯಾಗಿಲ್ಲದೆ, ನನ್ನನ್ನೂ ರಕ್ಷಿಸಿಕೊಂಡು ಇಲ್ಲಿಂದ ಹೊರಡುವುದಾದರೆ, ನಿನಗೂ ನಡುವೆ ವಿಪತ್ತುಗಳು ಸಂಭವಿಸಬಹುದೆಂಬ ಶಂಕೆಯುಂಟಾಗುವುದು. ನೀನು ನನ್ನನ್ನೆತ್ತಿಕೊಂಡು ಹಾರಿ ಹೋಗುವುದನ್ನು ನೋಡಿದರೆ, ದುರಾತ್ಮನಾದ ರಾವಣನಿಂದ ಪ್ರೇರಿತರಾದ ಇಲ್ಲಿನ ಘೋರರಾಕ್ಷಸರು ನಿನ್ನನ್ನು ಬೆನ್ನಟ್ಟಿ ಬರುವರು. ಇಲ್ಲಿನ ರಾಕ್ಷಸರೋ ಮಹಾಶೂರರು! ಅಂತಹ ರಾಕ್ಷಸರು ಭಯಂಕರವಾದ ಶೂಲಗಳನ್ನೂ ಮುದ್ಗರಗಳನ್ನೂ ಕೈಯಲ್ಲಿ ಹಿಡಿದು, ನಿನ್ನ ಸುತ್ತಲೂ ಮುತ್ತಿನಿಂತರೆ, ನೀನು ಮಾಡುವುದೇನು ? ನೀನೊಬ್ಬನೇ ಆಗಿದ್ದ ಪಕ್ಷದಲ್ಲಿ ನಿನ್ನ ದೇಹವನ್ನಾದರೂ ನೀನು ರಕ್ಷಿಸಿಕೊಳ್ಳಬಹುದು. ಹಾಗಿಲ್ಲದೆ ರಕ್ಷ್ಯವಸ್ತುವಾದ ನನ್ನನ್ನೂ ನೀನು ಕಾಪಾಡಿಕೊಳ್ಳಬೇಕಾದರೆ ಸಾಧ್ಯವೆ? ಆದರಿಂದ ನಿನಗೂ ವಿಪತ್ತುಗಳು ಸಂಭವಿಸಬಹುದೆಂದೇ ಸಂದೇಹಿಸಬೇಕಾಗುವುದಲ್ಲವೆ ? ಇದಲ್ಲದೆ ಆಕಾಶದಲ್ಲಿ ಅನೇಕರಾಕ್ಷಸರು ಆಯುಧಧಾರಿಗಳಾಗಿ ಸಂಚರಿಸುವರು. ನೀನೋ ಏಕಾಕಿಯು! ಇವರಮೇಲೆ ನಿರಾಯುಧನು! ಈ ಸ್ಥಿತಿಯಲ್ಲಿ ನಿನ್ನ ದೇಹವನ್ನು ನೀನು ರಕ್ಷಿಸಿಕೊಂಡು ಹೋಗುವುದೇ ಕಷ್ಟವಾಗಿರುವಾಗ, ಅವರೊಡನೆ ಸರಿಯಾಗಿ ನಿಂತು ಹೋರಾಡುವುದಕ್ಕೂ, ನನ್ನನ್ನು ರಕ್ಷಿಸುವುದಕ್ಕೂ ಹೇಗೆ ಸಾಧ್ಯವು? ಒಂದುವೇಳೆ ನೀನು ಪ್ರಯತ್ನಪಟ್ಟು ಅವರೊಡನೆ ಯುದ್ಧಕ್ಕೆ ನಿಂತರೂ ಆ ಘೋರಯುದ್ಧವನ್ನು ನೋಡಿದೊಡನೆ ನಾನು ಭಯದಿಂದ ಪ್ರಜ್ಞೆತಪ್ಪಿ ಕೆಳಕ್ಕೆ ಬಿದ್ದುಬಿಡಬಹುದು. ಎಲೈ ವಾನರೇಂದ್ರನೆ! ನಾನು ಬೀಳುವುದೂ ಹಾಗಿರಲಿ. ಈ ರಾಕ್ಷಸರೋ

ಮಹಾಭಯಂಕರಸ್ವರೂಪವುಳ್ಳವರು! ದೊಡ್ಡ ದೇಹವುಳ್ಳವರು! ಬಹಳ ಬಲಾಢ್ಯರು! ಅಂತಹ ರಾಕ್ಷಸರೆಲ್ಲರೂ ಒಟ್ಟಾಗಿ ಸೇರಿದರೆ, ಒಂದುವೇಳೆ ಹೇಗೋ ಅವರು ನಿನ್ನನ್ನೇ ಜಯಿಸಿದರೂ ಜಯಿಸಬಹುದು! ಅಥವಾ ನಿನಗೆ ಅಪಜಯವುಂಟಾಗದಿದ್ದರೂ, ಆ ರಾಕ್ಷಸರೊಡನೆ ನೀನು ಯುದ್ಧಮಾಡುವಾಗ, ಆ ಯುದ್ಧಾತುರದಲ್ಲಿ ನಿನಗೂ ತಿಳಿಯದಂತೆ ನಾನು ನಿನ್ನ ಬೆನ್ನಿನಿಂದ ಜಾರಿಬಿದ್ದರೆ, ಆಗ ಮಾಯಾವಿಗಳಾದ ಕೆಲವು ರಾಕ್ಷಸರು, ಹಿಂದಿನಿಂದ ನನ್ನನ್ನು ಎತ್ತಿಕೊಂಡು ಹೋದರೂ ಹೋಗಬಹುದು. ಎಂತವರಿಗಾದರೂ ಯುದ್ಧದಲ್ಲಿ ಜಯಾಪಜಯಗಳನ್ನು ನಿಶ್ಚಯಿಸಿ ತಿಳಿಯುವುದಕ್ಕಿಲ್ಲವಷ್ಟೆ! ಆದುದರಿಂದ ನಿನಗೇ ಪರಾಜಯವುಂಟಾದರೂ ಆಗಬಹುದು. ಆಗ ರಾಕ್ಷಸರು ನಿನ್ನ ಕೈಯಿಂದ ನನ್ನನ್ನೆಳೆದುಕೊಂಡು ಹೋದರೂ ಹೋಗಬಹುದು. ಕೊನೆಗೆ ಕೋಪದಿಂದ ನನ್ನನ್ನು ಕೊಂದರೂ ಕೊಲ್ಲಬಹುದು. ನಿನ್ನ ಜಯಪರಾಜಯಗಳೂ ಹಾಗಿರಲಿ! ಆ ರಾಕ್ಷಸರ ಭಯಂಕರವಾದ ಗರ್ಜನೆಗಳನ್ನು ಕೇಳಿದಾಗಲೇ ನಾನು ಭಯದಿಂದ ಪ್ರಾಣವನ್ನು ಬಿಟ್ಟರೂ ಬಿಡಬಹುದು. ಆಗ ನೀನು ಇದುವರೆಗೆ ಮಾಡಿದ ಪ್ರಯತ್ನಗಳೆಲ್ಲವೂ ನಿಷ್ಫಲವಾಗಿ ಹೋಗುವುದಲ್ಲವೆ? ನೀನೊಬ್ಬನೇ ಇಲ್ಲಿನ ಸಮಸ್ತ ರಾಕ್ಷಸರನ್ನೂ ಕೊಲ್ಲುವುದಕ್ಕೆ ಶಕ್ತನೆಂಬುದರಲ್ಲಿ ಸಂದೇಹವಿರದು! ಆದರೆ, ನೀನು ನಿನ್ನ ಕೈಯಿಂದಲೇ ಇಲ್ಲಿನ ರಾಕ್ಷಸರನ್ನು ಕೊಂದರೆ, ಅದರಿಂದ ರಾಮನ ಕೀರ್ತಿಗೂ ಕೊರತೆಯಲ್ಲವೆ? ಇದಲ್ಲದೆ ಇಲ್ಲಿನ ರಾಕ್ಷಸರು ನಿನ್ನ ಸಾಮರ್ಥ್ಯವನ್ನು ತಿಳಿದು, ಹೇಗೋ ಒಂದು ವಿಧದಿಂದ ನಿನ್ನನ್ನು ವಂಚಿಸಿ, ನನ್ನನ್ನೆತ್ತಿಕೊಂಡು ಹೋಗಿ, ವಾನರರಿಗಾಗಲಿ, ರಾಮಲಕ್ಷ್ಮಣರಿಗಾಗಲಿ ತಿಳಿಯದಂತೆ, ರಹಸ್ಯಸ್ಥಳದಲ್ಲಿ ಬಚ್ಚಿಟ್ಟುಬಿಟ್ಟರೆ, ಆಗಲೂ ನೀನು ಇದುವರೆಗೆ ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವೇ ಆಗುವುವು. ಇವೆಲ್ಲವನ್ನೂ ಪರ್ಯಾಲೋಚಿಸಿದರೆ, ಈಗಲೇ ನೀನು ಹೋಗಿ ಆ ರಾಮನನ್ನೇ ಇಲ್ಲಿಗೆ ಕರೆತರುವುದರಲ್ಲಿ ಬಹಳ ಗುಣವುಂಟು. ಮಹಾತ್ಮನಾದ ಆ ರಾಮನ ಪ್ರಾಣಗಳೂ, ಆತನ ತಮ್ಮಂದಿರ ಪ್ರಾಣಗಳೂ, ಈಗ ನನ್ನನ್ನಾಶ್ರಯಿಸಿರುವುವು. ನಿನ್ನ ಪ್ರಭುವಾದ ಸುಗ್ರೀವನ ಮತ್ತು ಅವನ ಬಂಧುಗಳ ಪ್ರಾಣಗಳೂ ನನ್ನನ್ನಾಶ್ರಯಿಸಿಯೇ ನಿಂತಿರುವುವು. ಈ ಸ್ಥಿತಿಯಲ್ಲಿ ನನಗೇನಾದರೂ ಪ್ರಾಣಭಯವುಂಟಾದ ಪಕ್ಷದಲ್ಲಿ. ಅವರೆಲ್ಲರೂ ಒಟ್ಟಾಗಿ ಪ್ರಾಣವನ್ನು ಕಳೆದುಕೊಳ್ಳುವುದೇ ನಿಶ್ಚಯವು! ಆ ರಾಮಲಕ್ಷ್ಮಣರಿಬ್ಬರೂ ಇದುವರೆಗೆ ನನ್ನನ್ನು ಕುರಿತು ದುಃಖದಿಂದ ಕೊರಗಿ ಕೃಶರಾಗಿರುವರು. ಇನ್ನು ನನಗೆ ಏನಾದರೂ ಅಪಾಯವು ಸಂಭವಿಸಿದುದನ್ನೂ ಕೇಳಿದ ಪಕ್ಷದಲ್ಲಿ, ನಿರಾಶರಾಗಿ ಸಮಸ್ತವಾನರಭಲ್ಲೂಕಸಮೂಹಗಳೊಡನೆ ಪ್ರಾಣವನ್ನೇ ಬಿಡುವರು.

ಎಲೈ ವಾನರೇಂದ್ರನೆ! ಇದಲ್ಲದೆ ಪತಿಭಕ್ತಿಯನ್ನೇ ನಾನು ಪುರಸ್ಕರಿಸಿ ನಡೆಯುವ ವಳಾದುದರಿಂದ, ರಾಮನ ಹೊರತು ಬೇರೊಬ್ಬ ಪುರುಷನ ಮೈಯ್ಯನ್ನು ಸ್ಪರ್ಶಿಸ ಲಾರೆನು. “ಆದರೆ ರಾವಣನು ನಿನ್ನನ್ನೆತ್ತಿಕೊಂಡು ಬರುವಾಗಲಾದರೂ ಅವನ ದೇಹವನ್ನು ನೀನು ಸ್ಪರ್ಶಿಸಲಿಲ್ಲವೆ” ಎಂದು ಶಂಕಿಸಬೇಡ. ಅದನ್ನು ನಾನು ಮನಃ ಪೂರ್ವಕವಾಗಿ ಮಾಡಿದವಳಲ್ಲ. ಆಗ ನನಗೆ ಯಾವುದನ್ನು ಮಾಡುವುದಕ್ಕೂ ಶಕ್ತಿ ಯಿಲ್ಲದೆ ಹೋಯಿತು. ನಾನು ಅನಾಥೆಯಾಗಿದ್ದೆನು. ದುಃಖದಿಂದ ನನ್ನ ಮೈ ಮೇಲೆಯೇ ನನಗೆ ಪ್ರಜ್ಞೆಯಿರಲಿಲ್ಲ. ಈ ಸ್ಥಿತಿಯಲ್ಲಿ ದುರಾತ್ಮನಾದ ರಾವಣನು ಬಲಾತ್ಕಾರದಿಂದ ನನ್ನನ್ನು ಮುಟ್ಟಿದರೆ ನಾನು ಮಾಡುವುದೇನು? ಆ ರಾಮನು ತಾನಾಗಿಯೇ ಇಲ್ಲಿಗೆ ಬಂದು ರಾವಣನನ್ನೂ, ಅವನ ಬಂಧುಗಳನ್ನೂ ಕೊಂದು, ಇಲ್ಲಿಂದ ನನ್ನನ್ನು ಕರೆದುಕೊಂಡು ಹೋಗುವುದೇ ಯುಕ್ತವು. ಯುದ್ಧದಲ್ಲಿ ಎಂತಹ ಶತ್ರುಗಳನ್ನಾದರೂ ಹುಟ್ಟಡಗಿಸತಕ್ಕ ಮಹಾಧೀರನಾದ ಆ ರಾಮನ ಪರಾಕ್ರಮಗಳನ್ನು ನಾನು ಬಹಳವಾಗಿ ಕೇಳಿರುವೆನು. ಕಣ್ಣಾರೆ ನೋಡಿಯೂ ಇರು ವೆನು. ದೇವಗಂಧರ್ವಯಕ್ಷರಾಕ್ಷಸರಲ್ಲಿ ಯಾರೂ ಯುದ್ಧರಂಗದಲ್ಲಿ ಅತನಿಗಿದಿರಲ್ಲ. ಮಹಾಬಲಾಢ್ಯನಾದ ಆ ರಾಮನು ಪರಾಕ್ರಮದಲ್ಲಿ ಇಂದ್ರನನ್ನೇ ಹೋಲುವನು. ಧನುರ್ವಿದ್ಯೆಯ ಚಿತ್ರಗತಿಗಳೆಲ್ಲವನ್ನೂ ತಿಳಿದವನು. ಅಂತಹ ರಾಮನು ವಾಯುವಿನ ಸಹಾಯದಿಂದ ಜ್ವಲಿಸುವ ಅಗ್ನಿಯಂತೆ, ಲಕ್ಷ್ಮಣಸಹಿತನಾಗಿ ಯುದ್ಧಕ್ಕೆ ನಿಂತರೆ, ಅವನ ವೀರ್ಯವನ್ನು ತಡೆಯಬಲ್ಲವನಾವನು? ಎಲೆ ವಾನರೋತ್ತಮನೆ! ಮದಿಸಿದ ದಿಗ್ಗಜದಂತೆ ಯುದ್ಧದಲ್ಲಿ ನಿಂತು, ಪ್ರಳಯಕಾಲಸೂರ್ಯನಂತೆ ಜ್ವಲಿಸುತ್ತ ಶತ್ರು ಗಳ ಗರ್ವವನ್ನಡಗಿಸತಕ್ಕ ಆ ರಾಮನು, ಲಕ್ಷ್ಮಣಸಹಿತನಾಗಿ ಬಂದು, ಸೂರ್ಯಕಿರಣ ಗಳಂತಿರುವ ತನ್ನ ತೀಕ್ಷ್ಣಬಾಣಗಳನ್ನು ಬಿಡುತ್ತಿದ್ದರೆ, ಆ ಬಾಣಗಳ ಜ್ವಾಲೆ ಯನ್ನು ತಡೆಯುವವನಾವನು? ಎಲೈ ಕಪಿವೀರನೆ! ನೀನು ಬೇಗನೆ ಹೊರಡು! ನನ್ನ ಪತಿಯಾದ ರಾಮನನ್ನೂ, ಲಕ್ಷ್ಮಣನನ್ನೂ, ವಾನರಯೂಥಪತಿಗಳೆಲ್ಲರನ್ನೂ ಶೀಘ್ರದಲ್ಲಿಯೇ ಇಲ್ಲಿಗೆ ಕರೆದುಕೊಂಡು ಬಾ! ಬಹುಕಾಲದಿಂದ ಆ ರಾಮನನ್ನು ಕುರಿತು ದುಃಖದಿಂದ ಕಂದಿ, ಕುಂದಿ, ಕೃಶಳಾಗಿರುವ ನನಗೆ ಸಂತೋಷವನ್ನುಂಟು ಮಾಡು” ಎಂದಳು.

1 ಇಲ್ಲಿಗೆ ಮೂವತ್ತೇಳನೆಯ ಸರ್ಗವು.

---

1. ಈ ಸರ್ಗದಲ್ಲಿ ಇದುವರೆಗೆ, “ಭಕ್ತಿಯುಳ್ಳವರಿಗೆ ಭಗವತ್ಪ್ರಾಪ್ತಿಗಾದರೂ ಉಪಾಯಾಂತರವನ್ನಾಶ್ರಯಿಸುವುದು ಸ್ವರೂಪವಿರುದ್ಧವೆಂದೂ, ಭಗವಂತನೇ ಅದಕ್ಕು ಪಾಯ” ವೆಂದೂ ಸೀತೆಯು ತಿಳಿಸಿದುದಾಗಿ ತತ್ವಾರ್ಥವು.

ರಾಮನ ನಂಬಿಕೆಗಾಗಿ ಒಂದು ಗುರುತನ್ನು ಕೊಡಬೇಕೆಂದು ಹನುಮಂತನು ಸೀತೆಯನ್ನು ಕೇಳಿದುದು. ಸೀತೆಯು ಕಾಕಾಸುರ ವೃತ್ತಾಂತವನ್ನು ಹೇಳಿ, ಚೂಡಾಮಣಿಯನ್ನು ಕೊಟ್ಟುದು.

ವಾಕ್ಯವಿಶಾರದನಾದ ಹನುಮಂತನು, ಸೀತೆಯ ಮಾತನ್ನು ಕೇಳಿ, ಧರ್ಮಯುಕ್ತವಾದ ಆಕೆಯ ಮಾತಿಗೆ ಬಹಳ ಸಂತುಷ್ಟನಾಗಿ, ಆಕೆಯನ್ನು ಕುರಿತು, "ಎಲೆ ದೇವಿ! ನೀನು ಹೇಳಿದುದೇನೋ ಯುಕ್ತವಾಗಿಯೇ ಇರುವುದು. ನಿನ್ನ ಮಾತು ಸ್ತ್ರೀಯರ ಸ್ವಭಾವಕ್ಕೂ, ಪತಿವ್ರತೆಯರ ವಿನಯಕ್ಕೂ ಅನುರೂಪವಾಗಿರುವುದು. 1 ವಿಶೇಷವಾಗಿ ಉಬ್ಬಿ ಬೆಳೆದ ಈ ನನ್ನ ಭುಜವನ್ನೇರಿಯಾದರೂ, ನೂರುಯೋಜನದಗಲವುಳ್ಳ ಈ ಮಹಾಸಾಗರವನ್ನು ದಾಟುವುದು ಹೆಂಗಸಿಗೆ ಸಾಧ್ಯವಲ್ಲವೆಂಬುದೂ ನಿಜವು. ಇದಲ್ಲದೆ ರಾಮನು ಹೊರತು ಬೇರೊಬ್ಬ ಪುರುಷನು ನಿನ್ನನ್ನು ಮುಟ್ಟಬಾರದೆಂದು ನೀನು ಎರಡನೆಯ ಕಾರಣವನ್ನು ಹೇಳಿದೆಯಲ್ಲವೆ? ಆ ಮಹಾತ್ಮನ ಪತ್ನಿಯಾದ ನಿನಗೆ ಆ ಮಾತೂ ಉಚಿತವಾಗಿಯೇ ಇರುವುದು. ಇಂತಹ ಪರಮಧರ್ಮಿಷ್ಠವಾದ ಮಾತನ್ನು ನೀನಲ್ಲದೆ ಬೇರೆ ಯಾವಳು ತಾನೇ ಹೇಳುವಳು? ನನ್ನ ಮುಂದೆ ನೀನು ರಾಮವಿರಹವನ್ನು ಸಹಿಸಲಾರದೆ ಆತ್ಮಹತ್ಯೆಗೆ ಪ್ರಯತ್ನಿಸಿದುದೇ ಮೊದಲಾದ ನಿನ್ನ ಸಮಸ್ತವ್ಯಾಪಾರಗಳನ್ನೂ, ನೀನು ರಾವಣನನ್ನು ತೃಣೀಕರಿಸಿ ಹೇಳಿದ ಮಾತುಗಳನ್ನೂ ನಾನು ಸಾಕಲ್ಯವಾಗಿ ರಾಮನಿಗೆ ತಿಳಿಸುವೆನು. ಎಲೆ ದೇವಿ! ನಾನೇ ನಿನ್ನನ್ನೆತ್ತಿಕೊಂಡು ಹೋಗಿ ರಾಮನಿಗೊಪ್ಪಿಸುವುದಾಗಿ ನಾನು ಸ್ವತಂತ್ರಿಸಿ ಹೇಳಿದ ಆ ಮಾತಿಗಾಗಿ ನೀನು ನನ್ನನ್ನು ಮನ್ನಿಸಬೇಕು! ನಾನು ಆ ಮಾತನ್ನಾಡುವುದಕ್ಕೆ ಕೆಲವು ಕಾರಣಗಳುಂಟು! ರಾಮನಲ್ಲಿ ಸ್ನೇಹಪರವಶನಾದ ನಾನು ಹೇಗಾದರೂ ಆತನಿಗೆ ಪ್ರಿಯವನ್ನುಂಟುಮಾಡಬೇಕೆಂಬ ಆತುರದಿಂದ ಈ ಮಾತನ್ನು ಹೇಳಿದೆನೇ ಹೊರತು ಬೇರೆಯಲ್ಲ. ದುರ್ಗಮವಾದ ಈ ಲಂಕೆಯನ್ನು ಪ್ರವೇಶಿಸುವುದಕ್ಕೂ, ಈ ಮಹಾಸಮುದ್ರವನ್ನು ದಾಟಿಬರುವುದಕ್ಕೂ ಬೇರೆಯವರಿಗೆ ಸಾಧ್ಯವಲ್ಲವೆಂದೂ, ನನಗೆ ಮಾತ್ರ ಆ ಸಾಮರ್ಥ್ಯವಿರುವುದೆಂದೂ, ತೋರಿಸುವುದಕ್ಕಾಗಿ ನಾನು ಹೀಗೆ ಸ್ವತಂತ್ರಿಸಿ, ಈ ಮಾತಾಡಿಬಿಟ್ಟೆನು.

---

1. "ಸ್ತ್ರೀತ್ವಂ ನತು ಸಮರ್ಥಂ ಹಿ ಸಾಗರಂ ವ್ಯತಿವರ್ತಿತುಂ। ಮಾಮಧಿಷ್ಠಾಯ ವಿಸ್ತೀರ್ಣಂ ಶತಯೋಜನಮಾಯತಂ॥" ಎಂದು ಮೂಲವು. ಇದಕ್ಕೆ ಸಮುದ್ರದಂತೆ ವಿಸ್ತೀರ್ಣವಾದ ನೂರುಯೋಜನಗಳ ವಿಸ್ತಾರವುಳ್ಳ ನನ್ನ ದೇಹವನ್ನೇರಿಯೂ ನಿನಗೆ ಸ್ತ್ರೀಸ್ವಭಾವಸಿದ್ಧವಾದ ಭೀತಿಯು ತಪ್ಪಲಾರದೆಂದು ಅರ್ಥಾಂತರವನ್ನೂ ಹೇಳಬಹುದು.

ಇದಲ್ಲದೆ ನನಗೆ ಆ ರಾಮನಲ್ಲಿರುವ ಅಸಾಧಾರಣಸ್ನೇಹವೂ, ಅವನಲ್ಲಿ ನನಗಿರುವ ಅಪಾರಭಕ್ತಿಯೂ, ನಿನ್ನನ್ನು ಈ ಕ್ಷಣವೇ ರಾಮನಬಳಿಗೆ ಸೇರಿಸಬೇಕೆಂಬ ಆತುರವನ್ನುಂಟುಮಾಡಿತು. ಆದರಿಂದ ನಾನು ಹೀಗೆ ಹೇಳಿಬಿಟ್ಟೆನು. ಎಲೆ ದೇವಿ! ನನ್ನೊಡನೆ ಬರುವುದು ನಿನಗೆ ಸಮ್ಮತವಲ್ಲದಿದ್ದಪಕ್ಷದಲ್ಲಿ, ನಾನು ನಿನ್ನನ್ನು ನೋಡಿ ಬಂದ ವಿಷಯದಲ್ಲಿ ರಾಮನಿಗೆ ನಂಬಿಕೆ ಹುಟ್ಟುವಂತೆ ಏನಾದರೂ ಒಂದು ಗುರುತನ್ನು ಕೊಡು!" ಎಂದನು. ಹೀಗೆ ಹನುಮಂತನು ರಾಮನಿಗಾಗಿ ಗುರುತನ್ನು ಕೇಳಿದೊಡನೆ, ಸೀತೆಗೆ ರಾಮನೊಡನೆ ತಾನು ಏಕಾಂತದಲ್ಲಿದ್ದಾಗ ನಡೆದ ಒಂದು ವೃತ್ತಾಂತವು ಸ್ಮರಣೆಗೆ ಬಂದು, ಆಕೆಯ ಕಣ್ಣುಗಳಲ್ಲಿ ಪಳಪಳನೆ ನೀರು ಸುರಿಯಿತು. ಆ ವ್ಯಸನದಿಂದ ತಡವರಿಸುವ ನುಡಿಯುಳ್ಳವಳಾಗಿ, ಆಕೆಯು ಬಹಳ ಗದ್ಗದ ಸ್ವರದಿಂದ ಹನುಮಂತನನ್ನು ಕುರಿತು "ಎಲೆ ಭದ್ರನೆ! ಚಿತ್ರಕೂಟಪರ್ವತಕ್ಕೆ ಸೇರಿದ ಒಂದಾನೊಂದು ಉಪಪರ್ವತದಲ್ಲಿ, ಈಶಾನ್ಯದಕಡೆಗೆ ಮಂದಾಕಿನೀ ನದಿಗೆ ಸಮೀಪವಾಗಿ, ಫಲಮೂಲಗಳಿಂದ ತುಂಬಿ ಜನಭರಿತವಾದ ಸಿದ್ಧಾಶ್ರಮ ಪ್ರದೇಶವೊಂದುಂಟು. ನಾನು ಅಲ್ಲಿನ ಋಷ್ಯಾಶ್ರಮದಲ್ಲಿರುವಾಗ ಒಂದು ಸಂಗತಿಯು ನಡೆಯಿತು. ಈಗ ನಾನು ಆ ವೃತ್ತಾಂತವನ್ನು ನಿನಗೆ ತಿಳಿಸುವೆನು! ಇದನ್ನೇ ನೀನು ರಾಮನಿಗೆ ಗುರುತಾಗಿ ನನ್ನ ಮಾತಿನಿಂದ ತಿಳಿಸು! "ಎಲೈ ಪ್ರಿಯನೆ! ನಾನಾವಿಧಪುಷ್ಪಗಂಧವುಳ್ಳ ಆಶ್ರಮೋಪವನಗಳಲ್ಲಿ ನಾನು ವಿಹರಿಸುತ್ತಿದ್ದು, ಆಯಾಸದಿಂದ ಬೆವರೇರಿ ನಿನ್ನ ತೊಡೆಯಮೇಲೆ ಕುಳಿತಿದ್ದೆನಷ್ಟೆ! ಆಗ ಒಂದು ಕಾಗೆಯು ಮಾಂಸಾಶೆಯಿಂದ ಬಂದು ನನ್ನ ಎದೆಯನ್ನು ಕುಕ್ಕಿತು. ಆಗ ನಾನು ಒಂದು ಮಣ್ಣುಹೆಂಟೆಯನ್ನೆಸೆದು ಆ ಕಾಗೆಯನ್ನು ಹೆದರಿಸಿ ಓಡಿಸುವುದಕ್ಕೆ ಹೋದೆನು. ಎಷ್ಟೆಷ್ಟು ಹೆದರಿಸಿದರೂ ಆ ಕಾಗೆಯು ಅಲ್ಲಿಂದ ಬಿಟ್ಟುಹೋಗದೆ, ಅಲ್ಲಲ್ಲಿಯೇ ಅಡಗಿಕೊಳ್ಳುತ್ತ, ಆಗಾಗ ಬಂದು ನನ್ನನ್ನು ಕುಕ್ಕುತ್ತಲೇ ಇತ್ತು. ಮತ್ತು ಅದು ಆಹಾರಾರ್ಥಿಯಾಗಿ ಆ ಸ್ಥಳವನ್ನು ಬಿಟ್ಟು ಕದಲದೆ, ನನ್ನ ಸ್ತನಮಾಂಸದಲ್ಲಿಯೇ ಅತ್ಯಾತುರದಿಂದ ಕಣ್ಣಿಟ್ಟು ಕಾದಿತ್ತು. ಆ ಕಾಗೆಯು ತಿರುತಿರುಗಿ ಬಂದು ನನ್ನ ಬಟ್ಟೆಯನ್ನೆಳೆದು ಹಿಂಸಿಸುತ್ತಿರಲು, ಅದನ್ನೋಡಿಸುವುದಕ್ಕಾಗಿ ನಾನು ನನ್ನ ಸೀರೆಯನ್ನೆಳೆದು ಬಿಗಿಯಾಗಿ ಕಟ್ಟಿಕೊಂಡು, ಕೋಪದಿಂದಿರುವಾಗ ನೀನು ನನ್ನನ್ನು ನೋಡಿದೆ! ನಾನು ಹಾಗೆ ಕೋಪಗೊಂಡು ಮೇಲಕ್ಕೆದ್ದು ನಿಂತು, ಆ ಕಾಗೆಯನ್ನಟ್ಟುವುದಕ್ಕಾಗಿ ಎಷ್ಟೆಷ್ಟು ಪ್ರಯತ್ನಪಟ್ಟರೂ, ಅದನ್ನು ತಡೆಯಲಾರದೆ ಹೋಗಲು, ನೀನು ನನ್ನನ್ನು ನೋಡಿ ಹಾಸ್ಯಮಾಡಿದೆ. ಅದಕ್ಕಾಗಿ ನಾನು ಲಜ್ಜೆಗೊಂಡು, ಆ ಕಾಗೆಯು ಮಾಂಸಾಶೆಯಿಂದ ನನ್ನನ್ನು ಕುಕ್ಕು

ತಿದ್ದರೂ, ಅದನ್ನೋಡಿಸಲಾರದೆ, ಹಿಂತಿರುಗಿ ಬಂದು ಮೊದಲಿನಂತೆ ನಿನ್ನ ತೊಡೆಯಮೇಲೆ ಕುಳಿತೆನು. ನಿನ್ನ ಹಾಸ್ಯವನ್ನು ನೋಡಿ ನನಗೆ ಇನ್ನೂ ಕೋಪವು ಹೆಚ್ಚಿತು. ನನ್ನ ಕಣ್ಣುಗಳಲ್ಲಿ ನೀರು ತುಳುಕುತ್ತಿತ್ತು. ಅದನ್ನು ನೋಡಿ ನೀನು ನಗುತ್ತ ಬಂದು ನನ್ನನ್ನು ಸಮಾಧಾನಪಡಿಸಿದೆ. ಎಲೆ ನಾಥನೆ! ನಾನು ಹಾಗೆ ಕಾಗೆಯಮೇಲೆ ಕೋಪಿಸಿ ಕಣ್ಣೀರನ್ನೊರಸಿಕೊಳ್ಳುತಿದ್ದುದನ್ನು ನೀನೂ ನೋಡುತಿದ್ದೆಯಲ್ಲವೆ?" ಎಂದು ನಾನು ಈ ಗುರುತನ್ನು ತಿಳಿಸಿದುದಾಗಿ ನನ್ನ ಪ್ರಿಯನಿಗೆ ಹೇಳು. ಎಲೈ ಹನುಮಂತನೆ! ಮುಂದೆ ನಡೆದ ವಿಷಯವನ್ನೂ ಹೇಳುವೆನು ಕೇಳು. ಹೀಗೆ [1] ನಾನು ಕಾಗೆಯನ್ನೋಡಿಸಿ ಬಹಳವಾಗಿ ಬಳಲಿದ್ದುದರಿಂದ, ಆ ನನ್ನ ಪ್ರಿಯನ ತೊಡೆಯಮೇಲೆ ಹಾಗೆಯೇ ಮಲಗಿ, ಬಹಳ ಹೊತ್ತಿನವರೆಗೆ ನಿದ್ರೆ ಮಾಡಿದೆನು. ನಾನು ನಿದ್ರೆಯಿಂದೆದ್ದಮೇಲೆ ನನ್ನ ತೊಡೆಯಮೇಲೆ ರಾಮನು ಮಲಗಿ ನಿದ್ರಿಸುತ್ತಿದ್ದನು. ಆ ಕಾಗೆಯೇ ಪುನಃ ಆ ಸ್ಥಳಕ್ಕೆ ಬಂದಿತು ನಾನು ಎಚ್ಚರಗೊಂಡು ರಾಮನ ತೊಡೆಯಿಂದೆದ್ದುದನ್ನು ಕಂಡು, ಆ ಕಾಗೆಯು ಮೊದಲಿನಂತೆಯೇ ಚಟ್ಟನೆ ನನ್ನಮೇಲೆ ಬಿದ್ದು, ನನ್ನ ಸ್ತನಾಂತರಗಳನ್ನು ಕುಕ್ಕಿತು. ನನ್ನ ಪ್ರಿಯನಿಗೆ ನಿದ್ರೆಯನ್ನು ಕೆಡಿಸಬಾರದೆಂಬುದಕ್ಕಾಗಿ, ನಾನು ಹಾಗೆಯೇ ಸುಮ್ಮನೆ ಕುಳಿತಿದ್ದೆನು. ಆ ಕಾಗೆಯು ಬಾರಿಬಾರಿಗೂ ಹಾರಿಬಂದು ನನ್ನ ಎದೆಯನ್ನು ಕುಕ್ಕಿ ಗಾಯಮಾಡಿತು. ಆ ಗಾಯದಿಂದ ಹೊರಟು ಕೆಲವು ರಕ್ತಬಿಂದುಗಳು ನನ್ನ ತೊಡೆಯಲ್ಲಿ ಮಲಗಿದ್ದ ರಾಮನಮೇಲೆ ಬಿದ್ದುವು ಹೀಗೆ ಆ ಕಾಗೆಯು ಬಹಳವಾಗಿ ನನ್ನನ್ನು ಬಾಧಿಸುತ್ತಿರಲು, ನನಗೆ [2] ಬೇರೆ ದಾರಿಯೇ ತೋರದೆ, ನನ್ನ ತೊಡೆಯಮೇಲೆ ಸುಖನಿದ್ರೆಯನ್ನು ಮಾಡುತಿದ್ದ ಪರಂತಪನಾದ ನನ್ನ ಪ್ರಿಯನನ್ನೇ ಎಚ್ಚರಗೊಳಿಸಿದೆನು. ಆಗ ನನ್ನ ಪ್ರಿಯನು ನನ್ನ ಸ್ತನಗಳಲ್ಲಿರುವ ಗಾಯವನ್ನು ನೋಡಿ, ಕಾಲಸರ್ಪದಂತೆ ಕೋಪಗೊಂಡವನಾಗಿ ನಿಟ್ಟುಸಿರನ್ನು ಬಿಡುತ್ತ "ಓಹೋ! ಪ್ರಿಯೆ! ಇದೇನು? ಹೀಗೆ ನಿನ್ನ ಸ್ತನಾಂತರವನ್ನು

---

1. ಇಲ್ಲಿ "ತಾವಾಗಿಯೇ ಸ್ವರಕ್ಷಣಕ್ಕಾಗಿ ಪ್ರಯತ್ನಿಸಿದವರನ್ನು ಈಶ್ವರನು ಉಪೇಕ್ಷಿಸುವನೆಂದೂ, ಯಾವ ಪ್ರಯತ್ನವನ್ನೂ ಮಾಡದೆ ಭಗವಂತನಲ್ಲಿಯೇ ಸರ್ವಭರನ್ಯಾಸ ಮಾಡಿ ಸುಮ್ಮನಿದ್ದ ಪಕ್ಷದಲ್ಲಿ, ಅಂತವರನ್ನು ಆತನು ತಾನಾಗಿಯೇ ರಕ್ಷಿಸುವನೆಂದೂ ಸೂಚಿತವಾಗುವುದು.

2. ಇಲ್ಲಿ "ಸಮಯಾ ಬೋಧಿತಶ್ಶ್ರೀಮಾನ್ ಸುಖಸುಪ್ತಃ ಪರಂತಪಃ" ಎಂದು ಮೂಲವು. ವಿಶೇಷಾರ್ಥವು:—(ಸಃ) ಸರ್ವಲೋಕವಿದಿತವಾದ ನಿರತಿಶಯಸೌಂದರ್ಯದಿಂದ ಪ್ರಸಿದ್ಧನಾದ ಆತನು. (ಮಯಾ ಬೋಧಿತಃ) ನನ್ನಿಂದಲೇ ಎಚ್ಚರಗೊಳಿಸಲ್ಪಟ್ಟವನಾಗಿ,

ಗಾಯಮಾಡಿದವನಾವನು? ಕೋಪಗೊಂಡ ಐದು ಹೆಡೆಯುಳ್ಳ ಹಾವಿನೊಡನೆ ಆಟವಾಡುವಂತೆ ಈ ಕೃತ್ಯವನ್ನು ಮಾಡಿದವನಾವನು? ಬೇಗನೆ ಹೇಳು" ಎಂದು ಕೇಳುತ್ತಾ ನಾಲ್ಕುಕಡೆಗಳಿಗೂ ಕಣ್ಣಿಟ್ಟು ನೋಡಿದನು. ರಕ್ತದಿಂದ ತೊಯ್ದು ತೀಕ್ಷ್ಣವಾದ ಉಗುರುಗಳುಳ್ಳ ಒಂದು ಕಾಗೆಯು ನನಗಿದಿರಾಗಿ ಕಾದಿರುವುದನ್ನು ಕಂಡನು. 1 ಇಂದ್ರನ ಮಗನೇ ಹಾಗೆ ವಾಯಸರೂಪದಿಂದ ಪಕ್ಷಿಗಳಲ್ಲಿ ಮೇಲೆನಿಸಿ ಕೊಂಡು ವಿನೋದಾರ್ಥವಾಗಿ ಈ ಭೂಮಿಗೆ ಬಂದಿದ್ದನಂತೆ! ಆ ವಾಯಸವೋ ಶೀಘ್ರಗತಿಯಲ್ಲಿ ವಾಯುದೇವನನ್ನೇ ಹೋಲುತಿತ್ತು. ಆ ವಾಯಸವನ್ನು ಕಂಡೊಡನೆ, ಮಹಾಬಾಹುವಾದ ನನ್ನ ಪ್ರಿಯನು ಕೋಪದಿಂದ ತಿರುಗುವ ಕಣ್ಣಾಲಿಯುಳ್ಳವನಾಗಿ, ಆಗಲೇ ಅದನ್ನು ಕೊಲ್ಲಬೇಕೆಂದು ನಿಶ್ಚಯಿಸಿಬಿಟ್ಟನು. ಈ ನಿಶ್ಚಯದಿಂದ ಆತನು ತಾನು ಕುಳಿತಿದ್ದ ದರ್ಭಾಸನದಲ್ಲಿಯೇ ಒಂದು ಹುಲ್ಲನ್ನೆಳೆದುಕೊಂಡು, ಅದನ್ನು ಬ್ರಹ್ಮಾಸ್ತ್ರಮಂತ್ರದಿಂದ ಅಭಿಮಂತ್ರಿಸಿ, ಆ ಕಾಗೆಯ ಮೇಲೆ ಪ್ರಯೋಗಿಸಿಬಿಟ್ಟನು. ಆಗಲೇ ಆ ದರ್ಭವು ಉರಿಯವ ಪ್ರಳಯ ಕಾಲಾಗ್ನಿಯಂತೆ ಜ್ವಲಿಸುತಿತ್ತು. ಹೀಗೆ, ಅಸ್ತ್ರಪ್ರಭಾವದಿಂದುರಿಯುವ ಆ ದರ್ಭೆಯನ್ನು ಕಾಗೆಯಮೇಲೆ ಪ್ರಯೋಗಿಸಿದೊಡನೆ, ಅದು ಆಕಾಶದಲ್ಲಿದ್ದ ವಾಯಸವನ್ನು ಬೆನ್ನಟ್ಟಿಹೋಯಿತು. ಹೀಗೆ ಬ್ರಹ್ಮಾಸ್ತ್ರವು ಬೆನ್ನಟ್ಟಿಬರುವುದನ್ನು ಕಂಡು ಆ ಕಾಗೆಯು, ತನ್ನ ಪ್ರಾಣರಕ್ಷಣೆಗಾಗಿ ನಿಂತ ಕಡೆಯಲ್ಲಿ ನಿಲ್ಲದೆ ವಿಚಿತ್ರಗತಿಯಿಂದ ಹೊರಟು, ತನಗೆ ರಕ್ಷಕರನ್ನು ಹುಡುಕುತ್ತ ಈ ಲೋಕವೆಲ್ಲವನ್ನೂ ಸುತ್ತಿತು. ಎಲ್ಲಿ ಹೋದರೇನು? ಆ ಕಾಗೆಯನ್ನು ಈ ಪ್ರಪಂಚದಲ್ಲಿ ಯಾವನೊಬ್ಬ

---

ಎಂದರೆ ಆತನು ನಿದ್ರಿಸುತಿದ್ದಾಗ ಆವನ ಶೋಭಾವಿಶೇಷವನ್ನನುಭವಿಸುವ ಭಾಗ್ಯವನ್ನು ನನಗೆ ನಾನೇ ಕೆಡಿಸಿಕೊಂಡಂತಾಯಿತೆಂದು ಭಾವವು. (ಶ್ರೀಮಾನ್ ಸುಖಸುಪ್ತಃ) ಕಾಂತಿವಿಶಿಷ್ಟನಾಗಿಯೇ ಸುಖನಿದ್ರೆಯನ್ನನುಭವಿಸುತಿದ್ದವನು. ಲೋಕದಲ್ಲಿ ಯಾವ ಮನುಷ್ಯನೇ ಆಗಲಿ, ಎಚ್ಚರಗೊಂಡಿರುವಾಗ ಲಕ್ಷಣವಿಶಿಷ್ಟನಾಗಿ ಕಾಣುವನೇಹೊರತು, "ಅಭ್ಯಕ್ತಮಿವ ಸ್ನಾತಮ್ ಚಿರಶುಚಿಮಿವ ಪ್ರಬುದ್ಧ ಇವ ಸುಪ್ತಮ್" ಎಂಬಂತೆ ನಿದ್ರಿಸುವಾಗ ಅವನ ದುರ್ಲಕ್ಷಣಾದಿದೋಷಗಳೆಲ್ಲವೂ ಹೊರಗೆ ಕಾಣುವುವು ಈ ರಾಮನು ಮಾತ್ರ, ಹಾಗಿಲ್ಲದೆ ನಿದ್ರಿಸುವಾಗಲೂ ನಿರತಿಶಯಶೋಭಾವಿಶಿಷ್ಟನೆಂದು ಭಾವವು. (ಪರಂತಪಃ) ನಿದ್ರಾವಸ್ಥೆಯಲ್ಲಿಯೂ ತನ್ನನ್ನು ನೋಡಿದ ಶತ್ರುಗಳಿಗೆ ಭಯವನ್ನುಂಟುಮಾಡತಕ್ಕವನು. ಇನ್ನು ಆತನು ಎಚ್ಚರಗೊಂಡರೆ ಹೇಳಬೇಕಾದುದೇನೆಂಬೂ ಭಾವವು.

1. ಇಲ್ಲಿ ಇಂದ್ರಪುತ್ರನಾದ ಜಯಂತನೇ ವಾಯಸರೂಪದಿಂದ ಬಂದುದಾಗಿ ಕೆಲವರು ಹೇಳುವರು. ಬೇರೆ ಕೆಲವರು ಈತನು ಜಯಂತನಲ್ಲವೆಂದೂ, ಇಂದ್ರನಿಗೆ ಬೇರೊಬ್ಬ ಪುತ್ರನೆಂದೂ ಹೇಳುವರು ರಾಮನು ಅವನನ್ನು ರಕ್ಷಿಸಿದಮೇಲೆ ಆತನು ಇಂದ್ರಪುತ್ರ

ನೂ ರಕ್ಷಿಸಲಾರದೆ ಹೋದನು. 1 ತಂದೆಯಾದ ಇಂದ್ರನೂ ಕೈಬಿಟ್ಟನು. ದೇವತೆ

---

ನೆಂಬುದನ್ನು ಸೀತೆಗೂ ತಿಳಿಸಿದುದರಿಂದ ಆ ವಿಷಯವನ್ನೇ ಆಕೆಯು ಇಲ್ಲಿ ಹನುಮಂತನಿಗೆ ತಿಳಿಸಿದುದಾಗಿ ಗ್ರಾಹ್ಯವು.

1. ಇಲ್ಲಿ "ಸ ಪಿತ್ರಾ ಚ ಪರಿತ್ಯಕ್ತಸ್ಸುರೈಶ್ಚ ಸಮಹರ್ಷಿಭಿಃ। ತ್ರೀನ್ ಲೋಕಾನ್ ಸಂಪರಿಕ್ರಮ್ಯ ತಮೇವ ಶರಣಂಗತಃ" ಎಂದು ಮೂಲವು. ವಿಶೇಷಾರ್ಥವು:— ಈ ಶ್ಲೋಕಾರ್ಥದಿಂದ ಭಗವದ್ವ್ಯತಿರಿಕ್ತರಾದ ಇತರ ಬಂಧುಗಳಾರೂ ಯಾವವಿಧದಲ್ಲಿಯೂ ರಕ್ಷಕರಲ್ಲವೆಂದು ಸೂಚಿತವಾಗುವುದು. (ಸಃ) ಅಂತಹ ಮಹಾಪರಾಧಿಯು ಎಂದರೆ, ಸಾಕ್ಷಾತ್ತಾಗಿ ಭಗವಂತನಲ್ಲಿಯೇ ಅಪರಾಧಮಾಡಿದವರನ್ನೂ ಕೂಡ ತನ್ನ ಪುರುಷಕಾರದಿಂದ ಮನ್ನಿಸಿ ಕಾಪಾಡತಕ್ಕ ಲಕ್ಷ್ಮೀದೇವಿಯಲ್ಲಿಯೇ ಅಪರಾಧಮಾಡಿದವನು (ಸಃ) ನಖೈಸ್ಸರುಧಿರೈಃ" ಎಂಬಂತೆ ಇನ್ನೂ ಆರ್ದ್ರಾಪರಾಧವುಳ್ಳವನು. (ಸಃ) ಒಂದುವೇಳೆ ತನ್ನಲ್ಲಿ ಅಪರಾಧಿಯಾದವರೂ ಕ್ಷಮಿಸುವನೇ ಹೊರತು, ತನ್ನ ಕಡೆಯವರಲ್ಲಿ ತಪ್ಪುಮಾಡಿದವರನ್ನು "ನ ಕ್ಷಮಾಮಿ-ಸಹಿಸುವವನಲ್ಲ" ವೆಂದು ಶಪಥಮಾಡಿರುವ ರಾಮನ ಪ್ರತಿಜ್ಞೆಗೆ ವಿರುದ್ಧವಾಗಿ ನಡೆದವನು. (ಸಃ) "ಬಂಧುಶ್ಚ ಪಿತಾ ಚ ಮಮ ರಾಘವಃ" ಎಂಬಂತೆ ನಿರುಪಾಧಿಕಬಂಧುವೆನಿಸಿದ ಈಶ್ವರನಿಂದಲೇ ಕೈಬಿಡಲ್ಪಟ್ಟವನು. ಇಂತಹ ಕಾಕಾಸುರನು (ಪಿತ್ರಾ ಚ ಪರಿತ್ಯಕ್ತಃ) ತನ್ನ ಹೆತ್ತತಂದೆಯಿಂದಲೂ ತ್ಯಜಿಸಲ್ಪಟ್ಟನು. (ಸುರೈಶ್ಚ ಸಮಹರ್ಷಿಭಿಃ ತಂದೆ, ತಾಯಿ, ಮೊದಲಾದ ಸ್ವಕುಟುಂಬದವರಿಂದಲೇ ಅಲ್ಲದೆ ಹೊರಗಿನವರಿಂದಲೂ ಕೈಬಿಡಲ್ಪಟ್ಟನು. (ಪಿತ್ರಾ ಚ) ದೇವೇಂದ್ರನೇ ತಂದೆಯಾದರೂ ಆ ದೇವೇಂದ್ರನಿಂದಲೂ ತ್ಯಜಿಸಲ್ಪಟ್ಟವನು. "ಇಂದ್ರೋ ಮಹೇಂದ್ರಸ್ಸುರನಾಯಕೋ ವಾ ತ್ರಾತುಂ ನ ಶಕ್ತಾ ಯುಧಿ ರಾಮವಧ್ಯಮ್" ಎಂಬಂತೆ, ತಾನು ದೇವೇಂದ್ರನೆನಿಸಿದ್ದರೂ ರಾಮನ ವಿಷಯದಲ್ಲಿ ತನಗಿರುವ ಅಸಾಮರ್ಥ್ಯವನ್ನು ತಿಳಿದ ಅವನೂ ಕೈಬಿಟ್ಟನೆಂದು ಭಾವವು. (ಪಿತ್ರಾ ಚ ಪರಿತ್ಯಕ್ತಃ). ಹೊಟ್ಟೆಯಲ್ಲಿ ಹುಟ್ಟಿದ ಮಗನು ಎಷ್ಟೇ ದೊಡ್ಡತಪ್ಪನ್ನು ನಡೆಸಿದರೂ, ತಂದೆತಾಯಿಗಳು ಅದನ್ನು ಮರೆಸಿಟ್ಟು ರಕ್ಷಿಸುವುದು ಲೋಕಸ್ವಭಾವವಾಗಿದ್ದರೂ, ಈತನು ಮಾಡಿರುವ ಮಹಾಪರಾಧಕ್ಕೆ ಇವನಿಗೆ ವಧವೇ ತಕ್ಕ ಶಿಕ್ಷೆಯೆಂದೆಣಿಸಿ ತಂದೆಯೂ ಕೈಬಿಡುವಂತಾಯಿತೆಂದೂ ಭಾವವು. ಅಥವಾ (ಪಿತ್ರಾ ಚ ಪರಿತ್ಯಕ್ತಃ) "ಸರ್ವೇಷಾಮೇವ ಲೋಕಾನಾಂ ಪಿತಾ" ಎಂದೂ, "ದೇವದೇವೋ ಹರಿಃ ಪಿತಾ" ಎಂದೂ, ಸರ್ವಲೋಕಪಿತನೆನಿಸಿದ ಸರ್ವೇಶ್ವರನೇ ಕೈಬಿಟ್ಟಿರುವಾಗ, ನನ್ನದೇನೆಂದು ಹೆತ್ತತಂದೆಯೂ ಕೈಬಿಟ್ಟುದಾಗಿ ಭಾವವು. (ಪರಿತ್ಯಕ್ತಃ) ಸುಮ್ಮನೆ ಹೆದರಿಸಬೇಕೆಂದು ಪರೀಕ್ಷಾರ್ಥವಾಗಿ ಕೈಬಿಟ್ಟುದಲ್ಲ. ಬುದ್ಧಿಪೂರ್ವಕವಾಗಿಯೇ ತ್ಯಜಿಸಲ್ಪಟ್ಟವನು ಎಂದರೆ, "ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್"

ಗಳೂ ಕೈಬಿಟ್ಟರು. ಮಹರ್ಷಿಗಳೂ ಅದನ್ನು ರಕ್ಷಿಸಲಾರದೆ ಹೋದರು. ಹೀಗೆ ಮೂರುಲೋಕಗಳನ್ನೂ ಸುತ್ತಿ, ಎಲ್ಲಿಯೂ ರಕ್ಷಕರನ್ನು ಕಾಣದೆ, ಕೊನೆಗೆ ಆ ನನ್ನ

---

ಎಂಬ ನ್ಯಾಯದಿಂದ ಮನಃಪೂರ್ವಕವಾಗಿಯೇ ಕೈಬಿಡಲ್ಪಟ್ಟವನೆಂದು ಭಾವವು.(ಪರಿತ್ಯಕ್ತಃ) ಅವನೊಬ್ಬನು ಮಾತ್ರವೇ ಅಲ್ಲದೆ, ಭಾರ್ಯಾಪುತ್ರಾದಿಪರಿವಾರಗಳೊಡನೆ ತ್ಯಜಿಸಲ್ಪಟ್ಟವನು. ತಾಯಿಯಾದರೂ ಕಾಪಾಡಲಿಲ್ಲವೆ? ಎಂದರೆ (ಪಿತ್ರಾಚ) ಇಲ್ಲಿನ ಚಕಾರದಿಂದ ತಾಯಿಯೂ ಕೈಬಿಟ್ಟುದಾಗಿ ಸೂಚಿತವು. "ಸೀತಾ ನಾರೀಜನಸ್ಯಾಸ್ಯ ಯೋಗಕ್ಷೇಮಂ ವಿಧಾಸ್ಯತಿ" ಎಂದೂ, "ತ್ವಂ ಮಾತಾ ಸರ್ವಲೋಕಾನಾಂ" ಎಂದೂ, ಸಮಸ್ತ ಸ್ತ್ರೀಜನಕ್ಕೂ ಹಿತಕಾರಿಣಿಯಾಗಿ, ಸರ್ವಲೋಕಜನನಿಯಾದ ಸೀತೆಯೇ ಅಪರಾಧಿಯಾದ ಅತನಿಗೆ ಹೆತ್ತ ತಾಯಿಯಾಗಿದ್ದೂ ಕೈಬಿಟ್ಟಳೆಂದು ಭಾವವು. ತಂದೆತಾಯಿಗಳು ಕೈಬಿಟ್ಟರೂ ಅವನ ಸಜಾತೀಯರಾದ ದೇವತೆಗಳಾದರೂ ಕಾಪಾಡಲಿಲ್ಲವೆ? ಎಂದರೆ (ಸುರೈಶ್ಚ) "ಕಸ್ಯ ಬಿಭ್ಯತಿ ದೇವಾಶ್ಚ ಜಾತರೋಷಸ್ಯ ಸಂಯುಗೇ" ಎಂಬಂತೆ, ರಾಮನ ಕೋಪಕ್ಕೆ ದೇವತೆಗಳೂ ಹೆದರುವುದರಿಂದ, ಸಜಾತೀಯರಾದ ದೇವತೆಗಳೂ ಕೈಬಿಟ್ಟರೆಂದು ಭಾವವು. ಇಲ್ಲಿಯೂ ಸಮುಚ್ಚಯದಿಂದ, ಹಿಂದಿನರೂಪದಲ್ಲಿ ಸಜಾತೀಯರಾದ ದೇವತೆಗಳು ಮಾತ್ರವೇ ಅಲ್ಲದೆ, ಪ್ರಕೃತರೂಪದಲ್ಲಿ ಸಜಾತೀಯಗಳಾದ ಪಕ್ಷಿಜಾತಿಗಳೂ ಕೈಬಿಟ್ಟುವೆಂದು ಸೂಚಿತವು. ಇವರೆಲ್ಲರೂ ಕೈಬಿಟ್ಟರೂ ಅನೃಶಂಸ್ಯವೇ ಪ್ರಧಾನಧರ್ಮವಾಗಿ ಉಳ್ಳ ಮಹರ್ಷಿಗಳಿಗಾದರೂ ಅವನಲ್ಲಿ ಮರುಕವಿಲ್ಲದೆ ಹೋಯಿತೆ? ಎಂದರೆ (ಸಮಹರ್ಷಿಭಿಃ) ಮಹರ್ಷಿಗಳೂ ಅವನನ್ನು ರಕ್ಷಿಸದೆ ತ್ಯಜಿಸಿಬಿಟ್ಟರು, ಋಷಿಗಳೆಂದರೆ ಬಹಳ ದೂರದರ್ಶಿಗಳೆಂದರ್ಥವು. ತಮ್ಮ ಅನೃಶಂಸ್ಯಕ್ಕೆ ಏರ್ಪಟ್ಟಿರುವ ಎಲ್ಲೆಯು ಎಷ್ಟುಮಾತ್ರವೆಂಬುದನ್ನು ತಿಳಿದುಕೊಂಡು, ತಾವೂ ಅವನನ್ನು ಕೈಬಿಟ್ಟರೆ, ಬೇರೆ ದಿಕ್ಕಿಲ್ಲದುದಕ್ಕಾಗಿ ಅವನು ರಾಮನಲ್ಲಿಯೇ ಮರೆಹೊಕ್ಕು ಅವನಿಂದುದ್ಧೃತನಾಗಬಹುದೆಂದು ದೂರದೃಷ್ಟಿಯಿಂದ ಪರ್ಯಾಲೋಚಿಸಿ, ಋಷಿಗಳೂ ಕೈಬಿಟ್ಟುದಾಗಿ ಭಾವವು. ಆ ಋಷಿಗಳು ಇವನನ್ನು ಸಮೀಪಕ್ಕಾದರೂ ಬರಮಾಡಿಕೊಂಡು ಅವನ ಕಷ್ಟಸುಖಗಳನ್ನು ವಿಚಾರಿಸಿ ಕಳುಹಿಸಿದರೆ? ಎಂದರೆ (ಪರಿತ್ಯಕ್ತಃ) ಅವನನ್ನು ಸಮೀಪಕ್ಕೂ ಬರಮಾಡಿಕೊಳ್ಳದೆ ಹೊರಡಿಸಿದರೆಂದರ್ಥವು. ಏಕೆಂದರೆ "ಯಃ ಪುತ್ರಃ ಪಿತರಂ ದ್ವೇಷ್ಟಿ ತಂ ವಿಂದ್ಯಾದನ್ಯರೇತಸಮ್ । ಯಸ್ತು ನಾರಾಯಣಂ ದ್ವೇಷ್ಟಿ ತಂ ವಿಂದ್ಯಾದಂತ್ಯರೇತಸಮ್" ಎಂಬಂತೆಯೂ, "ಚಾಂಡಾಲಃ ಪಕ್ಷಿಣಾಂ ಕಾಕಃ" ಎಂಬಂತೆಯೂ, ವಿಷ್ಣುದ್ವೇಷರೂಪವಾದ ಕರ್ಮದಿಂದಲೂ, ಜಾತಿಯಿಂದಲೂ ಚಂಡಾಲನೆನಿಸಿಕೊಂಡ ಆ ಕಾಗೆಯನ್ನು ತಮ್ಮ ಆಶ್ರಮದ ಬಾಗಿಲಿಗೂ ಬರಗೊಳಿಸದೆ ಓಡಿಸಿದರೆಂದು ಭಾವವು. ಇದರಿಂದ ಅತನು (ತ್ರೀನ್ ಲೋಕಾನ್ ಸಂಪರಿಕ್ರಮ್ಯ) ಭೂಮ್ಯಂತರಿಕ್ಷಸ್ವರ್ಗಗಳೆಂಬ ಮೂರು ಲೋಕ

ಪ್ರಿಯನಾದ ರಾಮನನ್ನೇ ಮರೆಹೊಕ್ಕಿತು. [1] ಲೋಕಶರಣ್ಯನಾದ ಆ ರಾಮನಾದರೋ ಹೀಗೆ ತನ್ನಲ್ಲಿ ಮರೆಹೊಕ್ಕು, ತನ್ನ ಮುಂದೆ ನೆಲದಮೇಲೆ ಬಿದ್ದು ಹೊರಳುತ್ತಿದ್ದ ಆ ಕಾಗೆಯನ್ನು ನೋಡಿ, ಅವನು ವಧಾರ್ಹನಾಗಿದ್ದರೂ ಅವನಲ್ಲಿ ಮರುಕಗೊಂಡು ಕೃಪೆಯಿಂದ ರಕ್ಷಿಸಿಬಿಟ್ಟನು. ಆ ವಾಯಸವು ಯಾವಯಾವ ಲೋಕಗಳನ್ನು ತಿರುಗಿದರೂ, ರಾಮನುಪ್ರಯೋಗಿಸಿದ ಹುಲ್ಲಿನಿಂದ ತಪ್ಪಿಸಿಕೊಳ್ಳಲಾರದೆ ಆತನಲ್ಲಿಯೇ ಮರೆಹುಗಬೇಕಾಯಿತು. ಹೀಗೆ ಭಯದಿಂದಲೂ, ದುಃಖದಿಂದಲೂ ಬಂದು ತನ್ನಲ್ಲಿ ಶರಣಾಗತನಾದ ಆ ಕಾಗೆಯನ್ನು ನೋಡಿ, ನನ್ನ ಪ್ರಿಯನಾದ ರಾಮನು, ಆತನಲ್ಲಿ ದಯಾದೃಷ್ಟಿಯಿಂದ "ಎಲೈ ವಾಯಸವೆ! ಈಗ ನಾನು

---

ಗಳನ್ನೂ ತಿರುಗಿಬಂದು. ಭೂಮಿಯಲ್ಲಿ ಮಹರ್ಷಿಗಳಿಂದಲೂ, ಅಂತರಿಕ್ಷದಲ್ಲಿ ಸಜಾತೀಯ
ಪಕ್ಷಿಗಳಿಂದಲೂ, ಸ್ವರ್ಗದಲ್ಲಿ ದೇವತೆಗಳಿಂದಲೂ ತಿರಸ್ಕೃತನಾಗಿ, (ಸಂಪರಿಕ್ರಮ್ಯ) ಒಂದಾ
ವರ್ತಿಯಲ್ಲ! ಎರಡಾವರ್ತಿಯಲ್ಲ! ಅನೇಕಾವರ್ತಿ ಸುತ್ತಿಸುತ್ತಿ ಬಂದು, ಕೊನೆಗೆ (ತಮೇವ
ಶರಣಂಗತಃ) ಆ ರಾಮನನ್ನೇ ಮರೆಹೊಕ್ಕನು. "ಸಗಣಿಯುವನೊಡನೆ ಸ್ನೇಹಮಾಡುವು
ದಕ್ಕಿಂತಲೂ ಗಂಧದವನೊಡನೆ ಗುದ್ದಾಡುವುದೇ ಲೇಸು" ಎಂಬ ಸಾಮತಿಯಂತೆ, ತನಗೆ
ರಕ್ಷಕರಾಗಿ ಬರುವ ಬೇರೆ ದೇವತಾದಿಗಳಿಗಿಂತಲೂ, ತನ್ನನ್ನು ಕೊಲ್ಲುವುದಕ್ಕಾಗಿ ಬಂದ ಆ
ರಾಮನ ಮುಖವೇ ಅಪ್ಯಾಯನಕರವೆಂಬ ಭಾವದಿಂದ, ಅವನಲ್ಲಿಯೇ ಮರೆಹೊಕ್ಕನೆಂದೂ
ಭಾವವು. ಮತ್ತು (ತಮೇವ) ಯಾವನು "ಯದಿ ವಾ ರಾವಣಸ್ಸ್ವಯಮ್" ಎಂಬದಾಗಿ
ತನ್ನಲ್ಲಿ ಮಹಾಪರಾಧಿಯಾದ ರಾವಣನನ್ನೂ ರಕ್ಷಿಸುವುದಾಗಿದ್ದನೋ ಅತನನ್ನೇ ಮರೆ
ಹೊಕ್ಕನು. (ತಮೇವ) "ದೋಷೋ ಯದ್ಯಪಿ ತಸ್ಯ ಸ್ಯಾತ್, ನ ತ್ಯಜೇಯಂ" ಅವನಲ್ಲಿ
ಯಾವ ದೋಷವಿದ್ದರೂ ಇರಲಿ! ನಾನು ಕೈಬಿಡುವವನಲ್ಲ'ವೆಂದು ಹೇಳಿದ ಪರಮದಯಾಳು
ವಾದ ಆ ರಾಮನಲ್ಲಿಯೇ ಮರೆಹೊಕ್ಕನು. (ಶರಣಂ ಗತಃ) ಉಪಾಯಬುದ್ಧಿಯಿಂದ ಸೇರಿ
ದವನಲ್ಲ. "ನಿವಾಸವೃಕ್ಷಸ್ಸಾಧೂನಾಮ್" ಎಂಬಂತಿರುವ ಅತನನ್ನೇ ಆಶ್ರಯಸ್ಥಾನ
ವನ್ನಾಗಿಯೂ ಸೇರಿದನೆಂದು ಭಾವವು. ಈ ಶ್ಲೋಕಾರ್ಧದಿಂದ ಭಗವಂತನಲ್ಲಿ ರಕ್ಷಣೆಯನ್ನು
ಬೇಡುವುದಕ್ಕೆ, ಅಪರಾಧಭೂಯಿಷ್ಠತ್ವವೂ, ಅನನ್ಯಗತಿತ್ವವೂ ಸಾಧನಗಳಾಗಿ ಹೇಳಲ್ಪಟ್ಟಿ
ರುವುವಲ್ಲದೆ. ತನ್ನಲ್ಲಿ ಎಷ್ಟೇ ಮಹಾಪರಾಧಿಗಳಾಗಿದ್ದರೂ ಕೂಡ, ಬೇರೆ ಗತಿಯಿಲ್ಲದೆ, ತನ್ನನ್ನೇ
ದಿಕ್ಕಾಗಿ ಹೊಂದಿದರೆ ಈಶ್ವರನು ತಾನೇ ರಕ್ಷಿಸುವನೆಂದೂ ಸೂಚಿತವು.

1. ಇಲ್ಲಿ "ಸ ತಂ ನಿಪತಿತಂ ಭೂಮೌ ಶರಣ್ಯಶ್ಶರಣಾಗತಮ್ । ವಧಾರ್ಹಮಪಿ ಕಾಕು
ತ್ಸ್ಥಃ ಕೃಪಯಾ ಪರ್ಯಪಾಲಯತ್" ಎಂದು ಮೂಲವು. ವಿಶೇಷಾರ್ಥವು:—(ಸಃ) ಆಶ್ರಿತ
ರಕ್ಷಣವೊಂದೇ ಸ್ವಭಾವವಾಗಿ ಉಳ್ಳ ಅತನು (ತಂ) ಅಪ್ರೀತಿಕರವಾದವೇ ಸ್ವಭಾವವಾಗಿಉಳ್ಳ ಆ
ಕಾಕಾಸುರನನ್ನು, (ಭೂಮೌ ನಿಪತಿತಂ) ದೇವಜಾತಿಯವನಾದುದರಿಂದ. ಭೂಮಿಯನ್ನು

ಪ್ರಯೋಗಿಸಿರುವ ಈ ಬ್ರಹ್ಮಾಸ್ತ್ರವಾದರೋ, ಹೇಗೂ ನಿರರ್ಥಕವಾಗಿ ಹೋಗತಕ್ಕದಲ್ಲ. ಇದಕ್ಕೆ ನಾನು ಮಾಡಬೇಕಾದುದೇನು ? ಈ ನನ್ನ ಬ್ರಹ್ಮಾಸ್ತ್ರವೂ ವ್ಯರ್ಥವಾಗದೆ, ನಿನ್ನ ಪ್ರಾಣವೂ ಉಳಿಯುವುದಕ್ಕೆ ಉಪಾಯವೇನು ?'' ಎಂದನು. ಆಗ ವಾಯಸವು, ನನ್ನ ಪ್ರಿಯನನ್ನು ಕುರಿತು "ರಾಮಾ ! ಹಾಗಿದ್ದರೆ, ಈ ನಿನ್ನ ಬಾಣವು ನನ್ನ ಬಲದ ಕಣ್ಣನ್ನು ಕೆಡಿಸಲಿ'' ಎಂದಿತು. ಆಗ ರಾಮನು ಆ ಬ್ರಹ್ಮಾಸ್ತ್ರದಿಂದ ಆ ಕಾಗೆಯ ಬಲದ ಕಣ್ಣನ್ನು ಕೆಡಿಸಿಬಿಟ್ಟನು. ಹೀಗೆ ಆ ವಾಯಸವು ತನ್ನ ಬಲದ ಕಣ್ಣನ್ನು ಮಾತ್ರ ಬ್ರಹ್ಮಾಸ್ತ್ರಕ್ಕೆ ಗುರಿಮಾಡಿ ತನ್ನ ಪ್ರಾಣವನ್ನುಳಿಸಿಕೊಂಡಿತು. ಆಮೇಲೆ ವಾಯಸವು ನನ್ನ ಪ್ರಿಯನಾದ ರಾಮನಿಗೂ, ಸ್ವರ್ಗದಲ್ಲಿ ತನಗೆ ಸಖನಾದ ದಶರಥಮಹಾರಾಜನಿಗೂ ನಮಸ್ಕರಿಸಿ, ಆ ರಾಮನಿಂದ ಅನುಜ್ಞೆಯನ್ನು ಪಡೆದು, ತನ್ನ ನಿವಾಸಕ್ಕೆ ಹೊರಟುಹೋಯಿತು. ಎಲೈ ಹನುಮಂತನೆ ! ಈ ನಮ್ಮ ಸಂಕೇತ ವೃತ್ತಾಂತಗಳೆಲ್ಲವನ್ನೂ ನನ್ನ ಪ್ರಿಯನಾದ ರಾಮನಿಗೂ ತಿಳಿಸು ! ಮತ್ತು ನೀನು ಆ ರಾಮನಲ್ಲಿಗೆ ಹೋಗಿ ನಾನು ಹೇಳಿದುದಾಗಿ ಈ ಮಾತುಗಳನ್ನೂ ಹೇಳು, "ಎಲೆ ನಾಥನೆ ! ಮೊದಲು ನೀನು ನನಗಾಗಿ ಅತ್ಯಲ್ಪಜಂತುವಾದ ಒಂದು ಕಾಗೆಯಲ್ಲಿಯೂ ಕೂಡ ಅಷ್ಟು ದೊಡ್ಡ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದೆಯಲ್ಲವೆ ? ಈಗ ನಿನ್ನನ್ನೇ ವಂಚಿಸಿ, ನನ್ನನ್ನು ಕದ್ದುತಂದ ಮಹಾಪರಾಧಿಯಾದ ಈ ರಾವಣನ ವಿಷಯದಲ್ಲಿ ಕ್ಷಮೆಯನ್ನು ತೋರಿಸುವೆಯಾ ? [1] ಎಲೈ ಪುರುಷಶ್ರೇಷ್ಠನೆ ! ನೀನು ದಯಾನಿಧಿಯೆಂದು ಲೋಕಪ್ರಸಿದ್ಧನಾದವನಲ್ಲವೆ ?

---

ಸ್ಪರ್ಶಿಸಬಾರದಾಗಿದ್ದರೂ, ಅದನ್ನೂ ಎಣಿಸದೆ ನೆಲದಲ್ಲಿ ಬಿದ್ದಿರುವವನು. (ಭೂಮೌ ನಿಪತಿತಂ) ತಂದೆಯು ಮಗನನ್ನು ಶಿಕ್ಷಿಸುವಾಗ, ಆ ಮಗನು ತಾಯಿಯ ಪಾದದಲ್ಲಿ ಬೀಳುವಂತೆ, ಜಗತ್ಪತಿಯಾದ ರಾಮನ ಕ್ರೋಧಕ್ಕೊಳಪಟ್ಟು, ಅವನ ಪತ್ನಿಯಾದ ಭೂಮಿಯನ್ನು ಮರೆಹೊಕ್ಕಂತಿರುವವನು. ಇಂತಹ ಕಾಕಾಸುರನನ್ನು (ಶರಣ್ಯಃ) ಸರ್ವಾವಸ್ಥೆಗಳಲ್ಲಿಯೂ ಶರಣುಹೊಂದುವುದಕ್ಕೆ ಶಕ್ಯನಾದ (ಕಾಕುತ್ಸ್ಥಃ) ಶರಣಾಗತರಕ್ಷಣವೇ ಕುಲಧರ್ಮವಾಗಿ ಉಳ್ಳ ರಾಮನು (ವಧಾರ್ಹಮಪಿ) ತನಗೇ ಕೊಲ್ಲಬೇಕೆನಿಸು ತೋರಿದ್ದರೂ, (ಕೃಪಯಾ ಪರ್ಯಪಾಲಯತ್) ತನ್ನ ಕೃಪೆಗೇ ತಾನು ವಶನಾಗಿ ರಕ್ಷಿಸಿಬಿಟ್ಟನು. ಎಂದರೆ, ನಮ್ಮಂತವರು ಪ್ರಯತ್ನಿಸಿದ ಯಾವಕಾರ್ಯವೂಕೂಡ ಪ್ರಬಲಕರ್ಮದಿಂದ ನಿಂತು ಹೋಗುವಂತೆ, ಇಲ್ಲಿ ಈಶ್ವರಪ್ರಯತ್ನವೂ ಕೃಪಾಧೀನವಾಗಿ ಪೂರ್ತಿಹೊಂದದೆ ನಿಂತಿತೆಂದು ಭಾವವು.

1. ಇಲ್ಲಿ "ಸ ಕುರುಷ್ವ ಮಹೋತ್ಸಾಹಃ ಕೃಪಾಂ ಮಯಿ ನರರ್ಷಭ'' ಎಂದು ಮೂಲವು. ವಿಶೇಷಾರ್ಥವು:—(ಸಃ) ಇತರರ ದುಃಖವನ್ನು ನೋಡಿ "ನ ಸಹಾಮಹೇ'' ನಾವು ಸ್ವಲ್ಪವೂ ಸಹಿಸಲಾರೆವು'' ಎಂದು ಹೇಳಿದಂತವನು, ಮತ್ತು (ಮಹೋತ್ಸಾಹಃ) ಹಾಗೆ ಬಾಯಿಂದ ಹೇಳಿದುದು ಮಾತ್ರವೇ ಅಲ್ಲದೆ, ಅದನ್ನು ಅನುಷ್ಠಾನಪರ್ಯಂತವಾಗಿಯೂ ನಡೆಸತಕ್ಕವನು.

ಆ ದಯೆಯನ್ನು ನನ್ನಲ್ಲಿ ತೋರಿಸಬೇಡವೆ? ನಿನ್ನ ಮಹೋತ್ಸಾಹಗಳೆಲ್ಲವನ್ನೂ ಉಪಯೋಗಿಸಿ ನನ್ನನ್ನು ರಕ್ಷಿಸಬೇಡವೆ? ನೀನು ನನಗೆ ನಾಥನಾಗಿರುವಾಗಲೂ, ನನ್ನನ್ನು ಅನಾಥೆಯನ್ನಾಗಿ ಬಿಟ್ಟಿರುವೆಯಲ್ಲಾ! ಇದು ನಿನಗೆ ನ್ಯಾಯವೆ? ದಯಾಗುಣವೇ ಪರಮಧರ್ಮವೆಂಬುದನ್ನು ನಿನ್ನ ಬಾಯಿಂದಲೇ ನಾನು ಕೇಳಿರುವೆನು. ಹೀಗೆ ಹೇಳುತಿದ್ದ ನೀನೇ ಈಗ ನನ್ನವಿಷಯದಲ್ಲಿ ದಯಾಶೂನ್ಯನಾಗಿರಬಹುದೆ? ನೀನು ಮಹಾವೀರ್ಯವುಳ್ಳವನೆಂಬುದನ್ನೂ, ನಿನ್ನ ಮಹೋತ್ಸಾಹವನ್ನೂ, ನಿನ್ನ ಮಹಾಬಲವನ್ನೂ ನಾನು ಚೆನ್ನಾಗಿ ಬಲ್ಲೆನು. ಮತ್ತು ನಿನ್ನ ಕಲ್ಯಾಣಗುಣಗಳಿಗೆ ಕೊನೆಮೊದಲಿಲ್ಲವೆಂಬುದನ್ನೂ ತಿಳಿದಿರುವೆನು. ಎಂತಹ ಕಷ್ಟಗಳಲ್ಲಿಯೂ ನಿನ್ನ ಮನಸ್ಸು ಕದಲದೆಂಬುದನ್ನೂ ಬಲ್ಲೆನು. ಸಮುದ್ರದಂತೆ ನೀನು ಗಂಭೀರಸ್ವಭಾವನೆಂಬುದನ್ನೂ ಬಲ್ಲೆನು! ಸಮುದ್ರಮೇಖಲೆಯಾದ ಈ ಸಮಸ್ತಭೂಮಿಗೂ ನೀನೇ ಪ್ರಭುವೆಂಬುದನ್ನೂ, ಪರಾಕ್ರಮದಲ್ಲಿ ಇಂದ್ರನಿಗೆಣೆಯೆಂಬುದನ್ನೂ ನಾನು ಚೆನ್ನಾಗಿ ಬಲ್ಲೆನು. ಹೀಗಿದ್ದರೂ, ನೀನು ನನ್ನಲ್ಲಿ ದಯೆಯಿಲ್ಲದಿರಬಹುದೆ?'' ಎಂದು ನಾನು ಹೇಳಿದುದಾಗಿ ನನ್ನ ಪ್ರಿಯನಿಗೆ ತಿಳಿಸು. ಎಲೈ ಕಪಿವೀರನೆ! ನನ್ನ ಪ್ರಿಯನಾದ ಆ ರಾಮನು, ಅಸ್ತ್ರವಿತ್ತುಗಳಲ್ಲಿ ಮೇಲೆನಿಸಿಕೊಂಡು, ಸತ್ವವಂತನಾಗಿ, ಬಲಾಢ್ಯನಾಗಿದ್ದರೂ, ಹೀಗೆ ಇಲ್ಲಿ ನನ್ನನ್ನು ಬಾಧಿಸುತ್ತಿರುವ ಈ ರಾಕ್ಷಸನಮೇಲೆ ತನ್ನ ದಿವ್ಯಾಸ್ತ್ರವನ್ನು ಪ್ರಯೋಗಿಸದಿರುವುದೇಕೆ! ನಾಗರಾಗಲಿ, ಗಂಧರ್ವರಾಗಲಿ, ದೇವತೆಗಳಾಗಲಿ, ದಾನವರಾಗಲಿ ಯುದ್ಧದಲ್ಲಿ ರಾಮನ ವೇಗವನ್ನು ತಡೆಯುವುದಕ್ಕೆ ಶಕ್ತರಲ್ಲ. ಇಂತಹ ಮಹಾವೀರ್ಯವುಳ್ಳ ಆ ರಾಮನಿಗೆ ನನ್ನನ್ನು ಕರೆಸಿಕೊಳ್ಳಬೇಕೆಂಬ ಆತುರವು ಸ್ವಲ್ಪಮಾತ್ರವಾದರೂ ಇದ್ದಪಕ್ಷದಲ್ಲಿ, ಇಲ್ಲಿನ ರಾಕ್ಷಸರೆಲ್ಲರನ್ನೂ ತನ್ನ ತೀಕ್ಷ್ಣಬಾಣಗಳಿಂದ ನಾಶಹೊಂದಿಸದಿರುವುದೇಕೆ? ಆ ಲಕ್ಷ್ಮಣನೋ ಅಸಾಧಾರಣಪರಾಕ್ರಮವುಳ್ಳವನು. 1 ಅವನಿಗೂ ಯಾವ ಶತ್ರುಗಳನ್ನಾದರೂ ಜಯಿಸುವ ಶಕ್ತಿಯುಂಟು. ಅವನಾದರೂ ತನ್ನಣ್ಣನಾಜ್ಞೆಯನ್ನು ಪಡೆದು ಇಲ್ಲಿಗೆ ಬಂದು ನನ್ನನ್ನೇಕೆ ರಕ್ಷಿಸಬಾರದು? ವಾಯ್ವಗ್ನಿಗಳಂತೆ ಮಹಾತೇಜಸ್ವಿಗಳಾಗಿ, ದೇವತೆಗಳಿಗೂ ದುರ್ಜಯರಾದ ಆ ಪುರುಷಶ್ರೇಷ್ಠರಿಬ್ಬರೂ ಸೇರಿರುವಾಗಲೂ, ನನ್ನನ್ನು

---

ಇಂತಹ ನೀನು (ಮಯಿ) ಹೀಗೆ ದುಃಖಿತೆಯಾದ ನನ್ನಲ್ಲಿ (ಕೃಪಾಂ) ಪರದುಃಖಸಹಿಷ್ಣುತ್ವವೆಂಬ ಧರ್ಮವನ್ನು (ಕುರುಷ್ವ) ಪ್ರಕಾಶಪಡಿಸು. (ನರರ್ಷಭ) ನೀನು ಹಾಗೆ ಮಾಡದಿದ್ದಪಕ್ಷದಲ್ಲಿ ನಿನ್ನ ಪುರುಷೋತ್ತಮತ್ವಕ್ಕೆ ಹಾನಿಯುಂಟಾಗುವುದು. ಆದುದರಿಂದ ನೀನು ಬಾಯಿಂದಾಡಿರುವ ಮಾತನ್ನೇ ಅನುಷ್ಠಾನಪರ್ಯಂತವಾಗಿ ನಡೆಸಿ, ನನ್ನನ್ನೂ ಬದುಕಿಸಿ, ನಿನಗಿರುವ ಪುರುಷೋತ್ತಮತ್ವವನ್ನೂ ಕಾಪಾಡಿಕೊಳ್ಳುವುದೆಂದು ಭಾವವು.

ಹೀಗೆ ಉಪೇಕ್ಷಿಸಿ ಬಿಟ್ಟಿರುವುದೇಕೆ? ಎಲೈ ಕಪಿಶ್ರೇಷ್ಠನೆ! ಇನ್ನೆಷ್ಟು ಹೇಳಿದರೇನು? ಆ ರಾಮಲಕ್ಷ್ಮಣರಿಬ್ಬರೂ ಇಷ್ಟು ಸಮರ್ಥರಾಗಿದ್ದರೂ, ನನ್ನ ಕಷ್ಟವನ್ನು ಬಿಡಿಸದೆ ಉದಾಸೀನರಾಗಿರುವುದನ್ನು ನೋಡಿದರೆ, ನಾನು ಮಾಡಿದ ಮಹಾಪಾಪವೇ ಇದಕ್ಕೆ ಕಾರಣವೆಂದೆಣಿಸಬೇಕಾಗಿದೆ. ನಾನು ಯಾರೂ ಮಾಡದ ಯಾವುದೋ ಒಂದು ಮಹಾಪಾಪವನ್ನು ನಡೆಸಿರಬೇಕು. ಇದರಲ್ಲಿ ಸಂದೇಹವಿಲ್ಲ. ನನ್ನ ಪಾಪವೇ ಹೀಗೆ ನನ್ನನ್ನು ಪೀಡಿಸಬಹುದು" ಎಂದಳು. ಹೀಗೆ ಸೀತೆಯು ಕಣ್ಣೀರುಬಿಡುತ್ತ, ಕರುಣೆಹುಟ್ಟುವಂತೆ ಹೇಳಿದ ಮಾತನ್ನು ಕೇಳಿ, ತಿರುಗಿ ಹನುಮಂತನು ಆಕೆಯನ್ನು ಕುರಿತು "ಎಲೆ ದೇವಿ! ರಾಮನು ನಿನ್ನ ವಿಷಯವಾದ ದುಃಖದಿಂದ ಪರವಶನಾಗಿ, ಸಮಸ್ತವಿಷಯಗಳಲ್ಲಿಯೂ ವಿಮುಖನಾಗಿರುವನು. ಬೇಕಾದರೆ ಈ ವಿಷಯದಲ್ಲಿ ನಾನು ಸತ್ಯದಮೇಲೆ ಆಣೆಯಿಟ್ಟು ಹೇಳುವೆನು. ಆ ರಾಮನು ಮಾತ್ರವೇ ಅಲ್ಲ. ಆತನ ದುಃಖವನ್ನು ನೋಡಿದಾಗ ಲಕ್ಷ್ಮಣನೂ ಸಂಕಟದಿಂದ ತಪಿಸುವನು. ಎಲೆ ದೇವಿ! ಅವೆಲ್ಲವೂ ಹಾಗಿರಲಿ! ನಾನು ಎಷ್ಟೋ ಪ್ರಯತ್ನದಿಂದ ನಿನ್ನನ್ನು ನೋಡುವಂತಾಯಿತಲ್ಲವೆ? ಇದಕ್ಕಾಗಿ ಈಗ ನೀನು ಸಂತೋಷಿಸುತ್ತಿರಬೇಕೇ ಹೊರತು ದುಃಖಿಸಬಾರದು. ಇನ್ನೇಕೆ ಚಿಂತಿಸುವೆ? ಇನ್ನು ಈ ಮುಹೂರ್ತದೊಳಗಾಗಿಯೇ ನಿನ್ನ ದುಃಖಕ್ಕೆ ಕೊನೆಯನ್ನು ಕಾಣುವೆ! ಪುರುಷಸಿಂಹರಾದ ಆ ರಾಜಕುಮಾರರಿಬ್ಬರೂ ನಿನ್ನನ್ನು ನೋಡಬೇಕೆಂಬ ಆತುರದಿಂದಲೇ ಇರುವುದರಿಂದ ಶೀಘ್ರದಲ್ಲಿಯೇ ಅವರಿಬ್ಬರೂ ಇಲ್ಲಿಗೆ ಬಂದು ಲಂಕೆಯನ್ನು ಭಸ್ಮಮಾಡುವರು. ಎಲೆ ವಿಶಾಲಾಕ್ಷಿ! ಶೀಘ್ರದಲ್ಲಿಯೇ ಶ್ರೀರಾಮನು ರಾವಣನನ್ನು ಅವನ ಪರಿವಾರಗಳೊಡನೆ ಯುದ್ಧದಲ್ಲಿ ಕೊಂದು ನಿನ್ನನ್ನು ತನ್ನ ನಗರಿಗೆ ಕರೆದುಕೊಂಡು ಹೋಗುವನು. ಮುಖ್ಯವಾಗಿ ಈಗ ನೀನು ನಿನ್ನ ಪ್ರಿಯನಾದ ರಾಮನಿಗೂ, ಮಹಾಬಲಾಢ್ಯನಾದ ಲಕ್ಷ್ಮಣನಿಗೂ, ತೇಜಸ್ವಿಯಾದ ಸುಗ್ರೀವನಿಗೂ, ಅಲ್ಲಿ ನೆರೆದಿರತಕ್ಕ ಇತರ ವಾನರರಿಗೂ, ನನ್ನೊಡನೆ ಹೇಳಿ ಕಳುಹಿಸಬೇಕಾದ ಮಾತುಗಳೇನಾದರೂ ಇದ್ದರೆ ಅದನ್ನು ಹೇಳು!" ಎಂದನು. ಹನುಮಂತನು ಹೇಳಿದ ಈ ಮಾತನ್ನು ಕೇಳಿ ದೇವಕನ್ಯೆಯಂತಿರುವ ಸೀತೆಯು, ವ್ಯಸನದಿಂದ ತಪಿಸುತ್ತ, ಆ ಹನುಮಂತನನ್ನು ಕುರಿತು, "ಎಲೆ ಭದ್ರನೆ! ಈಗ ನಾನು ಆ ರಾಮನಿಗೆ ಹೇಳಿ ಕಳುಹಿಸಬೇಕಾದ ಮಾತು ಬೇರೇನಿರುವುದು? [1] ಉದಾರಮನಸ್ಸುಳ್ಳ ಕೌಸಲ್ಯೆಯು ಲೋಕರಕ್ಷ

---

1. ಇಲ್ಲಿ "ಕೌಸಲ್ಯಾ ಲೋಕಭರ್ತಾರಂ ಸುಷುವೇ ಯಂ ಮನಸ್ವಿನೀ। ತಂ ಮಮಾರ್ಥೇ ಸುಖಂ ಪೃಚ್ಛ ಶಿರಸಾಚಾಭಿವಾದಯ" ಎಂದು ಮೂಲವು. ವಿಶೇಷಾರ್ಥವು:—ಲೋಕ

ಕಾರ್ಥವಾಗಿಯೇ ಯಾವನನ್ನು ಹಡೆದಿರುವಳೋ, ಆ ಪುರುಷೋತ್ತಮನನ್ನು ನನ್ನ ಮಾತಿನಿಂದ ನೀನು ಕ್ಷೇಮವನ್ನು ವಿಚಾರಿಸು! ನನಗಾಗಿ ನೀನು ಆತನಿಗೆ ತಲೆ

---

ದಲ್ಲಿ ಸ್ತ್ರೀಯರು ಇಹಪರಲೋಕಗಳಲ್ಲಿ ತಮಗೆ ರಕ್ಷಣೆಯನ್ನು ಕೋರಿಯೇ ಮಕ್ಕಳನ್ನು ಬಯಸುವರು. ಕೌಸಲ್ಯೆಯಾದರೋ ಹಾಗಲ್ಲವು. (ಮನಸ್ವಿನೀ) ಉದಾರ ಮನಸುಳ್ಳವಳು. ಆದುದರಿಂದಲೇ ಆಕೆಯು ಸ್ವಪ್ರಯೋಜನದಲ್ಲಿ ದೃಷ್ಟಿಯಿಡದೆ ಇತರರ ಶ್ರೇಯಸ್ಸನ್ನೇ ಬಯಸಿದವಳಾಗಿ, (ಲೋಕಭರ್ತಾರಂ ಸುಷುವೇ) ಸಮಸ್ತಲೋಕವನ್ನೂ ಸುಖದಿಂದ ಪೋಷಿಸಿ ಧರಿಸತಕ್ಕ ಪುತ್ರನೇ ತನಗಾಗಬೇಕೆಂದು ಸಂಕಲ್ಪಿಸಿ, ಅದಕ್ಕಾಗಿ ಎಷ್ಟೋ ವ್ರತಗಳನ್ನನುಷ್ಠಿಸಿ, ಲೋಕೋಪಕಾರಾರ್ಥವಾಗಿಯೇ ಈ ಪುತ್ರನನ್ನು ಪಡೆದಿರುವಳು. ಆ ಕೌಸಲ್ಯೆಯ ಸಂಕಲ್ಪವು ಸಾರ್ಥಕವಾಗಿದ್ದ ಪಕ್ಷದಲ್ಲಿ ಲೋಕರಕ್ಷಣೆಗಾಗಿ ಅವತರಿಸಿದ ರಾಮನು ನನ್ನನ್ನೇಕೆ ರಕ್ಷಿಸಬಾರದು? ನಾನೂ ಲೋಕದ ಜನರಲ್ಲಿ ಸೇರಿದವಳಲ್ಲವೆ'' ಎಂದು ಭಾವವು. (ತಂ ಮಮಾರ್ಥೇ ಸುಖಂ ಪೃಚ್ಛ) ನನಗಾಗಿ ನೀನು ಆತನ ಕ್ಷೇಮವನ್ನು ಕೇಳು. ನನ್ನನ್ನು ರಕ್ಷಿಸಬೇಕೆಂದು ನಾನು ಕೇಳಿಕೊಳ್ಳಲಾರೆನು. ಆ ಚಿಂತೆಯು ಅವನಿಗೇ ಸೇರಿದುದು. ಅವನು ಸುಖದಿಂದಿದ್ದ ಪಕ್ಷದಲ್ಲಿ ನನ್ನ ರಕ್ಷಣೆಗೆ ಯಾವ ಕೊರತೆಯೂ ಇರದೆಂದು ಭಾವವು. (ಶಿರಸಾಚಾಭಿವಾದಯ) ಅವನು ಅಗ್ನಿಸಾಕ್ಷಿಕವಾಗಿ ನನ್ನನ್ನು ಗ್ರಹಿಸಿದ ಹಸ್ತದಿಂದಲೇ ನನ್ನನ್ನು ರಕ್ಷಿಸಬೇಕಾಗಿತ್ತು. ಹಾಗಿದ್ದರೂ ಅವನು ನನ್ನನ್ನು ಹಾಗೆ ರಕ್ಷಿಸದೆ ಹೋದನು. ಇನ್ನು ನಾನೂ ಆತನಲ್ಲಿ ಪ್ರಿಯಪತ್ನಿಯೆಂಬ ಸಲುಗೆಯನ್ನು ಬಿಟ್ಟು, ಸಾಮಾನ್ಯಜನರಂತೆಯೇ ತಲೆಬಗ್ಗಿ ನಮಸ್ಕರಿಸಿದೆನೆಂದು ಹೇಳು. ಲೋಕರಕ್ಷಕನಾದ ಆತನು ನನ್ನನ್ನು ಲೋಕಸಾಮಾನ್ಯವಾಗಿಯಾದರೂ ಭಾವಿಸಿ ರಕ್ಷಿಸಲಿ'' ಎಂದು ಭಾವವು. ಇಲ್ಲಿ "ನಾಯಿಕೆಯು ನಾಯಕನಿಗೆ ಶಿರಸಾಪ್ರಣಾಮವನ್ನು ಮಾಡಿದುದುಚಿತವೆ? ಇದಕ್ಕೆ ಪ್ರಮಾಣವೇನು?'' ಎಂದರೆ, ಆಚಾರಪ್ರಧಾನವಾದ ಜನಕಕುಲದಲ್ಲಿ ಹುಟ್ಟಿದ ಸೀತೆಯೇ ಅನುಷ್ಠಿಸಿರುವಾಗ ಇದಕ್ಕೆ ಬೇರೆ ಪ್ರಮಾಣವೇಕೆ? ಅವಳ ಆಚಾರವೇ ಲೋಕಕ್ಕೂ ಪ್ರಮಾಣವೆಂದು ಗ್ರಾಹ್ಯವು. ಆದರೆ ಪತ್ನಿಯು ಪತಿಗೆ ಶಿರಸಾವಂದನ ಮಾಡಬಾರದೆಂದೂ. ಇಲ್ಲಿ ಸೀತೆಯು ಪ್ರಣಯರೋಷದಿಂದ ಹೀಗೆ ಮಾಡಿರಬಹುದೆಂದೂ ಕೆಲವರು ಸಮಾಧಾನ ಹೇಳುವರು. ಆದರೆ ಹನುಮಂತನ ವಾಕ್ಯಗಳಿಂದ ಆಗಲೇ ಸೀತೆಗೆ ಕೋಪವು ಶಾಂತವಾಗಿರುವುದರಿಂದ ಅದನ್ನು ಪ್ರಣಯರೋಷವಾಕ್ಯವೆಂದೆಣಿಸುವುದಕ್ಕಿಲ್ಲ. ಅಥವಾ ಇಲ್ಲಿ "ಮಮಾರ್ಥೇ ಶಿರಸಾಚಾಭಿವಾದಯ'' ಎಂಬುದಕ್ಕೆ "ನನ್ನ ಕಾರ್ಯಸಿದ್ಧಿಗಾಗಿ ನೀನೇ ನಮಸ್ಕರಿಸು'' ಎಂದು ಹೇಳಿದುದಾಗಿ ಗ್ರಹಿಸಬಾರದೆ? ಎಂದರೆ (ಸುಖಂಪೃಚ್ಛ) ಎಂಬುದರೊಡನೆ ಅನ್ವಯಿಸುವಂತೆಯೇ ಶಿರಃಪ್ರಣಾಮಕ್ಕೂ ಅನ್ವಯಿಸಬೇಕಾದುದರಿಂದ, ತನ್ನ ಮಾತಿನಿಂದಲೇ ಕ್ಷೇಮವನ್ನು ವಿಚಾರಿಸಬೇಕಾದುದು ಅತ್ಯವಶ್ಯವಾಗಿರುವಾಗ, ಇಲ್ಲಿ ಬೇರೆ ಅರ್ಥವನ್ನು ಹೇಳುವುದೂ ಅಷ್ಟಾಗಿ ಸುರಸವಲ್ಲ. ಆದುದರಿಂದ ಸೀತೆಯು ತಾನಾಗಿ ಶಿರಃಪ್ರಣಾಮಮಾಡಿದಂತೆ ಹೇಳಿಕಳುಹಿಸಿದುದಾಗಿಯೇ ಗ್ರಾಹ್ಯವು.

ಬಗ್ಗಿ ನಮಸ್ಕರಿಸು! ಮತ್ತು ಮೇಲಾದ ಪುಷ್ಪಹಾರಗಳೂ, ಇನ್ನೂ ಉತ್ತಮವಾದ ಭೋಗದ್ರವ್ಯಗಳೂ, ಸಮಸ್ತರತ್ನಗಳೂ, ಉತ್ತಮನಾಯಿಕೆಯರೂ, ವಿಸ್ತಾರವಾದ ಈ ಭೂಮಿಯಲ್ಲಿ ಬೇರೊಬ್ಬರಿಗೆ ದುರ್ಲಭವಾದ ಐಶ್ವರ್ಯವೂ ತನಗೆ ವಶವಾಗಿದ್ದರೂ, ಅವೆಲ್ಲವನ್ನೂ ತೊರೆದು, ತಂದೆತಾಯಿಗಳನ್ನು ಮನ್ನಿಸಿ ಅವರನ್ನೂ ಪ್ರಸನ್ನರನ್ನಾಗಿ ಮಾಡಿಕೊಂಡು, ಯಾವನು ತನ್ನಣ್ಣನಾದ ರಾಮನನ್ನು ಹಿಂಬಾಲಿಸಿ ವನಕ್ಕೆ ಹೊರಟನೋ, ಯಾವನಿಂದ ಸುಮಿತ್ರಾದೇವಿಯು ಸುಪುತ್ರವತಿಯೆನಿಸಿಕೊಂಡಳೋ, ಆ ಲಕ್ಷ್ಮಣನ ಗುಣಗಳನ್ನು ಎಷ್ಟು ಹೇಳಿದರೂ ಸಾಲದು! ಆತನು ವಿಶೇಷವಾಗಿ ಧರ್ಮಬುದ್ಧಿಯುಳ್ಳವನಾದುದರಿಂದ, ಸರ್ವೋತ್ತಮವಾದ ರಾಜ್ಯಸುಖವನ್ನೂ ತೊರೆದು, ಅಣ್ಣನಲ್ಲಿ ಭಕ್ತಿಯಿಂದ, ಕಾಡಿನಲ್ಲಿಯೂ ಆತನನ್ನು ಹಿಂಬಾಲಿಸುತ್ತ ಅವನಿಗೆ ಬೆಂಬಲವಾಗಿರುವನಲ್ಲವೆ? ಸಿಂಹದಂತೆ ಹೆಗಲುಳ್ಳವನಾಗಿಯೂ, ಮಹಾಬಾಹುವಾಗಿಯೂ, ಉದಾರಮನಸ್ಸುಳ್ಳವನಾಗಿಯೂ, ಪ್ರಿಯದರ್ಶನನಾಗಿಯೂ ಇರುವ ಆ ಲಕ್ಷ್ಮಣನು ರಾಮನನ್ನೇ ತಂದೆಯಂತೆ ಭಾವಿಸಿ ನಡೆಯುತ್ತಿರುವನು. ನನ್ನಲ್ಲಿಯೂ ಮಾತೃಭಕ್ತಿಯನ್ನಿಟ್ಟಿರುವನು. ನನ್ನನ್ನು ದುರಾತ್ಮನಾದ ಆ ರಾವಣನು ಕದ್ದುತಂದುದನ್ನುಮಾತ್ರ ಅವನು ಕಾಣದೆ ಹೋದನು. ಅವನಿಗೆ ಆ ಸೂಚನೆಯು ಸ್ವಲ್ಪಮಾತ್ರವಾದರೂ ತಿಳಿದಿದ್ದರೆ ಆಗಲೇ ಆ ರಾಕ್ಷಸನನ್ನು ಕೊಂದು ನನ್ನನ್ನು ಬಿಡಿಸಿಕೊಳ್ಳುತ್ತಿದ್ದನು ಅವನ ವಿಕ್ರಮಾದಿಗುಣಗಳೂ ಹಾಗಿರಲಿ! ಅವನು ಯಾವಾಗಲೂ ಗುರುಹಿರಿಯರನ್ನು ಗೌರವಿಸಿ ಅವರನ್ನು ಸೇವಿಸುವ ಸ್ವಭಾವವುಳ್ಳವನು! ಶ್ರೀಮಂತನು! ಯಾವ ಕಾರ್ಯಗಳಲ್ಲಿಯೂ ಶಕ್ತನು! ವಾದಸಮರ್ಥನಾಗಿದ್ದರೂ ಹೆಚ್ಚುಮಾತುಗಳನ್ನಾಡುವವನಲ್ಲ! ಆ ರಾಜಕುಮಾರನು ಸಮಸ್ತಲೋಕಕ್ಕೂ ಪ್ರಿಯನೆನಿಸಿರುವನು! ಎಲ್ಲರಿಗೂ ತಾನೇ ಮೇಲೆನಿಸಿಕೊಂಡವನು! ಗುಣಗಳಲ್ಲಿ ನನ್ನ ಮಾವನಾದ ದಶರಥರಾಜನನ್ನೇ ಹೋಲುತ್ತಿರುವನು. ಮುಖ್ಯವಾಗಿ ನನ್ನಲ್ಲಿ ಆತನಿಗೆ ಬಹಳ ವಿಶ್ವಾಸವುಂಟು. ಆತನನ್ನು ಆ ರಾಮನಿಗೆ ತಕ್ಕ ತಮ್ಮನೆಂದೇ ಹೇಳಬಹುದು. ವೀರ್ಯವಂತನಾದ ಆ ಲಕ್ಷ್ಮಣನು, ರಾಮನು ತನ್ನಮೇಲೆ ಎಂತಹ ಕಾರ್ಯಭಾರವನ್ನು ವಹಿಸಿದರೂ ಅದನ್ನು ತಪ್ಪದೆ ನಡೆಸುವನು. ಎಲೈ ಕಪಿವೀರನೆ! ನನ್ನ ಪ್ರಿಯನಾದ ರಾಮನೂ ಕೂಡ ತನ್ನನ್ನು ತಂದೆಯಂತೆ ಪೋಷಿಸುತ್ತಿರುವ ಆ ಲಕ್ಷ್ಮಣನನ್ನು ನೋಡಿ ತನ್ನ ತಂದೆಯ ಸ್ಮರಣೆಯನ್ನೇ ಮರೆತಿರುವನು. ಆ ಲಕ್ಷ್ಮಣನು ಸಹಜವಾಗಿಯೇ ಮೃದುಸ್ವಭಾವವುಳ್ಳವನು. ಶುದ್ಧಾತ್ಮನು. ಕಾರ್ಯಸಮರ್ಥನು. ರಾಮನಿಗೂ ಬಹಳ ಪ್ರೀತಿಪಾತ್ರನು. ಆದುದರಿಂದ ನೀನು ನನ್ನ ಮಾತಿನಿಂದ ಆತನ ಕುಶಲ

ವನ್ನೂ ಕೇಳು. ಎಲೈ ವಾನರೋತ್ತಮನೆ! ಮುಖ್ಯವಾಗಿ ರಾಮನು ಈ ನನ್ನ ದುಃಖವನ್ನು ಕೊನೆಗಾಣಿಸುವಂತೆ ಮಾಡಬೇಕಾದ ಕಾರ್ಯಭಾರವೆಲ್ಲವೂ ನಿನಗೆ ಸೇರಿದೆ. ಮುಖ್ಯವಾಗಿ ನಿನ್ನ ಪ್ರಯತ್ನದಿಂದಲೇ ರಾಮನು ನನ್ನನ್ನು ಕರೆಸಿಕೊಳ್ಳುವುದಕ್ಕೆ ತಕ್ಕ ಸನ್ನಾಹವನ್ನು ಮಾಡಬೇಕೇ ಹೊರತು ಬೇರೆಯಿಲ್ಲ! ನೀನು ಶೀಘ್ರದಲ್ಲಿಯೇ ಹೋಗಿ, ನನ್ನ ಪ್ರಿಯನಾದ ರಾಮನಿಗೆ ಈ ಮಾತನ್ನು ಮಾತ್ರ ಬಾರಿಬಾರಿಗೂ ಹೇಳಬೇಕು. “ಎಲೈ ದಶರಥಪುತ್ರನೆ! ಇನ್ನೊಂದು ತಿಂಗಳುಮಾತ್ರವೇ ನಾನು ನನ್ನ ಪ್ರಾಣಗಳನ್ನು ಇಟ್ಟುಕೊಂಡಿರುವೆನು. ಒಂದು ತಿಂಗಳಮೇಲೆ ಕ್ಷಣಮಾತ್ರವೂ ಬದುಕಿರಲಾರೆನು. ಈ ವಿಷಯದಲ್ಲಿ ಸತ್ಯದಮೇಲೆ ಆಣೆಯಿಟ್ಟು ಹೇಳುವೆನು. ದುರಾತ್ಮನಾದ ರಾವಣನು ನನಗೆ ನಿರ್ಣಯಿಸಿಕೊಟ್ಟಿರುವ ಆ ಎರಡು ತಿಂಗಳವರೆಗಾದರೂ ನಾನು ನಿರೀಕ್ಷಿಸಿರಲಾರೆನು. ಎಲೈ ವಾನರನೇ! [1] ಪೂರ್ವದಲ್ಲಿ ಮಹಾವಿಷ್ಣುವು ದೇವತೆಗಳ ಪ್ರಾರ್ಥನೆಯ ಮೇಲೆ ಪಾತಾಳದಲ್ಲಿ ಹುದುಗಿದ್ದ ದೇವೇಂದ್ರನ ರಾಜ್ಯ

---

1. ಮೊದಲು ವೃತ್ರಾಸುರನನ್ನು ಕೊಂದಾಗ ದೇವೇಂದ್ರನಿಗೆ ಬ್ರಹ್ಮಹತ್ಯೆಯುಂಟಾಗಿ, ಆದರಿಂದ ಆವನ ರಾಜ್ಯಲಕ್ಷ್ಮಿಯೂ ತೊಲಗಿದಳು. ಆಗ ಮಹಾವಿಷ್ಣುವು ಇತರ ದೇವತೆಗಳೊಡಗೂಡಿ, ಅವನಿಂದ ವೈಷ್ಣವವೆಂಬ ಅಶ್ವಮೇಧಯಾಗವನ್ನು ಮಾಡಿಸಿ, ಪಾಪವಿಮುಕ್ತನನ್ನಾಗಿ ಮಾಡಿ, ತ್ರೈಲೋಕ್ಯರಾಜ್ಯದಲ್ಲಿ ಆತನಿಗೆ ಅಭಿಷೇಕವನ್ನೂ ಮಾಡಿ, ಆತನಿಗೆ ಮೊದಲಿದ್ದ ಇಂದ್ರಲಕ್ಷ್ಮಿಯನ್ನು ಹಿಂತಿರುಗಿ ಬರುವಂತೆ ಕರೆದನು. ಆಗ ಅಶರೀರವಾಣಿಯು, ಆ ಇಂದ್ರಲಕ್ಷ್ಮಿಯು ಗವಾಕ್ಷತೀರ್ಥದಲ್ಲಿರುವುದಾಗಿ ನುಡಿಯಲು, ವಿಷ್ಣುವು ದೇವತೆಗಳೊಡನೆ ಆ ತೀರ್ಥಕ್ಕೆ ಹೋದನು. ಆಗ ಲಕ್ಷ್ಮಿಯು ದೇವತೆಗಳ ಆಗಮನವನ್ನು ನೋಡಿ ಆ ತೀರ್ಥವನ್ನು ಬಿಟ್ಟು ಪಾತಾಳಕ್ಕೆ ಪ್ರವೇಶಿಸಿದಳು. ದೇವತೆಗಳು ಅಲ್ಲಿಗೆ ಹೋಗಲಾರದಿರಲು, ತಿರುಗಿ ಅಶರೀರವಾಣಿಯು ಆ ದೇವತೆಗಳನ್ನು ಕುರಿತು “ನಿಮ್ಮಲ್ಲಿ ಸರ್ವಲಕ್ಷಣಸಂಪನ್ನನಾದವನೊಬ್ಬನುಮಾತ್ರ ಅಲ್ಲಿಹೋಗಿ ಆ ಲಕ್ಷ್ಮಿಯನ್ನು ಕರೆತರಬಹುದು” ಎಂದು ನುಡಿಯಿತು. ಆಗ ದೇವತೆಗಳೆಲ್ಲರೂ ಪುರುಷೋತ್ತಮನಾದ ಶ್ರೀಮನ್ನಾರಾಯಣನನ್ನೇ ಆ ಕಾರ್ಯಕ್ಕೆ ಪ್ರಾರ್ಥಿಸಿಕೊಂಡರು. ಆಗ ವಿಷ್ಣುವು ಪಾತಾಳವನ್ನು ಪ್ರವೇಶಿಸಿ, ಅಲ್ಲಿಂದ ಇಂದ್ರಲಕ್ಷ್ಮಿಯನ್ನು ತಂದು ಇಂದ್ರನಿಗೊಪ್ಪಿಸಿದನು. ಎಂದು ಬ್ರಹ್ಮಪುರಾಣವು. ಬೇರೆ ಕೆಲವರು ಉಚಥ್ಯಪತ್ನಿಯು ಯಮುನೆಯಲ್ಲಿ ಸ್ನಾನಮಾಡುತಿದ್ದಾಗ, ವರುಣನು ಅವಳನ್ನೆತ್ತಿಕೊಂಡು ಪಾತಾಳವನ್ನು ಪ್ರವೇಶಿಸಿದುದಾಗಿಯೂ, ಉಚಥ್ಯನು ನಾರದನ ಮೂಲಕವಾಗಿ ವರುಣನನ್ನು ಪ್ರಾರ್ಥಿಸಿದುದಾಗಿಯೂ, ವರುಣನು ಆಕೆಯನ್ನು ಬಿಡದಿರಲು, ಋಷಿಯು ಕೋಪಗೊಂಡು, ಪಾತಾಳಹ್ರದವನ್ನು ಶೋಷಿಸಿ ತನ್ನ ಪತ್ನಿಯನ್ನು ತಂದುದಾಗಿಯೂ, ಅವಳೇ ಕೌಶಿಕಿಯೆಂದೂ, ಹೇಳಿರುವ ಮಹಾಭಾರತದ ಕಥೆಯೇ ಇಲ್ಲಿ ಅನುಸಂಧೇಯವೆಂದು ಹೇಳುವರು.

ಲಕ್ಷ್ಮಿಯನ್ನು ಕಾಪಾಡಿ ತಂದಂತೆ ಪಾಪಿಯಾದ ರಾವಣನಿಂದ ನನ್ನನ್ನು ಬಿಡಿಸಿ ರಕ್ಷಿಸಬೇಕು!'' ಎಂದು ನನ್ನ ಮಾತಿನಿಂದ ಹೇಳು! ಎಂದಳು. ಆಮೇಲೆ ಸೀತೆಯು ತನ್ನ ಸೆರಗಿನಲ್ಲಿ ಕಟ್ಟಿಟ್ಟಿದ್ದ ದಿವ್ಯವಾದ ತನ್ನ ಚೂಡಾಮಣಿಯನ್ನು ತೆಗೆದು "ಎಲೆ ಭದ್ರನೆ! ಇದನ್ನು ನನ್ನ ಪ್ರಿಯನಾದ ರಾಮನಿಗೆ ಗುರುತಾಗಿ ಕೊಡು" ಎಂದು ಹೇಳಿ ಆಂಜನೇಯನ ಕೈಗೆ ಕೊಟ್ಟಳು. ವೀರನಾದ ಹನುಮಂತನು, ಸರ್ವೋತ್ತಮವಾದ ಆ ಚೂಡಾಮಣಿಯನ್ನು ತೆಗೆದುಕೊಂಡು, ಅದನ್ನು ತನ್ನ 1 ಬೆರಳಿಗೆ ಸಿಕ್ಕಿಸಿಕೊಂಡನು. ಆಗ (ಆತನು ಸೂಕ್ಷ್ಮದೇಹವುಳ್ಳವನಾಗಿಯೇ ಇದ್ದುದರಿಂದ, ಅವನ ಕೈಬೆರಳು ಆ ಚೂಡಾಮಣಿಯ ತೂಬನ್ನು ಸಿಕ್ಕಿಸುವುದಕ್ಕೆ ತಕ್ಕಂತೆ ಸೂಕ್ಷ್ಮವಾಗಿಯೇ ಇದ್ದಿತು.) ಹೀಗೆ ಆ ಕಪಿಶ್ರೇಷ್ಠನು ಉತ್ತಮರತ್ನವಾದ ಆ ಚೂಡಾಮಣಿಯನ್ನು ಗ್ರಹಿಸಿದಮೇಲೆ, ಸೀತೆಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ವಿನಯದಿಂದ ನಮ್ರನಾಗಿ, ಆಕೆಯ ಪಕ್ಕದಲ್ಲಿ ನಿಂತಿದ್ದನು. ಆ ಕಪಿಗೆ ಸೀತಾದರ್ಶನದಿಂದುಂಟಾದ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವನ ದೇಹವು ಮಾತ್ರ ಅಲ್ಲಿ ನಿಂತಿದ್ದಹಾಗೆ ಕಾಣುತಿದ್ದರೂ, ಅವನು ತನ್ನ ಮನಸ್ಸಿನಿಂದ ಆಗಲೇ ಶ್ರೀರಾಮನ ಸಮೀಪವನ್ನು ಸೇರಿದಂತಿದ್ದನು. ಹೀಗೆ ಹನುಮಂತನು ತನ್ನ ಅಸಾಧಾರಣಸಾಮರ್ಥ್ಯದಿಂದ ಅಶೋಕವನದಲ್ಲಿ ಸೀತೆಯನ್ನು ನೋಡಿ, ಸರ್ವೋತ್ತಮವಾದ ಆಕೆಯ ಚೂಡಾಮಣಿಯನ್ನು ತೆಗೆದುಕೊಂಡು, ಮೊದಲು ಬಿರುಗಾಳಿಯ ಬಡಿತದಿಂದ ಕಂಪಿಸಿ, ಆ ಗಾಳಿಯು ನಿಂತಮೇಲೆ ಸ್ವಸ್ಥವಾಗಿ ನಿಲ್ಲುವ ಪರ್ವತದಂತೆ, ಅದುವರೆಗೆ ಸೀತೆಯು ಸಿಕ್ಕದುದರಿಂದುಂಟಾಗಿದ್ದ ಮನಸ್ಸಿನ ಕಳವಳವೆಲ್ಲವನೂ ಬಿಟ್ಟು ನೆಮ್ಮದಿಯುಳ್ಳವನಾಗಿ, ಆಗಲೇ ಅಲ್ಲಿಂದ ಹಿಂತಿರುಗಿ ಪ್ರಯಾಣಮಾಡುವುದಕ್ಕೆ ಸಿದ್ಧನಾದನು.

ಇಲ್ಲಿಗೆ ಮೂವತ್ತೆಂಟನೆಯ ಸರ್ಗವು.

---

1. ಇಲ್ಲಿ ಚೂಡಾಮಣಿಯನ್ನು ಬೆರಳಿಗೆ ಸಿಕ್ಕಿಸಿಕೊಂಡುದು ಹೇಗೆ? ಎಂದರೆ:— ಅಷ್ಟರಲ್ಲಿ ಹನುಮಂತನು ತನ್ನ ದೊಡ್ಡ ಸ್ವರೂಪವನ್ನು ಬಿಟ್ಟು ಸೂಕ್ಷ್ಮದೇಹವುಳ್ಳವನಾಗಿದ್ದನೆಂದೂ, ಆ ಚೂಡಾಮಣಿಯ ಉಮ್ಮಚ್ಚಿನ ಅಥವಾ (ಘಾಟಿನ) ಕೆಳಗೆ ಕೊಡಲನ್ನು ಪೋಣಿಸುವುದಕ್ಕಾಗಿ ಮಾಡಿದ್ದ ತೂಬಿನ ರಂಧ್ರವನ್ನು ಕೈಬೆರಳಿಗೆ ಸಿಕ್ಕಿಸಿಟ್ಟುಕೊಂಡನೆಂದೂ ಗೋವಿಂದರಾಜ ವ್ಯಾಖ್ಯಾನವು. ಕೈಗೆ ಹಿಡಿಯುದುದರಿಂದ ಬೆರಳಿಗೆ ಸಿಕ್ಕಿಸಿಟ್ಟುಕೊಂಡನೆಂದು ಮಹೇಶ್ವರತೀರ್ಥರು, ಬಟ್ಟೆಯಲ್ಲಿ ಕಟ್ಟಿ ಬೆರಳಿಗೆ ಸಿಕ್ಕಿಸಿಟ್ಟುಕೊಂಡುದಾಗಿ ಕತಕವ್ಯಾಖ್ಯಾನವು.

ರಾಮಲಕ್ಷ್ಮಣರಾಗಲಿ, ಇತರ ವಾನರರಾಗಲಿ ಈ ಮಹಾಸಮುದ್ರ ವನ್ನು ಹೇಗೆ ದಾಟಿ ಬರಬಲ್ಲರೆಂದು ಸೀತೆಯು ಆಂಜನೇಯನನ್ನು ಕೇಳಲು, ಆಂಜನೇಯನು ಆಕೆಗೆ ವಾನರರ ಪ್ರಭಾವವನ್ನು ತಿಳಿಸಿ, ಕೊನೆಗೆ ತಾನೇ ಆ ರಾಮಲಕ್ಷ್ಮಣರನ್ನು ಭುಜದ ಮೇಲೇರಿಸಿಕೊಂಡಾದರೂ ಬಂದು ರಾವಣನನ್ನು ಕೊಲ್ಲಿಸಿ, ಆಕೆಯನ್ನು ಕರೆದುಕೊಂಡು ಹೋಗುವುದಾಗಿ ಸಮಾಧಾನ ಹೇಳಿದುದು.

ಹೀಗೆ ಸೀತೆಯು ಹನುಮಂತನಿಗೆ ಚೂಡಾಮಣಿಯನ್ನು ಕೊಟ್ಟ ಮೇಲೆ ತಿರುಗಿಯೂ ಆತನನ್ನು ಕುರಿತು, “ಎಲೈ ವಾನರೋತ್ತಮನೆ! ಈ ಅಭಿಜ್ಞಾನ ವನ್ನು ನನ್ನ ಪ್ರಿಯನಾದ ರಾಮನು ಚೆನ್ನಾಗಿ ಬಲ್ಲನು. ನನ್ನ ತಾಯಿಯು ವಿವಾಹ ಕಾಲದಲ್ಲಿ ಇದನ್ನು ನನಗೆ ಕೊಟ್ಟಳು. ಆಗ ನನ್ನ ಮಾವನಾದ ದಶರಥರಾಜನೂ ಅಲ್ಲಿಯೇ ಇದ್ದನು. ಆದುದರಿಂದ ನನ್ನ ಪ್ರಿಯನಾದ ರಾಮನು ಈ ಚೂಡಾ ಮಣಿಯನ್ನು ನೋಡಿದೊಡನೆ ನನ್ನನ್ನೂ, ನನ್ನ ತಾಯಿಯನ್ನೂ, ತನ್ನ ತಂದೆ ಯಾದ ದಶರಥಮಹಾರಾಜನನ್ನೂ ಸ್ಮರಣೆಗೆ ತಂದುಕೊಳ್ಳುವನು. ಎಲೈ ಕಪಿ ವೀರನೇ! ಮುಖ್ಯವಾಗಿ ನೀನು ಹೇಗಾದರೂ ರಾಮನನ್ನು ಪ್ರೋತ್ಸಾಹ ಗೊಳಿಸಿ ಇಲ್ಲಿಗೆ ಕರೆತರಬೇಕೆಂದು ನಾನು ಬಾರಿಬಾರಿಗೂ ನಿನ್ನಲ್ಲಿ ಪ್ರಾರ್ಥಿಸಿ ಕೊಳ್ಳುವೆನು. ಈ ಕಾರ್ಯಕ್ಕಾಗಿ ಮುಂದೆ ಯಾವಯಾವ ಪ್ರಯತ್ನವನ್ನು ಮಾಡ ಬೇಕೋ ಅದರ ಆಲೋಚನೆಯು ನಿನಗೇ ಸೇರಿದೆ. ಮುಖ್ಯವಾಗಿ ಈ ಕಾರ್ಯ ಸಂಘಟನೆಯ ಭಾರವು ನಿನ್ನ ಮೇಲೆಯೇ ಬಿದ್ದಿದೆ. ಎಲೈ ಹನುಮಂತನೆ! ನೀನು ಹೇಗಾದರೂ ಪ್ರಯತ್ನಿಸಿ ನನ್ನ ದುಃಖವು ನೀಗುವಂತೆ ಮಾಡಬೇಕು. ಮಹಾ ಧೀಮಂತನಾದ ನೀನು ಮಾತ್ರ ಮನಸ್ಸಿಟ್ಟು ತಕ್ಕಪ್ರಯತ್ನವನ್ನು ಮಾಡಿದರೆ, ನನ್ನ ದುಃಖವು ನೀಗುವುದೇನೂ ಕಷ್ಟವಲ್ಲ” ಎಂದಳು. ಭಯಂಕರ ಪರಾಕ್ರಮ ವುಳ್ಳ ಆ ವಾಯುಪುತ್ರನು ಸೀತೆಯು ಹೇಳಿದ ಈ ದೈನ್ಯದ ಮಾತುಗಳನ್ನು ಕೇಳಿ, “ಅಮ್ಮಾ! ನೀನು ಚಿಂತಿಸಬೇಡ! ನೀನು ಹೇಳಿದಂತೆಯೇ ನಡೆಸುವೆನು” ಎಂದು ಪ್ರತಿಜ್ಞೆಮಾಡಿಕೊಟ್ಟು, ಆಕೆಗೆ ಸಾಷ್ಟಾಂಗವಾಗಿ ಪ್ರಣಾಮವನ್ನು ಮಾಡಿ, ಪ್ರಯಾಣಸನ್ನದ್ಧನಾಗಿ ಹೊರಟನು. ಹೀಗೆ ಹನುಮಂತನು ಪ್ರಯಾಣ ಸನ್ನದ್ಧನಾಗಿ ಹೊರಡುವುದನ್ನು ಕಂಡು, ತಿರುಗಿ ಸೀತೆಯು ಆತನನ್ನು ನೋಡಿ ಕಣ್ಣೀರು ಬಿಡುತ್ತ, ಗದ್ಗದಸ್ವರದಿಂದ “ಎಲೆ ಭದ್ರನೆ! ಆ ರಾಮಲಕ್ಷ್ಮಣ ರಿಬ್ಬರನ್ನೂ ನನ್ನ ಮಾತಿನಿಂದ ನೀನು ಕ್ಷೇಮವನ್ನು ವಿಚಾರಿಸು! ಸುಗ್ರೀವನಿಗೂ, ಅವನ ಮಂತ್ರಿಗಳಿಗೂ, ವೃದ್ಧರಾದ ಇತರ ವಾನರರಿಗೂ, ನಾನು ಅವರ ಕ್ಷೇಮ

ವನ್ನು ವಿಚಾರಿಸಿದುದಾಗಿ ತಿಳಿಸು! ಇವರೆಲ್ಲರಿಗೂ ಕ್ರಮವಾಗಿ ಧರ್ಮಯುಕ್ತವಾಗಿ ನಾನು ಕುಶಲಪ್ರಶ್ನೆ ಮಾಡಿದಂತೆ ಹೇಳು! ಮುಖ್ಯವಾಗಿ ನೀನು ಆ ರಾಮನಿಗೆ ಈ ದುಃಖಸಮುದ್ರದಿಂದ ನನ್ನನ್ನು ದಾಟಿಸುವ ಹಾಗೆ ಬಾರಿಬಾರಿಗೂ ಪ್ರೋತ್ಸಾಹಿಸಬೇಕು! ನಾನು ದಿಕ್ಕುಗಾಣದೆ ಪ್ರಾಣವನ್ನು ಬಿಡುವುದರೊಳ ಗಾಗಿಯೇ, ಕೀರ್ತಿವಂತನಾದ ಆ ನನ್ನ ಪ್ರಿಯನು ಇಲ್ಲಿಗೆ ಬಂದು ನನ್ನನ್ನುದ್ಧ ರಿಸಿ ಕಾಪಾಡುವ ಹಾಗೆ ನೀನು ಅವನನ್ನು ಪ್ರೇರಿಸಬೇಕು! ಇಷ್ಟುಮಾತ್ರದ ವಾಕ್ಸಹಾಯದಿಂದಲೇ ನಿನಗೆ ಎಷ್ಟೋ ಪುಣ್ಯವುಂಟು! ಈ ಧರ್ಮಕ್ಕೆ ನೀನೇ ಭಾಗಿ ಯಾಗು! ನೀನು ಆತನನ್ನು ಪ್ರೋತ್ಸಾಹಿಸುತಿದ್ದಷ್ಟೂ, ನಿನ್ನ ಮಾತನ್ನು ಕೇಳಿ ಆತನಿಗೆ ಮೇಲೆಮೇಲೆ ಉತ್ಸಾಹವು ಹುಟ್ಟುವುದು. ನಿನ್ನ ಮಾತನ್ನು ಕೇಳಿದ ಹಾಗೆಲ್ಲಾ ಆತನಿಗೂ ನನ್ನನ್ನು ಪಡೆಯುವ ವಿಷಯದಲ್ಲಿ ಪುರುಷಪ್ರಯತ್ನವೂ ಹೆಚ್ಚುವುದು. ನಾನು ಈಗ ನಿನ್ನ ಮೂಲಕವಾಗಿ ಹೇಳಿ ಕಳುಹಿಸಿರುವ ಮಾತುಗಳನ್ನು ನೀನು ಆಗಾಗ ಒತ್ತಿ ಹೇಳಿದಷ್ಟೂ, ವೀರನಾದ ಆ ರಾಮ ನಿಗೆ ನನ್ನನ್ನು ಕರೆಸಿಕೊಳ್ಳುವ ಆತುರವು ಹುಟ್ಟಿ, ಅದಕ್ಕೆ ತಕ್ಕ ಪರಾ ಕ್ರಮವನ್ನು ತೋರಿಸುವುದಕ್ಕೂ ಪ್ರಯತ್ನಿಸುವನು!'' ಎಂದಳು. ಸೀತೆಯು ಹೇಳಿದ ಈ ಮಾತನ್ನು ಕೇಳಿ ವಾಯುಪುತ್ರನಾದ ಹನುಮಂತನು, ಆಕೆಗೆ ಕೈಮುಗಿಯುತ್ತ, ತಿರುಗಿ ಅವಳನ್ನು ಕುರಿತು, "ಎಲೆ ದೇವಿ! ಹೀಗೇಕೆ ನೀನು ಸಂದೇಹಪಡುವೆ? ಶೀಘ್ರದಲ್ಲಿಯೇ ನಿನ್ನ ಪ್ರಿಯನಾದ ರಾಮನು, ಅನೇಕ ವಾನರಭಲ್ಲೂಕಸಮೂಹಗಳೊಡನೆ ಇಲ್ಲಿಗೆ ಬಂದು ಸೇರುವನು. ಶೀಘ್ರದಲ್ಲಿಯೇ ಇಲ್ಲಿರುವ ಸಮಸ್ತಶತ್ರುಗಳನ್ನೂ ರಣರಂಗದಲ್ಲಿ ಕೊಂದು ನಿನ್ನ ದುಃಖವನ್ನೂ, ನೀಗಿಸುವನು. ಎಲೆ ಭದ್ರೆ! ಮನುಷ್ಯರಲ್ಲಿಯಾಗಲಿ, ದೇವಾಸುರರಲ್ಲಿಯಾಗಲಿ, ಯುದ್ಧದಲ್ಲಿ ಆ ರಾಮನು ಬಿಟ್ಟ ಬಾಣಗಳ ವೇಗವನ್ನು ತಡೆದು ನಿಲ್ಲುವವರೊಬ್ಬ ರನ್ನೂ ಕಾಣೆನು. ಆತನು, ಯುದ್ಧಕ್ಕೆ ನಿಂತರೆ, ಸೂರ್ಯನನ್ನಾಗಲಿ, ದೇವೇಂದ್ರ ನನ್ನಾಗಲಿ, ಕೊನೆಗೆ ಸೂರ್ಯಪುತ್ರನಾದ ಆ ಯಮನನ್ನೇ ಆಗಲಿ ಇದಿರಿಸಿ ನಿಲ್ಲ ಬಲ್ಲನು. ಇದರ ಮೇಲೆ ನಿನ್ನ ನಿಮಿತ್ತವಾಗಿಯೇ ಆತನು ರಣರಂಗಕ್ಕೆ ಬಂದು ನಿಂತರೆ ಅವನ ವೀರ್ಯಕ್ಕೆ ತಡೆಯಾವುದುಂಟು? ಎಲೆ ಜನಕಪುತ್ರಿ! ಆ ರಾಮನು ನಿನ್ನ ನಿಮಿತ್ತವಾಗಿ ಶತ್ರುಜಯವನ್ನಪೇಕ್ಷಿಸಿ ಭೀಕರಯುದ್ಧಕ್ಕೆ ನಿಂತಪಕ್ಷದಲ್ಲಿ ಸಮುದ್ರಪರ್ಯಂತವಾದ ಈ ಸಮಸ್ತಭೂಮಿಯನ್ನೂ ತನಗೆ ಈಡಾಗಿ ಮಾಡಿ ಕೊಳ್ಳಬೇಕೆಂಬ ಉತ್ಸಾಹವನ್ನು ಹೊಂದುವನು" ಎಂದನು. ಹೀಗೆ ಯುಕ್ತಿ ಯುಕ್ತವಾಗಿಯೂ, ಸತ್ಯವಾಗಿಯೂ ಇರುವ ಹನುಮಂತನ ಇಂಪಾದ ಮಾತನ್ನು

ಕೇಳಿ ಸೀತೆಯು, ಆ ಮಾತುಗಳಿಗಾಗಿ ಆಂಜನೇಯನನ್ನು ಮನ್ನಿಸಿದವಳಾಗಿ ಪ್ರಯಾಣಸನ್ನದ್ಧನಾಗಿ ನಿಂತಿರುವ ಆತನನ್ನು ಕುತೂಹಲದಿಂದ ಬಾರಿಬಾರಿಗೂ ನೋಡುತ್ತ, ತನಗೆ ಪತಿಯಲ್ಲಿರುವ ಅಸಾಧಾರಣಪ್ರೀತಿಯನ್ನು ಸೂಚಿಸತಕ್ಕ ಮಾತುಗಳಿಂದ ತಿರುಗಿ ಹನುಮಂತನನ್ನು ಕುರಿತು, "ಎಲೆ ವೀರನೆ! ನಿನಗೆ ಸಮ್ಮತವಾಗಿದ್ದ ಪಕ್ಷದಲ್ಲಿ ಇಲ್ಲಿ ಯಾವುದಾದರೂ ಒಂದು ರಹಸ್ಯ ಪ್ರದೇಶದಲ್ಲಿ ಒಂದು ದಿನದ ಮಟ್ಟಿಗಾದರೂ ಇದ್ದು, ನಿನ್ನ ಬಳಲಿಕೆಯನ್ನಾರಿಸಿಕೊಂಡು ನಾಳೆ ಇಲ್ಲಿಂದ ಹೊರಡು! ನೀನಾದರೂ ಇಲ್ಲಿ ಸನ್ನಿಹಿತನಾಗಿದ್ದರೆ ಮಂದಭಾಗ್ಯೆಯಾದ ನಾನು ಈಗ ಅನುಭವಿಸುತ್ತಿರುವ ಮಹಾವ್ಯಸನವು ಮುಹೂರ್ತಕಾಲವಾದರೂ ತಪ್ಪಿರುವುದು. ಎಲೈ ವಾನರಸಿಂಹನೆ! ನೀನು ಹಿಂತಿರುಗಿ ಬರುವವನಾಗಿದ್ದರೂ, ನೀನು ಇಲ್ಲಿಂದ ಹೊರಟಕೂಡಲೆ ನನ್ನ ಪ್ರಾಣಗಳು ದಕ್ಕುವುವೋ ಇಲ್ಲವೋ ಎಂದು ಸಂದೇಹಿಸಬೇಕಾಗಿದೆ. ನಾನು ಮೊದಲೇ ನಾನಾವಿಧದುಃಖದಿಂದ ತಪಿಸುತ್ತಿರುವೆನು. ನೀನೂ ಈಗ ನನಗೆ ಕಣ್ಮರೆಯಾಗಿ ಹೋದರೆ, ಅದರಿಂದುಂಟಾಗುವ ದುಃಖವು ಇನ್ನೂ ಹೆಚ್ಚಾಗಿ ನನ್ನನ್ನು ಬಾಧಿಸುವುದು. ಮೊದಲಿನ ನನ್ನ ದುಃಖವನ್ನು ಬೇರೊಂದು ಮಹಾದುಃಖದಿಂದ ಉದ್ದೀಪಿಸಿದಂತಾಗುವುದು. ಎಲೈ ವಾನರೋತ್ತಮನೆ! ಇವೆಲ್ಲವೂ ಹಾಗಿರಲಿ! ವಾನರಭಲ್ಲೂಕಸೈನ್ಯಗಳೊಡನೆ ರಾಮನು ಶೀಘ್ರದಲ್ಲಿಯೇ ಈ ಲಂಕೆಗೆ ಬರುವನೆಂದು ನೀನು ಹೇಳಿದೆಯಲ್ಲವೆ? ಅಪಾರವಾದ ಈ ಮಹಾಸಾಗರವನ್ನು ಆ ವಾನರಭಲ್ಲೂಕ ಸೈನ್ಯಗಳೆಲ್ಲವೂ ಹೇಗೆ ದಾಟಬಲ್ಲುವು? ಆ ರಾಮಲಕ್ಷ್ಮಣರಾದರೂ ಇದನ್ನು ದಾಟಿಬರುವ ಬಗೆ ಹೇಗೆ? ಈ ಮಹಾಸಮುದ್ರವನ್ನು ದಾಟಬೇಕೆಂದರೆ, ನೀನೊಬ್ಬನು; ವಿನತಾಪುತ್ರನಾದ ಗರುಡನೊಬ್ಬನು; ನಿನ್ನ ತಂದೆಯಾದ ವಾಯುದೇವನೊಬ್ಬನು, ಈ ಮೂವರು ಮಾತ್ರವೇ ಶಕ್ತರೇ ಹೊರತು ಬೇರೆಯಲ್ಲ. ಹೀಗೆ ಈ ಕಾರ್ಯಸಂಘಟನೆಯು ಅಸಾಧ್ಯವಾಗಿ ಬಂದೊದಗಿರುವಾಗ, ಇದಕ್ಕೆ ನೀನು ಯಾವ ಪ್ರತೀಕಾರವನ್ನು ಯೋಚಿಸಿರುವೆ? ಕಾರ್ಯಜ್ಞರಲ್ಲಿ ನೀನು ಮೇಲೆನಿಸಿಕೊಂಡವನಾದುದರಿಂದ, ಇದಕ್ಕೆತಕ್ಕ ಪರಿಹಾರವನ್ನು ಹೇಳು! ಎಲೈ ಶತ್ರುಸಂಹಾರಕನೆ! ನೀನೊಬ್ಬನೇ ರಾವಣಾದಿಗಳೆಲ್ಲರನ್ನೂ ಜಯಿಸಿ ನನ್ನನ್ನು ರಾಮನ ಬಳಿಗೆ ಸೇರಿಸಬಲ್ಲೆಯೆಂಬುದರಲ್ಲಿ ಸಂದೇಹವಿಲ್ಲ. ಆದರೆ ಈ ಕಾರ್ಯವನ್ನು ನೀನೊಬ್ಬನೇ ಸಾಧಿಸಿಬಿಟ್ಟರೆ, ಆ ಕೀರ್ತಿಗೆ ನೀನೊಬ್ಬನೇ ಭಾಗಿಯಾಗುವೆ. ಹಾಗಲ್ಲದೆ ನನ್ನ ಪ್ರಿಯನಾದ ರಾಮನು ಸಮಗ್ರವಾದ ಕಪಿಸೇನೆಯೊಡನೆ ತಾನೇ ಇಲ್ಲಿಗೆ ಬಂದು ಯುದ್ಧದಲ್ಲಿ ರಾವಣನನ್ನು ಕೊಂದು, ಜಯಶಾಲಿಯಾಗಿ, ನನ್ನನ್ನು ತನ್ನ ನಗರಿಗೆ ಕರೆದುಕೊಂಡು ಹೋಗುವಪಕ್ಷದಲ್ಲಿ, ಅದರಿಂದ

ಅವನಿಗೂ ನನಗೂ ಕೀರ್ತಿಯುಂಟು. ಮತ್ತು ಶತ್ರುಸೂದನನಾದ ಆ ನನ್ನ ಪ್ರಿಯನು ತನ್ನ ಬಾಣಗಳಿಂದ ಈ ಲಂಕಾನಗರಿಯೆಲ್ಲವನ್ನೂ ತುಂಬಿ, ತನ್ನ ವೀರ್ಯವನ್ನೂ ಚೆನ್ನಾಗಿ ತೋರಿಸಿ, ಇಲ್ಲಿಂದ ನನ್ನನ್ನು ಕರೆದುಕೊಂಡು ಹೋದರೆ, ಈ ಕಾರ್ಯವು ಕಕುತ್‌ಸ್ಥಕುಲತಿಲಕನಾದ ಆತನಿಗೆ ತಕ್ಕುದಾಗಿಯೂ ಇರುವುದು. ಆದುದರಿಂದ ರಣಶೂರನಾದ ಆ ಮಹಾತ್ಮನು ತನಗೆ ತಕ್ಕ ಪರಾಕ್ರಮವನ್ನು ತೋರಿಸಿ ಹೋಗುವಂತೆಯೇ ನೀನಾಗಿ ಮಾಡಬೇಕು" ಎಂದಳು. ಹೀಗೆ ಸೀತೆಯು ಸಾರವತ್ತಾಗಿಯೂ, ಸಹಜವಾಗಿಯೂ, ಯುಕ್ತಿಯುಕ್ತವಾಗಿಯೂ, ಇರುವಂತೆ ಹೇಳಿದ ಮಾತನ್ನು ಕೇಳಿ, ಪುನಃ ಆಂಜನೇಯನು ಆಕೆಯನ್ನು ಕುರಿತು "ಎಲೆ ದೇವಿ! ನಿನಗೆ ತಿಳಿಸಬೇಕಾದ ಬೇರೊಂದು ಮುಖ್ಯವಿಷಯವುಂಟು. ಅದನ್ನೂ ತಿಳಿಸುವೆನು ಕೇಳು! ನಮ್ಮ ಪ್ರಭುವಾದ ಸುಗ್ರೀವನು ಸಮಸ್ತವಾನರಭಲ್ಲೂಕ ಸೈನ್ಯಗಳಿಗೂ ಅಧಿರಾಜನೆನಿಸಿಕೊಂಡು, ಮಹಾಬಲಾಢ್ಯನಾಗಿರುವನು. ಅವನು ಈ ನಿನ್ನ ಕಾರ್ಯವನ್ನು ಹೇಗಾದರೂ ಸಾಧಿಸಬೇಕೆಂದು ದೃಢನಿಶ್ಚಯವನ್ನೂ ಮಾಡಿರುವನು. ಆದುದರಿಂದ ಅವನಿಗೆ ಇಲ್ಲಿನ ವೃತ್ತಾಂತವನ್ನು ತಿಳಿಸಿದೊಡನೆ ಆವನು ಸಹಸ್ರಕೋಟಿವಾನರರೊಡನೆ ಕ್ಷಿಪ್ರದಲ್ಲಿಯೇ ಇಲ್ಲಿಗೆ ಬಂದುಬಿಡುವನು. ಇಲ್ಲಿನ ರಾಕ್ಷಸರನ್ನು ಕೊಲ್ಲುವುದಕ್ಕೂ ಆತನಿಗೆ ಸಾಮರ್ಥ್ಯವುಂಟು! ಮಹಾ ಪರಾಕ್ರಮಿಗಳಾಗಿಯೂ, ಧೈರ್ಯಶಾಲಿಗಳಾಗಿಯೂ, ಬಲಾಢ್ಯರಾಗಿಯೂ, ಮನೋ ವೇಗವುಳ್ಳವರಾಗಿಯೂ ಇರುವ ಎಷ್ಟೋಮಂದಿ ವಾನರವೀರರು ಆತನ ಆಜ್ಞಾ ಧೀನರಾಗಿ ಕಾದಿರುವರು. ಮೇಲೆಯಾಗಲಿ, ಕೆಳಗಾಗಲಿ, ಅಡ್ಡಲಾಗಲಿ, ಅವರ ಸಂಚಾರಕ್ಕೆ ಎಲ್ಲಿಯೂ ತಡೆಯಿಲ್ಲ. ಎಣೆಯಿಲ್ಲದ ತೇಜಸ್ಸುಳ್ಳ ಆ ವಾನರವೀರರು ಎಂತಹ ದೊಡ್ಡ ಕಾರ್ಯಗಳಿಗಾಗಲಿ ಹಿಂಜರಿಯುವವರಲ್ಲ. ಯಾವ ವಿಷಯಗಳಲ್ಲಿಯೂ ಮಹೋತ್ಸಾಹವುಳ್ಳ ಆ ವಾನರರು, ಅಂತರಿಕ್ಷಚಾರಿಗಳಾಗಿಯೇ ಹೊರಟು, ಅನೇಕ ಸಮುದ್ರಪರ್ವತಗಳಿಂದ ತುಂಬಿದ ಈ ಸಮಸ್ತಪ್ರಪಂಚವನ್ನೂ ಅನೇಕಾವೃತ್ತಿ ಸುತ್ತಿಬಂದಿರುವರು. ಎಲೆ ದೇವಿ! ಈ ನನ್ನ ಅತ್ಯಲ್ಪಸಾಹಸವನ್ನೇ ನೀನು ಮೆಚ್ಚು ತ್ತಿರುವೆಯಲ್ಲವೆ? ನನಗೆ ಸಮಾನವಾದ ಪರಾಕ್ರಮವುಳ್ಳ ವಾನರರು ಆ ಸುಗ್ರೀವನ ವಶದಲ್ಲಿ ಇನ್ನೂ ಎಷ್ಟೋಮಂದಿಯುಂಟು! ನನಗೆ ಕಡಮೆಯಾದವನೊಬ್ಬನಾದರೂ ಅಲ್ಲಿ ಇಲ್ಲ. ಆದರೆ "ಈ ದುರ್ಗಮವಾದ ಲಂಕೆಗೆ ನೀನುಮಾತ್ರ ಬಂದುದೇಕೆ" ಎಂದು ಕೇಳುವೆಯಾ? ಲೋಕದಲ್ಲಿ ಪ್ರಭುಗಳಾದವರು ತಮ್ಮ ಪರಿವಾರಗಳಲ್ಲಿ ಪ್ರಬಲ ನಾದವನನ್ನು ಮೊದಲು ಯಾವ ಕಾರ್ಯಕ್ಕೂ ಕಳುಹಿಸುವುದಿಲ್ಲ. ಮೊದಮೊದಲು ಸಾಮಾನ್ಯಜನರನ್ನು ಕಳುಹಿಸುವರು. ಇದೇ ರಾಜನೀತಿಯು. ಆದುದರಿಂದ ನಮ್ಮ

ಪ್ರಭುವಾದ ಸುಗ್ರೀವನೊಡನೆ ಸಾಮಾನ್ಯವಾನರನಾದ ನನ್ನನ್ನೇ ಮೊದಲು ಈ ಕಾರ್ಯಕ್ಕಾಗಿ ಕಳುಹಿಸಿದನು. ನಾನೇ ಈ ಮಹಾಸಮುದ್ರವನ್ನು ದಾಟಿ ಇಲ್ಲಿಗೆ ಬಂದಿರುವಾಗ, ಆತನಲ್ಲಿರುವ ಪ್ರಮುಖರಾದ ಇತರ ವಾನರರ ಶಕ್ತಿಯನ್ನು ಕೇಳ ಬೇಕೇ? ಎಲೆ ದೇವಿ! ಆದುದರಿಂದ ನೀನು ಯಾವ ವಿಷಯದಲ್ಲಿಯೂ ಚಿಂತಿಸ ಬೇಕಾದುದಿಲ್ಲ! ನಿನ್ನ ದುಃಖವನ್ನು ಬಿಡು! ಸುಗ್ರೀವನಲ್ಲಿರುವ ಆ ವಾನರ ಪ್ರಮುಖ ರೊಬ್ಬೊಬ್ಬರೂ ಒಂದೇ ನೆಗೆತಕ್ಕೆ ಈ ಸಮುದ್ರವನ್ನು ಹಾರಿ ಬರಬಲ್ಲರು. ಆ ರಾಮಲಕ್ಷ್ಮಣರಿಬ್ಬರೂ ಈ ಸಮುದ್ರವನ್ನು ಹೇಗೆ ದಾಟಬಲ್ಲರೆಂದು ಕೇಳಿದೆಯಲ್ಲವೆ? ಅದರ ಚಿಂತೆಯು ನಿನಗೇಕೆ? ಪುರುಷಸಿಂಹರಾದ ಆ ರಾಮಲಕ್ಷ್ಮಣರಿಬ್ಬರನ್ನೂ ನಾನು, ಇದೋ! ಈ ನನ್ನ ಭುಜದ ಮೇಲೇರಿಸಿ ಕೊಂಡೇ ಇಲ್ಲಿಗೆ ಕರೆತರುವೆನು. ಉದಿಸಿಬಂದ ಚಂದ್ರಸೂರ್ಯರಂತೆ ಆ ರಾಜ ಕುಮಾರರಿಬ್ಬರೂ ನನ್ನ ಭುಜದ ಮೇಲೇರಿಯೇ ನಿನ್ನ ಸಮೀಪವನ್ನು ಸೇರು ವರೆಂದು ತಿಳಿ! ಪುರುಷಶ್ರೇಷ್ಠರಾದ ಆ ರಾಮಲಕ್ಷ್ಮಣರ ವೀರ್ಯಾತಿಶಯವನ್ನು ನಾನು ಹೊಸದಾಗಿ ನಿನಗೆ ತಿಳಿಸಬೇಕಾದುದೇನೂ ಇಲ್ಲ. ಅವರಿಬ್ಬರೂ ಒಂದಾಗಿ ಸೇರಿ ಯುದ್ಧಕ್ಕೆ ನಿಂತರೆ, ಕ್ಷಣಮಾತ್ರದಲ್ಲಿ ಈ ಲಂಕಾನಗರಿಯೆಲ್ಲವನ್ನೂ ತಮ್ಮ ಬಾಣಗಳಿಂದ ಧೂಳಿಬ್ಬಿಸಿಬಿಡುವರು. ರಘುನಂದನನಾದ ಆ ಶ್ರೀರಾಮನು ಇಲ್ಲಿಗೆ ಬಂದೊಡನೆ ರಾವಣನನ್ನೂ ಅವನ ಪರಿವಾರಗಳೊಡನೆ ಕೊಂದು, ನಿನ್ನನ್ನೂ ಸಂಗಡ ಕರೆದುಕೊಂಡು ತನ್ನ ಪಟ್ಟಣಕ್ಕೆ ಹಿಂತಿರುಗುವನು! ಇನ್ನು ನೀನು ಸಮಾ ಧಾನದಿಂದಿರು! ನಿನಗೆ ಶುಭವಾಗಲಿ! ಇದು ಮೊದಲು ನೀನು ಹೇಳಿದ ದಿನ ಗಳನ್ನು ಮಾತ್ರ ಲೆಕ್ಕಮಾಡುತ್ತಿರು. ಶೀಘ್ರದಲ್ಲಿಯೇ ರಾಮನು ಜ್ವಲಿಸುವ ಅಗ್ನಿ ಯಂತೆ ನಿನಗೆ ಗೋಚರಿಸುವನು. ಇಲ್ಲಿನ ರಾಕ್ಷಸಪ್ರಭುವಾದ ರಾವಣನು ತನ್ನ ಮಿತ್ರಬಾಂಧವಾದಿಗಳೊಡನೆಯೂ ತನ್ನ ಮಂತ್ರಿವರ್ಗಗಳೊಡನೆಯೂ ಹತನಾದ ಮೇಲೆ, ನೀನು ಚಂದ್ರನೊಡನೆ ಸೇರುವ ರೋಹಿಣಿಯಂತೆ ರಾಮನೊಡನೆ ಸೇರುವೆ! ಎಲೆ ಮೈಥಿಲಿ! ಇನ್ನು ಕ್ಷಿಪ್ರದಲ್ಲಿಯೇ ಈ ನಿನ್ನ ದುಃಖವೆಲ್ಲವೂ ಕೊನೆಮುಟ್ಟು ವುದು. ರಾವಣನು ಶೀಘ್ರದಲ್ಲಿಯೇ ರಾಮನಿಂದ ಹತನಾಗಿ ಬೀಳುವುದನ್ನೂ ನೀನು ನೋಡಬಹುದು" ಎಂದನು. ವಾಯುಪುತ್ರನಾದ ಹನುಮಂತನು ಹೀಗೆ ಸೀತೆ ಯನ್ನು ಸಮಾಧಾನಮಾಡಿಸಿ, ಅಲ್ಲಿಂದ ಹೊರಡುವುದಕ್ಕೆ ಸಿದ್ಧನಾಗಿ ನಿಂತು, ತಿರುಗಿ ಸೀತೆಯನ್ನು ಕುರಿತು "ಅಮ್ಮಾ! ಇನ್ನು ನೀನು ಸ್ವಲ್ಪವೂ ಚಿಂತಿಸಬೇಡ, ಶತ್ರುಸಂಹಾರಕನಾಗಿಯೂ, ಕೃತಾತ್ಮನಾಗಿಯೂ ಇರತಕ್ಕ ಆ ಶ್ರೀರಾಮನೂ, ಧನುಷ್ಪಾಣಿಯಾದ ಲಕ್ಷ್ಮಣನೂ, ಕ್ಷಿಪ್ರದಲ್ಲಿಯೇ ಈ ಲಂಕೆಯ ಬಾಗಿಲಲ್ಲಿ ಬಂದು

ನಿಲ್ಲುವುದನ್ನು ನೀನೇ ನೋಡುವೆ! ಮತ್ತು ನೀನು ಇನ್ನು ಶೀಘ್ರದಲ್ಲಿಯೇ ಮಹಾ ಪರಾಕ್ರಮಿಗಳಾಗಿಯೂ, ವೀರರಾಗಿಯೂ, ನಖದಂಷ್ಟ್ರಾಯುಧವುಳ್ಳವರಾಗಿಯೂ, ಮಹಾಗಜಗಳಂತೆ ದೊಡ್ಡದೊಡ್ಡ ರೂಪವುಳ್ಳವರಾಗಿಯೂ ಇರುವ ಅನೇಕ ವಾನರವೀರರು ಇಲ್ಲಿ ಗುಂಪುಕೂಡುವುದನ್ನೂ, ನೀನು ನೋಡಬಹುದು. ಮತ್ತು ಎಲೆ ಆರ್ಯೆ! ಪರ್ವತಗಳಂತೆಯೂ, ಮೇಘಗಳಂತೆಯೂ ಮಹಾಕಾಯವುಳ್ಳ ಅನೇಕ ಕಪಿವೀರರು ಗುಂಪುಗೂಡಿ ಬಂದು, ಈ ಲಂಕೆಯ ಸಮೀಪದಲ್ಲಿರುವ ಮಲಯಪರ್ವತದ ಮೇಲೆ ನಿಂತು ಸಿಂಹನಾದಮಾಡುವುದನ್ನೂ, ನೀನು ಶೀಘ್ರದಲ್ಲಿಯೇ ಕೇಳಬಹುದು. ಆ ರಾಮನು ನಿನ್ನನ್ನಗಲಿದಂದಿನಿಂದ, ಮರ್ಮಸ್ಥಾನಗಳಲ್ಲಿ ಬಿದ್ದ ಭಯಂಕರವಾದ ಮನ್ಮಥಬಾಣದಿಂದ ಬಾಧಿತನಾಗಿ, ಸಿಂಹದ ಕೈಗೆ ಸಿಕ್ಕಿದ ಆನೆಯಂತೆ ಮನಸ್ಸಿನಲ್ಲಿ ನೆಮ್ಮದಿಯಿಲ್ಲದೆ ತತ್ತಳಿಸುತ್ತಿರುವನು. ಆದುದರಿಂದ ಅವನು ನಿನ್ನನ್ನು ಕ್ಷಣಮಾತ್ರವಾದರೂ ಮರೆತಿರುವನೆಂದೆಣಿಸಬೇಡ! ಹೀಗಿದ್ದರೂ ನೀನು ಅನಾಥೆಯಂತೆ ರೋದಿಸುವುದು ಸರಿಯಲ್ಲ! ಮನಸ್ಸಿನಲ್ಲಿ ಹೀಗೆ ಕೊರಗುವುದನ್ನು ಬಿಡು! ಶಚೀದೇವಿಗೆ ದೇವೇಂದ್ರನಂತೆ, ನಿನಗೆ ರಾಮನು ನಾಥನಾಗಿರುವಾಗಲೂ ನೀನು ಹೀಗೆ ದುಃಖಿಸುವುದೇಕೆ? ಲೋಕದಲ್ಲಿ ರಾಮನಿಗಿಂತಲೂ ಮೇಲಾದವನು ಬೇರೆ ಯಾವನುಂಟು! ಆ ಲಕ್ಷ್ಮಣನಿಗೆ ಸಾಟಿಯಾರು? ಅಗ್ನಿವಾಯುಗಳೆರಡೂ ಸೇರಿದಂತೆ ಆ ಮಹಾವೀರರಿಬ್ಬರೂ ನಿನಗೆ ಬೆಂಬಲವಾಗಿರುವಾಗ ನಿನಗೆ ಚಿಂತೆಯೇಕೆ! ಎಲೆ ದೇವಿ! ಮುಖ್ಯವಾಗಿ ನೀನು ಇನ್ನು ಬಹುದಿನಗಳವರೆಗೆ ರಾಕ್ಷಸಪ್ರಚುರವಾದ ಈ ಭಯಂಕರಪ್ರದೇಶದಲ್ಲಿ ವಾಸಮಾಡಲಾರೆ! ನಿನ್ನ ಪ್ರಿಯನಾದ ರಾಮನು ಶೀಘ್ರದಲ್ಲಿಯೇ ಇಲ್ಲಿಗೆ ಬರುವನು. ನಾನು ಅಲ್ಲಿಗೆ ಹೋಗಿ ಸೇರುವುದೊಂದೇ ತಡ! ಅದುವರೆಗೆ ಮಾತ್ರ ನೀನು ದುಃಖವನ್ನು ಸಹಿಸಿಕೊಂಡಿರು! ನಾನು ಕ್ಷಿಪ್ರದಲ್ಲಿಯೇ ಅವರನ್ನು ಇಲ್ಲಿಗೆ ಕರೆತರುವೆನು'' ಎಂದನು.

ಇಲ್ಲಿಗೆ ಮೂವತ್ತೊಂಬತ್ತನೆಯ ಸರ್ಗವು.

---

ಸೀತೆಯು ಹನುಮಂತನ ಮಾತಿನಿಂದ ಸಮಾಧಾನವನ್ನು ಹೊಂದಿ ಮತ್ತೊಂದು ಗುರುತನ್ನು ರಾಮನಿಗೆ ಹೇಳಿ ಕಳುಹಿಸಿದುದು. ಹನುಮಂತನು ಸೀತೆಯ ಅನುಮತಿಯನ್ನು ಹೊಂದಿ, ಮುಂದಿನ ಕಾರ್ಯಕ್ಕೆ ಆಲೋಚಿಸಿದುದು.

ದೇವಕನ್ನೆಯಂತಿರುವ ಸೀತಾದೇವಿಯು, ಹನುಮಂತನ ವಾಕ್ಯವನ್ನು ಕೇಳಿ, ಆತನೊಡನೆ ತಿರುಗಿ ತನಗೆ ಹಿತಕರವಾದ ಒಂದು ಮಾತನ್ನು ಹೇಳುವಳು. "ಎಲೈ ಹನುಮಂತನೆ! ಸ್ವಲ್ಪವಾಗಿ ಮೊಳೆಹೊರಟ ಭೂಮಿಯು ಮಳೆಬಿದ್ದಮೇಲೆ ಚೆನ್ನಾಗಿ ಉಲ್ಲಾಸಹೊಂದುವಂತೆ, ನಿನ್ನನ್ನು ನೋಡಿದುದರಿಂದುಂಟಾದ ನನ್ನ ಸಂತೋಷವು ಈ ನಿನ್ನ ಪ್ರಿಯವಾಕ್ಯವನ್ನು ಕೇಳಿ ಮತ್ತಷ್ಟು ಉಲ್ಲಾಸಹೊಂದುತ್ತಿರುವುದು. ಮಹಾವ್ಯಸನದಿಂದಿರುವ ಈ ನನ್ನ ಅವಯವಗಳಿಂದ, ಪುರುಷಶ್ರೇಷ್ಠನಾದ ಆ ರಾಮನನ್ನು ಸ್ಪರ್ಶಿಸಿ ನಾನು ಕೃತಾರ್ಥಳಾಗುವ ರೀತಿಯಲ್ಲಿ ನೀನು ನನ್ನಲ್ಲಿ ಕೃಪೆಮಾಡಬೇಕು! ಎಲೈ ವಾನರೋತ್ತಮನೆ! ಈಗ ನಾನು ಕೊಟ್ಟಿರುವ ಈ ಚೂಡಾಮಣಿಯನ್ನು ಆತನಿಗೆ ಗುರುತಾಗಿ ಕೊಡು! ರಾಮನು ಕೋಪದಿಂದ ಕಾಗೆಯ ಮೇಲೆ ತೃಣವನ್ನು ಪ್ರಯೋಗಿಸಿ, ಅದರ ಕಣ್ಣನ್ನು ಕೆಡಿಸಿದ ವೃತ್ತಾಂತವೊಂದನ್ನು ಮೊದಲೇ ನಾನು ನಿನಗೆ ಗುರುತಾಗಿ ಹೇಳಿದೆನಲ್ಲವೆ? ಇನ್ನೊಂದು ಗುರುತನ್ನೂ ಹೇಳುವೆನು ಕೇಳು! ಇದನ್ನೂ ನಾನು ಹೇಳಿದಂತೆ ನನ್ನ ಮಾತಿನಿಂದಲೇ ನನ್ನ ಪ್ರಿಯನಿಗೆ ತಿಳಿಸು. "ಎಲೆ ನಾಥನೆ! [1] ಒಮ್ಮೆ ನನ್ನ ಮುಖದಲ್ಲಿ ತಿಲಕವು ಅಳಿಸಿಹೋದುದನ್ನು ಕಂಡು ನೀನೇ ನನ್ನ ಕೆನ್ನೆಯಲ್ಲಿ ಮಣಿಶಿಲೆಯಿಂದ ತಿಲಕವನ್ನಿಟ್ಟೆಯಲ್ಲವೆ! ಅದನ್ನು ಜ್ಞಾಪಿಸಿಕೊಂಡು ನೋಡು! ರಾಮಾ! ನೀನೋ ಮಹಾವೀರ್ಯಶಾಲಿಯು! ಮಹೇಂದ್ರವರುಣರಿಗೆ ಸಾಟಿಯೆನಿಸಿಕೊಂಡವನು! ಹೀಗಿದ್ದರೂ ನಿನ್ನ ಪ್ರಿಯಪತ್ನಿಯಾದ ನಾನು, ದುರಾತ್ಮನಾದ ರಾವಣನಿಂದಪಹೃತಳಾಗಿ, ಹೀಗೆ ರಾಕ್ಷಸರ ಸೆರೆಯಲ್ಲಿ ಸಿಕ್ಕಿರುವುದನ್ನು ಹೇಗೆ ಸಮ್ಮತಿಸಿರುವೆ? ಈ ಮಹಾವ್ಯಸನಕಾಲದಲ್ಲಿಯೂ ಕೂಡ ನಾನು ಈ ದಿವ್ಯಚೂಡಾಮಣಿಯನ್ನು ಬಿಡದೆ ಎಷ್ಟೋ ಶ್ರಮದಿಂದ ಕಾಪಾಡಿಟ್ಟಿದ್ದೆನು!

1. ಇಲ್ಲಿ "ಒಮ್ಮೆ ನನ್ನ ಕಪೋಲದಲ್ಲಿದ್ದ ಬೊಟ್ಟು ಅಳಿಸಿಹೋಗಿರಲು, ಅದನ್ನು ನೋಡಿ ನೀನು, ಆ ಸಂಗತಿಯನ್ನು ನನಗೆ ತಿಳಿಸುವುದಕ್ಕಾಗಿ, ನನಗಿದಿರಾಗಿದ್ದ ಒಂದು ಕಲ್ಲುಬಂಡೆಯಮೇಲೆ ಮಣಿಶಿಲೆಯಿಂದ ಬೊಟ್ಟನ್ನು ಮಾಡಿಟ್ಟೆಯಲ್ಲವೆ? ಅದನ್ನೂ ಜ್ಞಾಪಿಸಿಕೊಂಡು ನೋಡು" ಎಂದು ಸೀತೆಯು ರಾಮನಿಗೆ ಹೇಳಿದುದಾಗಿ ಅರ್ಥಾಂತರವನ್ನೂ ಮಾಡಬಹುದು.

ನನಗೆ ತಡೆಯಲಾರದ ದುಃಖವುಂಟಾದಾಗ ಈ ಚೂಡಾಮಣಿಯನ್ನು ನೋಡಿಕೊಂಡು, ನಿನ್ನನ್ನೇ ನೋಡಿದಂತೆ ಸ್ವಲ್ಪವಾದರೂ ಮನಸ್ಸಿಗೆ ಆಪ್ಯಾಯನವನ್ನು ತಂದುಕೊಳ್ಳುತಿದ್ದೆನು. ಸಮುದ್ರಜನ್ಯವಾಗಿ ವಿಶೇಷಕಾಂತಿಯುಕ್ತವಾದ ಆ ಚೂಡಾಮಣಿಯನ್ನೂ ಈಗ ನಿನ್ನಲ್ಲಿಗೆ ಕಳುಹಿಸಿಬಿಟ್ಟಿರುವೆನು. ನನಗೆ ಆಗಾಗ ಸ್ವಲ್ಪವಾದರೂ ದುಃಖಸಮಾಧಾನವನ್ನುಂಟುಮಾಡುತ್ತಿದ್ದ ಆ ಚೂಡಾಮಣಿಯೂ ಇಲ್ಲದುದರಿಂದ, ಇನ್ನು ಮೇಲೆ ದುಃಖವು ಬಂದಾಗ ನಾನು ಬದುಕುವುದೇ ಕಷ್ಟವು. ಬದುಕಿದ್ದರೆ ಹೇಗಾದರೂ ನಿನ್ನನ್ನು ಪುನಃ ನೋಡಬಹುದೆಂಬ ಆಶೋತ್ತರದಿಂದಲೇ ನಾನು ಸಹಿಸಬಾರದ ಈ ಮಹಾವ್ಯಸನಗಳನ್ನೆಲ್ಲಾ ಸಹಿಸಿಕೊಂಡಿರುವೆನು. ಈ ಕ್ರೂರರಾಕ್ಷಸಿಯರಿಂದ ಕೇಳಬಾರದ ಮಾತುಗಳನ್ನೆಲ್ಲಾ ಕೇಳುತ್ತಿರುವೆನು. ಮರ್ಮಭೇದಕಗಳಾದ ಈ ದುರ್ವಾಕ್ಯಗಳನ್ನು ಕೇಳಿಯೂ ನಾನು ಈ ಪ್ರಾಣವನ್ನಿಟ್ಟುಕೊಂಡಿರುವೆನು. ಎಲೈ 'ನಾಥನೆ! ಈಗಲೂ ಇನ್ನೊಂದು ತಿಂಗಳ ಗಡುವನ್ನಿಟ್ಟಿರುವೆನು. ಆ ಒಂದು ತಿಂಗಳವರೆಗೆ ಮಾತ್ರವೇ ನಾನು ಈ ಜೀವವನ್ನಿಟ್ಟುಕೊಂಡು ಕಾದಿರುವೆನು. ಅಷ್ಟರಲ್ಲಿಯೂ ನೀನು ನನ್ನನ್ನು ನಿನ್ನಲ್ಲಿಗೆ ಕರೆಸಿಕೊಳ್ಳದಿದ್ದರೆ, ಆ ಒಂದು ತಿಂಗಳಮೇಲೆ ಒಂದು ಕ್ಷಣವಾದರೂ ನಾನು ಬದುಕಿರಲಾರೆನು! ಇಲ್ಲಿನ ರಾಕ್ಷಸರಾಜನಾದ ರಾವಣನೋ, ಸಹಜವಾಗಿಯೇ ಭಯಂಕರಸ್ವರೂಪನು! ಇದರ ಮೇಲೆ ಅವನಿಗೆ ನನ್ನಲ್ಲಿ ಸ್ವಲ್ಪವಾದರೂ ಸೌಮ್ಯದೃಷ್ಟಿಯಿಲ್ಲ! [1] ಇದಲ್ಲದೆ ನೀನು ದುಃಖಿಸುತ್ತಿರುವ ಸಂಗತಿಯನ್ನೂ ನಾನು ಕೇಳಿಬಿಟ್ಟೆನು. ಈ ಸ್ಥಿತಿಯಲ್ಲಿ ನಾನು ಬದುಕಿರಬಲ್ಲೆನೆ? ಒಂದು ತಿಂಗಳಮೇಲೆ ಕ್ಷಣಮಾತ್ರವೂ ಜೀವಿಸಿರಲಾರೆನು.'' ಎಂದು ನಾನು ಹೇಳಿಕಳುಹಿಸಿದುದಾಗಿ ರಾಮನಿಗೆ ತಿಳಿಸು'' ಎಂದಳು. ಹೀಗೆ ಸೀತೆಯು ದೈನ್ಯದಿಂದ ಕಣ್ಣೀರುಬಿಟ್ಟು ಹೇಳಿದ ಮಾತನ್ನು ಕೇಳಿ, ತಿರುಗಿ ಹನುಮಂತನು ಆಕೆಯನ್ನು ಸಮಾಧಾನಪಡಿಸುತ್ತ "ಎಲೆ ದೇವಿ! ಇದೇನು? ಎಷ್ಟಾವರ್ತಿ ಹೇಳಿದರೂ ನನ್ನ ಮಾತಿನಲ್ಲಿ ನಿನಗೆ ನಂಬಿಕೆಯಿಲ್ಲವೆ? ನನ್ನ ಸತ್ಯದಾಣೆಗೂ ನಾನು ಇನ್ನೂ ಒಂದಾವರ್ತಿ ಹೇಳುವೆನು ಕೇಳು! ರಾಮನು ನಿನ್ನ ದುಃಖದಿಂದ ಇತರ ವ್ಯಾಪಾರಗಳನ್ನೇ ಮರೆತಿರುವನು. ಆತನ ದುಃಖವನ್ನು ನೋಡಿದಾಗಲೆಲ್ಲಾ ಲಕ್ಷ್ಮಣನೂ ನಿನಗಾಗಿ ಮಹಾವ್ಯಸನದಿಂದ ತಪಿಸುವನು. ಈ

1. ಇಲ್ಲಿ "ತ್ವಾಂಚಶ್ರುತ್ವಾ ವಿಷಜ್ಜಂತಂ" ಎಂದು ಪಾಠಾಂತರವುಂಟು "ನೀವು ನನ್ನನ್ನುಪೇಕ್ಷಿಸಿ ಆಲಸ್ಯಮಾಡುತ್ತಿರುವುದನ್ನೂ ಕೇಳಿದಮೇಲೆ" ಎಂದು ಇದರ ಅರ್ಥವನ್ನು ಗ್ರಹಿಸಬೇಕು.

ಸ್ಥಿತಿಯಲ್ಲಿ ಎಷ್ಟೋ ಕಷ್ಟದಿಂದ ನೀನು ನನ್ನ ಕಣ್ಣಿಗೆ ಗೋಚರಿಸಿದೆ! ಇದಕ್ಕಾಗಿ ಈಗ ನೀನು ಸಂತೋಷಿಸಬೇಕೇ ಹೊರತು ದುಃಖಿಸುವುದುಂಟೆ? ಇನ್ನು ಈ ಮುಹೂರ್ತದೊಳಗಾಗಿಯೇ ನಿನ್ನ ವ್ಯಸನವೆಲ್ಲವೂ ತೀರುವುದು. ಶತ್ರುಸೂದನರಾದ ಆ ಪುರುಷಸಿಂಹರಿಬ್ಬರೂ ನಿನ್ನನ್ನು ನೋಡಬೇಕೆಂಬ ಮಹೋತ್ಸಾಹದಲ್ಲಿ ಈ ಲಂಕಾನಗರಿಯೆಲ್ಲವನ್ನೂ ಭಸ್ಮಮಾಡದೆ ಬಿಡರು. ಎಲೆ ವಿಶಾಲಾಕ್ಷಿ! ಆ ಅಣ್ಣತಮ್ಮಂದಿರಿಬ್ಬರೂ ಶೀಘ್ರದಲ್ಲಿಯೇ ಇಲ್ಲಿಗೆ ಬಂದು, ಕ್ರೂರನಾದ ರಾವಣನನ್ನು ಅವನ ಪರಿವಾರಗಳೊಡನೆ ಯುದ್ಧದಲ್ಲಿ ಕೊಂದು, ನಿನ್ನನ್ನೂ ಅಯೋಧ್ಯೆಗೆ ಕರೆದುಕೊಂಡು ಹೋಗುವರು. ಇದರಲ್ಲಿ ಸಂದೇಹವೇ ಇಲ್ಲ! ಎಲೆ ದೇವಿ! ಇನ್ನೂ ರಾಮನಿಗೆ ತಿಳಿಸಬಹುದಾದ ಬೇರೆ ಗುರುತುಗಳೇನಾದರೂ ಇದ್ದರೆ ಅವನ ನಂಬಿಕೆಗಾಗಿ ಅವುಗಳನ್ನೂ ನನಗೆ ಹೇಳು!" ಎಂದನು. ಅದಕ್ಕೆ ಸೀತೆಯು "ಎಲೆ ವೀರನೆ! ನಾನು ಮೊದಲೇ ಬಹಳ ಮೇಲಾದ ಈ ಅಭಿಜ್ಞಾನವನ್ನು ನಿನ್ನ ಕೈಗೆ ಕೊಟ್ಟಿರುವೆನಲ್ಲವೆ? ಇದಕ್ಕಿಂತಲೂ ಇನ್ನೇನು ಬೇಕು! ನನಗೆ ಶಿರೋಭೂಷಣವಾಗಿದ್ದ ಈ ಚೂಡಾಮಣಿಯನ್ನು ನೋಡಿದೊಡನೆ, ರಾಮನಿಗೆ ನಿನ್ನ ಮಾತಿನಲ್ಲಿ ಪೂರ್ಣವಾದ ನಂಬಿಕೆಯು ಹುಟ್ಟುವುದು, ಹೋಗು" ಎಂದಳು. ಇದನ್ನು ಕೇಳಿ ವಾನರೋತ್ತಮನಾದ ಹನುಮಂತನು, ಆ ಚೂಡಾಮಣಿಯೊಡನೆ ಸೀತೆಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ, ಪ್ರಯಾಣಕ್ಕೆ ಸಿದ್ಧನಾದನು. ಆಗಲೇ ಹನುಮಂತನು ಸಮುದ್ರವನ್ನು ಹಾರುವುದಕ್ಕೆ ಉತ್ಸಾಹಗೊಂಡು, ಅದಕ್ಕೆ ತಕ್ಕಂತೆ ತನ್ನ ಮೈಯನ್ನು ಬೆಳೆಸಿ ನಿಂತಿರುವುದನ್ನು ಕಂಡು, ಸೀತೆಯು ಪುನಃ ಕಣ್ಣೀರು ತುಂಬಿಕೊಂಡು, ದುಃಖಿತೆಯಾಗಿ ಗದ್ಗದಸ್ವರದಿಂದ ಆತನನ್ನು ಕುರಿತು "ಎಲೆ ಹನುಮಂತನೆ! ಸಿಂಹಪರಾಕ್ರಮಿಗಳಾದ ರಾಮಲಕ್ಷ್ಮಣರೆಂಬ ಆ ಸಹೋದರರಿಬ್ಬರಿಗೂ ನನ್ನ ಕ್ಷೇಮವನ್ನು ತಿಳಿಸು! ಹಾಗೆಯೇ ಸುಗ್ರೀವನಿಗೂ, ಅವನ ಮಂತ್ರಿಗಳಿಗೂ, ಇತರ ವಾನರರೆಲ್ಲರಿಗೂ ನನ್ನ ಕುಶಲವನ್ನು ಹೇಳು! ಮುಖ್ಯವಾಗಿ ಮಹಾಬಾಹುವಾದ ರಾಮನು ಈ ದುಃಖಸಮುದ್ರದಿಂದ ನನ್ನನ್ನುದ್ಧರಿಸುವಂತೆ ನೀನು ಆತನನ್ನು ಪ್ರೋತ್ಸಾಹಿಸಬೇಕು. ತೀವ್ರವಾದ ಈ ನನ್ನ ದುಃಖಾತಿಶಯವನ್ನೂ ಇಲ್ಲಿನ ರಾಕ್ಷಸರು ನನ್ನನ್ನು ಆಗಾಗ ಹೆದರಿಸುತ್ತಿರುವುದನ್ನೂ, ಆ ರಾಮನಿಗೆ ತಿಳಿಸು! ನಿನಗೆ ಮಾರ್ಗದಲ್ಲಿ ಕ್ಷೇಮವುಂಟಾಗಲಿ!" ಎಂದಳು. ಹೀಗೆ ಹನುಮಂತನು ಸೀತೆಯಿಂದ ಅಭಿಜ್ಞಾನವನ್ನು ಪಡೆದು, ತಾನು ಕೃತಾರ್ಥನಾದೆನೆಂಬ ಸಂತೋಷದಿಂದ ಹಿಗ್ಗುತ್ತ ಇನ್ನು ಮುಂದೆ ತಾನು ನಡೆಸಬೇಕಾದ ಕಾರ್ಯವು ಸ್ವಲ್ಪವೇ ಉಳಿದಿರುವುದೆಂದೆಣಿಸಿಕೊಂಡು, ಉತ್ತರದಿಕ್ಕಿನ ಪ್ರಯಾಣಕ್ಕೆ ನಿಶ್ಚಯಿಸಿದನು.

ಇಲ್ಲಿಗೆ ನಾಲ್ವತ್ತನೆಯ ಸರ್ಗವು.

## ಹನುಮಂತನು ಸೀತೆಯ ಅನುಜ್ಞೆಯನ್ನು ಪಡೆದು, ಅಶೋಕವನವನ್ನು ಭಂಗಪಡಿಸಿದುದು.

ಹೀಗೆ ಸೀತೆಯು ತನ್ನನ್ನು ಪ್ರಶಂಸೆಮಾಡುತ್ತಿರಲು, ಹನುಮಂತನು ಪ್ರಯಾಣಸನ್ನದ್ಧನಾಗಿ ಹೊರಟು, ಆ ಪ್ರದೇಶವನ್ನು ಬಿಟ್ಟು ಬೇರೆಕಡೆಗೆ ಬಂದು ನಿಂತು, ತನ್ನಲ್ಲಿ ತಾನೇ ಆಲೋಚಿಸುವನು. "ನಾನು ಇಲ್ಲಿಗೆ ಬಂದ ಉದ್ದೇಶಗಳೆರಡು! ಮುಖ್ಯವಾಗಿ ಸೀತೆಯನ್ನು ಕಂಡುಹಿಡಿಯಬೇಕೆಂಬುದೊಂದು! ರಾವಣನ ಸ್ಥಳವನ್ನು ತಿಳಿಯಬೇಕೆಂಬುದೊಂದು! ಇವುಗಳಲ್ಲಿ ಬಹಳ ಪ್ರಧಾನವಾದ ಸೀತಾದರ್ಶನವೆಂಬ ಕಾರ್ಯವನ್ನು ಮುಗಿಸಿದುದಾಯಿತು. ಇನ್ನು ರಾವಣನ ಸ್ಥಿತಿಗತಿಗಳನ್ನು ತಿಳಿಯಬೇಕಾದ ಸ್ವಲ್ಪಕಾರ್ಯವು ಮಾತ್ರವೇ ಉಳಿದಿರುವುದು. ಈ ಅವಶಿಷ್ಟ ಅಲ್ಪಕಾರ್ಯವನ್ನು ಸಾಧಿಸಬೇಕಾದರೆ, ಸಾಮದಾನಭೇದಗಳೆಂಬ ಮೂರುಪಾಯಗಳನ್ನೂ ಬಿಟ್ಟು ದಂಡೋಪಾಯವನ್ನವಲಂಬಿಸುವುದೇ ಮೇಲೆಂದು ತೋರುವುದು. ಈ ರಾಕ್ಷಸರು ಬಹಳ ಮೂರ್ಖಸ್ವಭಾವವುಳ್ಳವರಾದುದರಿಂದ, ಅವರಲ್ಲಿ ಸಾಮೋಪಾಯವನ್ನು ಪ್ರಯೋಗಿಸುವುದರಿಂದ ಗುಣವಿಲ್ಲ! ಬಹಳ ಧನಾಢ್ಯರಾದವರಲ್ಲಿ ದಾನೋಪಾಯವೂ ಕೆಲಸಕ್ಕೆ ಬಾರದು! ಬಲದಿಂದ ಬಹಳವಾಗಿ ಕೊಬ್ಬಿದ ಇಂತಹ ಜನರು ಭೇದೋಪಾಯಕ್ಕೂ ವಶರಾಗತಕ್ಕವರಲ್ಲ! ಆದುದರಿಂದ ಇವರ ವಿಷಯದಲ್ಲಿ ದಂಡೋಪಾಯರೂಪವಾದ ಪರಾಕ್ರಮವನ್ನವಲಂಬಿಸುವುದೇ ಈಗ ನನಗೆ ಯುಕ್ತವೆಂದು ತೋರಿದೆ. ಈಗ ಈ ಕಾರ್ಯವನ್ನು ಸಾಧಿಸುವುದಕ್ಕೂ ಪರಾಕ್ರಮವು ಹೊರತು ಬೇರೆ ಯಾವ ಉಪಾಯವೂ ಉಚಿತವೆಂದು ತೋರಲಿಲ್ಲ. ಆದುದರಿಂದ ಈಗ ನಾನಾಗಿಯೇ ಇಲ್ಲಿ ಒಂದು ಕಲಹವನ್ನೆಬ್ಬಿಸಿ, ಇಲ್ಲಿನ ರಾಕ್ಷಸರಲ್ಲಿ ಪ್ರಮುಖರಾದ ಕೆಲವರನ್ನು ಯುದ್ಧದಲ್ಲಿ ಕೊಂದುಬಿಟ್ಟರೆ, ಆಗ ಉಳಿದ ರಾಕ್ಷಸರು ಹೇಗೋ ಒಂದುವಿಧದಿಂದ ಕೊಬ್ಬಡಗಿ ಮೃದುತ್ವವನ್ನು ಹೊಂದಬಹುದು. ಲೋಕದಲ್ಲಿ ಯಾವನು ಮುಖ್ಯವಾಗಿ ನಡೆಸಬೇಕಾದ ನಿಯತಕಾರ್ಯವನ್ನು ಮೊದಲು ಮುಗಿಸಿಕೊಂಡು, ಆ ಪ್ರಥಮಕಾರ್ಯಕ್ಕೆ ವಿರೋಧವು ಬಾರದಂತೆ ಬೇರೆ ಅನೇಕ ಕಾರ್ಯಗಳನ್ನೂ ಸಾಧಿಸುವನೋ, ಅಂತಹ ಭೃತ್ಯನೇ ಕಾರ್ಯಸಮರ್ಥನೆನಿಸುವನು. ಉದ್ದೇಶಿಸಿದ ಕಾರ್ಯವು ಅತ್ಯಲ್ಪವಾಗಿದ್ದರೂ ಒಂದೇದಾರಿಯನ್ನು ಹಿಡಿದು ಅದನ್ನು ಸಾಧಿಸಬೇಕೆಂದರೂ ಸಾಧ್ಯವಲ್ಲ. ಒಂದು ಕಾರ್ಯಸಾಧನೆಗೆ ಅನೇಕ ಮಾರ್ಗಗಳನ್ನು ತಿಳಿದವನೇ ಕಾರ್ಯಸಾಧನೆಯಲ್ಲಿ ಸಮರ್ಥನೆನಿಸುವನು. ಆದುದರಿಂದ ಇಲ್ಲಿ ನಾನು ಸೀತೆಯನ್ನು ಕಂಡುಬಿಟ್ಟಮಾತ್ರಕ್ಕೆ ಫಲವೇನು? ಇನ್ನೂ ಸ್ವಲ್ಪಕಾಲದವರೆಗೆ ನಾನು ಇಲ್ಲಿಯೇ

ಇದ್ದುಕೊಂಡು, ಯುದ್ಧದಲ್ಲಿ ನಮಗೂ, ಇಲ್ಲಿನ ರಾಕ್ಷಸರಿಗೂ ಇರುವ ಬಲಾಬಲಗಳ ತಾರತಮ್ಯವನ್ನು ಚೆನ್ನಾಗಿ ತಿಳಿದು ನಿಶ್ಚಯಿಸಿಕೊಂಡು, ಆಮೇಲೆ ಸುಗ್ರೀವನ ಬಳಿಗೆ ಹೋದರೆ, ಆಗ ನನ್ನ ಪ್ರಭುವಾದ ಆ ಸುಗ್ರೀವನ ಆಜ್ಞೆಯನ್ನು ಪೂರ್ಣವಾಗಿ ನೆರವೇರಿಸಿದಂತಾಗುವುದು. ಹಾಗಿಲ್ಲದೆ ಇಲ್ಲಿ ನಾನು ಸೀತೆಯನ್ನು ಮಾತ್ರ ಕಂಡು ಹೋದರೆ, ಇಲ್ಲಿನ ರಾಕ್ಷಸರ ಸ್ಥಿತಿಗತಿಗಳೇನೆಂದು ಸುಗ್ರೀವನು ಕೇಳಿದಾಗ, ಅವನಿಗೆ ನಾನು ಯಾವ ಪ್ರತ್ಯುತ್ತರವನ್ನು ಕೊಡಲಿ ? ಆದುದರಿಂದ ಹೇಗಾದರೂ ಈಗ ನಾನು ಇಲ್ಲಿನ ರಾಕ್ಷಸರೊಡನೆ ಕಲಹವನ್ನಾರಂಭಿಸಿ ಪರೀಕ್ಷಿಸಬೇಕು. ಆ ಯುದ್ಧವಾದರೂ ಈಗ ಅನಾಯಾಸದಿಂದಲೇ ನಿರ್ವಾಹವಾಗುವುದಕ್ಕೆ ಉಪಾಯವನ್ನೂ ಹುಡುಕಬೇಕು. ಹಾಗೆ ಮಾಡಿದರಲ್ಲವೇ ರಾವಣನಿಗೆ ತನ್ನ ಕಡೆಯ ರಾಕ್ಷಸರ ಬಲವೂ, ನನ್ನ ಬಲವೂ ಚೆನ್ನಾಗಿ ಗೊತ್ತಾಗುವುದು ? ಆಮೇಲೆ ಈ ಯುದ್ಧದ ನೆವದಿಂದಲೇ ನಾನು ರಾವಣನನ್ನೂ, ಅವನ ಮಂತ್ರಿವರ್ಗಗಳನ್ನೂ, ಅವನ ಸೇನಾಧಿಪತಿಗಳನ್ನೂ ಇದಿರಾಗಿ ಬರಮಾಡಿಕೊಂಡು, ಸೀತೆಯವಿಷಯವಾಗಿ ಆ ರಾವಣನ ಮನಸ್ಸಿನಲ್ಲಿರುವ ಅಭಿಪ್ರಾಯಗಳನ್ನೂ, ಅವನ ಬಲವನ್ನೂ, ಸುಲಭವಾಗಿ ತಿಳಿದುಕೊಂಡು ಹೋಗಬಹುದು. ಇದಕ್ಕುಪಾಯವನ್ನು ಹುಡುಕಬೇಕಲ್ಲವೆ? ಇರಲಿ ! ಅತ್ಯುತ್ತಮವಾಗಿ ನಂದನವನಕ್ಕೆಣೆಯಾದ ಈ ಅಶೋಕವನವಂತೂ ಘಾತುಕನಾದ ಆ ರಾವಣನಿಗೆ ಸೇರಿರುವುದು. ಇದು ಕಣ್ಣಿಗೂ ಮನಸ್ಸಿಗೂ ಆಹ್ಲಾದವನ್ನುಂಟುಮಾಡುವಂತಿರುವುದು. ಬಗೆಬಗೆಯ ಗಿಡುಬಳ್ಳಿಗಳಿಂದ ಶೋಭಿಸುತ್ತಿರುವುದು. ಆದುದರಿಂದ ಕಾಡುಗಿಚ್ಚು ಒಣಗಿದ ಕಾಡನ್ನು ಸುಡುವಂತೆ ಮೊದಲು ನಾನು ಈ ಅಶೋಕವನವನ್ನು ಧ್ವಂಸಮಾಡಿಬಿಡುವೆನು. ಈ ತೋಟವು ರಾವಣನಿಗೆ ಬಹಳ ಪ್ರೇಮಪಾತ್ರವಾದುದರಿಂದ, ಇದನ್ನು ಭಂಗಪಡಿಸಿದಮಾತ್ರಕ್ಕೆ ರಾವಣನಿಗೆ ಕೋಪವು ಹುಟ್ಟುವುದು. ಆಗ ಆ ರಾಕ್ಷಸರಾಜನು ಆನೆ ಕುದುರೆಗಳಿಂದಲೂ ಮಹಾರಥಗಳಿಂದಲೂ ತುಂಬಿದ ದೊಡ್ಡ ಸೇನೆಯನ್ನು ನನ್ನಮೇಲೆ ಕಳುಹಿಸುವನು. ಆ ರಾಕ್ಷಸಸೈನ್ಯಗಳೆಲ್ಲವೂ ಶೂಲಗಳನ್ನೂ, ಕಬ್ಬಿಣದ ಒನಕೆಗಳನ್ನೂ, ಪಟ್ಟಿಸಗಳನ್ನೂ ಹಿಡಿದು ನನ್ನನ್ನಿದಿರಿಸುವುವು. ಆಗ ದೊಡ್ಡಯುದ್ಧಕ್ಕೂ ಪ್ರಾರಂಭವಾಗುವುದು ಆಗ ನಾನು ಇತರರಿಗೆ ತಡೆಯಲಸಾಧ್ಯವಾದ ನನ್ನ ಪರಾಕ್ರಮವನ್ನು ಹಿಡಿದು, ಪ್ರಚಂಡ ಪರಾಕ್ರಮವುಳ್ಳ ಆ ರಾಕ್ಷಸರನ್ನಿದಿರಿಸಿ, ಕೊನೆಗೆ ರಾವಣನಿಂದ ಚೋದಿತವಾದ ಆ ಸಮಸ್ತಸೈನ್ಯವನ್ನೂ ಕೊಂದು, ಸುಖವಾಗಿ ಹಿಂತಿರುಗಿ ಸುಗ್ರೀವನ ಬಳಿಗೆ ಹೋಗಬಹುದು" ಎಂದು ನಿಶ್ಚಯಿಸಿಕೊಂಡನು. ಆಗಲೇ ಭಯಂಕರಪರಾಕ್ರಮವುಳ್ಳ

ಹನುಮಂತನು, ಕೋಪವನ್ನು ತಂದುಕೊಂಡು, ತನ್ನ ತೊಡೆಯ ವೇಗದಿಂದಲೇ ಮಹಾವಾತದಂತೆ ಅಲ್ಲಿನ ಮರಗಳನ್ನು ಮುರಿಯುವುದಕ್ಕಾರಂಭಿಸಿದನು. ಮದಿಸಿದ ಪಕ್ಷಿಗಳ ಕೂಗಿನಿಂದ ಮನೋಹರವಾಗಿಯೂ, ಬಗೆಬಗೆಯ ಗಿಡುಬಳ್ಳಿಗಳಿಂದ ತುಂಬಿದುದಾಗಿಯೂ, ರಾವಣನ ಅಂತಃಪುರಸ್ತ್ರೀಯರ ಕ್ರೀಡಾಸ್ಥಾನವಾಗಿಯೂ ಇರುವ ಆ ಪ್ರಮದವನವೆಲ್ಲವನ್ನೂ ಮುರಿದನು. ಛಿನ್ನಭಿನ್ನಗಳಾಗಿ ಬಿದ್ದ ಮರಗಿಡಗಳಿಂದಲೂ, ಒಡೆದ ಜಲಾಶಯಗಳಿಂದಲೂ, ಪುಡಿಪುಡಿಯಾದ ಕ್ರೀಡಾ ಪರ್ವತಗಳಿಂದಲೂ ಆ ಪ್ರಮದವನವು ಅಂದಗೆಟ್ಟು ಕಣ್ಣಿನಿಂದ ನೋಡಿ ಸಹಿಸಲಾರದಂತಾಯಿತು. ಬೆದರಿದ ಹಕ್ಕಿಗಳ ಕೂಗಿನಿಂದಲೂ, ಕುಸಿದು ಬಿದ್ದ ಕೆರೆಯೇರಿಗಳಿಂದಲೂ, ಸುಕ್ಕಿದ ಕೆಂದಳಿರುಗಳಿಂದಲೂ, ಬಾಡಿದ ಗಿಡಬಳ್ಳಿಗಳಿಂದಲೂ, ಅಶೋಕವನವೆಲ್ಲವೂ ದವಾಗ್ನಿಯಿಂದ ಬೆಂದಕಾಡಿನಂತೆ ಕಾಂತಿಗೆಟ್ಟಿತು. ಆಶ್ರಯವೃಕ್ಷಗಳು ಮುರಿದು ಬಿದ್ದುದರಿಂದ ಅಲ್ಲಿನ ಲತೆಗಳೆಲ್ಲವೂ ಗಂಡನಿಲ್ಲದ ಮುಂಡೆಯರಂತೆ ಕಾಣುತಿದ್ದುವು. ಆ ವನದ ಯಾವ ಕಡೆಯಲ್ಲಿ ನೋಡಿದರೂ, ಕೆದರಿದ್ದ ಲತಾಗೃಹಗಳೂ, ಮುರಿದುಬಿದ್ದ ಚಿತ್ರಶಾಲೆಗಳೂ, ಚದರಿ ಪಲಾಯನ ಮಾಡುವ ಸರ್ಪಗಳೂ, ಭಯದಿಂದೋಡುವ ವನಮೃಗಗಳೂ, ಪುಡಿಪುಡಿಯಾಗಿ ಬಿದ್ದ ಕಲ್ಲಿನಮಂಡಪಗಳೂ, ನೆಲಮಟ್ಟವಾದ ಸಾಮಾನ್ಯಗೃಹಗಳೂ, ಕಾಣುತಿದ್ದುದರಿಂದ, ಆ ಉದ್ಯಾನವನವೆಲ್ಲವೂ ಹಾಳುಬಿದ್ದ ಬೆಂಗಾಡಿನಂತೆ ತೋರುತಿತ್ತು. ರಾವಣನ ಅಂತಃಪುರಸ್ತ್ರೀಯರಿಗೆ ಭೋಗಾಶ್ರಯವಾದ ಆ ಪ್ರಮದವನದ ಭೂಪ್ರದೇಶವೆಲ್ಲವೂ, ಆ ಮಹಾಕಪಿಯ ಬಲದಿಂದ ಕಾಂತಿಗುಂದಿದುದಾಗಿ, ಬಹಳ ದೈನ್ಯದಶೆಯನ್ನು ಹೊಂದಿ ಶೋಚನೀಯಸ್ಥಿತಿಯಲ್ಲಿದ್ದಿತು. (ವನಪ್ರದೇಶವೆಲ್ಲವೂ ಆ ಕಪಿಯ ಬಲದಿಂದ ಕಂದಿದ ತಾವರೆಗಳುಳ್ಳುದಾಗಿ ಶೋಚನೀಯಾವಸ್ಥೆಯನ್ನು ಹೊಂದಿತು.) ಹೀಗೆ ಆ ಮಹಾಕಪಿಯು, ಭಾಗ್ಯಮದದಿಂದ ಕೊಬ್ಬಿದ ಮಹಾಪ್ರಭಾವವುಳ್ಳ, ರಾವಣನ ಮನಸ್ಸಿಗೆ, ಈ ವನಭಂಗವೆಂಬ ನೆವದಿಂದ ಮಹಾವ್ಯಸನವನ್ನುಂಟುಮಾಡಿ, ತಾನೊಬ್ಬನೇ ಬಲಾಢ್ಯರಾದ ಅಲ್ಲಿನ ಅನೇಕ ರಾಕ್ಷಸರೊಡನೆ ಧೈರ್ಯದಿಂದ ನಿಂತು, ಹೋರಾಡಬೇಕೆಂದೆಣಿಸಿ, ತೇಜಸ್ಸಿನಿಂದ ಜ್ವಲಿಸುವಂತೆ ತೋರುತ್ತ, ತೋಟದ ಹೊರಬಾಗಿಲಲ್ಲಿ ಬಂದು ಕಾದಿದ್ದನು.

ಇಲ್ಲಿಗೆ ನಾಲ್ವತ್ತೊಂದನೆಯ ಸರ್ಗವು.

---

ಅಶೋಕವನಕ್ಕುಂಟಾದ ಭಂಗವನ್ನು ನೋಡಿ, ಅಲ್ಲಿದ್ದ ರಾಕ್ಷಸಸ್ತ್ರೀಯರು ಭಯಗೊಂಡು, ಸೀತೆಯನ್ನು ನೋಡಿ ಹನುಮಂತನಾರೆಂದು ಪ್ರಶ್ನೆಮಾಡಿದುದು. ಸೀತೆಯು ತನಗೇನೂ ತಿಳಿಯದೆಂದು ಪ್ರತ್ಯುತ್ತರವನ್ನು ಹೇಳಲು, ರಾಕ್ಷಸಿಯರು ಈ ಸಂಗತಿಯನ್ನು, ರಾವಣನಿಗೆ ತಿಳಿಸಿದುದು. ರಾವಣನು ಕಳುಹಿಸಿದ ರಾಕ್ಷಸಸೈನ್ಯವೆಲ್ಲವನ್ನೂ ಹನುಮಂತನು ಕೊಂದುಹಾಕಿದುದು.

ಹೀಗೆ ಅಶೋಕವನದಲ್ಲಿ ಅಕಸ್ಮಿಕವಾಗಿ ಎದ್ದ ಪಕ್ಷಿಗಳ ಕಲಕಲವನ್ನೂ, ಮರಗಳು ಮುರಿದುಬಿದ್ದ ಶಬ್ದಗಳನ್ನೂ ಕೇಳಿ, ಲಂಕಾನಿವಾಸಿಗಳೆಲ್ಲರಿಗೂ ಮಹಾಭಯವು ಹುಟ್ಟಿತು. ಆ ವನದಲ್ಲಿದ್ದ ಮೃಗಪಕ್ಷಿಗಳೆಲ್ಲವೂ ಭಯದಿಂದರಚುತ್ತ ನಾನಾದಿಕ್ಕುಗಳಿಗೆ ಪಲಾಯನಮಾಡುತಿದ್ದುವು. ಅಲ್ಲಲ್ಲಿ ರಾಕ್ಷಸರಿಗೆ ನಾಶಸೂಚಕಗಳಾದ ಭಯಂಕರ ದುರ್ನಿಮಿತ್ತಗಳೂ ಕಂಡುಬಂದುವು. ಆ ವನದಲ್ಲಿ ಕಾವಲಾಗಿ ಮಲಗಿದ್ದ ವಿಕಾರಮುಖವುಳ್ಳ ಕೆಲವು ರಾಕ್ಷಸಿಯರು, ಈ ಗದ್ದಲವನ್ನು ಕೇಳಿ ದೊಡನೆ ನಿದ್ರೆಯಿಂದೆಚ್ಚತ್ತು, ಅಲ್ಲಿನ ಹಾವಳಿಯನ್ನೂ, ಆ ವಾನರನನ್ನೂ ಕಂಡರು. ಧೀರನಾಗಿಯೂ, ಬಲಾಢ್ಯನಾಗಿಯೂ ಮಹಾಪರಾಕ್ರಮಿಯಾಗಿಯೂ ಇರುವ ಹನುಮಂತನೂ ಕೂಡ, ಮೊದಲೇ ಭಯವಶರಾಗಿ ತನ್ನನ್ನು ನೋಡುತ್ತಿರುವ ಆ ರಾಕ್ಷಸಿಯರಿಗೆ ಮತ್ತಷ್ಟು ಭಯವು ಹುಟ್ಟುವಂತೆ, ತನ್ನ ಆಕಾರವನ್ನು ಬಹಳ ದೊಡ್ಡದಾಗಿ ಬೆಳೆಸಿ ಬಿಟ್ಟನು. ಹೀಗೆ ಬೆಟ್ಟದಂತೆ ದೊಡ್ಡರೂಪವನ್ನು ತಾಳಿ ನಿಂತಿರುವ ಮಹಾಬಲಾಢ್ಯನಾದ ಆ ವಾನರನ ಆಕಾರನನ್ನು ನೋಡಿ, ಆ ರಾಕ್ಷಸಿಯರೆಲ್ಲರೂ ಜನಕಪುತ್ರಿಯಾದ ಸೀತೆಯ ಬಳಿಗೆ ಬಂದು ಅವಳನ್ನು ಕುರಿತು, “ಅಮ್ಮ ವಿಶಾಲಾಕ್ಷಿ! ಇದೇನು? ಯಾರಿವನು? ಯಾರ ಮಗನು? ಇಲ್ಲಿಗೇಕೆ ಬಂದನು? ಇವನ ಹೆಸರೇನು? ಯಾರ ಮಾತಿನಮೇಲೆ ಇಲ್ಲಿಗೆ ಬಂದಿರುವನು? ಎಲ್ಲಿಂದ ಬಂದಿರುವನು? ನಿನ್ನ ಕಿವಿಯಲ್ಲಿ ಇವನು ಮಾತಾಡಿದ ವಿಷಯವೇನು? ಎಲೆ ಸೀತೆ! ಹೆದರಬೇಡ! ಇದ್ದ ಸ್ಥಿತಿಯನ್ನು ವಿವರವಾಗಿ ತಿಳಿಸು! ಇವನು ನಿನ್ನೊಡನೆ ಮಾತಾಡಿದ ಕಾರಣವೇನು?” ಎಂದು ಆತ್ಯಾತುರದಿಂದ ಕೇಳಿದರು. ಆಗ ಪರಮಸಾಧ್ವಿಯಾದ ಆ ಸೀತೆಯು, ಅವರನ್ನು ಕುರಿತು, “ಎಲೆ ರಾಕ್ಷಸಿಯರೆ! 1 ಬಹಳ ಚೆನ್ನಾಯಿತು! ನಿಮ್ಮ ರಾಕ್ಷಸರ ಮಾಯೆಯನ್ನು ನಾನು ಬಲ್ಲೆನೆ? ನಿಮ್ಮ

1. “ವಿವಾಹಕಾಲೇ ರತಿಸಂಪ್ರಯೋಗೇ ಪ್ರಾಣಾತ್ಯಯೇ ಸರ್ವಧನಾಪಹಾರೇ। ಮಿತ್ರಸ್ಯ ಚಾರ್ಥೇ(ದ್ವಿಜಾರ್ಥೇ)ಽಪ್ಯನೃತಂ ವದೇದ್ಯಃ ಪಂಚಾನೃತಾನ್ಯಾಹುರಪಾತಕಾನಿ” ಎಂದು ವಿವಾಹವನ್ನು ನಡೆಸುವ ಸಂದರ್ಭದಲ್ಲಿಯೂ, ರತಿಕಾಲದಲ್ಲಿಯೂ, ಪ್ರಾಣಾಪಾಯವು ಬಂದೊ

ಕಡೆಯ ರಾಕ್ಷಸರೇ ಹೀಗೆ ಭಯಂಕರಗಳಾದ ನಾನಾರೂಪಗಳನ್ನು ತೋರಿಸಬಲ್ಲರೇ ಹೊರತು, ಅವೆಲ್ಲವೂ ನಮಗೆ ತಿಳಿಯುವುದೆ? ನೀವೂ ರಾಕ್ಷಸರಾದುದರಿಂದ ಇದರ ನಿಜಸ್ಥಿತಿಯು ನಿಮಗೇ ತಿಳಿದಿರಬೇಕು. ಈತನಾವನೋ! ಏನು ಮಾಡುತ್ತಿರುವನೋ! ಅವೆಲ್ಲವನ್ನೂ ನೀವೇ ಬಲ್ಲಿರಿ! ಹಾವಿನ ಹೆಜ್ಜೆಯನ್ನು ಹಾವೇ ಬಲ್ಲುದಲ್ಲವೆ? ಈ ಕಪಿಯನ್ನು ನೋಡಿ ನನಗೂ ಭಯವಾಗಿರುವುದು. ಈ ಕಪಿಯಾವುದೋ ನಾನು ಕಾಣೆನು. ನಿಮ್ಮಿಂದಲೇ ನಾನೂ ತಿಳಿಯಬೇಕಾಗಿರುವುದು. ನಿಮ್ಮಲ್ಲಿ ಕಾಮರೂಪಿಯಾದ ಯಾವನೋ ಒಬ್ಬ ರಾಕ್ಷಸನೇ ಈ ರೀತಿಯಿಂದ ಬಂದಿರಬೇಕೆಂದು ನನಗೆ ತೋರಿರುವುದು" ಎಂದಳು. ಸೀತೆಯ ಈ ಮಾತನ್ನು ಕೇಳಿದಮೇಲೆ ಆ ರಾಕ್ಷಸಿಯರೆಲ್ಲರೂ ಭಯದಿಂದ ಆ ತೋಟದ ನಾಲ್ಕುಕಡೆಗಳಿಗೂ ಪಲಾಯನಮಾಡಿದರು. ಕೆಲವರು ಅಲ್ಲಿಯೇ ಮರಗಳ ಮರೆಯಲ್ಲಿ ಅವಿತುಕೊಂಡರು. ಕೆಲವರು ಈ ಸಂಗತಿಯನ್ನು ರಾವಣನಿಗೆ ತಿಳಿಸುವುದಕ್ಕಾಗಿ ಅರಮನೆಗೆ ಓಡಿದರು. ವಿಕಾರರೂಪವುಳ್ಳ ಆ ರಾಕ್ಷಸಿಯರು ರಾವಣನ ಮುಂದೆ ನಿಂತು ತಾವು ಅಶೋಕವನದಲ್ಲಿ ಕಂಡು ಬಂದ ಕಪಿಯ ವಿಲಕ್ಷಣರೂಪವನ್ನೂ, ಅದರ ಭಯಂಕರಾಕಾರವನ್ನೂ ವಿವರಿಸತೊಡಗಿದರು. "ಅಬ್ಬಾ! ಎಲೈ ರಾಜನೆ! ನಾವೇನು ಹೇಳಲಿ! ಒಂದು ದೊಡ್ಡ ಕಪಿ! ಅದನ್ನು ನೋಡುವಾಗಲೇ ಮೈನಡುಗುವುದು! ಹೇಗೋ ಬಂದು ಅದು ನಮ್ಮ ಅಶೋಕವನದ ನಡುವೆ ಸೇರಿಕೊಂಡಿರುವುದು! ಅದರ ಪರಾಕ್ರಮಕ್ಕೆ ಎಣೆಯೇ ಇಲ್ಲವೆಂದೂ ತೋರುವುದು! ಮೊದಲು ಸೀತೆಯೊಡನೆ ಏನೋ ಪಿಸುಮಾತುಗಳನ್ನಾಡಿತು. ಈಗಲೂ ಅಲ್ಲಿಯೇ ಕಾದಿರುವುದು! ಆ ಕಪಿಯಾವುದೆಂದು ನಾವೆಲ್ಲರೂ ಎಷ್ಟೋ ವಿಧದಿಂದ ಸೀತೆಯನ್ನು ನಿರ್ಬಂಧಿಸಿ ಕೇಳಿದೆವು! ಎಷ್ಟಾದರೂ ಸೀತೆಯು ಆ ಕಪಿಯ ನಿಜಸ್ಥಿತಿಯನ್ನು ನಮಗೆ ತಿಳಿಸಲಿಲ್ಲ! ಒಂದು ವೇಳೆ ಅವನು ದೇವೇಂದ್ರನ ಕಡೆಯ ದೂತನಾಗಿದ್ದರೂ ಇರಬಹುದು! ಕುಬೇರನ ದೂತನಾಗಿದ್ದರೂ ಇರಬಹುದು! ಕೊನೆಗೆ ಸೀತೆಯನ್ನು ಹುಡುಕಿ ಬರುವುದಕ್ಕಾಗಿ ರಾಮನು ಕಳುಹಿಸಿದ್ದರೂ ಇರಬಹುದು! ಹೀಗೆಂದು ನಿಶ್ಚಯಿಸುವುದಕ್ಕಿಲ್ಲ! ಮುಖ್ಯವಾಗಿ ಮಹಾದ್ಭುತರೂಪವುಳ್ಳ ಆ ಕಪಿಯಂತೂ, ಅನೇಕ ಮೃಗಸಮೂಹಗಳಿಗಾಶ್ರಯವಾಗಿ, ಲೋಕಮನೋಹರವಾದ ನಮ್ಮ ಪ್ರಮದವನವೆಲ್ಲನ್ನೂ ನಿರ್ಮೂಲವಾಗಿ ನಾಶಮಾಡಿಬಿಟ್ಟಿತು! ನಮ್ಮ ತೋಟದಲ್ಲಿ ಆ ಕಪಿಯು

---

ದಗಿದಾಗಲೂ, ಮಿತ್ರಕಾರ್ಯಕ್ಕಾಗಿಯೂ, ಸುಳ್ಳಾಡುವುದರಿಂದ ದೋಷವಿಲ್ಲವೆಂಬ ವಿಧಿಯುಂಟು. ಆದುದರಿಂದ ಇಲ್ಲಿ ಸೀತೆಯು ಮಿತ್ರರಕ್ಷಣೆಗಾಗಿ ಸುಳ್ಳಾಡುವುದು ಪಾಪವಲ್ಲವೆಂದೆಣಿಸಿ, ಹನುಮಂತನ ವಿಷಯವಾಗಿ ಅಸತ್ಯವನ್ನು ಹೇಳಿದುದಾಗಿ ಗ್ರಾಹ್ಯವು.

ಹಾಳುಮಾಡದ ಪ್ರದೇಶವೊಂದಾದರೂ ಇಲ್ಲ! ಆದರೆ ಜನಕಪುತ್ರಿಯಾದ ಆ ಸೀತೆಯಿರುವ ಪ್ರದೇಶವನ್ನು ಮಾತ್ರ ಹಾಗೆಯೇ ಬಿಟ್ಟಿರುವುದು ! ಹೀಗೆ ಆ ಕಪಿಯು ಆ ಸ್ಥಳವನ್ನು ಮಾತ್ರ ಕೆಡಿಸದೆ ಬಿಟ್ಟಿರುವುದನ್ನು ನೋಡಿದರೆ, ಸೀತೆಯಮೇಲೆ ಅದಕ್ಕಿರುವ ಪ್ರೇಮದಿಂದಲೋ, ಅಥವಾ ಆದುವರೆಗೆ ವಿಶೇಷವಾಗಿ ಶ್ರಮಪಟ್ಟು ಬಳಲಿಹೋದುದರಿಂದಲೋ ಅದನ್ನೂ ತಿಳಿಯುವುದಕ್ಕಿಲ್ಲ. ಅಥವಾ ಆ ಮಹಾ ಕಪಿಗೆ ಬಳಲಿಕೆಯೆಂದರೇನು? ಸೀತೆಯನ್ನು ರಕ್ಷಿಸುವುದಕ್ಕಾಗಿಯೇ ಹಾಗೆ ಮಾಡಿರ ಬೇಕು. ಅಂದವಾದ ಚಿಗುರುಗಳಿಂದಲೂ, ಹೂಗಳಿಂದಲೂ ತುಂಬಿದ ಯಾವ ಶಿಂಶುಪಾವೃಕ್ಷದ ಕೆಳಗೆ ಆ ಸೀತೆಯು ಕುಳಿತಿರುವಳೋ, ಆ ಮರವನ್ನು ಮಾತ್ರ ಉಳಿಸಿರುವುದು. ಎಲೈ ಮಹಾರಾಜನೆ! ಭಯಂಕರಾಕಾರವುಳ್ಳ ಆ ವಾನರನು ಮೊದಲು ಸೀತೆಯೊಡನೆ ಕೆಲವು ಪಿಸುಮಾತಗಳನ್ನಾಡಿದುದೂ ಅಲ್ಲದೆ, ನಿನಗೆ ಪರಮಪ್ರಿಯವಾದ ಅಶೋಕವನವನ್ನೂ ಹಾಳುಮಾಡಿಬಿಟ್ಟಿತು. ಹೀಗೆ ನಿನ್ನಲ್ಲಿ ಎರಡು ಮಹಾಪರಾಧಗಳನ್ನು ಮಾಡಿದ ಆ ಕಪಿಯ ದುಶ್ಚೇಷ್ಟೆಗೆ ತಕ್ಕಂತೆ ನೀನೂ ಅದಕ್ಕೆ ಕ್ರೂರದಂಡನೆಯನ್ನೇ ವಿಧಿಸಬೇಕು ? ಎಲೆ ರಾಕ್ಷಸೇಂದ್ರನೆ ! ಲೋಕದಲ್ಲಿ ಬದುಕಿರಬೇಕೆಂಬ ಆಸೆಯುಳ್ಳ ಯಾವನು ತಾನೇ, ನೀನು ಮನಸ್ಸಿನಿಂದ ಪರಿಗ್ರಹಿ ಸಿರುವ ಆ ಸೀತೆಯನ್ನು ಅಷ್ಟು ಧೈರ್ಯದಿಂದ ಮಾತಾಡಿಸಬಲ್ಲನು ?'' ಎಂದರು. ರಾಕ್ಷಸಿಯರು ಹೇಳಿದ ಈ ಮಾತನ್ನು ಕೇಳಿದೊಡನೆ ರಾವಣನು ಬೆಂಕಿಯಂತೆ ಕೋಪದಿಂದ ಕಿಡಿಕಿಡಿಯಾಗಿ, ಅತ್ಯಾಕ್ರೋಶದಿಂದ ಕಣ್ಣಾಲಿಗಳನ್ನು ತಿರುಗಿಸಿ ಕ್ರೂರದೃಷ್ಟಿಯಿಂದ ನೋಡುತ್ತಿರಲು. ಉರಿಯುವ ದೀಪಗಳಿಂದ ಜ್ವಾಲೆಯೊಡ ಗೂಡಿ ಕೆಳಗೆ ಬೀಳುವ ಎಣ್ಣೆಯ ಬಿಂದುಗಳಂತೆ, ಆ ರಾವಣನ ಕಣ್ಣುಗಳಿಂದ ಬಾಷ್ಪ ಬಿಂದುಗಳು ಬೀಳುತಿದ್ದುವು. ಆಗಲೇ ಮಹಾತೇಜಸ್ವಿಯಾದ ಆ ರಾವ ಣನು ತನಗೆ ಸಮಾನವಾದ ಬಲವುಳ್ಳ ಕಿಂಕರರೆಂಬ ಕೆಲವು ರಾಕ್ಷಸರನ್ನು ಕರೆದು. ಹನುಮಂತನನ್ನು ನಿಗ್ರಹಿಸಿ ಬರುವುದಕ್ಕಾಗಿ ನಿಯಮಿಸಿದನು. ಎಂಬತ್ತು ಸಾವಿರಸಂಖ್ಯೆಯುಳ್ಳ ಮಹಾವೇಗಶಾಲಿಗಳಾದ ಕಿಂಕರರೆಂಬ ಆ ರಾಕ್ಷಸ ರೆಲ್ಲರೂ, ಆಗಲೇ ಕೂಟಮುದ್ಗರಾದ್ಯಾಯುಧಗಳನ್ನು ಹಿಡಿದು ಆ ರಾಜಗೃಹ ದಿಂದ ಅಶೋಕವನಕ್ಕೆ ಹೊರಟರು. ಅವರಲ್ಲಿಯೋ, ಒಬ್ಬೊಬ್ಬರೂ ಗುಡಾಣ ದಂತೆ ದೊಡ್ಡ ಹೊಟ್ಟೆಯುಳ್ಳವರು. ಒಬ್ಬೊಬ್ಬರೂ ಮಹಾದಂಷ್ಟ್ರವುಳ್ಳವರು. ಒಬ್ಬೊಬ್ಬರೂ ಘೋರಸ್ವರೂಪವುಳ್ಳವರು. ಒಬ್ಬೊಬ್ಬರೂ ಮಹಾಬಲಾಢ್ಯರು ! ಒಬ್ಬೊಬ್ಬರೂ ಯುದ್ಧದಲ್ಲಿ ಮಹೋತ್ಸಾಹವುಳ್ಳವರು. ಇಂತಹ ಘೋರ ರಾಕ್ಷಸರೆಲ್ಲರೂ ಸೇರಿ ಹನುಮಂತನನ್ನು ಹಿಡಿದುತರಬೇಕೆಂಬ ಆತುರ

ದಿಂದ ಹೊರಟುಬಂದರು. ಹೀಗೆ ಆ ರಾಕ್ಷಸರು ವೇಗದಿಂದ ಬಂದು, ಅಶೋಕ ವನದ ಹೊರಬಾಗಿಲಲ್ಲಿ ಯುದ್ಧಸನ್ನದ್ಧನಾಗಿ ನಿಂತಿದ್ದ ಆ ಮಹಾಕಪಿಯನ್ನು ನೋಡಿ, ಬೆಂಕಿಯಮೇಲೆ ಬೀಳುವ ಮಿಡಿತೆಗಳಂತೆ ಆ ಹನುಮಂತನಮೇಲೆ ನುಗ್ಗಿದರು. ಆ ರಾಕ್ಷಸರೆಲ್ಲರೂ ಸೇರಿ, ಚಿತ್ರವಿಚಿತ್ರಗಳಾದ ಗದೆಗಳಿಂದಲೂ, ಚಿನ್ನದ ಕಟ್ಟುಳ್ಳ ಪರಿಘಗಳಿಂದಲೂ, ಸೂರ್ಯನಂತೆ ಥಗಥಗಿಸುವ ಬಾಣಗಳಿಂದಲೂ, ಆ ವಾನರೋತ್ತಮನನ್ನು ಹೊಡೆದರು. ಹೀಗೆ ಅಲ್ಲಿಗೆ ಬಂದ ಆ ರಾಕ್ಷಸರಲ್ಲಿ, ಕೆಲವರು ಕಬ್ಬಿಣದೊನಕೆಗಳಿಂದಲೂ, ಕೆಲವರು ಪಟ್ಟಿಸಗಳಿಂದಲೂ, ಕೆಲವರು ಶೂಲಗಳಿಂದಲೂ, ಕೆಲವರು ಭಲ್ಲ್ಯಗಳಿಂದಲೂ, ಕೆಲವರು ಈಟಿಗಳಿಂದಲೂ, ಕೆಲವರು ಶಕ್ತ್ಯಾಯುಧಗಳಿಂದಲೂ ಆ ಹನುಮಂತನನ್ನು ಪ್ರಹರಿಸುತ್ತ, ಅವನ ಸುತ್ತಲೂ ಮುತ್ತಿ ನಿಂತಿದ್ದರು. ಪರ್ವತದಂತೆ ಮಹಾದೇಹವುಳ್ಳ ತೇಜಸ್ವಿಯಾದ ಹನುಮಂತನಾದರೋ, ಅವೊಂದನ್ನೂ ಲಕ್ಷ್ಯಮಾಡದೆ, ಮೇಲೆಮೇಲೆ ತನ್ನ ಮೈಯನ್ನು ಬಳೆಸಿಕೊಂಡು, ಆ ಲಂಕಾನಗರಿಯೆಲ್ಲವನ್ನೂ ಮಹಾಧ್ವನಿಯಿಂದ ತುಂಬುವಂತೆ, ತನ್ನ ಬಾಲದಿಂದ ನೆಲವನ್ನಪ್ಪಳಿಸಿ ಹೊಡೆದು, ಒಂದು ದೊಡ್ಡ ಸಿಂಹನಾದವನ್ನು ಮಾಡಿದನು. ಮತ್ತು ವಾಯುಪುತ್ರನಾದ ಆ ಹನುಮಂತನು ರಾಕ್ಷಸರಮುಂದೆ ಹೀಗೆ ಮಹಾದ್ಭುತರೂಪವನ್ನು ತಾಳಿ ತನ್ನ ಭುಜವನ್ನು ಬಲವಾಗಿ ತಟ್ಟಲು, ಅವನ ಭುಜಾಸ್ಫಾಲನದಿಂದುಂಟಾದ ಮಹಾಧ್ವನಿಯು, ಅಲ್ಲಲ್ಲಿನ ಬೆಟ್ಟದ ತಪ್ಪಲುಗಳಿಂದ ಹೊರಟ ದೊಡ್ಡ ಪ್ರತಿಧ್ವನಿಯೊಡಗೂಡಿ ನಾಲ್ಕುದಿಕ್ಕುಗಳನ್ನೂ ವ್ಯಾಪಿಸಿತು. ಆ ಧ್ವನಿಗೆ ಹೆದರಿ ಗಗನಚಾರಿಗಳಾದ ಹಕ್ಕಿಗಳೆಲ್ಲವೂ ಕೆಳಕ್ಕುದಿರಿದುವು. ಆಮೇಲೆ ಹನುಮಂತನು ಆ ರಾಕ್ಷಸರ ನಡುವೆ ಧೈರ್ಯದಿಂದ ನಿಂತು, ಅವರನ್ನು ಕುರಿತು ಗಟ್ಟಿಯಾಗಿ "ಅತಿ ಬಲಾಢ್ಯನಾದ ನಮ್ಮ ರಾಮನಿಗೆ ಜಯವು. ಮಹಾಬಲವುಳ್ಳ ಲಕ್ಷ್ಮಣನಿಗೆ ಜಯವು. ರಾಮನಿಂದ ಪಾಲಿತನಾದ ನಮ್ಮ ಪ್ರಭುವಾದ ಸುಗ್ರೀವನಿಗೆ ಜಯವು. ಎಂತಹ ಅಸಾಧ್ಯಕಾರ್ಯಗಳನ್ನಾದರೂ ಸುಖವಾಗಿ ಸಾಧಿಸಬಲ್ಲ 'ಕೋಸಲೇಂದ್ರನಾದ ಆ ರಾಮನಿಗೆ ನಾನು ದಾಸನು. ನನಗೆ ಹನುಮಂತನೆಂದು ಹೆಸರು. ನಾನು ವಾಯುಪುತ್ರನು. ಶತ್ರುಸೈನ್ಯಗಳನ್ನು ನಿರ್ಮೂಲ ಮಾಡತಕ್ಕವನು. ಈ ಒಬ್ಬ ರಾವಣನು ಹಾಗಿರಲಿ! ಇಂತಹ ಸಾವಿರಮಂದಿ ರಾವಣರು ಬಂದರೂ ಯುದ್ಧದಲ್ಲಿ ನನಗಿದಿರಲ್ಲ! ನಾನು ನಿರಾಯುಧನಾಗಿರುವುದರಿಂದ ಕೈಲಾಗದವನೆಂದೆಣಿಸಬೇಡಿರಿ! ಕೈಗೆ ಸಿಕ್ಕಿದ ಕಲ್ಲುಮರಗಳನ್ನೇ ಹಿಡಿದು, ಸಾವಿರಾರುವಿಧದಿಂದ ಶತ್ರುಗಳನ್ನು ಹೊಡೆದೋಡಿಸಬಲ್ಲೆನು. ಈಗ ರಾಕ್ಷಸರೆಲ್ಲರೂ ನೋಡುತ್ತಿರು

ವಾಗಲೇ ನಾನು ಈ ಪಟ್ಟಣವೆಲ್ಲವನ್ನೂ ಧ್ವಂಸಮಾಡಿ, ನಮ್ಮ ಸೀತಾ ದೇವಿಗೂ ನಮಸ್ಕರಿಸಿ ಕೃತಾರ್ಥನಾಗಿ ರಾಮನಬಳಿಗೆ ಹೋಗಿ ಸೇರುವೆನು" ಎಂದು ಕೈಯೆತ್ತಿ ಕೂಗಿದನು. ಅಲ್ಲಿದ್ದ ರಾಕ್ಷಸರೆಲ್ಲರೂ ಈ ಹನುಮಂತನ ಮಹಾರ್ಭಟವನ್ನು ಕೇಳಿ ಭಯಗೊಂಡು, ಸಂಧ್ಯಾಕಾಲದ ಮೇಘದಂತೆ ರಕ್ತ ವರ್ಣದಿಂದ ಕೂಡಿದ ಮಹಾಕಾಯವುಳ್ಳ ಆ ಹನುಮಂತನನ್ನು ನಟ್ಟ ಕಣ್ಣಿನಿಂದ ಸ್ತಬ್ಧರಾಗಿ ನೋಡುತ್ತಿದ್ದರು. ಅವರ ಮನಸ್ಸಿನಲ್ಲಿ ಬಹಳ ಭಯವಿದ್ದರೂ, ರಾಜಾಜ್ಞೆಗೆ ಬದ್ಧರಾದುದರಿಂದ ಆ ಭಯವನ್ನು ಬಿಟ್ಟು, ಇದಿರಾಗಿ ಬಂದು ಆತನನ್ನಿದಿರಿಸಲಾರದೆ, ಅಲ್ಲಲ್ಲಿ ಮರೆಯಾಗಿಯೇ ನಿಂತು ವಿವಿಧಾಯುಧಗಳಿಂದ ಆತನನ್ನು ಹೊಡೆಯುತಿದ್ದರು. ಮಹಾಬಲಾಢ್ಯನಾದ ಹನುಮಂತನಾದರೋ ಹೀಗೆ ಶೂರರಾದ ಅನೇಕರಾಕ್ಷಸರು ತನ್ನ ಸುತ್ತಲೂ ಮುತ್ತಿ ಹೊಡೆಯುವು ದನ್ನು ನೋಡಿ ಕೋಪಗೊಂಡು, ಆ ತೋಟದ ಹೊರಬಾಗಿಲಲ್ಲಿದ್ದ ಮಹಾ ಭಯಂಕರವಾದ ದೊಡ್ಡಬಾಗಿಲಗುಳಿಯನ್ನು ನೋಡಿ, ಅದನ್ನೇ ಕೈಗೆ ತೆಗೆದು ಕೊಂಡು, ಅದರಿಂದಲೇ ಆ ರಾಕ್ಷಸರೆಲ್ಲರನ್ನೂ ಬಡಿಯುತಿದ್ದನು. ಮತ್ತು ವೀರನಾದ ಆ ಹನುಮಂತನು ಸರ್ಪವನ್ನು ಹಿಡಿದ ಗರುಡನಂತೆ, ಆ ಅಗುಳಿ ಯನ್ನು ಹಿಡಿದು ಆಕಾಶದಲ್ಲಿಯೇ ಚಿತ್ರಗತಿಯಿಂದ ಸುತ್ತುತಿದ್ದನು. ಇಂದ್ರನು ತನ್ನ ವಜ್ರಾಯುಧದಿಂದ ದಾನವರನ್ನು ಕೊಲ್ಲುವಂತೆ, ಆ ಅಗುಳಿಯಿಂದಲೇ ಅವರೆಲ್ಲರನ್ನೂ ಕೊಂದನು. ಹೀಗೆ ಮಹಾವೀರನಾದ ವಾಯುಪುತ್ರನು, ಕಿಂಕರ ರೆಂಬ ಆ ಸಮಸ್ತ ರಾಕ್ಷಸರನ್ನೂ ನಿಶ್ಶೇಷವಾಗಿ ಕೊಂದು, ತಿರುಗಿ ಯುದ್ಧಾ ಕಾಂಕ್ಷಿಯಾಗಿ ಆ ತೋಟದ ಹೊರಬಾಗಿಲಲ್ಲಿಯೇ ಕಾದಿದ್ದನು. ಇತ್ತಲಾಗಿ ಆ ಯುದ್ಧದಲ್ಲಿ ಭಯದಿಂದ ತಲೆತಪ್ಪಿಸಿಕೊಂಡು ಬಂದ ಕೆಲವು ರಾಕ್ಷಸರು, ಆಗಲೇ ಓಡಿ ಹೋಗಿ, ಕಿಂಕರರೆಂಬ ರಾಕ್ಷಸರೆಲ್ಲರೂ ಹತರಾದ ವಿಷಯವನ್ನು ರಾವಣನಿಗೆ ತಿಳಿಸಿದರು. ಆಗ ರಾಕ್ಷಸರಾಜನು ಕಿಂಕರಸೈನ್ಯವೆಲ್ಲವೂ ಹತ ವಾದುದನ್ನು ಕೇಳಿ, ಕೋಪದಿಂದ ಕಣ್ಣುಗಳನ್ನು ತಿರುಗಿಸುತ್ತ, ಪರಾಕ್ರಮ ದಲ್ಲಿ ಎಣೆಯಿಲ್ಲದವನಾಗಿಯೂ, ಯುದ್ಧದಲ್ಲಿ ದುರ್ಜಯನಾಗಿಯೂ ಇದ್ದ ಪ್ರಹಸ್ತಪುತ್ರನನ್ನು ಕರೆದು, ಹನುಮಂತನನ್ನು ನಿಗ್ರಹಿಸುವುದಕ್ಕಾಗಿ ಕಳುಹಿಸಿದನು.

ಇಲ್ಲಿಗೆ ನಾಲ್ವತ್ತೆರಡನೆಯ ಸರ್ಗವು.

---

ಹನುಮಂತನು ತೋಟದ ಹೊರಬಾಗಿಲನ್ನು ಬಿಟ್ಟು,
ಅಲ್ಲಿನ 1ಚೈತ್ಯಪ್ರಾಸಾದವನ್ನೇರಿ ಅದನ್ನು ಮುರಿದು
ಅಲ್ಲಿನ ರಾಕ್ಷಸರನ್ನೂ ಧ್ವಂಸಮಾಡಿದುದು.

ಹೀಗೆ ಹನುಮಂತನು ಆ ಕಿಂಕರಸೈನ್ಯವನ್ನು ಕೊಂದಮೇಲೆ, ತಾನು ಮೊದಲಿದ್ದ ಸ್ಥಳಕ್ಕೆ ಬಂದು ನಿಂತು, ತನ್ನಲ್ಲಿ ತಾನು "ಈ ಅಶೋಕವನವನ್ನಂತೂ ನಾನು ಸಂಪೂರ್ಣವಾಗಿ ನಾಶಮಾಡಿ ಬಿಟ್ಟೆನು. ಆದರೆ ಇಲ್ಲಿನ ರಾಕ್ಷಸರ ಕುಲದೇವತೆಗಳಿಗೆ ಸ್ಥಾನವಾದ ಈ ಚೈತ್ಯಪ್ರಾಸಾದವು ಮಾತ್ರ ಇನ್ನೂ ಹಾಗೆಯೇ ಉಳಿದಿರುವುದು. ಇದನ್ನೂ ಬಿಡಬಾರದು. ಆದುದರಿಂದ ಮಹೋನ್ನತವಾಗಿಯೂ, ಭಯಂಕರವಾಗಿಯೂ ಇರುವ ಈ ಪ್ರಾಸಾದವನ್ನೂ ಕೆಡಹಿಬರುವೆನು" ಎಂದು ಮನಸ್ಸಿನಲ್ಲಿ ನಿರ್ಧರಮಾಡಿಕೊಂಡು, ಅಲ್ಲಿನ ರಾಕ್ಷಸರಿಗೆ ತನ್ನ ದೇಹಬಲವನ್ನು ತೋರಿಸುವುದಕ್ಕಾಗಿ, ಆ ಹೊರಬಾಗಿಲಿನಿಂದಲೇ ಒಂದೇ ನೆಗೆತಕ್ಕೆ ಮೇಲೆ ಹಾರಿ, ಮೇರು ಶಿಖರದಂತೆ ಮಹೋನ್ನತವಾದ ಆ ಪ್ರಾಸಾದವನ್ನೇರಿ ಕುಳಿತನು. ಹೀಗೆ ಆ ವಾನರೋತ್ತಮನು ದೊಡ್ಡಬೆಟ್ಟದಂತಿರುವ ಆ ಪ್ರಾಸಾದದ ಮೇಲೆ ಕುಳಿತಾಗ ತನ್ನ ತೇಜಸ್ಸಿನಿಂದ 2ಬೇರೊಬ್ಬ ಸೂರ್ಯನೇ ಉದಿಸಿಬಂದಂತೆ ಪ್ರಕಾಶಿಸುತ್ತಿದ್ದನು. ಮತ್ತು ಬೇರೊಬ್ಬರಿಗೆ ದುರ್ಗಮವಾದ ಆ ಚೈತ್ಯಪ್ರಾಸಾದವನ್ನೇರಿ, ದಿವ್ಯತೇಜಸ್ಸಿನಿಂದ ಜ್ವಲಿಸುತ್ತ, ಪಾರಿಯಾತ್ರವೆಂಬ ಕುಲಪರ್ವತದಂತೆ ಕಾಣುತಿದ್ದನು. ಆಗಲೂ ವಾಯುಪುತ್ರನು, ತನ್ನ ಪ್ರಭಾವದಿಂದ ದೊಡ್ಡ ದೇಹವನ್ನು ತಾಳಿ, ಲಂಕೆಯೆಲ್ಲವನ್ನೂ ಶಬ್ದದಿಂದ ತುಂಬುವಂತೆ ಬಲವಾಗಿ ತನ್ನ ಭುಜವನ್ನಪ್ಪಳಿಸಿದನು. ಕರ್ಣಕ್ಕೆ ಘೋರವಾದ ಈ ದೊಡ್ಡ ಭುಜಾಸ್ಫಾಲನ ಧ್ವನಿಯನ್ನು ಕೇಳಿ, ಆಕಾಶದಿಂದ ಹಕ್ಕಿಗಳೆಲ್ಲವೂ ಉದಿರಿ ಬೀಳುತಿದ್ದುವು. ಆ ಪ್ರಾಸಾದಕ್ಕೆ ಕಾವಲಿದ್ದ ರಾಕ್ಷಸರೆಲ್ಲರೂ ಮೂರ್ಛೆಬಿದ್ದರು. ಹೀಗೆ ಹನುಮಂತನು ಆ ಪ್ರಾಸಾದ ಶಿಖರದಲ್ಲಿ ಕುಳಿತು ಭುಜವನ್ನು ತಟ್ಟುತ್ತ "ಸರ್ವಾಸ್ತ್ರವಿಶಾರದನಾದ ಆ ಶ್ರೀರಾಮನಿಗೆ ಜಯವಾಗಲಿ! ಮಹಾಬಲಾಢ್ಯನಾದ ಲಕ್ಷ್ಮಣನೂ ಜಯಶೀಲನಾಗಲಿ! ರಾಮನಿಂದ ಸುರಕ್ಷಿತವಾದ ನಮ್ಮ ಪ್ರಭುವಾದ ಸುಗ್ರೀವನೂ ಜಯಶೀಲ

---

1. ರಾಕ್ಷಸರು ತಮ್ಮ ಕುಲದೇವತೆಗಳಿಗಾಗಿ ಕಟ್ಟಿಕೊಂಡಿರುವ ದೇವಾಲಯಕ್ಕೆ ಚೈತ್ಯವೆಂದು ಹೆಸರು. ಅದು ಪ್ರಾಸಾದರೂಪವಾಗಿರುವುದರಿಂದ ಇಲ್ಲಿ ಚೈತ್ಯಪ್ರಾಸಾದವೆಂದು ವ್ಯವಹರಿಸಲ್ಪಟ್ಟಿದೆ.

2. ಇದರಿಂದ ಆಗ ಸೂರ್ಯೋದಯವಾಗಿತ್ತೆಂದು ಸೂಚಿತವಾಗುವುದು.

ನಾಗಲಿ! ನಾನು ಕೋಸಲೇಂದ್ರನಾದ ಆ ಶ್ರೀರಾಮನಿಗೆ ದಾಸನು. ಹನುಮಂತನೆಂಬ ಹೆಸರುಳ್ಳವನು! ಶತ್ರುಸೈನ್ಯವನ್ನು ಹುಟ್ಟಡಗಿಸತಕ್ಕವನು! ವಾಯುದೇವನ ಕುಮಾರನು! ಕಲ್ಲುಗಳಿಂದಲೂ, ಮರಗಳಿಂದಲೂ ಸಾವಿರಾರು ವಿಧದಿಂದ ಶತ್ರುಗಳನ್ನು ಹೊಡೆದೋಡಿಸಬಲ್ಲ ನನಗೆ, ಈ ಒಬ್ಬ ರಾವಣನು ಹಾಗಿರಲಿ! ಇಂತಹ ಸಾವಿರಾರುಮಂದಿ ರಾವಣರೂ ಇದಿರಲ್ಲ! ಈಗ ನೀವೆಲ್ಲರೂ ನೋಡುತ್ತಿರುವಾಗಲೇ, ನಾನು ಈ ಲಂಕೆಯನ್ನು ಧ್ವಂಸಮಾಡಿ ಸೀತೆಗೆ ನಮಸ್ಕರಿಸಿ ಕೃತಾರ್ಥನಾಗಿ ಹಿಂತಿರುಗುವೆನು'' ಎಂದು ಗಟ್ಟಿಯಾಗಿ ಕೈಯೆತ್ತಿ ಕೂಗಿ ಹೇಳಿದನು ಹೀಗೆ ಆ ವಾನರೋತ್ತಮನು, ಪ್ರಾಸಾದದಲ್ಲಿದ್ದ ರಾಕ್ಷಸರ ಕಿವಿಗೆ ಬೀಳುವಂತೆ ಉದ್ಘೋಷಿಸಿ ಹೇಳಿದಮೇಲೆ, ರಾಕ್ಷಸರಿಗೆ ಇನ್ನೂ ಭಯವುಂಟಾಗುವಂತೆ ಒಂದು ಭಯಂಕರವಾದ ಸಿಂಹನಾದವನ್ನೂ ಮಾಡಿದನು. ಆ ಮಹಾಧ್ವನಿಯನ್ನು ಕೇಳಿ ಅಲ್ಲಿ ಕಾವಲಿದ್ದ ನೂರುಮಂದಿ ವೀರರಾಕ್ಷಸರು ಬಗೆಬಗೆಯ ಬಾಣಗಳನ್ನೂ, ಈಟಿಗಳನ್ನೂ, ಕತ್ತಿಗಳನ್ನೂ, ಗಂಡುಗೊಡಲಿಗಳನ್ನೂ ಹಿಡಿದು ಬಂದು, ಅವುಗಳನ್ನು ಹನುಮಂತನಮೇಲೆ ಪ್ರಯೋಗಿಸುತ್ತ, ಆತನ ಸುತ್ತಲೂ ಮುತ್ತಿನಿಂತರು. ಮತ್ತು ವಿಚಿತ್ರಗದೆಗಳನ್ನೂ, ಚಿನ್ನದ ಕಟ್ಟುಳ್ಳ ಪರಿಘಗಳನ್ನೂ, ಸೂರ್ಯಸಮಾನಗಳಾದ ಬಾಣಗಳನ್ನೂ, ಪ್ರಯೋಗಿಸಿ ಹನುಮಂತನನ್ನು ಹೊಡೆಯುತಿದ್ದರು. ವಾನರಶ್ರೇಷ್ಠನಾದ ಹನುಮಂತನನ್ನು ಸುತ್ತಿ ತಿರುಗುತಿದ್ದ ಆ ರಾಕ್ಷಸಸಮೂಹವು, ಗಂಗಾಪ್ರವಾಹದ ಮಧ್ಯದಲ್ಲಿ ತಿರುಗುವ ದೊಡ್ಡಸುಳಿಯಂತೆ ಕಾಣುತ್ತಿತ್ತು. ಇದನ್ನು ನೋಡಿ ವಾಯುಪುತ್ರನು ಬಹಳ ಕೋಪಗೊಂಡು, ಭಯಂಕರಸ್ವರೂಪವನ್ನು ತಾಳಿ, ಆ ಪ್ರಾಸಾದದ ನಡುವೆ ಶೋಭಿಸುತ್ತಿದ್ದ ಸುವರ್ಣಮಯವಾದ ಒಂದು ಕಂಭವನ್ನೇ ಕೈಗೆ ಕಿತ್ತುಕೊಂಡು, ವಜ್ರಾಯುಧದಂತೆ ನೂರೇಣುಗಳುಳ್ಳ ಆ ಕಂಬವನ್ನು ವಿಚಿತ್ರಗತಿಯಿಂದ ಗಿರ್ರನೆ ತಿರುಗಿಸಿದನು. ಮಹಾಬಲಾಢ್ಯನಾದ ಹನುಮಂತನು ಆ ಕಂಬವನ್ನು ಕೈಯಿಂದೆತ್ತಿ ತಿರುಗಿಸುವಾಗ, ಆ ವೇಗದಿಂದ ಹುಟ್ಟಿದ ಬೆಂಕಿಯಿಂದ ಪ್ರಾಸಾದವೆಲ್ಲವೂ ಕ್ಷಣಮಾತ್ರದಲ್ಲಿ ದಹಿಸಿಹೋಯಿತು. ಇತ್ತಲಾಗಿ ಪ್ರಾಸಾದವು ದಗ್ಧವಾಗುತ್ತಿರುವಾಗಲೇ ಆತ್ತಲಾಗಿ ಹನುಮಂತನು, ದೈತ್ಯರನ್ನು ವಜ್ರಾಯುಧದಿಂದ ಹೊಡೆಯುವ ಇಂದ್ರನಂತೆ, ಆ ನೂರುಮಂದಿ ರಾಕ್ಷಸರನ್ನೂ ಆ ಸ್ತಂಭದಿಂದಲೇ ಹೊಡೆದು ಕೊಂದನು. ಆಮೇಲೆ ಧೀರನಾದ ಹನುಮಂತನು, ದಗ್ಧವಾದ ಆ ಚೈತ್ಯಾಲಯವನ್ನು ಬಿಟ್ಟು ಅಂತರಿಕ್ಷಕ್ಕೆ ಹಾರಿ, ಅಲ್ಲಿಂದಲೇ ರಾಕ್ಷಸರನ್ನು ಕುರಿತು, "ನನ್ನಂತೆ ಮಹಾ

ಧೀರರಾಗಿಯೂ, ಬಲಾಢ್ಯರಾಗಿಯೂ ಇರುವ ಸಾವಿರಾರುಮಂದಿ ವಾನರರು ಸುಗ್ರೀವನ ವಶದಲ್ಲಿರುವರು. ಸೀತೆಯನ್ನು ಹುಡುಕುವುದಕ್ಕಾಗಿ ಅವರೆಲ್ಲರೂ ಸುಗ್ರೀವನಿಂದ ಬೇರೆಬೇರೆ ದಿಕ್ಕುಗಳಿಗೆ ಕಳುಹಿಸಲ್ಪಟ್ಟಿರುವರು. ನನ್ನಂತೆ ಇನ್ನೂ ಎಷ್ಟೋಮಂದಿ ವಾನರರು ಸೀತಾನ್ವೇಷಣಕ್ಕಾಗಿ ಈ ಭೂಮಿಯೆಲ್ಲವನ್ನೂ ಸುತ್ತುತ್ತಿರುವರು. ಅವರಲ್ಲಿ ಹತ್ತಾನೆಗಳ ಬಲವುಳ್ಳವರು ಕೆಲವರು! ನೂರಾನೆಗಳ ಬಲವುಳ್ಳವರು ಕೆಲವರು! ಸಾವಿರಾನೆಗಳ ಬಲವುಳ್ಳವರು ಕೆಲವರು! ಓಘಸಂಖ್ಯೆಯ ಆನೆಗಳ ಬಲವುಳ್ಳವರು ಕೆಲವರು! ವಾಯುವಿನಂತೆ ಬಲವುಳ್ಳವರು ಕೆಲವರು! ಕೆಲವು ವಾನರವೀರರ ಬಲವನ್ನು ಇಷ್ಟೆಂದು ನಿರ್ಣಯಿಸುವುದೇ ಸಾಧ್ಯವಲ್ಲ! ಹೀಗೆ ನಮ್ಮಲ್ಲಿ ಎಷ್ಟೋಮಂದಿ ವಾನರರುಂಟು! ದಂತ (ಹಲ್ಲು) ಗಳನ್ನೂ, ನಖ (ಉಗುರು)ಗಳನ್ನೂ ಆಯುಧವಾಗಿ ಉಳ್ಳ ಇಂತಹ ವಾನರವೀರರ ಸೇನೆಯು ನೂರುನೂರಾಗಿಯೂ ಲಕ್ಷಲಕ್ಷವಾಗಿಯೂ, ಕೋಟಿಕೋಟಿಯಾಗಿಯೂ, ತನ್ನನ್ನು ಸುತ್ತಿಬರಲು, ನಮ್ಮ ಪ್ರಭುವಾದ ಸುಗ್ರೀವನು ನಿಮ್ಮೆಲ್ಲರನ್ನೂ ಧ್ವಂಸಮಾಡುವುದಕ್ಕಾಗಿ ಬರುವನು. ಎಲೈ ರಾಕ್ಷಸರಿರ! ಮಹಾತ್ಮನಾಗಿಯೂ, ಇಕ್ಷ್ವಾಕುನಾಥನಾಗಿಯೂ ಇರುವ ನಮ್ಮ ರಾಮನೊಡನೆ ನೀವು ವೈರವನ್ನು ಬಳೆಸಿದಿರಲ್ಲವೆ! ಇನ್ನು ಮೇಲೆ ನೀವಾಗಲಿ, ನಿಮ್ಮ ಲಂಕೆಯಾಗಲಿ, ನಿಮ್ಮ ರಾವಣನಾಗಲಿ ಉಳಿಯುವ ಆಸೆಯನ್ನೇ ಬಿಡಿರಿ” ಎಂದನು.

ಇಲ್ಲಿಗೆ, ನಾಲ್ವತ್ತುಮೂರನೆಯ ಸರ್ಗವು.

---

ರಾವಣನ ಪ್ರೇರಣೆಯಿಂದ ಬಂದ ಪ್ರಹಸ್ತಪುತ್ರನಾದ ಜಂಬುಮಾಲಿಯೆಂಬವನು ಹನುಮಂತನಿಂದ ಹತನಾದುದು.

ಅನಂತರದಲ್ಲಿ ಮಹಾಬಲಾಢ್ಯನಾಗಿಯೂ, ದೊಡ್ಡಕೋರೆದಾಡೆಯುಳ್ಳವನಾಗಿಯೂ ಇದ್ದ ಪ್ರಹಸ್ತಪುತ್ರನಾದ ಜಂಬುಮಾಲಿಯೆಂಬವನು, ರಾಕ್ಷಸಪ್ರಭುವಾದ ರಾವಣನ ಅಜ್ಞೆಯಮೇಲೆ, ಧನುರ್ಧಾರಿಯಾಗಿ ಹೊರಟನು. ಈ ರಾಕ್ಷಸನೋ ಮೊದಲೇ ಬಹಳ ಪ್ರಚಂಡನು. ಮಹಾಕಾಯವುಳ್ಳವನು. ಯುದ್ಧದಲ್ಲಿ ಎಂತವರಿಗೂ ದುರ್ಜಯನು! ಇದರಮೇಲೆ ಯುದ್ಧಕ್ಕೆ ಹೊರಟಾಗ ಈತನಿಗೆ ಕೊರಳಲ್ಲಿ ಕೆಂಪುಹೂವಿನ ದಂಡೆ! ನಡುವಿಗೆ ಸುತ್ತಿದ ಕೆಂಪಾದ ಪಟ್ಟೆಮಡಿ!

ತಲೆಯಲ್ಲಿ ದೊಡ್ಡ ಹೂವುಡಿ! ಕಿವಿಯಲ್ಲಿ ಅಂದವಾದ ಕರ್ಣಕುಂಡಲಗಳು! ಕಣ್ಣಿನಲ್ಲಿ ಕೋಪದಿಂದ ತೊಳಲುವ ಕರಿಯಾಲಿಗಳು! ಕಾಡುಗಿಚ್ಚಿನಿಂದ ಬೆಂದ ತ್ರಿಕೂಟಪರ್ವತದಂತೆ ಕಪ್ಪಾದ ಮೈ! ಮಹಾಮೇಘದಂತೆ ದೊಡ್ಡ ಆಕೃತಿ! ಉದ್ದವಾದ ತೋಳುಗಳು! ದಪ್ಪತಲೆ! ಉಬ್ಬಿದ ಕೊರಲು! ನೀಡಿದ ಕೋರೆ ದಾಡೆಗಳು! ಅಗಲವಾದ ಬಾಯಿ! ಇದಲ್ಲದೆ ಆ ರಾಕ್ಷಸನ ಗತಿವೇಗವನ್ನಾಗಲಿ, ಅವನ ಯುದ್ಧೋತ್ಸಾಹವನ್ನಾಗಲಿ, ಅವನ ಬಲವನ್ನಾಗಲಿ, ಅವನ ಆರ್ಭಟವನ್ನಾಗಲಿ ಇಷ್ಟೆಂದು ನಿರ್ಣಯಿಸುವುದಕ್ಕಿಲ್ಲ. ಇಂತಹ ಘೋರ ರಾಕ್ಷಸನು, ಇಂದ್ರನ ವಜ್ರಾಯುಧದಿಂದ ಹೊರಟ ಸಿಡಿಲಿನಂತೆ ಮಹಾ ಧ್ವನಿಯಿಂದ ಸಿಂಹನಾದವನ್ನು ಮಾಡುತ್ತ ಅತಿವೇಗದಿಂದ ಹೊರಟುಬಂದನು. ಇವನು ರಾಜಗೃಹದಿಂದ ಹೊರಟುಬರುತ್ತಿರುವಾಗಲೇ, ಇಂದ್ರಧನುಸ್ಸಿನಂತೆ ಕಾಂತಿವಿಶಿಷ್ಟವಾಗಿಯೂ, ಮಹತ್ತಾಗಿಯೂ, ಉತ್ತಮಬಾಣಗಳನ್ನು ಪ್ರಯೋಗಿಸುವುದಕ್ಕೆ ತಕ್ಕುದಾಗಿಯೂ, ಸಿಡಿಲಿನಂತೆ ಮಹಾಧ್ವನಿಯುಳ್ಳುದಾಗಿಯೂ ಇದ್ದ ಒಂದು ದೊಡ್ಡ ಬಿಲ್ಲನ್ನೆತ್ತಿ ಹಿಡಿದು. ಆಗಾಗ ಅದರ ನಾಣನ್ನು ಮಿಡಿದು ಟಂಕಾರಮಾಡುತ್ತ, ವೇಗದಿಂದ ಸಾಗಿಬರುತ್ತಿದ್ದನು. ಆ ಧನುಸ್ಸಿನ ದೊಡ್ಡ ಟಂಕಾರಧ್ವನಿಯಿಂದಲೇ ಸಮಸ್ತದಿಕ್ಕುಗಳೂ, ವಿದಿಕ್ಕುಗಳೂ, ಆಕಾಶವೂ ತುಂಬಿದಂತಾಯಿತು. ಮಹಾತೇಜಸ್ವಿಯಾದ ಈತನು, ಕೆಂಪಾದ ಕವಚವನ್ನು ಧರಿಸಿ ಬರುತ್ತಿರುವಾಗ, ಸಂಜೆಗೆಂಪಿನಿಂದ ಕೂಡಿ ಉದಿಸಿಬರುವ ಸೂರ್ಯನಂತೆ ತೋರುತ್ತ, ದೂರದಿಂದಲೇ ಹನುಮಂತನನ್ನು ನೋಡಿ “ಎಲಾ! ನಿಲ್ಲು! ನಿಲ್ಲು!” ಎಂದು ಕೂಗುತ್ತಬಂದನು. ಈ ರಾಕ್ಷಸನು ಹೇಸರಗತ್ತೆಯನ್ನು ಕಟ್ಟಿದ ರಥದಮೇಲೆ ಕುಳಿತು ವೇಗದಿಂದ ತನಗಿದಿರಾಗಿ ಬರುವುದನ್ನು ಕಂಡು ಹನುಮಂತನು, ತನಗೆ ತಕ್ಕ ವೈರಿಯು ಸಿಕ್ಕಿದನೆಂದು ಸಂತೋಷಗೊಂಡು, ಆಗಲೇ ಒಂದು ಸಿಂಹನಾದವನ್ನು ಮಾಡಿದನು. ಇಷ್ಟರಲ್ಲಿ ಮಹಾಬಾಹುವಾದ ಜಂಬುಮಾಲಿಯು ಮುಂದೆ ಬಂದು, ತೋರಣದ ಬಾಗಿಲಿನ ತೊಲೆಯಮೇಲೆ ಕುಳಿತು ಸಂತೋಷದಿಂದ ಸಿಂಹನಾದ ಮಾಡುತ್ತಿದ್ದ ಆ ದೊಡ್ಡ ಕಪಿಯನ್ನು ನೋಡಿ ಕೋಪಗೊಂಡು, ಆಗಲೇ ಅವನನ್ನು ತೀಕ್ಷ್ಣಬಾಣಗಳಿಂದ ಹೊಡೆಯಲಾರಂಭಿಸಿದನು. ಅರ್ಧಚಂದ್ರಬಾಣದಿಂದ ಆ ಕಪಿಯ ಮುಖಕ್ಕೆಗುರಿಯಿಟ್ಟು ಹೊಡೆದನು. ಅಡ್ಡಅಗಿನ ಒಂದು ಬಾಣವನ್ನು ಅದರ ತಲೆಗೆ ಹೊಡೆದನು. ಹತ್ತುಬಾಣಗಳನ್ನು ಆ ಕಪಿಯ ತೋಳುಗಳಿಗೆ ಬಿಟ್ಟನು. ಸಹಜವಾಗಿಯೇ ಕೆಂಪಾದ ಹನುಮಂತನ ಮುಖವು, ಈ ಬಾಣಹತಿಯಿಂದುಂಟಾದ ಗಾಯದಿಂದ ಮತ್ತಷ್ಟು ಕೆಂಪಾಗಿ, ಶರತ್ಕಾಲದಲ್ಲಿ ಸೂರ್ಯಕಿರಣ

ದಿಂದ ವ್ಯಾಪ್ತವಾದ ಅರಳಿದ ಕಮಲದಂತೆ ಶೋಭಿಸಿತು. ಮತ್ತು ರಕ್ತಧಾರೆಯಿಂದ ತೊಯ್ದ ಆ ಮಹಾಕಪಿಯ ಮುಖವು ಆಕಾಶದಲ್ಲಿ ರಕ್ತಚಂದನಬಿಂದುಗಳಿಂದ ಕೂಡಿದ ರಕ್ತೋತ್ಪಲದಂತೆ ಕಾಣಿಸುತ್ತಿತ್ತು. ಈ ರಾಕ್ಷಸನ ಬಾಣಹತಿಯಿಂದ ಹನುಮಂತನಿಗೆ ಬಹಳವಾದ ಕೋಪವೂ ಹುಟ್ಟಿತು. ಆಗ ಬಲಾಢ್ಯನಾದ ಹನುಮಂತನು, ತನ್ನ ಪಕ್ಕದಲ್ಲಿದ್ದ ಒಂದು ದೊಡ್ಡ ಕಲ್ಲುಬಂಡೆಯನ್ನು ನೋಡಿ, ಅದನ್ನೇ ಕಿತ್ತುಕೊಂಡು ಜಂಬುಮಾಲಿಯಮೇಲೆ ವೇಗದಿಂದ ಬೀಸಿದನು. ಇದನ್ನು ನೋಡಿ ಜಂಬುಮಾಲಿಯು ಹತ್ತುಬಾಣಗಳಿಂದ ಅದನ್ನು ಭೇದಿಸಿ ಬಿಟ್ಟನು. ಚಂಡಪರಾಕ್ರಮಿಯಾದ ಹನುಮಂತನು, ತನ್ನ ಪ್ರಯತ್ನವು ವಿಫಲವಾದುದನ್ನು ನೋಡಿ, ಸಮೀಪದಲ್ಲಿದ್ದ ಒಂದು ದೊಡ್ಡಮರವನ್ನು ಕಿತ್ತುಕೊಂಡು, ಅದನ್ನು ರಾಕ್ಷಸನಮೇಲೆ ಬೀಸಿ ಬಡಿಯುವುದಕ್ಕಾಗಿ ಕೈಯಿಂದೆತ್ತಿ ತಿರುಗಿಸುತ್ತಿದ್ದನು. ಹೀಗೆ ಮಹಾಬಲಾಢ್ಯನಾದ ಆ ಕಪಿಯು, ದೊಡ್ಡ ಮರವನ್ನೆತ್ತಿ ತಿರುಗಿಸುತ್ತಿರಲು, ಅದನ್ನು ನೋಡಿ, ವೀರ್ಯವಂತನಾದ ಜಂಬುಮಾಲಿಯು ಆಗಲೇ ಅನೇಕ ಬಾಣಗಳನ್ನು ಅವನ ಮೇಲೆ ಪ್ರಯೋಗಿಸುತ್ತ, ನಾಲ್ಕು ಬಾಣಗಳಿಂದ ಆ ಸಾಲವೃಕ್ಷವನ್ನು ತುಂಡುಮಾಡಿ ಕೆಡಹಿದನು. ಆ ಕಪಿಯ ಭುಜಕ್ಕೆ ಗುರಿಯಿಟ್ಟು ಐದು ಬಾಣಗಳನ್ನು ಬಿಟ್ಟನು. ಅವನ ಎದೆಗೆ ಒಂದು ಬಾಣವನ್ನು ಬಿಟ್ಟನು. ಅವನ ಸ್ತನಮಧ್ಯಕ್ಕೆ ಹತ್ತುಬಾಣಗಳನ್ನು ಹೊಡೆದನು. ಆಗ ಹನುಮಂತನು ತನ್ನ ಸರ್ವಾವಯವಗಳೂ ಬಾಣದಿಂದ ತುಂಬಿಹೋದುದನ್ನು ನೋಡಿ, ಬಹಳ ಕೋಪಗೊಂಡವನಾಗಿ, ತಿರುಗಿ ಆ ಬಾಗಿಲಗುಳಿಯನ್ನೇ ಕೈಗೆತ್ತಿಕೊಂಡು ವೇಗದಿಂದ ತಿರುಗಿಸಿದನು. ಹೀಗೆ ಬಲದಿಂದುಬ್ಬಿದ ಆ ವಾನರೋತ್ತಮನು, ಆ ಬಾಗಿಲಗುಳಿಯನ್ನು ಮಹಾವೇಗದಿಂದ ತಿರುಗಿಸಿ, ಜಂಬುಮಾಲಿಯ ಎದೆಗೆ ಗುರಿಯಿಟ್ಟು ಅದನ್ನು ಬೀಸಿಬಿಟ್ಟನು. ಹನುಮಂತನು ಈ ಪರಿಘವನ್ನು ಪ್ರಯೋಗಿಸಿದೊಡನೆ, ಅಲ್ಲಿ ರಾಕ್ಷಸನ ತಲೆಯಾಗಲಿ, ಅವನ ತೋಳುಗಳಾಗಲಿ, ಅವನ ಮೊಣಗಾಲುಗಳಾಗಲಿ, ಅವನ ಬಿಲ್ಲಾಗಲಿ ರಥವಾಗಲಿ, ರಥಾಶ್ವಗಳಾಗಲಿ, ಅವನ ಬಾಣವಾಗಲಿ ಕಾಣಿಸದಂತಾದುವು. ಈ ಹನುಮಂತನ ಪರಿಘಹತಿಯಿಂದ ಮಹಾಬಲಾಢ್ಯನಾದ ಜಂಬುಮಾಲಿಯೂ ಆಗಲೇ ಹತನಾಗಿ ನೆಲಕ್ಕೆ ಬಿದ್ದನು. ಅವನ ಮೈಮೇಲಿನ ಆಭರಣಗಳೆಲ್ಲವೂ ಪುಡಿಪುಡಿಯಾಗಿ ಬಿದ್ದುವು. ಹೀಗೆ ಮಹಾಬಲಾಢ್ಯರಾದ ಕಿಂಕರರಂತೆಯೇ ಜಂಬುಮಾಲಿಯೂ ಹನುಮಂತನಿಂದ ಹತನಾದ ಸಂಗತಿಯನ್ನು ಕೇಳಿ ರಾವಣನಿಗೆ ಅತ್ಯಾಕ್ರೋಶವುಂಟಾಯಿತು. ಅವನ ಕಣ್ಣುಗಳು ಕೆಂಡದಂತೆ ಕೆಂಪಾದುವು. ಹೀಗೆ ರಾವಣನು ಮಹಾಬಲನೆನಿಸಿದ ಪ್ರಹಸ್ತ

ಕುಮಾರನು ಹತನಾದುದನ್ನು ಕೇಳಿ ಕೋಪದಿಂದ ಕಣ್ಣಾಲಿಗಳನ್ನು ತಿರುಗಿ ಸುತ್ತಾ, ಆಗಲೇ ವೀರ್ಯದಲ್ಲಿಯೂ ಪರಾಕ್ರಮದಲ್ಲಿಯೂ ಮೇಲೆನಿಸಿಕೊಂಡ ಬೇರೆ ಏಳುಮಂದಿ ಮಂತ್ರಿಕುಮಾರರನ್ನು ಕರೆದು ಹನುಮಂತನೊಡನೆ ಯುದ್ಧಕ್ಕಾಗಿ ಕಳುಹಿಸಿದನು.

ಇಲ್ಲಿಗೆ ನಾಲ್ವತ್ತು ನಾಲ್ಕನೆಯ ಸರ್ಗವು.

---

{ ಹನುಮಂತನು ತನ್ನ ಮೇಲೆ ಯುದ್ಧಕ್ಕೆ ಬಂದ ಏಳುಮಂದಿ ಮಂತ್ರಿಕುಮಾರರನ್ನು ಕೊಂದುದು. }

ರಾವಣನಿಂದ ಪ್ರೇರಿತರಾದ ಆ ಏಳುಮಂದಿ ಮಂತ್ರಿಪುತ್ರರೂ, ಏಳು ಅಗ್ನಿ ಜ್ವಾಲೆಗಳಂತೆ ಬೆಳಗುತ್ತಾ ರಾಜಗೃಹದಿಂದ ಹೊರಟರು. ಈ ಏಳುಮಂದಿಯೂ ಮಹಾಬಲಾಢ್ಯರು! ಶಸ್ತ್ರಾಸ್ತ್ರಗಳನ್ನು ಬಲ್ಲವರಲ್ಲಿ ಮೇಲೆನಿಸಿಕೊಂಡವರು! ಇಂತಹ ಮಂತ್ರಿಪುತ್ರರೊಬ್ಬೊಬ್ಬರೂ ತಮ್ಮ ತಮ್ಮ ದೊಡ್ಡ ಸೈನ್ಯಗಳನ್ನು ಸೇರಿಸಿ ಕೊಂಡು. ಧನುರ್ಧಾರಿಗಳಾಗಿ ಹನುಮಂತನನ್ನು ಜಯಿಸುವುದಕ್ಕೆ ನಾನುತಾ ನೆಂಬ ಮಹೋತ್ಸಾಹದಿಂದಲೇ ಬಂದರು. ಈ ಮಂತ್ರಿಕುಮಾರರೆಲ್ಲರೂ ಚಿನ್ನದ ಕುದುರೆಗಳಿಂದಲಂಕೃತವಾಗಿಯೂ, ಧ್ವಜಪತಾಕೆಗಳಿಂದ ಶೋಭಿತವಾಗಿಯೂ, ಮೇಘಧ್ವನಿಯಂತೆ ಗಂಭೀರಧ್ವನಿಯುಳ್ಳುದಾಗಿಯೂ, ಉತ್ತಮಾಶ್ವಗಳಿಂದ ಕೂಡಿ ದುದಾಗಿಯೂ ಇರುವ ದೊಡ್ಡದೊಡ್ಡ ರಥಗಳನ್ನೇರಿ, ಚಿನ್ನದಿಂದ ಚಿತ್ರಕಾರ್ಯ ಮಾಡ ಲ್ಪಟ್ಟ ಧನುಸ್ಸನ್ನು ಹಿಡಿದು, ಆಗಾಗ ಅದನ್ನು ಮಹೋತ್ಸಾಹದಿಂದ ಟಂಕಾರಮಾ ಡುತ್ತಾ ಮುಂದೆ ಸಾಗಿಬರುತ್ತಿರಲು, ಮಿಂಚಿನಿಂದ ಕೂಡಿದ ಮೇಘಸಮೂಹಗಳಂತೆ ತೋರುತ್ತಿದ್ದರು. ಮೊದಲೇ ಕಿಂಕರರೆಂಬ ಮಹಾವೀರರಾಕ್ಷಸರು ಹನುಮಂತ ನಿಂದ ಹತರಾಗಿರುವಾಗಲೂ, ಈ ಮಂತ್ರಿಪುತ್ರರೂ ಹೀಗೆ ಮಹೋತ್ಸಾಹದಿಂದ ಆ ಹನುಮಂತನೊಡನೆಯೇ ಯುದ್ಧಕ್ಕೆ ಹೊರಟಿರುವುದನ್ನು ನೋಡಿ, ಇವರ ಮಾತೆಯರೂ, ಮಿತ್ರರೂ, ಬಂಧುಗಳೂ, "ಮುಂದೆ ಇವರ ಗತಿಯೇನಾಗು ವುದೋ" ಎಂದು ಭಯದಿಂದ ತತ್ತಳಿಸಿ ನೋಡುತ್ತಿದ್ದರು. ಆ ಮಂತ್ರಿಪುತ್ರ ರೇಳುಮಂದಿಯೂ, ಬಂಗಾರದ ವೀರಭೂಷಣಗಳನ್ನು ತೊಟ್ಟು, ಒಬ್ಬರಮೇ ಲೊಬ್ಬರು ನಾನುತಾನೆಂದು ನುಗ್ಗುತ್ತ ತೋಟದ ಬಾಗಿಲಿಗ ಬಂದು, ಅದರ ಹೊರಬಾಗಿಲಲ್ಲಿ ಯುದ್ಧಾರ್ಥಿಯಾಗಿ ನಿಂತಿದ್ದ ಹನುಮಂತನನ್ನು ಕಂಡು,

ರಥಧ್ವನಿಗಳೆಂಬ ಗುಡುಗುಗಳೊಡನೆ ದೊಡ್ಡಮಳೆಯನ್ನು ಕರೆಯುವ ಮೇಘಗಳಂತೆ, ಮುಂದೆ ಬಂದು ಹನುಮಂತನಮೇಲೆ ಬಾಣದ ಮಳೆಯನ್ನು ಕರೆದರು. ಹನುಮಂತನು, ಇವರ ಬಾಣವರ್ಷದಿಂದ ಮುಚ್ಚಿದ ಮೈಯುಳ್ಳವನಾದರೂ ವರ್ಷಧಾರೆಯಿಂದಾವೃತವಾದ ದೊಡ್ಡಬೆಟ್ಟದಂತೆ ನಿಶ್ಚಲವಾಗಿಯೇ ನಿಂತಿದ್ದನು. ಮತ್ತು ಮಹಾವೇಗವುಳ್ಳ ಆ ಹನುಮಂತನು ಆಕಾಶಕ್ಕೆ ಹಾರುತ್ತ, ತನ್ನ ಗತಿಚಾತುರ್ಯದಿಂದ ಆ ವೀರರಾಕ್ಷಸರ ಬಾಣಗಳನ್ನೂ ರಥವೇಗವನ್ನೂ ತಪ್ಪಿಸಿಕೊಂಡು, ಚಿತ್ರಗತಿಯಿಂದಲೇ ಸಂಚರಿಸುತ್ತಿದ್ದನು. ಹೀಗೆ ಆ ವೀರನು ಧನುರ್ಧಾರಿಗಳಾದ ಆ ರಾಕ್ಷಸರೊಡನೆ ಆಕಾಶದಿಂದಲೇ ಯುದ್ಧಕ್ರೀಡೆಯನ್ನು ನಡೆಸುತ್ತ, ಇಂದ್ರಧನುಸ್ಸಿನಿಂದ ಕೂಡಿದ ಮೋಡಗಳನ್ನಾಡಿಸುವ ಮಹಾವಾತದಂತೆ ತೋರುತ್ತಿದ್ದನು. ಕೊನೆಗೆ ಹನುಮಂತನು ಆ ಸಮಸ್ತ ರಾಕ್ಷಸಸೈನ್ಯವೂ ಭಯದಿಂದ ನಡುಗುವಂತೆ ಒಂದು ದೊಡ್ಡ ಸಿಂಹನಾದವನ್ನು ಮಾಡಿ, ಅವರೆಲ್ಲರನ್ನೂ ಕೊಲ್ಲುವುದಕ್ಕೆ ತಕ್ಕಂತೆ ತನ್ನ ಮಹಾವೀರ್ಯವನ್ನೂ ತೋರಿಸಲಾರಂಭಿಸಿದನು. ಅಲ್ಲಿ ಕೆಲವರನ್ನು ತನ್ನ ಅಂಗೈಯಿಂದಲೇ ಅಪ್ಪಳಿಸಿ ಹೊಡೆದನು. ಕೆಲವರನ್ನು ಕಾಲಿನಿಂದ ತುಳಿದು ಮೆಟ್ಟಿದನು. ಕೆಲವರನ್ನು ತನ್ನ ಮುಷ್ಟಿಯಿಂದ ಗುದ್ದಿ ಕೆಡಹಿದನು. ಕೆಲವರನ್ನು ಉಗುರುಗಳಿಂದ ಪರಚಿದನು. ಕೆಲವರನ್ನು ಎದೆಯಿಂದ ತಟ್ಟಿಕೆಡಹಿದನು. ತೊಡೆಗಳಿಂದುಜ್ಜಿ ಕೆಲವರನ್ನು ಕೊಂದನು. ಇವನ ಸಿಂಹನಾದವನ್ನು ಕೇಳಿದಾಗಲೇ ಕೆಲವರು ಭಯದಿಂದ ಎದೆಯೊಡೆದು ಸತ್ತುಬಿದ್ದರು. ಈ ಅತ್ಯಾಹಿತವನ್ನು ನೋಡಿದಮೇಲೆ, ಅಲ್ಲಿ ಸತ್ತುಳಿದ ಕೆಲವು ರಾಕ್ಷಸರು ಭಯದಿಂದ ನಾನಾದಿಕ್ಕುಗಳಿಗೂ ಪಲಾಯನಮಾಡಿದರು. ಆನೆಗಳು ವಿಕೃತಸ್ವರದಿಂದ ಅರಚುತಿದ್ದುವು. ಕುದುರೆಗಳು ಭಯದಿಂದ ನೆಲಕ್ಕುರುಳುತಿದ್ದುವು. ಅಲ್ಲಲ್ಲಿ ಮುರಿದುಬಿದ್ದ ಧ್ವಜದಂಡಗಳಿಂದಲೂ, ಛತ್ರಗಳಿಂದಲೂ ಕೂಡಿದ ರಥಗಳೇ ಆ ರಣಭೂಮಿಯ ಸುತ್ತಲೂ ತುಂಬಿದ್ದುವು. ರಣಭೂಮಿಯ ಯಾವಕಡೆಯನ್ನು ನೋಡಿದರೂ ರಕ್ತಪ್ರವಾಹಗಳು ಹರಿಯುತ್ತಿದ್ದುವು. ಆ ರಣರಂಗದಲ್ಲಿ ಹುಟ್ಟಿದ ರೋದನಧ್ವನಿಯೇ ಲಂಕೆಯ ನಾಲ್ಕು ಕಡೆಗಳಲ್ಲಿಯೂ ಪ್ರತಿಧ್ವನಿಯನ್ನು ಹೊರಡಿಸಿತು. ಹೀಗೆ ಮಹಾಬಲಾಢ್ಯನಾಗಿಯೂ, ಚಂಡಪರಾಕ್ರಮಿಯಾಗಿಯೂ ಇರುವ ಹನುಮಂತನು, ಪ್ರಬಲರಾದ ಆ ರಾಕ್ಷಸರನ್ನೂ ನಿಶ್ಶೇಷವಾಗಿ ಕೊಂದು, ತಿರುಗಿ ಬೇರೆ ರಾಕ್ಷಸರೊಡನೆ ಯುದ್ಧಮಾಡಬೇಕೆಂಬ ಅಭಿಲಾಷೆಯಿಂದ, ಆ ಹೊರಬಾಗಿಲಲ್ಲಿಯೇ ಕಾದು ನಿಂತಿದ್ದನು.

ಇಲ್ಲಿಗೆ ನಾಲ್ವತ್ತೈದನೆಯ ಸರ್ಗವು.

---

## ಹನುಮಂತನು ವಿರೂಪಾಕ್ಷನೇ ಮೊದಲಾದ ಐದುಮಂದಿ ಸೇನಾಪತಿಗಳನ್ನು ಕೊಂದುದು.

ಮಹಾತ್ಮನಾದ ಹನುಮಂತನು ಆ ಏಳುಮಂದಿ ಮಂತ್ರಿಕುಮಾರರನ್ನೂ ಕೊಂದನೆಂಬ ಸುದ್ದಿಯನ್ನು ಕೇಳಿದಮೇಲೆ, ರಾವಣನಿಗೆ ಮನಸ್ಸಿನಲ್ಲಿ ಸ್ವಲ್ಪ ಭಯವು ಹುಟ್ಟಿತು. ಆದರೂ ತನ್ನ ಭಯವನ್ನು ಹೊರಕ್ಕೆ ಕಾಣಿಸಿಕೊಳ್ಳದೆ, ತನ್ನ ಇಂಗಿತಗಳನ್ನು ಮರೆಸಿಟ್ಟುಕೊಂಡು, ಮುಂದೆ ಮಾಡಬೇಕಾದುದೇನೆಂದು ಚೆನ್ನಾಗಿ ಪರ್ಯಾಲೋಚಿಸಿದನು. ಆ ಮೇಲೆ ಆತನು ದುರ್ಧರನೆಂದೂ, ವಿರೂಪಾಕ್ಷನೆಂದೂ, ಯೂಪಾಕ್ಷನೆಂದೂ, ವೀರನಾದ ಪ್ರಘಸನೆಂದೂ, ಭಾಸಕರ್ಣನೆಂದೂ ತನ್ನಲ್ಲಿ ಪ್ರಸಿದ್ಧರಾದ ಐದುಮಂದಿ ರಾಕ್ಷಸಸೇನಾಪತಿಗಳನ್ನು ಕರೆಸಿದನು. ಅವರಲ್ಲಿಯೋ ಒಬ್ಬೊಬ್ಬರೂ ರಾಜನೀತಿವಿಶಾರದರು! ಯುದ್ಧದಲ್ಲಿ ವಾಯುವಿಗೆಣೆಯಾದ ವೇಗವುಳ್ಳವರು! ಯಾವ ಯುದ್ಧದಲ್ಲಿಯೂ ಮುಂದಾಗಿ ನುಗ್ಗುವ ಮಹೋತ್ಸಾಹವುಳ್ಳವರು! ಇಂತಹ ಐದುಮಂದಿ ಸೇನಾಪತಿಗಳನ್ನು ಕರೆದು, "ಎಲೈ ಸೇನಾಪತಿಗಳೇ! ನೀವೆಲ್ಲರೂ ನಿಮ್ಮ ನಿಮ್ಮ ಸೈನ್ಯವನ್ನು ಸೇರಿಸಿಕೊಂಡು, ರಥಗಜತುರಗಾದಿ ಸಮಸ್ತ ಸಾಧನಗಳೊಡನೆ ಹೊರಟು, ಹೇಗಾದರೂ ಆ ಕಪಿಯನ್ನಡಗಿಸಿಯೇ ಬರಬೇಕು!" ಎಂದು ಮೊದಲು ಅವರೆಲ್ಲರಿಗೂ ಒಟ್ಟಾಗಿ ಕ್ರೂರಶಾಸನವನ್ನು ಮಾಡಿ, ತಿರುಗಿ ಅವರನ್ನು ಕುರಿತು, "ಎಲೈ! ನೀವು ಆ ಕಪಿಯ ವಿಷಯದಲ್ಲಿ ಬಹಳ ಎಚ್ಚರದಿಂದಿರಬೇಕು! ನಿಮ್ಮ ಕೈಯಿಂದಾದಷ್ಟು ಪ್ರಯತ್ನಿಸಬೇಕು. ದೇಶಕಾಲಗಳಿಗೆ ವಿರುದ್ಧವೆಂದು ತೋರುವ ಕಾರ್ಯಕ್ಕೆ ಪ್ರಯತ್ನಿಸಬಾರದು. ಆ ಕಪಿಯು ಮಾಡುವ ಕಾರ್ಯಗಳನ್ನು ನೋಡಿದರೆ, ಅದು ನಿಜವಾಗಿ ಕಪಿಯೆಂದೇ ನನಗೆ ತೋರಲಿಲ್ಲ! ಹೇಗೆ ನೋಡಿದರೂ ಅದನ್ನು ಮಹಾಬಲವುಳ್ಳ ಒಂದು ದೊಡ್ಡ ಭೂತವೆಂದೇ ಹೇಳಬೇಕಾಗಿದೆ. ಒಂದುವೇಳೆ ಇಂದ್ರನೋ ಅಥವಾ ಬೇರೆಯಾರೋ ಮಹಾತಪಸ್ಸನ್ನು ಮಾಡಿ ನಮ್ಮನ್ನು ಕೊಂದು ಬರುವುದಕ್ಕಾಗಿ ಈ ದೊಡ್ಡಭೂತವನ್ನು ಸೃಷ್ಟಿಸಿ ಕಳುಹಿಸಿರಬಹುದು! ಮೊದಲಿಂದಲೂ ನಾವೆಲ್ಲರೂ ಸೇರಿ, ಎಷ್ಟೋಮಂದಿ ನಾಗರನ್ನೂ, ಯಕ್ಷರನ್ನೂ, ಗಂಧರ್ವರನ್ನೂ, ದೇವತೆಗಳನ್ನೂ, ಅಸುರರನ್ನೂ, ಮಹರ್ಷಿಗಳನ್ನೂ ನಾನಾವಿಧದಿಂದ ಪೀಡಿಸಿ ಓಡಿಸಿರುವೆವಷ್ಟೆ! ಆದಕ್ಕಾಗಿ ಅವರೆಲ್ಲರೂ ನಮ್ಮ ಮೇಲೆ ಪೂರ್ಣದ್ವೇಷದಿಂದ ಕಣ್ಣಿಟ್ಟು ಕಾದಿರುವರು. ನಮಗೆ ತಕ್ಕ ಪ್ರತೀಕಾರವನ್ನು ಮಾಡಬೇಕೆಂದು ಸಮಯವನ್ನೂ ಹುಡುಕುತ್ತಿರುವರು. ಆದುದರಿಂದ ಇದು ಅವರ ಚೇಷ್ಟೆಯೇ ಎಂಬುದರಲ್ಲಿ ಸಂದೇಹವಿರದು. ಆ ಭೂತವನ್ನು ನೀವು ಉಪಾಯದಿಂದ ಹಿಡಿಯು

ಬೇಕು! ಆದಕ್ಕೆ 1 ಅಸಾಧಾರಣವಾದ ಧೈರ್ಯವೂ, ಪರಾಕ್ರಮವೂ ಇರುವು ದರಿಂದ ಅದನ್ನು ಭಂಗಿಸಿ ಅವಮಾನಪಡಿಸಬೇಕೆಂದರೆ ನಿಮಗೂ ಸಾಧ್ಯವಲ್ಲ! ನಾನು ಪೂರ್ವದಲ್ಲಿ, ವಾಲಿಯೆಂದೂ, ಸುಗ್ರೀವನೆಂದೂ, ಮಹಾಬಲಶಾಲಿಯಾದ ಜಾಂಬ ವಂತನೆಂದೂ, ವಾನರಸೇನಾಧಿಪತಿಯಾದ ನೀಲನೆಂದೂ, ದ್ವಿವಿದನೆಂದೂ ಹೆಸರು ಗೊಂಡ ಮಹಾಪರಾಕ್ರಮಿಗಳಾದ ಇಂತಹ ವಾನರರನ್ನು ಅನೇಕವಾಗಿ ನೋಡಿರು ವೆನು. ಆದರೆ ಅವರಿಗೆ ಮಾತ್ರ ಹೀಗೆ ಭಯಂಕರವಾದ ವೇಗವೂ, ತೇಜಸ್ಸೂ, ಪರಾ ಕ್ರಮವೂ, ಬುದ್ಧಿಯೂ, ಬಲವೂ, ಉತ್ಸಾಹವೂ, ಕಾಮರೂಪವನ್ನು ಹೊಂದುವ ಶಕ್ತಿಯೂ ಇದ್ದಂತೆ ತೋರಲಿಲ್ಲ. ಆದುದರಿಂದ ಇದು ಅವರಂತೆ ಕಪಿಯಲ್ಲ. ಯಾವು ದೋ ಬೇರೊಂದು ದೊಡ್ಡ ಭೂತವು ಹೀಗೆ ಕಪಿರೂಪದಿಂದ ಇಲ್ಲಿಗೆ ಬಂದಿರಬೇಕು! ನೀವು ದೊಡ್ಡ ಪ್ರಯತ್ನವನ್ನು ಮಾಡಿ ಹೇಗಾದರೂ ಅದನ್ನು ಹಿಡಿಯಬೇಕು! ಎಲೈ ವೀರರೇ! ಈ ಮೂರುಲೋಕಗಳಲ್ಲಿರುವ ದೇವತೆಗಳೂ, ಅಸುರರೂ, ಮಾನವರೂ ಒಂದಾಗಿ ಸೇರಿ, ದೇವೇಂದ್ರನನ್ನೇ ಮುಂದಿಟ್ಟುಕೊಂಡು ಬಂದರೂ, ಯುದ್ಧದಲ್ಲಿ ನಿಮ್ಮನ್ನಿದಿರಿಸಲಾರರೆಂಬುದೇನೋ ನಿಜವು. ಆದರೂ ಯುದ್ಧದಲ್ಲಿ ಜಯವೆಂಬುದು ಯಾರಿಗೂ ಸ್ಥಿರವಲ್ಲ. ನೀತಿಜ್ಞನಾದವನು ಯುದ್ಧದಲ್ಲಿ ಜಯವನ್ನು ಕೋರುವವ ನಾದರೆ, ಮುಖ್ಯವಾಗಿ ತನ್ನನ್ನು ತಾನು ರಕ್ಷಿಸಿಕೊಳ್ಳುವುದಕ್ಕೆ ಮೊದಲು ಪ್ರಯತ್ನಿಸುತ್ತಿರಬೇಕು! ಆದುದರಿಂದ ನೀವು ಅಲ್ಲಿ ಬಹಳ ಎಚ್ಚರಿಕೆಯಿಂದಿರ ಬೇಕು! ಜೋಕೆ!" ಎಂದನು. ಅವರೆಲ್ಲರೂ ಈ ರಾಜಾಜ್ಞೆಯನ್ನು ಶಿರಸಾವ ಹಿಸಿ, ಅಗ್ನಿಯಂತೆ ಮಹಾತೇಜಸ್ವಿಗಳಾಗಿ, ತಮ್ಮತಮ್ಮ ರಥಗಳನ್ನೂ, ಮದದಾನೆ ಗಳನ್ನೂ, ತೀವ್ರವೇಗವುಳ್ಳ ಕುದುರೆಗಳನ್ನೂ ಅಣಿಮಾಡಿಕೊಂಡು, ಬಗೆಬಗೆಯ ದಿವ್ಯಾಯುಧಗಳನ್ನು ಹಿಡಿದು, ಸಮಸ್ತಸೈನ್ಯಗಳೊಡನೆ ವೇಗದಿಂದ ಹನುಮಂತ ನಿದ್ದಕಡೆಗೆ ಹೊರಟರು. ಈ ವೀರರಾಕ್ಷಸರೆಲ್ಲರೂ ತೋಟದ ಬಾಗಿಲಿಗೆ ಬಂದೊಡನೆ, ಅಲ್ಲಿ ಉದಿಸಿಬಂದ ಸೂರ್ಯನಂತೆ, ತನ್ನ ದಿವ್ಯತೇಜಸ್ಸಿನಿಂದ ದೇದೀಪ್ಯಮಾನನಾಗಿ ಜ್ವಲಿಸುತ್ತಿದ್ದ ಆ ಮಹಾಕಪಿಯನ್ನು ಕಂಡರು. ಉತ್ಸಾಹದಲ್ಲಿಯೂ, ಪ್ರಯತ್ನ ದಲ್ಲಿಯೂ, ಆಕಾರದಲ್ಲಿಯೂ, ಬಲದಲ್ಲಿಯೂ, ವೇಗದಲ್ಲಿಯೂ, ಶಕ್ತಿ

---

1. "ನಾವಮಾನ್ಯೋ ಭವದ್ಭಿಶ್ಚ ಹರಿರ್ಧೀರಪರಾಕ್ರಮಃ" ಎಂದು ಮೂಲವು. ಅಲ್ಲಿ ಧೀರಪರಾಕ್ರಮಃ ಎಂಬಲ್ಲಿರುವ "ಧೀ" ಎಂಬ ವರ್ಣವು ಗಾಯತ್ರಿಯ ಹದಿ ನಾಲ್ಕನೆಯ ಅಕ್ಷರವಾದುದರಿಂದ, ಇದುವರೆಗೆ ಹದಿಮೂರು ಸಹಸ್ರಗ್ರಂಥಗಳು ಮುಗಿದು ಇಲ್ಲಿ ಹದಿನಾಲ್ಕನೆಯ ಸಹಸ್ರ ಆರಂಭಿಸುವುದಾಗಿ ಗ್ರಾಹ್ಯವು.

ಯಲ್ಲಿಯೂ, ಲೋಕದಲ್ಲಿ ತಾನೇ ಮೇಲೆನಿಸಿಕೊಂಡು, ತೋಟದ ಹೊರಬಾಗಿಲಲ್ಲಿ ಯುದ್ಧಾರ್ಥಿಯಾಗಿ ಕಾದಿದ್ದ ಆ ಕಪಿಯನ್ನು ಕಂಡೊಡನೆ, ಆ ರಾಕ್ಷಸರೆಲ್ಲರೂ ಅವನನ್ನು ಸುತ್ತಲೂ ಮುತ್ತಿನಿಂತು, ತಮ್ಮ ತಮ್ಮ ತೀಕ್ಷ್ಣಬಾಣಗಳಿಂದ ಆ ಕಪಿಯನ್ನು ಹೊಡೆಯಲಾರಂಭಿಸಿದರು. ಅವರಲ್ಲಿ ದುರ್ಧರನೆಂಬವನು ಉಕ್ಕಿನಿಂದ ಮಾಡಿದ ತೀಕ್ಷ್ಣವಾದ ಐದು ಬಾಣಗಳನ್ನು ತೆಗೆದು ಹನುಮಂತನಿಗೆ ನೈದಿಲೆಯೆಸಳುಗಳನ್ನು ಮುಡಿಸುವಂತೆ ಅವನ ತಲೆಗೆ ಗುರಿಯಿಟ್ಟು ಹೊಡೆದನು. ಈ ಐದುಬಾಣಗಳು ತಲೆಗೆ ತಾಗುವಷ್ಟರಲ್ಲಿಯೇ ಹನುಮಂತನು ವೇಗದಿಂದ ಆಕಾಶಕ್ಕೆ ಹಾರಿ, ಹತ್ತುದಿಕ್ಕುಗಳೂ ನೊಳಗುವಂತೆ ಒಂದು ದೊಡ್ಡ ಸಿಂಹನಾದವನ್ನು ಮಾಡಿದನು. ನಾಣೇರಿಸಿದ ಬಿಲ್ಲನ್ನು ಕೈಯಲ್ಲಿ ಹಿಡಿದು ರಥಾರೂಢನಾಗಿದ್ದ ದುರ್ಧರನು ಇದನ್ನು ಕಂಡು ಕೋಪಗೊಂಡು ತಾನೂ ಮೇಲೆ ಹಾರಿ, ಆ ಹನುಮಂತನಮೇಲೆ ಇನ್ನೂ ನೂರಾರುಬಾಣಗಳನ್ನು ಪ್ರಯೋಗಿಸಿದನು. ಶರತ್ಕಾಲದಲ್ಲಿ ವರ್ಷೋನ್ಮುಖವಾದ ಮೇಘವನ್ನು ಗಾಳಿಯು ಸುಲಭವಾಗಿ ಚದರಿಸುವಂತೆ ಹನುಮಂತನು, ಆಕಾಶದಲ್ಲಿ ತನ್ನ ಮೇಲೆ ಬಾಣವರ್ಷವನ್ನು ಕರೆಯುತ್ತಿದ್ದ ಆ ದುರ್ಧರನನ್ನು ತನ್ನ ವೇಗದಿಂದ ತಡೆದುಬಿಟ್ಟನು. ಹಾಗಿದ್ದರೂ ದುರ್ಧರನು ಎಡೆಬಿಡದೆ ಬಾಣದಿಂದ ಪೀಡಿಸುತ್ತಿರಲು ಹನುಮಂತನು ಬಹಳ ಕೋಪಗೊಂಡು, ತನ್ನ ದೇಹವನ್ನು ಮತ್ತಷ್ಟು ದೊಡ್ಡದಾಗಿ ಬಳಿಸಿ ದೊಡ್ಡ ಯುದ್ಧವನ್ನಾರಂಭಿಸಿದನು. ಆ ಮೇಲೆ ಹನುಮಂತನು ಮಹಾವೇಗದಿಂದ ಥಟ್ಟನೆ ಬಹುದೂರಕ್ಕೆ ಮೇಲೆ ಹಾರಿ, ಬೆಟ್ಟದ ಮೇಲೆ ಬೀಳುವ ಬರಸಿಡಿಲಿನಂತೆ ದುರ್ಧರನ ರಥದಮೇಲೆ ಬಿದ್ದನು. ಆಗಲೇ ದುರ್ಧರನ ರಥಕ್ಕೆ ಕಟ್ಟಿದ ಎಂಟುಕುದುರೆಗಳೂ ನಜ್ಜುಗುಜ್ಜಾಗಿ ಬಿದ್ದುವು. ಅದರ ನೊಗವೂ ಮುರಿಯಿತು. ಅದರ ಅಚ್ಚೂ ತುಂಡಾಗಿ ಬಿದ್ದಿತು. ಆಗಲೇ ದುರ್ಧರನೂ ಪ್ರಾಣವನ್ನು ಬಿಟ್ಟು ನೆಲಕ್ಕುರುಳಿದನು. ಹೀಗೆ ದುರ್ಧರನು ಸತ್ತು ಬಿದ್ದುದನ್ನು ಕಂಡು, ವಿರೂಪಾಕ್ಷಯೂಪಾಕ್ಷರೆಂಬ ಸೇನಾಪತಿಗಳಿಬ್ಬರೂ, ಬಹಳ ಕೋಪಗೊಂಡು, ಏಕಕಾಲದಲ್ಲಿ ಆಕಾಶಕ್ಕೆ ಹಾರಿದರು. ಇವರಿಬ್ಬರೂ ಥಟ್ಟನೆ ಮೇಲೆ ಹಾರಿ, ಅಂತರಿಕ್ಷದಲ್ಲಿದ್ದ ಮಹಾಬಾಹುವಾದ ಹನುಮಂತನ ಎದೆಯನ್ನು ತಾವುತಾವು ಹಿಡಿದಿದ್ದ ಕಬ್ಬಿಣದೊನಕೆಗಳಿಂದ ಪ್ರಹರಿಸಿದರು. ಬಲಾಢ್ಯನಾದ ಹನುಮಂತನಾದರೋ, ಗರುಡನಂತೆ ಮಹಾಪರಾಕ್ರಮವುಳ್ಳವನಾದುದರಿಂದ, ತನ್ನ ವೇಗದಿಂದ ಅವರಿಬ್ಬರ ಶಕ್ತಿಯನ್ನೂ ಅಡಗಿಸಿ ತಿರುಗಿ ಭೂಮಿಗಿಳಿದು, ಸಮೀಪದಲ್ಲಿ ಬೆಳೆದಿದ್ದ ಒಂದು ಸಾಲವೃಕ್ಷವನ್ನು ಕಿತ್ತುಕೊಂಡು, ಅದರಿಂದ

ಆ ರಾಕ್ಷಸರಿಬ್ಬರನ್ನೂ ಅಪ್ಪಳಿಸಿ ಕೊಂದುಬಿಟ್ಟನು. ಹೀಗೆ ಆ ಮೂವರು ರಾಕ್ಷಸ ಸೇನಾಪತಿಗಳೂ ಹನುಮಂತನ ಕೈಗೆ ಸಿಕ್ಕಿ ಹತರಾದುದನ್ನು ಕಂಡು, ಪ್ರಘಸನೆಂಬ ನಾಲ್ಕನೆಯ ಸೇನಾಪತಿಯು, ಮಹಾವೇಗದಿಂದ ಬಂದು ಆಂಜನೇಯನನ್ನಿದಿರಿಸಿದನು. ಇಷ್ಟರಲ್ಲಿ ಭಾಸಕರ್ಣನೆಂಬ ಐದನೆಯ ಸೇನಾಪತಿಯೂ ಕೂಡ, ಬಹಳ ಕುಪಿತನಾಗಿ, ಶೂಲವನ್ನೆತ್ತಿಕೊಂಡು ಮತ್ತೊಂದು ಕಡೆಯಿಂದ ಯಶಸ್ವಿಯಾದ ಆ ವಾನರೋತ್ತಮನ ಮೇಲೆ ಬಿದ್ದನು. ಅತ್ತಲಾಗಿ ಪ್ರಘಸನು ತೀಕ್ಷ್ಣವಾದ ಪಟ್ಟಸವನ್ನೂ, ಇತ್ತಲಾಗಿ ಭಾಸಕರ್ಣನು ಶೂಲವನ್ನೂ ಹಿಡಿದು ಬಂದು, ಇವರಿಬ್ಬರೂ ಏಕಕಾಲದಲ್ಲಿ ಹನುಮಂತನನ್ನಿದಿರಿಸಿ ನಿಂತರು. ಇವರಿಬ್ಬರೂ ಸೇರಿ ಎರಡು ಕಡೆಯಿಂದಲೂ ಹೊಡೆಯುತ್ತಿರಲು, ಹನುಮಂತನು, ಗಾಯಗಳ ರಕ್ತದಿಂದ ತೊಯ್ದುಕೂದಲುಳ್ಳವನಾಗಿ ಬಾಲಸೂರ್ಯನಂತೆ ಕಾಣುತ್ತಿದ್ದನು. ಆ ಮೇಲೆ ಹನುಮಂತನು ಅತ್ಯಾಕ್ರೋಶಗೊಂಡು, ಅನೇಕ ಮೃಗಗಳಿಂದಲೂ, ಸರ್ಪಗಳಿಂದಲೂ, ವೃಕ್ಷಸಮೂಹಗಳಿಂದಲೂ, ತುಂಬಿದ ಒಂದು ಪರ್ವತಶಿಖರವನ್ನೇ ಕೈಯಿಂದ ಕಿತ್ತು ತಂದು ಅದರಿಂದ ಆ ರಾಕ್ಷಸರಿಬ್ಬರನ್ನೂ ಒಂದೇ ಪ್ರಹಾರಕ್ಕೆ ಕೊಂದು ಕೆಡಹಿದನು. (ಅವರಿಬ್ಬರ ದೇಹಗಳೂ ಅದರಿಂದ ಭಿನ್ನಭಿನ್ನಗಳಾಗಿ ಬಿದ್ದುವು.) ಹೀಗೆ ಹನುಮಂತನು ಆ ಐದುಮಂದಿ ಸೇನಾಪತಿಗಳನ್ನೂ ಕೊಂದಮೇಲೆ, ಅಲ್ಲಲ್ಲಿ ಉಳಿದಿದ್ದ ಇತರಸೈನ್ಯಗಳನ್ನೂ ಕೊಲ್ಲುತ್ತ ಬಂದನು. ಆ ಮಹಾಕಪಿಯು, ಅಲ್ಲಿ ಕುದುರೆಗಳಿಂದ ಕುದುರೆಗಳನ್ನೂ, ಆನೆಗಳಿಂದ ಆನೆಗಳನ್ನೂ, ಭಟರಿಂದ ಭಟರನ್ನೂ, ರಥದಿಂದ ರಥಗಳನ್ನೂ, ಬೀಸಿಬಡಿದು ಇಂದ್ರನು ದೈತ್ಯರನ್ನು ಕೊಂದಂತೆ ಸಮಸ್ತಸೇನೆಯನ್ನೂ ನಿಶ್ಶೇಷವಾಗಿ ನಾಶಮಾಡಿದನು. ಹೀಗೆ ಸತ್ತುಬಿದ್ದ ಕುದುರೆಗಳಿಂದಲೂ, ಆನೆಗಳಿಂದಲೂ, ಅಚ್ಚುಮುರಿದ ರಥಗಳಿಂದಲೂ, ಹತರಾದ ರಾಕ್ಷಸಭಟರಿಂದಲೂ, ಆ ರಣಭೂಮಿಯೆಲ್ಲವೂ ದಟ್ಟವಾಗಿ ತುಂಬಿ, ನಡೆಯುವುದಕ್ಕೂ ದಾರಿಯಿಲ್ಲದಂತೆ ಮಹಾಭಯಂಕರವಾಗಿತ್ತು. ಹೀಗೆ ಮಹಾವೀರನಾದ ಆ ಹನುಮಂತನು, ವೀರರಾದ ಆ ಐದುಮಂದಿ ಸೇನಾಪತಿಗಳನ್ನೂ, ಅವರವರ ಸೈನ್ಯಗಳೊಡನೆಯೂ, ವಾಹನಗಳೊಡನೆಯೂ, ನಿಶ್ಶೇಷವಾಗಿ ಕೊಂದು, ತಿರುಗಿ ತೋರಣದ ಬಾಗಿಲಿಗೆ ಬಂದು ಪ್ರಜಾಕ್ಷಯವನ್ನು ಮಾಡಿ ಬಳಲಿಬಂದು ನಿಂತಿರುವ ಯಮನಂತೆ ಕಾಣುತಿದ್ದನು.

ಇಲ್ಲಿಗೆ ನಾಲ್ವತ್ತಾರನೆಯ ಸರ್ಗವು.

---

### ಹನುಮಂತನು ಅಕ್ಷಕುಮಾರನನ್ನು ಕೊಂದುದು.

ಹೀಗೆ ಈ ಐದುಮಂದಿ ಸೇನಾಪತಿಗಳೂ ತಮ್ಮ ತಮ್ಮ ಸೈನ್ಯಗಳೊಡನೆ ಹನುಮಂತನಿಂದ ಹತರಾದ ಸಂಗತಿಯು ಆ ಕ್ಷಣವೇ ರಾವಣನ ಕಿವಿಗೆ ಮುಟ್ಟಿತು. ಆಗಲೇ ರಾಕ್ಷಸಚಕ್ರವರ್ತಿಯು, ಮುಂದೆ ಯಾರನ್ನು ಕಳುಹಿಸಬಹುದೆಂದು ಚಿಂತಿಸಿ, ಕೊನೆಗೆ ಯಾವಾಗಲೂ ಕೊಬ್ಬಿನಿಂದುಬ್ಬಿ ಯುದ್ಧಕ್ಕೆ ಕಾಲೆತ್ತಿ ನಿಂತಿರುವ, ತನ್ನ ಮಗನಾದ ಅಕ್ಷಕುಮಾರನು ಮುಂದಿರುವುದನ್ನು ಕಂಡು, ಅವನ ಮೇಲೆ ಕಣ್ಣಿಟ್ಟನು. ರಾವಣನು ತನ್ನನ್ನು ದೃಷ್ಟಿಯಿಟ್ಟು ನೋಡಿದೊಡನೆ, ಇಂಗಿತಜ್ಞನಾದ ಅಕ್ಷಕುಮಾರನು ಯುದ್ಧಕ್ಕೆ ಪ್ರೇರಿತನಾಗಿ, ಸ್ವರ್ಣಮಯವಾದ ಧನುಸ್ಸನ್ನು ತೆಗೆದುಕೊಂಡು, ಯಾಗದಲ್ಲಿ ಬ್ರಾಹ್ಮಣರು ಹೋಮಮಾಡಿದ ಹವಿಸ್ಸಿನಿಂದ ಜ್ವಲಿಸುವ ಅಗ್ನಿಯಂತೆ ಧಿಗ್ಗನೆ ಆ ಸಭಾಸ್ಥಾನದಿಂದೆದ್ದನು. ಮತ್ತು ಮಹಾವೀರ್ಯವುಳ್ಳ ಆ ರಾಕ್ಷಸಕುಮಾರನು, ಬಾಲಸೂರ್ಯನಂತೆ ದೇದೀಪ್ಯಮಾನವಾಗಿಯೂ, ಸುವರ್ಣಾಲಂಕೃತವಾಗಿಯೂ ಇರುವ ಒಂದು ಮಹಾರಥವನ್ನೇರಿ, ಹನುಮಂತನಿದ್ದ ಕಡೆಗೆ ಹೊರಟನು. ಆ ರಥವಾದರೋ ಎಷ್ಟೋ ಮಹಾತಪಸ್ಸುಗಳನ್ನು ಮಾಡಿ ಸಂಪಾದಿಸಿದ ದಿವ್ಯರಥವು, ಬಂಗಾರದ ಕುಸುರಿಗಳಿಂದಲಂಕೃತವಾದ ಆ ರಥದ ಸುತ್ತಲೂ ಅಲಂಕಾರಾರ್ಥವಾದ ಪತಾಕೆಗಳು ತೂಗಾಡುತ್ತಿರುವುವು. ಅದರಮೇಲೆ ರತ್ನಮಯವಾದ ಧ್ವಜವು ಶೋಭಿಸುತ್ತಿರುವುದು. ಮನೋವೇಗವುಳ್ಳ ಎಂಟು ಉತ್ತಮಾಶ್ವಗಳು ಅದನ್ನೆಳೆಯುತ್ತಿರುವುವು. ಅದನ್ನು ತಡೆಯುವುದು ದೇವಾಸುರರಿಗೂ ಸಾಧ್ಯವಿಲ್ಲ! ಅದರ ಗತಿಗೆ ಎಲ್ಲಿಯೂ ತಡೆಯಿಲ್ಲ! ಸೂರ್ಯನಂತೆ ದೇದೀಪ್ಯಮಾನವಾಗಿ ಜ್ವಲಿಸುತ್ತ, ಭೂಸ್ಪರ್ಶವಿಲ್ಲದೆ ಆಕಾಶದಲ್ಲಿಯೇ ಸಂಚರಿಸುವಂತಿರುವುದು. ಯುದ್ಧಕ್ಕಾಗಿ ಸಿದ್ಧಪಡಿಸಲ್ಪಟ್ಟ ಆ ರಥದಲ್ಲಿ, ಅಲ್ಲಲ್ಲಿ ಬಾಣಗಳಿಂದ ತುಂಬಿದ ಬತ್ತಳಿಕೆಗಳೂ, ಅದರ ಎಂಟು ಮೂಲೆಗಳಲ್ಲಿ ಎಂಟು ಕತ್ತಿಗಳೂ ಕಟ್ಟಲ್ಪಟ್ಟಿರುವುವು. ಸುತ್ತಲೂ ಘಂಟೆಗಳು ಆಡುತ್ತಿರುವುವು. ಶಕ್ತಿತೋಮರಾದ್ಯಾಯುಧಗಳು ಸಾಲುಸಾಲಾಗಿ ಇರಿಸಲ್ಪಟ್ಟಿರುವುವು. ಮತ್ತು ಅದರಲ್ಲಿ ಕವಚ ಧನುರ್ಬಾಣಗಳೇ ಮೊದಲಾದ ಯುದ್ಧಸಾಮಗ್ರಿಗಳೆಲ್ಲವೂ ಸಂಪೂರ್ಣವಾಗಿ ತುಂಬಿರುವುವು. ಚಂದ್ರನಂತೆ ಬಿಳುಪಾಗಿಯೂ, ಸೂರ್ಯನಂತೆ ಹೊಂಬಣ್ಣವಾಗಿಯೂ ಇರುವ, ಕುದುರೆಯ ಕಟ್ಟು ಮೊದಲಾದ ಬೆನ್ನದ ಹೊರಜಿಗಳು ಅಲ್ಲಲ್ಲಿ ಸಿದ್ಧವಾಗಿಡಲ್ಪಟ್ಟಿರುವುವು. ಸೂರ್ಯನಂತೆ ಕಾಂತಿವಿಶಿಷ್ಟವಾದ ಆ ಮಹಾರಥವನ್ನೇರಿ, ದೇವತೆಗಳಿಗೆಣೆಯಾದ ಪರಾಕ್ರಮವುಳ್ಳ ಆ ಅಕ್ಷಕುಮಾರನು

ಅಶೋಕವನದ ಕಡೆಗೆ ಹೊರಟನು. ಹೀಗೆ ಅಕ್ಷಕುಮಾರನು ರಥಾರೂಢನಾಗಿ ತನ್ನ ಚತುರಂಗಬಲವನ್ನೂ ಸಂಗಡಕರೆದುಕೊಂಡು, ಆ ಸೈನ್ಯದಲ್ಲಿರುವ ಅನೇಕಕುದುರೆಗಳ ಕೂಗಿನಿಂದಲೂ, ರಥಧ್ವನಿಗಳಿಂದಲೂ ಭೂಮ್ಯಾಕಾಶಗಳೆರಡನ್ನೂ ತುಂಬುತ್ತ, ಮಹಾಟ್ಟಹಾಸದಿಂದ ಹೊರಟು, ತೋಟದ ಹೊರಬಾಗಿಲಲ್ಲಿ ಕುಳಿತಿದ್ದ ಹನುಮಂತನ ಸಮೀಪಕ್ಕೆ ಬಂದನು. ಸಿಂಹದಂತೆ ಗಂಭೀರದೃಷ್ಟಿಯುಳ್ಳ ಆ ಅಕ್ಷಕುಮಾರನು ಪ್ರಜಾಕ್ಷಯಕ್ಕಾಗಿ ಹೊರಟ ಪ್ರಳಯಕಾಲಾಗ್ನಿಯಂತೆ ಕಾಣುತ್ತ, ಮುಂದೆ ಬಂದು ಆ ಕಪಿಯ ಅದ್ಭುತಾಕಾರವನ್ನೂ, ಅವನ ಯುದ್ಧೋತ್ಸಾಹವನ್ನೂ ನೋಡಿ ಆಶ್ಚರ್ಯದಿಂದ ಬೆರಗಾಗಿ, ಗೌರವಬುದ್ಧಿಯಿಂದಲೇ ಆತನನ್ನು ನೋಡುತ್ತಿದ್ದನು. ಮಹಾಬಲನಾದ ಅಕ್ಷಕುಮಾರನು ಆ ಮಹಾಕಪಿಯ ವೇಗವನ್ನೂ, ಶತ್ರುಗಳ ವಿಷಯದಲ್ಲಿ ಆತನಿಗಿರುವ ಪರಾಕ್ರಮವನ್ನೂ, ತನ್ನ ಬಲವನ್ನೂ ಹೋಲಿಸಿ ನೋಡಿಕೊಂಡು ಅವುಗಳ ತಾರತಮ್ಯವನ್ನೂ ತನ್ನಲ್ಲಿ ತಾನೇ ನಿರ್ಣಯಿಸಿಕೊಂಡು, ವಸಂತಕಾಲದ ಸೂರ್ಯನಂತೆ ತಾನೂ ತೇಜಸ್ಸಿನಿಂದುಬ್ಬುತ್ತಿದ್ದನು. ಹೀಗೆ ಆ ರಾಕ್ಷಸನು ಮನಸ್ಸಿನಲ್ಲಿ ಬಲಾಬಲಗಳನ್ನು ನೋಡಿಕೊಂಡು, ಕೊನೆಗೆ ಕೋಪದಿಂದ ಯುದ್ಧಕ್ಕೆ ದೃಢವಾಗಿ ಕಾಲೂರಿ ನಿಂತು, ಮೊದಲು ಎಚ್ಚರಿಕೆಯಿಂದ ಮೂರು ತೀಕ್ಷ್ಣಬಾಣಗಳನ್ನು ಹನುಮಂತನ ಮೇಲೆ ಬಿಟ್ಟು, ಆ ವ್ಯಾಜದಿಂದ ಆತನನ್ನು ಯುದ್ಧಕ್ಕೆ ರೇಗಿಸಿದನು. ಮತ್ತು ಆ ರಾಕ್ಷಸಕುಮಾರನು ಹನುಮಂತನ ಹೆಮ್ಮೆಯನ್ನೂ, ಎಂತಹ ಶ್ರಮವನ್ನಾದರೂ ಸಹಿಸಬಲ್ಲ ಆತನ ದೇಹಲಾಘವವನ್ನೂ, ಶತ್ರುಜಯದಲ್ಲಿ ಆತನಿಗಿರುವ ಸಾಮರ್ಥ್ಯವನ್ನೂ ಚೆನ್ನಾಗಿ ತಿಳಿದು, ಧೈರ್ಯಗುಂದದ ಮನಸ್ಸುಳ್ಳವನಾಗಿ, ಧನುರ್ಬಾಣಗಳನ್ನು ಕೈಯಲ್ಲಿ ಸಿದ್ಧವಾಗಿ ಹಿಡಿದು, ಯುದ್ಧಾರಂಭಸೂಚಕವಾದ ದೃಷ್ಟಿಯಿಂದ ಹನುಮಂತನನ್ನು ನೋಡಿದನು. ಬಂಗಾರದ ಪದಕದಿಂದ ಕೂಡಿದ ತೋಳ್ಬಳೆಗಳನ್ನೂ, ಅಂದವಾದ ಕುಂಡಲಗಳನ್ನೂ ಧರಿಸಿದ ಆ ರಾಕ್ಷಸನು, ಹೀಗೆ ತೀವ್ರಪರಾಕ್ರಮವನ್ನು ತೋರಿಸುತ್ತ ಹನುಮಂತನನ್ನಿದಿರಿಸಿ ನಿಲ್ಲಲು, ಆಗ ಅವರಿಬ್ಬರ ಸೇರುವೆಯು ದೇವಾಸುರರನ್ನೂ ಬೆಚ್ಚರಗೊಳಿಸುವಂತಿತ್ತು. ಈ ಮಹಾವೀರರ ಹೋರಾಟವನ್ನು ನೋಡಿ ಹೆದರಿ, ಭೂಮಿಯು ಮೊರೆಯಿಟ್ಟಿತು. [1] ಸೂರ್ಯನು

---

1. ಇಲ್ಲಿ ಹಿಂದೆಯೇ ಸೂರ್ಯೋದಯವು ಸೂಚಿತವಾಗಿರುವುದರಿಂದ, ಆ ಸೂರ್ಯನೇ ತಪಿಸಲಿಲ್ಲವೆಂದು ಗೋವಿಂದರಾಜರು. ಅಕ್ಷಯುದ್ಧಸಮಯದಲ್ಲಿ ಸೂರ್ಯೋದಯವಿಲ್ಲವೆಂದೂ, ಸೂರ್ಯನು ದೇಶಾಂತರಸ್ಥಿತನಾಗಿದ್ದರೂ ಇಲ್ಲಿನ ಯುದ್ಧವನ್ನು ಕೇಳಿ ಭಯದಿಂದ ತಪಿಸಲಿಲ್ಲವೆಂದೂ ಮಹೇಶ್ವರತೀರ್ಥರು.

ತಣ್ಣಗಾದನು! ವಾಯುವು ನಿಶ್ಚಲವಾಯಿತು! ಬೆಟ್ಟಮೊದಲಾದ ಅಚಲವಸ್ತುವೂ ಅಲ್ಲಾಡಿಹೋಯಿತು! ಆಕಾಶವೂ ಕೂಗಿತು! ಸಮುದ್ರವೂ ಕಲಗಿಹೋಯಿತು! ಗುರಿನೋಡುವುದರಲ್ಲಿಯೂ, ಬಾಣಸಂಧಾನಮಾಡುವುದರಲ್ಲಿಯೂ, ಸಂಧಾನಮಾಡಿದ ಬಾಣವನ್ನು ಗುರಿಯಿಟ್ಟು ಹೊಡೆಯುವುದರಲ್ಲಿಯೂ ಅತಿನಿಪುಣನಾದ ಆ ಅಕ್ಷಕುಮಾರನು, ತೀಕ್ಷ್ಣವಾದ ಅಲಗುಗಳಿಂದಲೂ, ವೇಗವಾದ ಗರಿಗಳಿಂದಲೂ, ಚಿನ್ನದ ಹಿಡಿಗಳಿಂದಲೂ ಕೂಡಿ, ವಿಷಸರ್ಪಗಳಂತಿದ್ದ ಮೂರು ಬಾಣಗಳನ್ನು ಆ ಹನುಮಂತನ ತಲೆಗೆ ಗುರಿಯಿಟ್ಟು ಹೊಡೆದನು. ಈ ಮೂರು ಬಾಣಗಳೂ ಏಕಕಾಲದಲ್ಲಿ ಬಂದು ಹನುಮಂತನ ತಲೆಗೆ ನಾಟಿಕೊಳ್ಳಲು, ಆ ಗಾಯದ ರಕ್ತದಿಂದ ತೊಯ್ದು ಹೊಳಲುವ ಕಣ್ಣುಗಳುಳ್ಳ ಆ ಹನುಮಂತನು, ಆಗಲೇ ಉದಿಸಿಬಂದ ಬಾಲಸೂರ್ಯನಂತೆ ರಕ್ತವರ್ಣದಿಂದ ಶೋಭಿಸುತ್ತಿದ್ದನು. ಆ ಬಾಣಧಾರೆಗಳೇ ಸೂರ್ಯಕಿರಣಧಾರೆಗಳಂತೆ ತೋರುತಿದ್ದುವು. ಆ ಮೇಲೆ ಸುಗ್ರೀವನಿಗೆ ಪ್ರಧಾನಮಂತ್ರಿಯಾದ ಆ ಆಂಜನೇಯನು, ತನ್ನೊಡನೆ ಯುದ್ಧಕ್ಕಾಗಿ ಬಂದು ನಿಂತಿರುವ ಆ ರಾಜಕುಮಾರನನ್ನೂ, ಅವನ ಕೈಯಲ್ಲಿ ಹಿಡಿದಿರುವ ವಿಚಿತ್ರಸಾಯಕಗಳನ್ನೂ, ವಿಚಿತ್ರಧನುಸ್ಸನ್ನೂ ನೋಡಿ "ಭಲೆ! ನನಗೆ ತಕ್ಕ ವೈರಿಯೇ ಸಿಕ್ಕಿದನು" ಎಂದು ಹಿಗ್ಗುತ್ತ, ತನ್ನ ಮೈಯನ್ನು ಮತ್ತಷ್ಟು ಬೆಳೆಸಿದನು. ಬಲದಿಂದಲೂ, ವೀರ್ಯದಿಂದಲೂ ಉಬ್ಬಿದ ಆ ಹನುಮಂತನು ತೀವ್ರಕೋಪದಿಂದ [1] ಮಧ್ಯಾಹ್ನ ಸೂರ್ಯನಂತೆ ಜ್ವಲಿಸುತ್ತ, ಕೆಂಡದಂತೆ ಕೆಂಪೇರಿದ ತನ್ನ ಕಣ್ಣುಗಳಿಂದಲೇ ಆ ಅಕ್ಷಕುಮಾರನನ್ನೂ, ಅವನ ಸೈನ್ಯವನ್ನೂ ಅವನ ವಾಹನವನ್ನೂ ದಹಿಸಿಬಿಡುವಂತೆ ನೋಡುತಿದ್ದನು. ಕಾಳಮೇಘದಂತಿದ್ದ ಆ ರಾಕ್ಷಸನು, ಇಂದ್ರಧನುಸ್ಸಿನಂತಿರುವ ವಿಚಿತ್ರಕಾರ್ಮುಕವನ್ನು ಹಿಡಿದು, ಪರ್ವತದಂತೆ ಮಹಾಕಾಯವುಳ್ಳ ಆ ಆಂಜನೇಯನ ಮೇಲೆ ಬಾಣವರ್ಷವನ್ನು ಕರೆಯುತ್ತಿರಲು, ಮೇಘವು ಬೆಟ್ಟದ ಮೇಲೆ ಮಳೆಯನ್ನು ಸುರಿಯುವಂತೆಯೇ ತೋರುತಿತ್ತು. ಹನುಮಂತನು, ತೇಜಸ್ಸಿನಿಂದಲೂ, ಬಲದಿಂದಲೂ, ವೀರ್ಯದಿಂದಲೂ ಉಬ್ಬಿದ ಚಂಡಪರಾಕ್ರಮಿಯಾದ ಆ ರಾಕ್ಷಸನು ತನಗಿದಿರಾಗಿ ಯುದ್ಧಕ್ಕೆ ನಿಂತಿರುವುದನ್ನು ನೋಡಿ ಸಂತೋಷಗೊಂಡು, ಮೇಘದಂತೆ ಉರವಣಿಸಿ ದೊಡ್ಡ ಸಿಂಹನಾದವನ್ನು ಮಾಡಿದನು. ಅಕ್ಷಕುಮಾರನಾದರೋ

1. ಇಲ್ಲಿ "ಮಂದರಾಗ್ರಸ್ಥ ಇವಾಂಶುಮಾಲೀ" ಎಂದು ಮೂಲವು. ಭರತಖಂಡ ಮಧ್ಯದಲ್ಲಿ ಸಾಲಗ್ರಾಮಪರ್ವತಕ್ಕೆ ಉತ್ತರಭಾಗದಲ್ಲಿ ಮಂದರವೆಂಬ ಪರ್ವತವುಂಟು. ಅಲ್ಲಿಗೆ ಸೂರ್ಯನು ಮಧ್ಯಾಹ್ನ ಕಾಲಕ್ಕೆ ಬರುವುದಾಗಿ ಗ್ರಾಹ್ಯವು.

ಹನುಮಂತನಿಗಿರುವ ಎಣೆಯಿಲ್ಲದ ಶಕ್ತಿಯನ್ನೂ ಯೋಚಿಸದೆ, ಹುಡುಗುತನದಿಂದಲೂ, ವೀರ್ಯದ ಕೊಬ್ಬಿನಿಂದಲೂ, ಕೋಪಗೊಂಡು ಕೆಂಡದಂತೆ ಕೆಂಪಾದ ಕಣ್ಣುಳ್ಳವನಾಗಿ, ಕಾಡಾನೆಯು ಹುಲ್ಲುಮುಚ್ಚಿದ ಹಳೆಯಬಾವಿಯಮೇಲೆ ಅಜ್ಞಾನದಿಂದ ನುಗ್ಗುವಂತೆ ಆ ಕಪಿಯಮೇಲೆ ನುಗ್ಗಿದನು. ಹೀಗೆ ಆ ರಾಕ್ಷಸನು ಮೇಲೆ ಬಿದ್ದು ಬಲಾತ್ಕಾರದಿಂದ ಬಾಣಗಳನ್ನು ಪ್ರಯೋಗಿಸುವುದನ್ನು ನೋಡಿ, ಮೇಘವು ಗುಡುಗುವಂತೆ ಆಂಜನೇಯನು ದೊಡ್ಡಸಿಂಹನಾದವನ್ನು ಮಾಡಿ, ನೋಡುವವರಿಗೆ ಭಯವನ್ನುಂಟುಮಾಡುವಂತೆ ತೋಳುಗಳನ್ನೂ, ತೊಡೆಗಳನ್ನೂ ಬೀಸುತ್ತ ಆಕಾಶಕ್ಕೆ ಹಾರಿಬಿಟ್ಟನು. ಇದನ್ನು ನೋಡಿದೊಡನೆ, ಮಹಾಪ್ರತಾಪವುಳ್ಳವನಾಗಿಯೂ, ರಥಿಕರಲ್ಲಿ ಮೇಲೆನಿಸಿಕೊಂಡವನಾಗಿಯೂ ಇರುವ ಆ ರಾಕ್ಷಸರಾಜಕುಮಾರನೂ ಕೂಡ, ತನ್ನ ರಥದೊಡನೆಯೇ ಅತನನ್ನು ಬೆನ್ನಟ್ಟಿ ಮೇಲೆ ಹಾರಿ, ಮಹಾಮೇಘವು ಪರ್ವತದ ಮೇಲೆ ಕಲ್ಮಳೆಯನ್ನು ಕರೆಯುವಂತೆ ಆ ಕಪಿಯಮೇಲೆ ಬಾಣವರ್ಷಗಳನ್ನು ಕರೆದನು. ಯುದ್ಧದಲ್ಲಿ ಚಂಡಪರಾಕ್ರಮವುಳ್ಳ ಹನುಮಂತನಾದರೋ, ಆಕಾಶದಲ್ಲಿ ಮನೋವೇಗದಿಂದ ಆ ಬಾಣಗಳ ಸಂದಿನಲ್ಲಿಯೇ ಗಾಳಿಯಂತೆ ತೂರಿ ಬರುತ್ತ, ಆ ಬಾಣಗಳೆಲ್ಲವನ್ನೂ ತಪ್ಪಿಸಿಕೊಂಡು ಸುತ್ತುತಿದ್ದನು. ಆದರೂ ಅಕ್ಷನು ಕೈಯಲ್ಲಿ ದೊಡ್ಡಬಿಲ್ಲನ್ನು ಹಿಡಿದು ಯುದ್ಧಕ್ಕೆ ನಿಂತು, ತನ್ನ ತೀಕ್ಷ್ಣಬಾಣಗಳಿಂದ ಆಕಾಶವನ್ನು ಎಡೆಬಿಡದೆ ತುಂಬುವುದನ್ನು ನೋಡಿ, ಹನುಮಂತನಿಗೆ ಆ ರಾಕ್ಷಸನ ಪರಾಕ್ರಮದಲ್ಲಿ ಸ್ವಲ್ಪವಾಗಿ ಗೌರವಬುದ್ಧಿಯು ಹುಟ್ಟಿತು. ಆ ಮಹಾವೀರನನ್ನು ಕೊಲ್ಲುವುದಕ್ಕುಪಾಯವೇನೆಂಬ ಚಿಂತೆಯೂ ಹುಟ್ಟಿತು. ಹೀಗೆ ಗೌರವದೃಷ್ಟಿಯಿಂದ ಅತನನ್ನು ನೋಡುತ್ತಿರುವಾಗಲೇ, ಧೀರನಾದ ಅಕ್ಷಕುಮಾರನು ಒಂದು ತೀಕ್ಷ್ಣಬಾಣವನ್ನು ತೆಗೆದು ಆ ಹನುಮಂತನ ಎದೆಗೆ ಹೊಡೆದನು. ಈ ಬಾಣದ ಪೆಟ್ಟು ಬಿದ್ದೊಡನೆ ಆಯಾ ಕಾರ್ಯವಿಶೇಷದ ಸ್ವರೂಪವನ್ನು ಚೆನ್ನಾಗಿ ತಿಳಿದ ಮಹಾಬಾಹುವಾದ ಹನುಮಂತನು ತನ್ನ ಮನಸ್ಸಿನಲ್ಲಿ ತಾನು "ಈ ರಾಕ್ಷಸನೋ ಮಹಾಬಲಾಢ್ಯನು! ಬಾಲಸೂರ್ಯನಂತೆ ತೇಜಸ್ಸಿನಿಂದ ಬೆಳಗುವನು! ಇನ್ನೂ ಬಾಲಕನಾದರೂ, ರಣಪಂಡಿತನಂತೆ ಮಹಾಕಾರ್ಯವನ್ನು ನಡೆಸುತ್ತಿರುವನು! ಸಮಸ್ತ ಯುದ್ಧತಂತ್ರಗಳನ್ನೂ ಬಲ್ಲವನಂತೆ ಕಾಣುವನು! ಇಂತವನನ್ನು ಕೊಲ್ಲುವುದಕ್ಕೆ ನನಗೆ ಬುದ್ಧಿಯೇ ಹುಟ್ಟಲಿಲ್ಲ! ಇದಲ್ಲದೆ ಇವನು ಮಹಾತ್ಮನು! ಪರಾಕ್ರಮದಲ್ಲಿ ಮೇಲೆನಿಸಿರುವನು. ಯುದ್ಧದಲ್ಲಿ ಎಚ್ಚರಿಕೆಯುಳ್ಳವನು! ಕಷ್ಟಗಳನ್ನು ಸಹಿಸತಕ್ಕ

ವನು. ಯುದ್ಧಕಾರ್ಯದಲ್ಲಿ ಇವನ ಚಾತುರ್ಯವು ಬಹಳ ಅತಿಶಯವಾದು ದರಿಂದ, ನಾಗರೂ, ಯಕ್ಷರೂ, ದೇವತೆಗಳೂ, ಮಹರ್ಷಿಗಳೂ ಇವನನ್ನು ಗೌರವಿಸುವುದರಲ್ಲಿ ಸಂದೇಹವಿಲ್ಲ, ಇವನಿಗೆ ಮನಸ್ಸಿನಲ್ಲಿ ಪರಾಕ್ರಮವೂ, ಉತ್ಸಾಹವೂ ಮೇಲೆ ಮೇಲೆ ಹೆಚ್ಚುತ್ತಿರುವುದು. ಈತನು ನನ್ನ ಮುಂದೆ ನಿಂತು ಧೈರ್ಯದಿಂದಲೇ ನನ್ನನ್ನು ನೋಡುತ್ತಿರುವನು. ಇವನ ಗತಿವೇಗ ವನ್ನೂ ಪರಾಕ್ರಮವನ್ನೂ ನೋಡಿದರೆ, ದೇವಾಸುರರಿಗಾದರೂ ಮನಸ್ಸು ನಡುಗುವುದು. ಆದರೆ ನಾನು ಇವನನ್ನು ಈಗಲೇ ಕೊಲ್ಲದೆ ಬಿಟ್ಟರೆ ಇವನು ನನ್ನನ್ನು ಭಂಗಿಸದೆ ಬಿಡನು. ಇವನ ಪರಾಕ್ರಮವು ಕ್ಷಣಕ್ಷಣಕ್ಕೂ ಉಬ್ಬಿ ಬರುತ್ತಿರುವುದು. ಈಗಲೂ ನಾನು ಸುಮ್ಮನಿದ್ದರೆ ಇವನನ್ನು ತಡೆಯುವುದೇ ಕಷ್ಟವಾಗುವುದು! ಆದುದರಿಂದ ಈಗಲೇ ಇವನನ್ನು ಕೊಂದುಬಿಡುವುದು ಯುಕ್ತವೆಂದು ತೋರುವುದು. ಉರಿಯುವ ಬೆಂಕಿಯನ್ನಾರಿಸದೆ ಬಿಡುವುದು ಯುಕ್ತವಲ್ಲ.'' ಎಂದು ಚಿಂತಿಸಿದನು. ವೀರ್ಯಶಾಲಿಯಾದ ಹನುಮಂತನು ಹೀಗೆ ತನ್ನ ಶತ್ರುವಿನ ಬಲವನ್ನು ಕುರಿತು ಮನಸ್ಸಿನಲ್ಲಿ ವಿಮರ್ಶಿಸಿ. ತಾನು ಆವ ನೊಡನೆ ಮುಂದೆ ನಡೆಸಬೇಕಾದ 1 ಯುದ್ಧಕ್ರಮವನ್ನೂ ನಿಶ್ಚಯಿಸಿಕೊಂಡು, ಆಗಲೇ ಅವನನ್ನು ಕೊಲ್ಲಬೇಕೆಂದೆಣಿಸಿ, ತನ್ನ ವೇಗವನ್ನಾರಂಭಿಸಿದನು. ಒಡ ನೆಯೇ ಆ ವಾಯುಪುತ್ರನು ಮಹಾವೇಗವುಳ್ಳವುಗಳಾಗಿಯೂ, ಎಚ್ಚರಿಕೆಯುಳ್ಳ ವುಗಳಾಗಿಯೂ, ಚಿತ್ರಗತಿಯಿಂದ ಹೋಗುವಾಗಲೂ ರಥಭಾರವನ್ನೆಳೆಯಬಲ್ಲ ವುಗಳಾಗಿಯೂ ಇದ್ದ ಆ ರಾಕ್ಷಸನ ಎಂಟು ರಥಾಶ್ವಗಳನ್ನೂ, ಆಕಾಶದಲ್ಲಿದ್ದಂತೆಯೇ ತನ್ನ ಅಂಗೈಯಿಂದ ಹೊಡೆದು ಕೆಡಹಿದನು. ಮತ್ತು ವೀರನಾದ ಹನುಮಂತನು ಮತ್ತೊಂದು ಕೈಯಿಂದ ಆ ರಾಕ್ಷಸನ ರಥವನ್ನಪ್ಪಳಿಸಿದನು. ಆಗಲೇ ಆದರ ಚಕ್ರಗಳೂ, ಆದರ ಮೂಕಿಯೂ ಮುರಿದು, ಕುದುರೆಗಳೊಡನೆ ಆ ರಥವು ನೆಲಕ್ಕು ರುಳಿತು. ಆ ರಾಕ್ಷಸನು ಉಗ್ರವೀರ್ಯವುಳ್ಳ ಮಹಾರಥನಾದುದರಿಂದ ಆಗಲೇ ಆ ರಥವನ್ನು ಬಿಟ್ಟಿಳಿದು, ಬಿಲ್ಲನ್ನೂ, ಕತ್ತಿಯನ್ನೂ ಕೈಗೆತ್ತಿಕೊಂಡು, ಋಷಿಯು ತಪೋಮಹಿಮೆಯಿಂದ ತನ್ನ ದೇಹವನ್ನು ತ್ಯಜಿಸಿ ದೇವಲೋಕವನ್ನೆಡರುವಂತೆ ಆಕಾಶಕ್ಕೆ ಹಾರಿದನು. ಹೀಗೆ ಆ ರಾಕ್ಷಸನು ಮೇಲೆ ಹಾರಿ, ಗರುಡಗಂಧರ್ವ ಸಿದ್ಧಾದಿಗಳಿಗೆ ವಿಹಾರಸ್ಥಾನವಾದ ಅಂತರಿಕ್ಷದಲ್ಲಿ ಸುತ್ತಿಬರುವುದನ್ನು ಕಂಡು ವಾಯುವೇಗವುಳ್ಳ ಹನುಮಂತನು, ಥಟ್ಟನೆ ಅವನನ್ನು ಸಮೀಪಿಸಿ, ಅವನ

1. ಇಲ್ಲಿ ಮೊದಲು ಆ ರಾಕ್ಷಸನ ರಥವನ್ನೂ ರಥಾಶ್ವಗಳನ್ನೂ ಧ್ವಂಸಮಾಡಿ, ಆಮೇಲೆ ಆ ಅಕ್ಷನನ್ನು ಕೊಲ್ಲಬೇಕೆಂದು ಯುದ್ಧಕ್ರಮವನ್ನು ಸಂಕಲ್ಪಿಸಿದುದಾಗಿ ಭಾವವು.

ಕಾಲುಗಳೆರಡನ್ನೂ ದೃಢವಾಗಿ ಹಿಡಿದುಬಿಟ್ಟನು. ಪರಾಕ್ರಮದಲ್ಲಿ ತನ್ನ ತಂದೆಯಾದ ವಾಯುದೇವನಿಗೆಣೆಯೆನಿಸಿದ ಆ ಹನುಮಂತನು, ಗರುಡನು ಮಹಾಸರ್ಪವನ್ನೆಳೆಯುವಂತೆ ಆ ರಾಕ್ಷಸನ ಕಾಲುಗಳನ್ನು ಹಿಡಿದೆಳೆದು, ಅನೇಕಾವರ್ತಿ ವೇಗದಿಂದ ಗಿರಗಿರನೆ ಸುತ್ತಿಸಿ ನೆಲದಲ್ಲಿ ಕುಕ್ಕಿಬಿಟ್ಟನು. ಇದರಿಂದ ಆ ರಾಕ್ಷಸನಿಗೆ, ತೋಳು, ತೊಡೆ, ನಡು, ಕಂಠ, ಮುಂತಾದ ಅವಯವಗಳೆಲ್ಲವೂ ಮುರಿದು, ಸರ್ವಾಂಗವೂ ರಕ್ತಮಯವಾಗಿ, ಮೈಮೂಳೆಗಳೆಲ್ಲವೂ ಪುಡಿಯಾದುವು. ಕಣ್ಣುಗಳೆರಡೂ ಕಳಚಿಬಿದ್ದುವು. ಸಂಧಿಬಂಧಗಳು ಸಡಿಲಿದುವು ಅವನ ಮೈಕಟ್ಟುಗಳೆಲ್ಲವೂ ಚದರಿಬಿದ್ದುವು. ಈ ಅವಸ್ಥೆಯಿಂದ ಆ ರಾಕ್ಷಸನು ಸತ್ತುಬೀಳಲು, ಹನುಮಂತನು ಅತನ ದೇಹವನ್ನು ನೆಲಕ್ಕೆ ತಿಕ್ಕಿ ಒಂದೇ ಉಂಡೆಯಾಗಿ ಮಾಡಿ, ಅದರಿಂದ ರಾಕ್ಷಸಚಕ್ರವರ್ತಿಗೂ ನಡುಕವುಂಟಾಗುವಂತೆ ಮಾಡಿದನು. ಅಕ್ಷಕುಮಾರನಿಗೆ ಈ ಅವಸ್ಥೆಯುಂಟಾಗಲು, ಜ್ಯೋತಿಶ್ಚಕ್ರಚಾರಿಗಳಾದ ಮಹರ್ಷಿಗಳೂ, ಭೂತಗಳೂ, ಯಕ್ಷರೂ, ಪನ್ನಗರೂ, ಇಂದ್ರಾದಿದೇವತೆಗಳೂ ಆಶ್ಚರ್ಯವಶರಾಗಿ ಹನುಮಂತನನ್ನು ನೋಡುತ್ತಿದ್ದರು. ಹೀಗೆ ಆಂಜನೇಯನು ಇಂದ್ರಕುಮಾರನಿಗೆಣೆಯಾದ ಅಕ್ಷನನ್ನು ಕೊಂದು, ತಿರುಗಿ ಆ ತೋರಣದ ಬಾಗಿಲನ್ನೇ ಸೇರಿ ಕಾಲಯಮನಂತೆ ಭಯಂಕರಸ್ವರೂಪದಿಂದ ಕಾದಿದ್ದನು.

ಇಲ್ಲಿಗೆ ನಾಲ್ವತ್ತೇಳನೆಯ ಸರ್ಗವು.

---

{ ರಾವಣನು ಇಂದ್ರಜಿತ್ತಿಗೆ ನಯವಾಕ್ಯವನ್ನು ಹೇಳಿ ಹನುಮಂತನ ಮೇಲೆ ಯುದ್ಧಕ್ಕೆ ಕಳುಹಿಸಿದುದು. ಇಂದ್ರಜಿತ್ತು ಹನುಮಂತನನ್ನು ಬ್ರಹ್ಮಾಸ್ತ್ರದಿಂದ ಕಟ್ಟಿ, ರಾವಣನ ಬಳಿಗೆ ತಂದುದು. }

ಆಮೇಲೆ ಮಹಾಪ್ರಭಾವವುಳ್ಳ ರಾಕ್ಷಸೇಶ್ವರನಾದ ರಾವಣನು, ಹನುಮಂತನಿಂದ ಅಕ್ಷಕುಮಾರನು ಹತನಾದುದನ್ನು ಕೇಳಿ, ದುಃಖವಶನಾಗಿದ್ದರೂ, ತನ್ನ ಮನಸ್ಸನ್ನು ತಾನೇ ಸಮಾಧಾನಮಾಡಿಕೊಂಡು, ಕೊನೆಗೆ ಕೋಪದಿಂದ, ಇಂದ್ರನಿಗೆಣೆಯಾದ ಇಂದ್ರಜಿತ್ತೆಂಬ ತನ್ನ ಮಗನನ್ನು ನೋಡಿ, "ಎಲೆ ವತ್ಸನೆ! ನೀನು ಬ್ರಹ್ಮಾಸ್ತ್ರವನ್ನು ಬಲ್ಲವನು. ಶಸ್ತ್ರವಿದ್ಯೆಯನ್ನು ಬಲ್ಲವರಲ್ಲಿ ಮೇಲೆನಿಸಿಕೊಂಡ

ವನು! ದೇವಾಸುರರನ್ನೂ ಗೋಳಾಡಿಸಿದ ಮಹಾವೀರ್ಯವುಳ್ಳವನು. ಇಂದ್ರ ನೊಡಗೂಡಿ ಬಂದ ದೇವತೆಗಳಲ್ಲಿಯೂ ನೀನು ತೋರಿಸಿದ ಪರಾಕ್ರಮಕಾರ್ಯವು ಲೋಕಪ್ರಸಿದ್ಧವಾಗಿರುವುದು. ಬ್ರಹ್ಮಾನುಗ್ರಹದಿಂದ ನಿನಗೆ ಸಮಸ್ತದಿವ್ಯಾಸ್ತ್ರ ಗಳೂ ಸ್ವಾಧೀನವಾಗಿರುವುವು. ನಿನ್ನ ಅಸ್ತ್ರಬಲಕ್ಕೆ ದೇವತೆಗಳಾಗಲಿ, ದಾನವ ರಾಗಲಿ, ಯುದ್ಧದಲ್ಲಿ ಇದಿರಾಗಿ ನಿಲ್ಲಲಾರರು. ಸಮಸ್ತದೇವಾಸುರರೂ ಒಂದಾಗಿ ಸೇರಿ ದೇವೇಂದ್ರನೊಡಗೂಡಿ ಬಂದರೂ ನಿನಗಿದಿರಲ್ಲ. ಮೂರುಲೋಕಗಳಲ್ಲಿಯೂ ನಿನ್ನೊಡನೆ ಯುದ್ಧಮಾಡಿ ಸೋತು ಪಲಾಯನಮಾಡದವರೊಬ್ಬರಾದರೂ ಇಲ್ಲ. ಒಂದು ಕಡೆಯಲ್ಲಿ ನಿನ್ನ ಬಾಹುವೀರ್ಯವೂ, ಮತ್ತೊಂದು ಕಡೆ ಯಲ್ಲಿ ನಿನ್ನ ಮಹಾತಪಸ್ಸೂ ನಿನ್ನನ್ನು ಸುರಕ್ಷಿತವಾಗಿ ಕಾಪಾಡುತ್ತಿರು ವುವು. ಕಾಲದೇಶ ವಿಭಾಗಗಳನ್ನು ಬಲ್ಲ ಮಹಾಬುದ್ಧಿಶಾಲಿಯೆಂದರೆ ನಿನಗೇ ಸಲ್ಲುವುದು. ಯುದ್ಧಕಾಲಗಳಲ್ಲಿ ನಿನಗೆ ಸ್ವಪ್ರಯತ್ನದಿಂದ ಸಾಧ್ಯವಲ್ಲದು ದೊಂದೂ ಇಲ್ಲ. ವಿವೇಕದಿಂದ ನೀನು ಮಂತ್ರಾಲೋಚನೆಯನ್ನು ಮಾಡಿದಪಕ್ಷ ದಲ್ಲಿ ನಿನ್ನಬುದ್ಧಿಗೆ ಹೊಳೆಯದ ಕಾರ್ಯವೊಂದೂ ಇಲ್ಲ! ಮೂರುಲೋಕಗಳ ಲ್ಲಿಯೂ, ನಿನ್ನ ಅಸ್ತ್ರಬಲವನ್ನಾಗಲಿ, ನಿನ್ನ ತಪೋಬಲವನ್ನಾಗಲಿ ತಿಳಿಯದವ ನೊಬ್ಬನೂ ಇಲ್ಲ. ತಪೋಬಲದಲ್ಲಿಯಾಗಲಿ, ಪರಾಕ್ರಮದಲ್ಲಿಯಾಗಲಿ, ಅಸ್ತ್ರಬಲ ದಲ್ಲಿಯಾಗಲಿ, ನೀನು ನನಗೆಣೆಯೆನಿಸಿಕೊಂಡಿರುವೆ. ಯಾವ ಯುದ್ಧದಲ್ಲಿಯೂ ನಿನಗೆ ಜಯವೆಂಬುದೇ ನಿಶ್ಚಯವು. ಆದುದರಿಂದ ಯುದ್ಧಸಂಕಟವು ಬಂದೊದಗಿ ದಾಗ, ಜಯಶೀಲನಾದ ನಿನ್ನನ್ನು ಸ್ಮರಿಸಿಕೊಂಡಮಾತ್ರಕ್ಕೇ ನನ್ನ ಮನಸ್ಸಿಗೆ ವಿಷಾದವೆಂಬುದೇ ತೋರದು. ಇದುವರೆಗೆ ಆ ಕಪಿಯಿಂದ ನಮ್ಮ ಕಡೆಯ ಕಿಂಕರ ರೆಂಬ ರಾಕ್ಷಸಭಟರೆಲ್ಲರೂ ಹತರಾದರು. ಜಂಬುಮಾಲಿಯೆಂಬ ವೀರರಾಕ್ಷಸನೂ ಸಂಹೃತನಾದನು. ಏಳುಮಂದಿ ಮಂತ್ರಿಕುಮಾರರೂ ಹತರಾದರು. ವೀರರಾದ ಐದುಮಂದಿ ಸೇನಾಪತಿಗಳೂ ಹತರಾದರು. ರಥಗಜತುರಗಾದಿಗಳಿಂದ ಪೂರ್ಣ ವಾದ ಅನೇಕಸೈನ್ಯಗಳೂ ಹತವಾದುವು. ಇಷ್ಟೂ ಹಾಗಿರಲಿ! ನಿನಗೆ ಪ್ರಿಯ ಸಹೋದರನಾದ ಅಕ್ಷಕುಮಾರನೂ ಈಗಲೇ ಹತನಾದನು. ಆದರೇನು? ಎಲೈ ಶತ್ರುಸೂದನನೆ! ಪರಾಕ್ರಮದ ವಿಷಯದಲ್ಲಿ ನನಗೆ ನಿನ್ನಲ್ಲಿರುವ ನಂಬಿಕೆಯು ಬೇರೆಯವರಲ್ಲಿಲ್ಲ. ಅವರನ್ನು ನಾನು ನಂಬಿಯೂ ಇರಲಿಲ್ಲ. ಆದುದರಿಂದ ಈಗ ನೀನೇ ನಮಗೆ ಇಷ್ಟು ಮಹಾನರ್ಥಗಳನ್ನು ಮಾಡಿದ ಆ ಕಪಿಯ ದೇಹಬಲವನ್ನೂ ಬುದ್ಧಿಬಲವನ್ನೂ, ಮಹಿಮೆಯನ್ನೂ, ಪರಾಕ್ರಮವನ್ನೂ, ಚೆನ್ನಾಗಿ ವಿಮರ್ಶಿಸಿ, ನಿನ್ನ ಶಕ್ತಿಯನ್ನೂ ಚೆನ್ನಾಗಿ ಪರಿಶೀಲಿಸಿ ನೋಡಿಕೊಂಡು, ಆ ನಿನ್ನ ಶಕ್ತಿಗೆ

ತಕ್ಕಂತೆ ಆ ವಾನರನಲ್ಲಿ ಪ್ರವರ್ತಿಸಬೇಕು. ಎಲೆ ವತ್ಸನೆ! ಶಸ್ತ್ರಾಸ್ತ್ರಗಳನ್ನು ಬಲ್ಲವರಲ್ಲಿ ನೀನೇ ಮೇಲೆನಿಸಿಕೊಂಡಿರುವೆಯಾದುದರಿಂದ, ನೀನು ಇಲ್ಲಿಂದ ಆ ಕಪಿಯ ಬಳಿಗೆ ಹೋದಮೇಲೆ, ನಿನ್ನ ಮತ್ತು ನಿನ್ನ ಶತ್ರುವಿನ ಬಲವನ್ನು ನೋಡಿಕೊಂಡು, ನಮ್ಮ ಸೇನೆಗೆ ಯಾವ ಅಪಾಯವೂ ಇಲ್ಲದಂತೆ ಆ ಕಪಿಯನ್ನು ಹಿಡಿದುತರುವುದಕ್ಕೆ ತಕ್ಕಪ್ರಯತ್ನವನ್ನು ಮಾಡಬೇಕು! 1 ಎಲೈ ವೀರನೆ! ಆ ಹನುಮಂತನ ವಿಷಯದಲ್ಲಿ ನಮ್ಮ ಸೈನ್ಯಗಳೊಂದೂ ಕೆಲಸಕ್ಕೆ ಬಾರವು. ಅವನ ಪ್ರಹಾರಕ್ಕೆ ನಮ್ಮ ಸೈನ್ಯಗಳೆಲ್ಲವೂ ಗುಂಪುಗುಂಪಾಗಿ ಸತ್ತು ಬೀಳುವುವು. ಆ ಹನುಮಂತನ ವಿಷಯದಲ್ಲಿ ವಜ್ರಾಯುಧವೂ ನಿಸ್ಸಾರವಾದುದರಿಂದ ಅದನ್ನು ಹಿಡಿದು ಹೋದರೂ ಫಲಕಾರಿಯಾಗದು. ಅವನ ಗಮನವೇಗವು ವಾಯುವಿಗೂ ಇಲ್ಲ! ಅಗ್ನಿಗೆಣೆಯಾದ ಆತನನ್ನು ಬೇರೆ ಮುಷ್ಟ್ಯಾದಿ ಸಾಧನಗಳಿಂದಲೂ ಕೊಲ್ಲುವುದು ಸಾಧ್ಯವಲ್ಲ! ನಾನು ಇದುವರೆಗೆ ಹೇಳಿದ ವಿಷಯಗಳೆಲ್ಲವನ್ನೂ ಚೆನ್ನಾಗಿ ವಿಮರ್ಶಿಸಿ, ನಿನ್ನ ಕಾರ್ಯಸಿದ್ಧಿಗೆ ತಕ್ಕ ಎಚ್ಚರಿಕೆಯಿಂದ ಕೂಡಿ, ನಿನ್ನ ಬಿಲ್ಲಿಗೆ ಯೋಗ್ಯವಾದ ದಿವ್ಯಾಸ್ತ್ರಗಳ ಬಲವನ್ನೂ ಮರೆಯದೆ ಮನಸ್ಸಿನಲ್ಲಿಟ್ಟುಕೊಂಡು ಎಚ್ಚರಿಕೆಯಿಂದ ಹೊರಡು! ಅಸ್ತ್ರಬಲದಿಂದ ಹೊರತು ಬೇರೆ ಉಪಾಯದಿಂದ ಅವನನ್ನು ನಿಗ್ರಹಿಸುವುದೇ ಸಾಧ್ಯವಲ್ಲ! ಮುಖ್ಯವಾಗಿ ನೀನು ಹೋದ ಕಾರ್ಯವು ಕೆಡದಂತೆ ಪ್ರಯತ್ನಿಸು! ಆದರೆ, ಎಲೆ ವತ್ಸನೆ! ನಿನ್ನಲ್ಲಿ ನನಗಿರುವ ಅಸಾಧಾರಣ ಪ್ರೀತಿಯನ್ನು ನೋಡಿದರೆ, ಇಂತಹ ಅಪಾಯಕರವಾದ ಯುದ್ಧಕ್ಕೆ ನಾನು ನಿನ್ನನ್ನು ಕಳುಹಿಸುವುದೇ ಅಷ್ಟಾಗಿ ಯುಕ್ತವಲ್ಲ! ಆದರೆ ರಾಜನೀತಿಯನ್ನೂ

---

1. ಇಲ್ಲಿ "ನವೀರಸೇನಾಗಣಶೋಚ್ಯವಂತಿ ನವಜ್ರಮಾದಾಯ ವಿಶಾಲಸಾರಂ" ಎಂದು ಮೂಲವು. ಇದರಲ್ಲಿ (ಗಣಶೋಚಿ) ಸೈನ್ಯಗಳನ್ನು ಗುಂಪುಗುಂಪಾಗಿ ಕೊಲ್ಲತಕ್ಕ ಆ ಹನುಮಂತನಲ್ಲಿ (ಸೇನಾಃ) ನಿನ್ನ ಸೇನೆಗಳು (ನಚ್ಯವಂತಿ) ನಿನ್ನನ್ನು ರಕ್ಷಿಸಲಾರವು. (ಅಲಸಾರಂ) ಅಲ್ಪಸಾರವುಳ್ಳ (ವಜ್ರಮಾದಾಯ) ವಜ್ರವೆಂಬ ಆಯುಧವನ್ನು ಹಿಡಿದಾದರೂ (ನವಿಶ) ನೀನು ಯುದ್ಧಕ್ಕೆ ಪ್ರವೇಶಿಸಬೇಡ" ಎಂದು ಗೋವಿಂದರಾಜ ವ್ಯಾಖ್ಯಾನವು. ಮತ್ತು (ವೀರ) ಎಲೈ ವೀರನೆ! "(ಸೇನಾಃ) ನಿನ್ನ ಸೇನೆಗಳೂ (ನ) ಪ್ರಯೋಜನಕಾರಿಗಳಲ್ಲ. (ಗಣಶಃ) ಗುಂಪುಗುಂಪಾಗಿ (ಚ್ಯವಂತಿ) ಸತ್ತು ಮಲಗುವುವು. (ವಿಶಾಲಸಾರಂ) ವಿಶೇಷ ಸಾರವುಳ್ಳ (ವಜ್ರಮಾದಾಯಾಪಿ) ವಜ್ರವನ್ನು ಹಿಡಿದು ಹೋದರೂ(ನ)ಫಲವಿಲ್ಲ" ಇತ್ಯಾದಿ ವ್ಯಾಖ್ಯಾನಾಂತರಗಳೂ ಉಂಟು.

Funding: IKS/Tattva Heritage. Digitization: Sarayu Trust/eGangotri



ಕ್ಷತ್ರಿಯಧರ್ಮವನ್ನೂ ವಿಚಾರಿಸುವಾಗ [1] ಇದು ನ್ಯಾಯವಾಗಿಯೇ ಇರುವುದರಿಂದ ಈಗ ನಾನು ನಿನ್ನನ್ನು ಕಳುಹಿಸುತ್ತಿರುವೆನು. ಮುಖ್ಯವಾಗಿ ನೀನು ಆ ಯುದ್ಧದಲ್ಲಿ ವಿವಿಧಾಸ್ತ್ರಪ್ರಯೋಗಗಳಲ್ಲಿ ನಿನಗಿರುವ ಸಾಮರ್ಥ್ಯವನ್ನು ಮಾತ್ರ ಅವಶ್ಯವಾಗಿ ಸ್ಮರಣೆಯಲ್ಲಿಟ್ಟಿರಬೇಕು! ಮುಖ್ಯವಾಗಿ ಜಯದಲ್ಲಿಯೇ ಪೂರ್ಣದೃಷ್ಟಿಯನ್ನಿಟ್ಟಿರಬೇಕು!'' ಎಂದನು. [2] ದಕ್ಷಪುತ್ರರಾದ ದೇವತೆಗಳಂತೆ ಮಹಾಪ್ರಭಾವವುಳ್ಳ ವೀರನಾದ ಇಂದ್ರಜಿತ್ತು, ತಂದೆಯು ಹೇಳಿದ ಈ ಮಾತುಗಳನ್ನು ಕೇಳಿ, ಆಗಲೇ ಯುದ್ಧಪ್ರಯಾಣಕ್ಕೆ ನಿಶ್ಚಯಿಸಿಕೊಂಡು, ತಂದೆಗೆ ಪ್ರದಕ್ಷಿಣವನ್ನು ಮಾಡಿದನು. ಮತ್ತು ತನ್ನ ಇಷ್ಟಮಿತ್ರಪರಿವಾರಗಳಿಂದ ಸ್ತುತಿಸಲ್ಪಡುತ್ತ ಮಹೋತ್ಸಾಹವುಳ್ಳವನಾಗಿ ಯುದ್ಧಕ್ಕೆ ಹೊರಟನು. ತಾವರೆಯೆಸಳಿನಂತೆ ಕಣ್ಣುಳ್ಳ ಮಹಾತೇಜಸ್ವಿಯಾದ ಆ ರಾಕ್ಷಸರಾಜಕುಮಾರನು ಪರ್ವಕಾಲದ ಸಮುದ್ರದಂತೆ ಉತ್ಸಾಹದಿಂದುಕ್ಕುತ್ತ, ಗರುಡನಂತೆ ಮಹಾವೇಗವುಳ್ಳವುಗಳಾಗಿ, ತೀಕ್ಷ್ಣಗಳಾದ ಬಿಳೀಕೋರೆದಾಡೆಗಳುಳ್ಳ ನಾಲ್ಕು ಸಿಂಹಗಳನ್ನು ಕಟ್ಟಿದ, ನಿರಂಕುಶವೇಗವುಳ್ಳ (ನೆಲವನ್ನು ಮುಟ್ಟದೆ ಹೋಗುವ) ಒಂದು ದೊಡ್ಡರಥವನ್ನೇರಿದನು. ಆ ಇಂದ್ರಜಿತ್ತಾದರೋ ಮಹಾರಥಿಕನು. ಧನುರ್ಧಾರಿಗಳಲ್ಲಿ ಮೇಲೆನಿಸಿಕೊಂಡವನು. ಸಮಸ್ತಶಸ್ತ್ರಗಳನ್ನೂ ಬಲ್ಲವನು. ಅಸ್ತ್ರಜ್ಞರಲ್ಲಿ ಶ್ರೇಷ್ಠನು. ಇಂತಹ ರಾಕ್ಷಸರಾಜಕುಮಾರನು ರಥವನ್ನೇರಿ ವೇಗದಿಂದ ಹನುಮಂತನ ಕಡೆಗೆ ಬರುತ್ತಿರುವಾಗಲೇ, ಇವನ ರಥಧ್ವನಿಯನ್ನೂ, ಧನುಷ್ಟಂಕಾರಧ್ವನಿಯನ್ನೂ ಕೇಳಿ ಆ ಹನುಮಂತನು ತಿರುಗಿ ತನಗೆ ಯುದ್ಧವೊದಗಿತೆಂಬ ಉತ್ಸಾಹದಿಂದ ಸಂತೋಷಿಸಿ, ಉಬ್ಬುತ್ತಿದ್ದನು. ಇತ್ತಲಾಗಿ ರಣಪಂಡಿತನಾದ ಇಂದ್ರಜಿತ್ತು ದೊಡ್ಡಬಿಲ್ಲನ್ನೂ, ಹರಿತವಾದ ಅಲಗುಗಳುಳ್ಳ ಬಾಣಗಳನ್ನೂ ಹಿಡಿದು ಹನುಮಂತನಿಗಿದಿರಾಗಿ ಬಂದನು. ಹೀಗೆ ಇವನು ಬಾಣಗಳನ್ನು ಹಿಡಿದು ಸಿದ್ಧವಾಗಿ ಮಹೋತ್ಸಾಹದಿಂದ ಯುದ್ಧಕ್ಕೆ ಬರುವಾಗಲೇ ದಿಕ್ಕುಗಳೆಲ್ಲವೂ ಮಲಿನವಾದುವು. ಕ್ರೂರಮೃಗಗಳು ಅಪಸ್ವರದಿಂದ ಸುತ್ತಲೂ ಅರಚುತ್ತಿದ್ದುವು. ಈ ಯುದ್ಧವನ್ನು ನೋಡುವುದಕ್ಕಾಗಿ,

---

1. ಇಲ್ಲಿ ತನಗೆ ಬೇರೆ ಸಹಾಯಕರಿರುವಾಗ, ಪ್ರಧಾನನಾದವನು ತಾನೇ ಮೊದಲು ಯುದ್ಧಕ್ಕೆ ಹೋಗುವುದು ನೀತಿಶಾಸ್ತ್ರವಿರುದ್ಧವಾದುದರಿಂದ ನಾನು ಹೋಗದೆ ನಿನ್ನನ್ನು ಕಳುಹಿಸುವುದು ನ್ಯಾಯವೆಂದು ರಾವಣನು ಇಂದ್ರಜಿತ್ತಿಗೆ ಹೇಳಿದುದಾಗಿ ಭಾವವು.

2. ವಿಷ್ಣುಪುರಾಣದಲ್ಲಿ "ಮನಸಾತ್ವೇವ ಭೂತಾನಿಪೂರ್ವಂ ದಕ್ಷೋಽಸೃಜತ್ತಥಾ। ದೇವಾನೃಷೀನ್ ಸಗಂಧರ್ವಾನುರಗಾನ್ ಪಕ್ಷಿಣಸ್ತಥಾ ಎಂದು ಹೇಳಿರುವುದರಿಂದ ಇಲ್ಲಿದೇವತೆಗಳಿಗೆ ದಕ್ಷಸುತತ್ವವ್ಯವಹಾರವು.

ನಾಗರೂ, ಯಕ್ಷರೂ, ಗಂಧರ್ವರೂ, ಮಹರ್ಷಿಗಳೂ, ಯೂಥಚಾರಿಗಳಾದ ಸಿದ್ಧರೂ, ಅಲ್ಲಿಗೆ ಬಂದು ನೆರೆದರು. ಆಕಾಶದಲ್ಲಿ ಪಕ್ಷಿಗಳು ಹಿಂಡುಹಿಂಡಾಗಿ ಸೇರಿ ಹರುಷದಿಂದ ಗಟ್ಟಿಯಾಗಿ ಕೂಗುತ್ತಿದ್ದುವು. ಇಷ್ಟರಲ್ಲಿ ಅತ್ತಲಾಗಿ ಹನುಮಂತನು ತನಗಿದಿರಾಗಿ ರಥದಲ್ಲಿ ಕುಳಿತು ವೇಗದಿಂದ ಬರುತ್ತಿದ್ದ ಇಂದ್ರಜಿತ್ತನ್ನು ನೋಡಿ, ಆಗಲೇ ಒಂದುದೊಡ್ಡ ಸಿಂಹನಾದವನ್ನು ಮಾಡಿ ತನ್ನ ಮೈಯನ್ನು ಬಳೆಸುವುದಕ್ಕೆ ತೊಡಗಿದನು. ಇತ್ತಲಾಗಿ ಇಂದ್ರಜಿತ್ತೂ, ದಿವ್ಯರಥವನ್ನೇರಿ ಕೈಯಲ್ಲಿ ವಿಚಿತ್ರವಾದ ಬಿಲ್ಲನ್ನು ಹಿಡಿದು ಸಿಡಿಲು ಹೊಡೆದಂತೆ ಅದನ್ನು ಮಿಡಿದು ಧ್ವನಿಮಾಡುತ್ತಾ ಮುಂದೆ ಬಂದನು. ಅವರಿಬ್ಬರೂ ಒಂದಾಗಿ ಕಲೆತರು! ಇಬ್ಬರೂ ಪ್ರಚಂಡವೇಗವುಳ್ಳವರು! ಇಬ್ಬರೂ ಮಹಾಬಲಾಢ್ಯರು. ಇಬ್ಬರೂ ಯಾವ ಯುದ್ಧಗಳಲ್ಲಿಯೂ ಹಿಂಜರಿಯದವರು! ಹೀಗೆ ಸಮಾನ ಬಲವುಳ್ಳ ಆ ಕಪಿರಾಕ್ಷಸರಿಬ್ಬರೂ ಸಂಧಿಸಿ, ಬದ್ಧವೈರವುಳ್ಳ ದೇವೇಂದ್ರನೂ, ದಾನವೇಂದ್ರನೂ ಯುದ್ಧಕ್ಕಿದಿರಾಗಿ ನಿಂತಂತೆ ಇದಿರಿಸಿ ನಿಂತರು. ಇಷ್ಟರಲ್ಲಿ ವೀರನಾಗಿಯೂ ಮಹಾರಥನಾಗಿಯೂ, ಧನುರ್ಧಾರಿಗಳಲ್ಲಿ ಶ್ರೇಷ್ಠನಾಗಿಯೂ, ಯುದ್ಧದಲ್ಲಿ ಬಹಳ ಖ್ಯಾತಿಹೊಂದಿದವನಾಗಿಯೂ ಇರುವ ಇಂದ್ರಜಿತ್ತು, ತನ್ನ ಬಾಣಗಳನ್ನು ಪ್ರಯೋಗಿಸಲು, ಹನುಮಂತನು ತನ್ನ ಮೈಯನ್ನು ಬಹಳವಾಗಿ ಬಳೆಸಿ, ಆಕಾಶದಲ್ಲಿ ಚಿತ್ರಗತಿಯಿಂದ ತಿರುಗುತ್ತ, ಅವೆಲ್ಲವನ್ನೂ ತಪ್ಪಿಸಿಕೊಂಡನು. ಇದನ್ನು ನೋಡಿ ವೀರನಾದ ಇಂದ್ರಜಿತ್ತು ತೀಕ್ಷ್ಣವಾದ ಅಲಗುಗಳಿಂದಲೂ, ಉತ್ತಮವಾದ ಗರಿಗಳಿಂದಲೂ, ಚಿನ್ನದ ಹಿಡಿಗಳಿಂದಲೂ, ಬಗ್ಗಿದ ಮೊನೆಗಳಿಂದಲೂ ಕೂಡಿದ ವಜ್ರಸಮಾನವೇಗವುಳ್ಳ ಬೇರೆಕೆಲವು ಬಾಣಗಳನ್ನು ತೆಗೆದು ಹನುಮಂತನ ಮೇಲೆ ಪ್ರಯೋಗಿಸಿದನು. ಆ ಹನುಮಂತನು ಇಂದ್ರಜಿತ್ತಿನ ರಥಧ್ವನಿಯನ್ನೂ ಅವನ ಸೇನೆಯಲ್ಲಿ ಬಾರಿಸಲ್ಪಡುವ ಮದ್ದಲೆ, ಭೇರಿ, ತಮಟೆ ಮೊದಲಾದ ರಣವಾದ್ಯಧ್ವನಿಗಳನ್ನೂ, ಅವನ ಧನುಷ್ಟಂಕಾರವನ್ನೂ ಕೇಳಿ ತಿರುಗಿ ಆಕಾಶಕ್ಕೆ ಹಾರಿದನು. ಇಂದ್ರಜಿತ್ತು ಗುರಿಹಿಡಿದು ಹೊಡೆಯುವುದರಲ್ಲಿ ಬಹಳ ನಿಪುಣನಾಗಿದ್ದರೂ, ಅವನು ಬಿಟ್ಟಬಾಣಗಳ ನಡುನಡುವೆ ಹನುಮಂತನು ಆಕಾಶದಲ್ಲಿ ತನ್ನ ಗತಿಚಾತುರ್ಯದಿಂದ ಸುತ್ತಿಬರುತ್ತ ಅವೆಲ್ಲವನ್ನೂ ವ್ಯರ್ಥವಾಗಿ ಮಾಡಿದನು. ಕೆಲವು ಬಾಣಗಳಿಗೆ ತಾನು ಇದಿರಾಗಿಯೇ ನಿಂತು, ತನ್ನ ಕೈಗಳಿಂದಲೇ ಅವುಗಳನ್ನು ತಡೆದು ಆಕಾಶಕ್ಕೆ ಹಾರುತಿದ್ದನು. ಹೀಗೆ ವೇಗಸಂಪನ್ನರಾಗಿಯೂ, ಯುದ್ಧ ಕಾರ್ಯದಲ್ಲಿ ನಿಪುಣರಾಗಿಯೂ ಇದ್ದ ಆ ಕಪಿರಾಕ್ಷಸರಿಬ್ಬರೂ ಸಮಸ್ತಭೂತಗಳ ಮನಸ್ಸನ್ನೂ, ಆಕರ್ಷಿಸುವಂತೆ ಅದ್ಭುತಯುದ್ಧವನ್ನು ಮಾಡಿದರು. ಅವರಿಬ್ಬರೂ

ಮಹಾಪ್ರಭಾವವುಳ್ಳವರಾಗಿದ್ದರೂ, ಹನುಮಂತನನ್ನು ನಿಗ್ರಹಿಸುವುದಕ್ಕೆ ತಕ್ಕ ಅವಕಾಶವೇನೆಂದು ಇಂದ್ರಜಿತ್ತಿಗೆ ತೋರಲಿಲ್ಲ. ಇಂದ್ರಜಿತ್ತನ್ನು ನಿಗ್ರಹಿಸುವುದಕ್ಕೆ ಹನುಮಂತನಿಗೂ ಅವಕಾಶವು ಸಿಕ್ಕಲಿಲ್ಲ. ದೇವಕುಮಾರರಂತೆ ಮಹಾಪರಾಕ್ರಮವುಳ್ಳ ಅವರಿಬ್ಬರೂ ಹೀಗೆ ಹೋರಾಡುತ್ತಿರುವಾಗ, ಒಬ್ಬರ ವೇಗವನ್ನೊಬ್ಬರು ತಡೆದುಕೊಳ್ಳುವುದೇ ಕಷ್ಟವಾಯಿತು. ಇಂದ್ರಜಿತ್ತಾದರೋ ಗುರಿನೋಡಿ ಬಾಣಸಂಧಾನಮಾಡಿ ಹೊಡೆಯುವುದರಲ್ಲಿ ಬಹಳ ಎಚ್ಚರವುಳ್ಳವನು. ಅವನ ಬಾಣಗಳು ಎಲ್ಲಿಯೂ ವ್ಯರ್ಥವಾಗತಕ್ಕವುಗಳಲ್ಲ, ಹೀಗಿದ್ದರೂ ತನ್ನ ಪ್ರಯತ್ನಗಳೂ, ತನ್ನ ಬಾಣಗಳೂ, ಹನುಮಂತನಲ್ಲಿ ವಿಫಲಗಳಾಗಿ ಹೋದುದನ್ನು ನೋಡಿ ಮನಸ್ಸಿನಲ್ಲಿ ಅವನಿಗೆ ಮಹತ್ತಾದ ಚಿಂತೆಯುಂಟಾಯಿತು. ಕೊನೆಗೆ ರಾಕ್ಷಸರಾಜಕುಮಾರನಾದ ಆ ಇಂದ್ರಜಿತ್ತಿಗೆ ಹನುಮಂತನನ್ನು ಕೊಲ್ಲುವುದು ಯಾವವಿಧದಿಂದಲೂ ಅಸಾಧ್ಯವೆಂದೇ ತೋರಿತು. ಆ ಕಪಿಯನ್ನು ಹಿಡಿದು ಕಟ್ಟಿತರುವುದಕ್ಕಾದರೂ ಉಪಾಯವೇನೆಂಬ ಚಿಂತೆಯು ಹುಟ್ಟಿತು. ಕೊನೆಗೆ ಅಸ್ತ್ರವಿದರಲ್ಲಿ ಮೇಲೆನಿಸಿಕೊಂಡು ಮಹಾತೇಜಸ್ವಿಯಾದ ಆತನ ಮನಸ್ಸಿಗೆ ಒಂದುಪಾಯವು ತೋರಿತು. ಬ್ರಹ್ಮದೇವತಾತ್ಮಕವಾದ ಒಂದು ಉತ್ತಮಾಸ್ತ್ರವನ್ನು ಹನುಮಂತನಮೇಲೆ ಪ್ರಯೋಗಿಸುವುದಕ್ಕಾಗಿ ಬಿಲ್ಲಿನಲ್ಲಿ ಸಂಧಾನಮಾಡಿದನು. ಸಮಸ್ತಶಸ್ತ್ರಾಸ್ತ್ರಗಳ ಸಾರವನ್ನೂ ಚೆನ್ನಾಗಿ ಬಲ್ಲ ಆ ಇಂದ್ರಜಿತ್ತು, ಹನುಮಂತನು ಬೇರೆ ಯಾವ ಬಾಣಗಳಿಗೂ ಅವಧ್ಯನೆಂಬುದನ್ನು ತಿಳಿದು, ಆ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿ, ಅದರಿಂದ ಆ ವಾಯುಪುತ್ರನ ವೇಗವನ್ನಡಗಿಸಿ ಅವನನ್ನು ಕಟ್ಟಿಬಿಟ್ಟನು. ರಾಕ್ಷಸನು ಬಿಟ್ಟ ಈ ಬ್ರಹ್ಮಾಸ್ತ್ರದಲ್ಲಿ ಹನುಮಂತನು ಕಟ್ಟುಬಿದ್ದು ನಿಶ್ಚೇಷ್ಟನಾಗಿ ನೆಲದಮೇಲೆ ಬಿದ್ದನು. ಆಗ ಆ ಹನುಮಂತನು ತಾನು ಬ್ರಹ್ಮಾಸ್ತ್ರದಲ್ಲಿ ಕಟ್ಟುಬಿದ್ದಿರುವುದನ್ನು ತಿಳಿದು, ಆ ಬ್ರಹ್ಮನ ಪ್ರಭಾವದಿಂದ ಶಕ್ತಿಗುಂದಿದವನಾಗಿ, ಪೂರ್ವದಲ್ಲಿ ತನಗೆ ಬ್ರಹ್ಮನು ಅನುಗ್ರಹಿಸಿ ಕೊಟ್ಟಿರುವ ವರವನ್ನೂ ನೆನಪಿಗೆ ತಂದುಕೊಂಡನು. ಹೀಗೆ ಇಂದ್ರಜಿತ್ತು ಸ್ವಾಯಂಭುವಮಂತ್ರಗಳಿಂದಭಿಮಂತ್ರಿಸಿ ಈ ಬ್ರಹ್ಮಾಸ್ತ್ರವನ್ನು ತನ್ನಮೇಲೆ ಬಿಟ್ಟಿರುವನೆಂಬುದನ್ನು ಹನುಮಂತನು ತಿಳಿದು, ತನಗೆ ಬ್ರಹ್ಮನು ಕೊಟ್ಟಿದ್ದ ವರವನ್ನೂ ಜ್ಞಾಪಿಸಿಕೊಂಡು, ತನ್ನಲ್ಲಿ ತಾನು “ಲೋಕಗುರುವಾದ ಆ ಬ್ರಹ್ಮದೇವನ ಪ್ರಭಾವದಿಂದಿರುವ ಈ ಬ್ರಹ್ಮಾಸ್ತ್ರದ ಕಟ್ಟನ್ನು ಬಿಡಿಸಿಕೊಳ್ಳುವುದಕ್ಕೆ ಈಗ ನನ್ನಿಂದ ಸಾಧ್ಯವಲ್ಲ! ಇದನ್ನು ತಿಳಿದೇ ಈ ರಾಕ್ಷಸನೂ ನನ್ನನ್ನು ಈಗ ಬ್ರಹ್ಮಾಸ್ತ್ರದಿಂದ ಕಟ್ಟಿರಬೇಕು! ಹೇಗಾದರೂ ಆಗಲಿ! ಈ ಅಸ್ತ್ರವು ಮಹಾತ್ಮನಾದ ಬ್ರಹ್ಮನಿಗೆ ಸಂಬಂಧಪಟ್ಟಿರು

ವುದರಿಂದ, ಸ್ವಲ್ಪ ಕಾಲದವರೆಗೆ ಇದನ್ನನುವರ್ತಿಸಿ ನಡೆಯಬೇಕಾದುದೇ ನನಗೂ ಉಚಿತವು'' ಎಂದು ನಿಶ್ಚಯಿಸಿಕೊಂಡನು. ಹೀಗೆ ಹನುಮಂತನು ಬ್ರಹ್ಮಾಸ್ತ್ರದ ವೀರ್ಯವನ್ನೂ, ಆ ಬ್ರಹ್ಮಾಸ್ತ್ರವು ಒಂದು ಮುಹೂರ್ತಕಾಲದಮೇಲೆ ಬಿಟ್ಟು ಹೋಗುವಂತೆ ಬ್ರಹ್ಮನು ತನಗೆ ವರದಾನಮಾಡಿರುವುದನ್ನೂ ಮನಸ್ಸಿನಲ್ಲಿ ಚಿಂತಿಸಿ, ಆ ಬ್ರಹ್ಮದೇವನ ಆಜ್ಞೆಯನ್ನನುಸರಿಸಿ ಅದಕ್ಕೆ ಬದ್ಧನಾಗಿಯೇ ಇದ್ದು ತಿರುಗಿ ತನ್ನಲ್ಲಿ ತಾನು "ನಾನು ಹುಟ್ಟಿದೊಡನೆ ಸೂರ್ಯಬಿಂಬವನ್ನು ಕಬಳಿಸುವುದಕ್ಕಾಗಿ ಆಕಾಶಕ್ಕೆ ಹಾರಿದಂದಿನಿಂದ, ಬ್ರಹ್ಮದೇವನೂ, ದೇವೇಂದ್ರನೂ, ವಾಯುದೇವನೂ, ನನಗೆ ವರದಾನವನ್ನು ಮಾಡಿ ರಕ್ಷಿಸುತ್ತಿರುವುದರಿಂದ ಈಗ ನಾನು ಈ ಅಸ್ತ್ರಕ್ಕೆ ಕಟ್ಟುಬಿದ್ದಿದ್ದರೂ ನನಗೆ ಯಾವಭಯವೂ ಇಲ್ಲ. ಒಂದುವೇಳೆ ಈ ರಾಕ್ಷಸರು ನನ್ನನ್ನು ಹಿಡಿದುಕೊಂಡು ಹೋದರೂ ಅದರಿಂದ ಗುಣವೇ ಉಂಟು. ನಾನು ಮೊದಲೇ ರಾವಣನನ್ನು ಮಾತಾಡಿಸಿ ಬರಬೇಕೆಂದಿರುವೆನು. ಈ ರಾಕ್ಷಸರೇ ನನ್ನನ್ನು ಅಲ್ಲಿಗೆ ಸಾಗಿಸಿದರೆ, ನನ್ನ ಈ ಉದ್ದೇಶವು ಸುಲಭವಾಗಿಯೇ ಕೈಗೂಡುವುದು.'' ಎಂದು ಮನಸ್ಸಿನಲ್ಲಿ ತನ್ನ ಕಾರ್ಯವನ್ನು ನಿಶ್ಚಯಿಸಿಬಿಟ್ಟನು. ಶತ್ರುಸಂಹಾರಕನಾಗಿಯೂ ದೂರದರ್ಶಿಯಾಗಿಯೂ ಇರುವ ಆ ಹನುಮಂತನು, ಹೀಗೆಂದು ನಿಶ್ಚಯಿಸಿ, ಕೈಕಾಲುಗಳುಡುಗಿದವನಂತೆ ನಿಶ್ಚೇಷ್ಟನಾಗಿರಲು, ವೈರಿಗಳಾದ ರಾಕ್ಷಸರೆಲ್ಲರೂ, ಸಂತೋಷದಿಂದ ಅವನ ಸುತ್ತಲೂ ಮುತ್ತಿ, ತರುತರನುಗೆ ತೋರಿದ ಮಾತುಗಳಿಂದ ಅವನನ್ನು ಮೂದಲಿಸಿ ಬಲಾತ್ಕರಿಸಿ ಬೆದರಿಸುತ್ತಿದ್ದರು. ಆ ಹನುಮಂತನೂ ಅವರ ಬೆದರಿಕೆಯ ಮಾತುಗಳನ್ನು ಕೇಳಿ ಆಗಾಗ ಗಟ್ಟಿಯಾಗಿ ಕೂಗಿಡುತಿದ್ದನು. ಹೀಗೆ ಹನುಮಂತನು ನಿಶ್ಚೇಷ್ಟನಾಗಿರುವುದನ್ನು ನೋಡಿ, ರಾಕ್ಷಸಭಟರು ಮೇಲೆಮೇಲೆ ಹರ್ಷದಿಂದುಬ್ಬುತ್ತ, ಸಣಬುಗಳನ್ನೂ, ಮರದ ನಾರುಗಳನ್ನೂ ಸೇರಿಸಿ ಹೊಸೆದು ಹುರಿಮಾಡಿ, ಆ ಹಗ್ಗದಿಂದಲೂ ಆ ಕಪಿಯನ್ನು ಕಟ್ಟಿಹಾಕಿದರು. ಆಗ ಹನುಮಂತನಾದರೋ ತನ್ನಲ್ಲಿ ತಾನು "ಭಲೆ! ಈ ನೆವದಿಂದಲಾದರೂ ರಾವಣನು ನನ್ನನ್ನು ಆಸೆಯಿಂದ ಕರೆಸಿ ನೋಡುವಂತಾಗುವುದು!'' ಎಂದು ಮನಸ್ಸಿನಲ್ಲಿ ಹಿಗ್ಗುತ್ತ, ಆ ರಾಕ್ಷಸರು ತನ್ನನ್ನು ಹಗ್ಗದಿಂದ ಬಿಗಿಯುತ್ತಿದ್ದರೂ, ಅವರು ನಾನಾವಿಧದಿಂದ ಮೂದಲಿಸುತ್ತಿದ್ದರೂ, ಸಹಿಸಿಕೊಂಡು ಸುಮ್ಮನಿದ್ದನು. ಆದರೆ ರಾಕ್ಷಸರು ಸಣಬಿನಿಂದ ಆತನನ್ನು ಬಿಗಿದೊಡನೆಯೇ ಬ್ರಹ್ಮಾಸ್ತ್ರದ ಕಟ್ಟು ಬಿಟ್ಟುಹೋಯಿತು. ಬೇರೆವಿಧವಾದ ಕಟ್ಟನ್ನು ಬ್ರಹ್ಮಾಸ್ತ್ರವು ಎಂದಿಗೂ ಸಹಿಸಲಾರದು. ಹೀಗೆ ರಾಕ್ಷಸಭಟರು ಹನುಮಂತ

ನನ್ನು ಸಣಬಿನಿಂದ ಕಟ್ಟಿದುದನ್ನು ಕೇಳಿನೊಡನೆ ಇಂದ್ರಜಿತ್ತಿಗೆ ಮಹತ್ತಾದ ಚಿಂತೆಯು ಹುಟ್ಟಿತು. ಇದರಿಂದ ಇಂದ್ರಜಿತ್ತು ಚಿಂತಾಕ್ರಾಂತನಾಗಿ "ಅಯ್ಯೋ! ನಾನು ಮಹಾಪ್ರಯತ್ನದಿಂದ ನಡೆಸಿದ ಕಾರ್ಯವೂ ನಿರರ್ಥಕವಾಯಿತಲ್ಲಾ! ಮೂರ್ಖರಾದ ಈ ರಾಕ್ಷಸರು ಬ್ರಹ್ಮಾಸ್ತ್ರಮಂತ್ರದ ಪದ್ಧತಿಯನ್ನು ತಿಳಿಯದೆ ಪ್ರಕೃತ ಕಾರ್ಯವನ್ನೇ ಕೆಡಿಸಿದರು. ಇದಲ್ಲದೆ ಈ ಬ್ರಹ್ಮಾಸ್ತ್ರವು ಪ್ರತಿಹತವಾದ ಮೇಲೆ ಬೇರೆ ಯಾವ ಅಸ್ತ್ರವೂ ಫಲಿಸಲಾರದು. ತಿರುಗಿ ಆ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದರೂ ಕೆಲಸಕ್ಕೆ ಬಾರದು! ಇನ್ನು ನಮ್ಮೆಲ್ಲರಿಗೂ ಪ್ರಾಣಸಂಶಯವೇ ಬಂದೊದಗಿರುವುದು." ಎಂದು ಕೊರಗುತ್ತಿದ್ದನು. ಆದರೆ ಇತ್ತಲಾಗಿ ಹನುಮಂತನಿಗೆ ಮಾತ್ರ ತನಗೆ ಬ್ರಹ್ಮಾಸ್ತ್ರ ವಿಮೋಚನವಾದುದೇ ತಿಳಿಯಲಿಲ್ಲ. ಆ ರಾಕ್ಷಸರೆಲ್ಲರೂ ಅವನನ್ನು ಹಿಂಗಟ್ಟುಗಟ್ಟಿ, ದೊಣ್ಣೆಗಳಿಂದಲೂ, ಮುಷ್ಟಿಗಳಿಂದಲೂ ಅತನನ್ನು ಬಡಿಯುತ್ತ, ರಾವಣನ ಸಮೀಪಕ್ಕೆ ಎಳೆದುಕೊಂಡು ಹೋದರು. ಆ ಮೇಲೆ ಇಂದ್ರಜಿತ್ತು, ಬ್ರಹ್ಮಾಸ್ತ್ರದಿಂದ ಮುಕ್ತನಾಗಿ ಸಣಬಿನಿಂದ ಬಿಗಿಯಲ್ಪಟ್ಟ ಆ ಹನುಮಂತನನ್ನು ರಾವಣನ ಸಭಾಸ್ಥಾನದಲ್ಲಿ ನಿಲ್ಲಿಸಿ, ರಾವಣನಿಗೂ, ಅವನ ಸಭಾಸದರಿಗೂ, "ಇದೋ! ಈತನೇ ಆ ವಾನರನು" ಎಂದು ತೋರಿಸಿದನು. ಆಗ ಇತರ ರಾಕ್ಷಸರೂ, ಅಲ್ಲಿ ಹೊರಜೆಗಳಿಂದ ಬಿಗಿದು ತಂದ ಮದದಾನೆಯಂತಿರುವ ಆ ಹನುಮಂತನನ್ನು ತಮ್ಮ ಪ್ರಭುವಾದ ರಾವಣನಿಗೆ ತೋರಿಸಿದರು. ಆ ಸಭೆಯಲ್ಲಿ ನೆರೆದಿದ್ದವರೆಲ್ಲರೂ ಇವನನ್ನು ಕಂಡು ಆಶ್ಚರ್ಯದಿಂದ ಒಬ್ಬರಿಗೊಬ್ಬರು "ಯಾರಿವನು? ಯಾರ ಮಗನು? ಇಲ್ಲಿಗೆ ಬಂದುದೇಕೆ! ಇಲ್ಲಿ ಇವನಿಗೆ ಕೆಲಸವೇನು? ಯಾರಿಗಾಗಿ ಬಂದಿರುವನು?" ಎಂದು ಕಿವಿಕಚ್ಚಿ ಮಾತಾಡಿಕೊಳ್ಳುತ್ತಿದ್ದರು. ಮತ್ತೆ ಕೆಲವರು ಆ ಹನುಮಂತನನ್ನು ಕಂಡಮಾತ್ರಕ್ಕೆ ತಡೆಯಲಾರದ ಕೋಪದಿಂದ "ಈ ಕಪಿಯನ್ನು ಈಗಲೇ ಕೊಲ್ಲಬೇಕು! ಬೆಂಕಿಹಾಕಿ ಸುಡಬೇಕು! ಅಥವಾ ಭಕ್ಷಿಸಬೇಕು! ಎಂದು ಅರ್ಭಟಿಸಿ ಕೂಗುತ್ತಿದ್ದರು. ಇಷ್ಟರಲ್ಲಿ ಮಹಾತ್ಮನಾದ ಹನುಮಂತನು ಮುಂದೆ ಸಾಗಿ ಬಂದು, ಮೊದಲು ಅಲ್ಲಿ ರಾವಣನ ಪಾದಮೂಲದಲ್ಲಿ ನಿಂತಿದ್ದ ಮಂತ್ರಿವೃದ್ಧರನ್ನೂ, ಉತ್ತಮರತ್ನಗಳಿಂದಲಂಕೃತವಾದ ಆ ಸಭಾಸ್ಥಾನವನ್ನೂ ನೋಡಿದನು. ಮಹಾ ತೇಜಸ್ವಿಯಾದ ಆ ರಾವಣನೂಕೂಡ, ವಿಕೃತಾಕಾರವುಳ್ಳ ತನ್ನ ಕಡೆಯ ರಾಕ್ಷಸರು ಸುತ್ತಲೂ ಮುತ್ತಿಕೊಂಡು, ಇಲ್ಲಿಗಲ್ಲಿಗೆ ಸೆಳೆದು ತರುತ್ತಿದ್ದ ಆ ದೊಡ್ಡಕಪಿಯನ್ನು ಕಂಡನು. ತೇಜಸ್ಸಿನಿಂದಲೂ, ಬಲದಿಂದಲೂ ಮೇಲೆನಿಸಿ ಮಧ್ಯಾಹ್ನ ಸೂರ್ಯನಂತೆ ಶೋಭಿಸುತ್ತಿದ್ದ ಆ ರಾಕ್ಷಸಚಕ್ರವರ್ತಿಯನ್ನು ಹನುಮಂತನೂ ಕಣ್ಣಿಟ್ಟು ನೋಡಿ

ದನು. ಆಗ ರಾವಣನು ಕೋಪದಿಂದ ಕೆಂಡದಂತೆ ಕೆಂಪಾದ ತನ್ನ ಕಣ್ಣಾಲಿಗಳನ್ನು ತಿರುಗಿಸುತ್ತ, ಆ ಕಪಿವೀರನನ್ನು ನೋಡಿ, ಅವನ ಸಂಗತಿಯನ್ನು ವಿಚಾರಿಸಿ ತಿಳಿಯುವುದಕ್ಕಾಗಿ, ತನ್ನ ಸುತ್ತಲೂ ನೆರೆದಿದ್ದ ಕುಲಶೀಲವೃದ್ಧರಾದ ಪ್ರಧಾನ ಮಂತ್ರಿಗಳಿಗೆ ಆಜ್ಞೆಮಾಡಿದನು. ಆಗ ಅವರಲ್ಲಿ ಕೆಲವರು ಹನುಮಂತನನ್ನು ನೋಡಿ "ನೀನು ಬಂದ ಕಾರ್ಯವೇನು ? ನಿನ್ನನ್ನು ಇಲ್ಲಿಗೆ ಕಳುಹಿಸಿದವರಾರು ?" ಎಂದು ಒಂದೊಂದು ಸಂಗತಿಯನ್ನೂ ಕ್ರಮವಾಗಿ ಪ್ರಶ್ನೆಮಾಡಲು, ಅದಕ್ಕಾ ಹನುಮಂತನು "ನಾನು ವಾನರೇಶ್ವರನಾದ ಸುಗ್ರೀವನ ದೂತನು. ಅವನ ಆಜ್ಞೆಯಮೇಲೆಯೇ ಇಲ್ಲಿಗೆ ಬಂದೆನು" ಎಂದು ಅವರಿಗೆ ತಿಳಿಸಿದನು.

ಇಲ್ಲಿಗೆ ನಾಲ್ವತ್ತೆಂಟನೆಯ ಸರ್ಗವು.

---

{ ಹನುಮಂತನು ರಾವಣನನ್ನು ನೋಡಿ, ಅವನ ತೇಜೋವಿಶೇಷಕ್ಕಾಗಿ ಆಶ್ಚರ್ಯಗೊಂಡುದು. }

ಆ ಮೇಲೆ ಭಯಂಕರಪರಾಕ್ರಮವುಳ್ಳ ಹನುಮಂತನು, ಸಿಂಹಾಸನದಲ್ಲಿ ಕುಳಿತಿದ್ದ ಆ ರಾವಣನನ್ನು ನೋಡಿ, ತನ್ನಲ್ಲಿ ತಾನು, "ಅಹಾ! ದುರಾತ್ಮನಾದ ಈ ರಾವಣನು ತಾನು ಸಿಂಹಾಸನದಿಂದ ಸ್ವಲ್ಪವೂ ಕದಲದೆ, ನನ್ನನ್ನು ಹೀಗೆ ಹಿಂಗಟ್ಟು ಕಟ್ಟಿಸಿ ತಾನಿದ್ದ ಕಡೆಗೆ ಕರೆಸಿಕೊಂಡನಲ್ಲಾ !" ಎಂದು ಆತನ ಕಾರ್ಯಕ್ಕಾಗಿ ಆಶ್ಚರ್ಯಗೊಂಡು, ಕೋಪದಿಂದ ಕೆಂಪೇರಿದ ಕಣ್ಣುಳ್ಳವನಾಗಿ ಆ ರಾವಣನನ್ನೇ ದುರದುರನೆ ನೋಡುತ್ತಿದ್ದನು. ಆ ರಾವಣನಾದರೋ ಮೊದಲೇ ಸಹಜವಾದ ರಾಜತೇಜಸ್ಸಿನಿಂದ ಬೆಳಗುತ್ತಿರುವನು. ಇದರಮೇಲೆ ಅವನ ತಲೆಯಲ್ಲಿ ಮುತ್ತುಗಳಿಂದ ಖಚಿತವಾದ ಬೆಲೆಯುಳ್ಳ ಬಂಗಾರದ ಕಿರೀಟವು ಜಾಜ್ವಲ್ಯಮಾನವಾಗಿ ಜ್ವಲಿಸುತ್ತಿರುವುದು. ಅವನ ಸರ್ವಾವಯವಗಳಲ್ಲಿಯೂ, ವಜ್ರಗಳಿಂದಲೂ, ತುಂಬಾ ಬೆಲೆಬಾಳುವ ನಾನಾರತ್ನಗಳಿಂದಲೂ ಕೆತ್ತಲ್ಪಟ್ಟ ಸ್ವರ್ಣಾಭರಣಗಳು, ಮನಸ್ಸಿನಿಂದಲೇ ನಿರ್ಮಿಸಲ್ಪಟ್ಟಂತೆ ಚಿತ್ರವಿಚಿತ್ರಗಳಾಗಿ ಶೋಭಿಸುತ್ತಿರುವುವು; ಉತ್ತಮವಾದ ಪಟ್ಟೆಮಡಿಯುನ್ನುಟ್ಟಿರುವನು. ಮೈಗೆ ರಕ್ತಚಂದನವನ್ನು ಲೇಪಿಸಿಕೊಂಡಿರುವನು. ಇದಲ್ಲದೆ ಕಸ್ತೂರಿ ಮೊದಲಾದ ವಿಚಿತ್ರಾನುಲೇಪನಗಳನ್ನೂ ಪೂಸಿರುವನು. ಅವನ ತಲೆಗಳೋ, ಒಂದಲ್ಲ ! ಎರಡಲ್ಲ ! ಹತ್ತು ತಲೆಗಳು ! ಅವೆಲ್ಲವೂ ಕಿರೀಟಕುಂಡಲಾದ್ಯಾಭರಣಗಳಿಂದ ಅಂದವನ್ನು ಕೊಡುತ್ತಿದ್ದರೂ,

ಅರ್ಧತೆರೆದ ಬಾಯಿಗಳಿಂದಲೂ, ಕೆಂಪೇರಿದ ಕಣ್ಣುಗಳಿಂದಲೂ, ತೀಕ್ಷ್ಣವಾಗಿ ಜ್ವಲಿಸುವ ಕೋರೆದಾಡೆಗಳಿಂದಲೂ, ಜೋಲುವ ತುಟಿಗಳಿಂದಲೂ ನೋಡುವು ದಕ್ಕೆ ಭಯಂಕರಗಳಾಗಿರುವುವು. ಇದರಿಂದ ರಾವಣನು ನಾನಾ ಶಸ್ತ್ರರಸ್ನಗ ಗಳಿಂದ ತುಂಬಿರುವ ಅನೇಕ ಶಿಖರಗಳುಳ್ಳ ಮಂದರಪರ್ವತದಂತೆ ತೇಜಸ್ಸಿನಿಂದ ಜ್ವಲಿಸುತ್ತಿರುವನು. ಮತ್ತು ನೀಲಾಂಜನಪರ್ವತಗಳಂತೆ ಕಪ್ಪಾದ ಮೈಯುಳ್ಳ ಆತನ ಎದೆಯಲ್ಲಿ ಪೂರ್ಣಚಂದ್ರನಂತೆ ಶೋಭಿಸುವ ಮುತ್ತಿನಪದಕವುಳ್ಳ ಹಾರವು ಚಲಿಸುತ್ತಿರಲು, ಕೊಕ್ಕರೆಗಳ ಸಾಲಿನಿಂದ ಕೂಡಿದ ಕಾಲಮೇಘದಂತೆ ಕಾಣುವನು. ತೋಳ್ಪಳೆಗಳಿಂದಲೂ, ಕೈಬಳೆಗಳಿಂದಲೂ ಅಲಂಕೃತಗಳಾಗಿ, ಉತ್ತಮಚಂದನದಿಂದ ಲೇಪಿಸಲ್ಪಟ್ಟ ಆತನ ಇಪ್ಪತ್ತು ತೋಳುಗಳೂ, ಐದು ಹೆಡೆಯುಳ್ಳ ಮಹಾಸರ್ಪಗ ಳಂತೆ ಕಾಣುತ್ತಿರುವುವು. ಇಂತಹ ರಾಕ್ಷಸರಾಜನು ವಿಚಿತ್ರ ರತ್ನಖಚಿತವಾಗಿ, ಉತ್ತಮವಾದ ರತ್ನಗಂಬಳಿಯನ್ನು ಮೇಲೆ ಹಾಸಿದ ಒಂದು ದೊಡ್ಡ ಸ್ಫಟಿಕಪೀಠ ದಲ್ಲಿ ಠೀವಿಯಿಂದ ಕುಳಿತಿದ್ದನು. ಅವನ ಸುತ್ತಲೂ ಸರ್ವಾಲಂಕಾರಭೂಷಿತರಾದ ಕೆಲವು ಸುಂದರಾಂಗಿಯರು ಚಾಮರವನ್ನು ಹಿಡಿದು ಬೀಸುತ್ತಿದ್ದರು. ಅವನ ನಾಲ್ಕು ಪಾರ್ಶ್ವಗಳಲ್ಲಿಯೂ ಮಂತ್ರತತ್ವಗಳನ್ನು ಚೆನ್ನಾಗಿ ತಿಳಿದು ಮಂತ್ರಾಲೋಚನೆ ಯಲ್ಲಿ ಸಮರ್ಥರೆನಿಸಿದ, ಬಲದರ್ಪಿತರಾದ, ದುರ್ಧರ, ಪ್ರಹಸ್ತ, ಮಹಾಪಾರ್ಶ್ವ, ನಿಕುಂಭರೆಂಬ ನಾಲ್ಕುಮಂದಿ ಪ್ರಧಾನಮಂತ್ರಿಗಳು ಸುತ್ತಿನಿಂತಿರುವರು. ರಾವಣನು ಅವರೊಡನೆ ಸುಖಸಲ್ಲಾಪಗಳನ್ನು ಮಾಡುತ್ತ, ನಾಲ್ಕುಸಮುದ್ರಗಳಿಂದ ಪರಿವೃತ ವಾದ ಪ್ರಪಂಚದಂತೆ ಕಾಣುತ್ತಿದ್ದನು. ಇದಲ್ಲದೆ ಮಂತ್ರಜ್ಞರಾದ ಬೇರೆ ಅನೇಕ ಸಚಿವರಿಂದಲೂ ಸೇವಿತನಾಗಿ, ದೇವಸಮೂಹದಿಂದ ಸೇವಿತನಾದ ದೇವೇಂದ್ರ ನನ್ನು ಹೋಲುತ್ತಿದ್ದನು. ಮತ್ತು ಕಪ್ಪುಮೈಯುಳ್ಳ ಆತನು ಸ್ವರ್ಣಪೀಠದ ಮೇಲೆ ಕುಳಿತಿರುವಾಗ, ಮೇರುಪರ್ವತದಮೇಲೆ ಕುಳಿತ ಕಾಳಮೇಘದಂತೆ ತೋರು ತ್ತಿದ್ದನು. ಇತ್ತಲಾಗಿ ಹನುಮಂತನು ಭಯಂಕರಪರಾಕ್ರಮವುಳ್ಳ ರಾಕ್ಷಸರು ತನ್ನನ್ನು ಸುತ್ತಿಮುತ್ತಿ ಬಹಳವಾಗಿ ಪೀಡಿಸುತ್ತಿದ್ದರೂ, ಅದಕ್ಕೆ ಲಕ್ಷ್ಯಗೊಡದೆ, ಆ ರಾವಣನ ಅದ್ಭುತಾಕೃತಿಗಾಗಿ ಆಶ್ಚರ್ಯಗೊಂಡು ಆತನನ್ನೇ ಕಣ್ಣಿಟ್ಟುನೋಡು ತಿದ್ದನು. ಹೀಗೆ ದೇದೀಪ್ಯಮಾನವಾಗಿ ಬೆಳಗುತ್ತಿರುವ ರಾವಣನನ್ನು ನೋಡಿ ಹನು ಮಂತನು, ಅವನ ತೇಜಸ್ಸಿಗೆ ಮೋಹಿತನಾಗಿ, ತನ್ನಲ್ಲಿ ತಾನು ಆಶ್ಚರ್ಯಗೊಂಡು “ ಅಬ್ಬಾ ! ಈತನ ರೂಪವೇನು ! ಈ ಧೈರ್ಯವೇನು ! ಈ ಬಲವೇನು ! ಈ ಕಾಂತಿ ಯೇನು ! ಆಹಾ ! ಇವನು ರಾಕ್ಷಸನಾದರೂ ಇವನಲ್ಲಿ ಸಮಸ್ತ ಲಕ್ಷಣಗಳೂ ಕೂಡಿರುವುವಲ್ಲಾ ! ಈ ರಾಕ್ಷಸನು ಹೀಗೆ ಮಹತ್ತಾದ ಅಧರ್ಮಕ್ಕೆಮಾತ್ರ ಪ್ರವೇ

ಶಿಸದಿದ್ದ ಪಕ್ಷದಲ್ಲಿ, ಇಲ್ಲಿನ ರಾಕ್ಷಸರಿಗೆ ಮಾತ್ರವೇ ಅಲ್ಲದೆ, ದೇವೇಂದ್ರನೊಡಗೂಡಿದ ಸಮಸ್ತ ದೇವತೆಗಳಿಗೂ ತಾನೇ ಪ್ರಭುವಾಗಿ ಪಾಲಿಸುತಿದ್ದನು. ಇವನು ಇದುವರೆಗೆ ಮಹಾಭಯಂಕರಗಳಾಗಿಯೂ, ಲೋಕನಿಂದಿತಗಳಾಗಿಯೂ, ಪರದ್ರೋಹಕರಗಳಾಗಿಯೂ ಇರುವ ಕಾರ್ಯಗಳನ್ನೇ ನಡೆಸಿರುವನು. ಅದುದರಿಂದಲೇ ಇವನನ್ನು ನೋಡಿದಮಾತ್ರಕ್ಕೆ ದೇವದಾನವಾದಿ ಸಮಸ್ತ ಲೋಕದವರೂ ಭಯಪಡುವರು! ಹೀಗಿಲ್ಲದಿದ್ದರೆ ಸಮಸ್ತ ಲೋಕವೂ ಇವನನ್ನೇ ಪೂಜಿಸಿ ಸೇವಿಸುತ್ತಿತ್ತು. ಇವನಿಗೆ ಮಾತ್ರ ಕೋಪವುಂಟಾದರೆ ಈ ಜಗತ್ತೆಲ್ಲವನ್ನೂ ಏಕಾರ್ಣವದಂತೆ ಮಾಡಬಲ್ಲನೆಂದೂ ತೋರುವುದು" ಎಂದು ಧೀಮಂತನಾದ ಆ ಹನುಮಂತನು ಆ ರಾಕ್ಷಸರಾಜನನ್ನು ನೋಡಿ, ಆಶ್ಚರ್ಯಪಡುತ್ತ, ಅವನ ಮಹಿಮೆಯನ್ನು ಕುರಿತು ಇನ್ನೂ ನಾನಾವಿಧದಿಂದ ಚಿಂತಿಸುತ್ತಿದ್ದನು.

ಇಲ್ಲಿಗೆ ನಾಲ್ವತ್ತೊಂಬತ್ತನೆಯ ಸರ್ಗವು.

---

## ಹನುಮಂತನು ರಾವಣನೊಡನೆ ಸಂಭಾಷಿಸಿದುದು.

ಸಮಸ್ತಲೋಕವನ್ನೂ ತನ್ನ ವೀರ್ಯದಿಂದ ಗೋಳಾಡಿಸತಕ್ಕ ಆ ರಾವಣನಿಗಾದರೋ, ಆ ಹನುಮಂತನನ್ನು ತನ್ನ ಮುಂದೆ ತಂದಿರಿಸಿದಾಗಲೇ ಮಹಾಕೋಪವು ಹುಟ್ಟಿತು. ಇದರಮೇಲೆ ಆ ಹನುಮಂತನ ಅದ್ಭುತ ತೇಜಸ್ಸನ್ನೂ, ಧೈರ್ಯವನ್ನೂ ನೋಡಿದಾಗ, ಅವನ ಕೋಪವು ಮಿತಿಮೀರಿ ಹೋಯಿತು. ಅವನ ಮನಸ್ಸಿನಲ್ಲಿ ನಾನಾವಿಧವಾದ ಚಿಂತೆಯೂ ಹುಟ್ಟಿತು. ಹೀಗೆ ಚಿಂತಾಪರವಶನಾದ ರಾವಣನು ತನ್ನಲ್ಲಿ ತಾನು "ಇದೇನಿದು! ಹಿಂದೆ ನಾನು ಕೈಲಾಸಪರ್ವತವನ್ನು ಕದಲಿಸಿದಾಗ, ನನ್ನನ್ನು ಶಪಿಸಿದ ಪೂಜ್ಯನಾದ ನಂದಿಯೇ ಈಗ ಈ ರೂಪದಿಂದ ಬಂದಿರಬಹುದೆ? ಇಲ್ಲವೇ ಒಂದುವೇಳೆ ಅಸುರಶ್ರೇಷ್ಠನಾದ ಆ ಬಾಣಾಸುರನೇ ಹೀಗೆ ವಾನರಾಕೃತಿಯಿಂದ ಬಂದಿರುವನೇನು?" ಎಂದು ಆಶ್ಚರ್ಯದಿಂದ ಮೈಮರೆತಿದ್ದನು. ಆ ಹನುಮಂತನನ್ನು ನೋಡುತ್ತಿದ್ದಹಾಗೆ ಅವನಿಗೆ ಮೇಲೆ ಮೇಲೆ ಕೋಪವು ಹೆಚ್ಚಿತು. ಅವನ ಕಣ್ಣುಗಳು ಕೆಂಡದಂತೆ ಕೆಂಪಾದುವು. ಆಗ ರಾವಣನು ತನ್ನ ಸಮೀಪದಲ್ಲಿದ್ದ ಮುಖ್ಯಮಂತ್ರಿಯಾದ ಪ್ರಹಸ್ತನನ್ನು ಕುರಿತು, ಅರ್ಥಯುಕ್ತವಾಗಿಯೂ, ಕಾಲೋಚಿತವಾಗಿಯೂ ಇರುವ ಮಾತಿನಿಂದ 'ಪ್ರಹಸ್ತಾ! ಈ ದುರಾತ್ಮನು ಎಲ್ಲಿಂದ ಬಂದವನೆಂದು ವಿಚಾರಿಸು! ಇವನನ್ನು

ಇಲ್ಲಿಗೆ ಕಳುಹಿಸಿದವರಾರು? ನಮ್ಮ ಅಶೋಕವನವನ್ನು ಮುರಿದುದಕ್ಕೆ ಕಾರಣವೇನು? ನಮ್ಮ ರಾಕ್ಷಸಸ್ತ್ರೀಯರನ್ನು ಹೆದರಿಸಿದುದೇಕೆ? ಎಂತವರಿಗೂ ದುರ್ಗಮವಾದ ನಮ್ಮ ಲಂಕೆಗೆ ಇವನು ಹೇಗೆ ಬಂದನು? ಈ ಕಪಿಗೆ ನಮ್ಮೊಡನೆ ಯುದ್ಧವೇಕೆ? ಈ ಸಂಗತಿಗಳೆಲ್ಲವನ್ನೂ ನೀನು ಅವನನ್ನೇ ಚೆನ್ನಾಗಿ ವಿಚಾರಿಸಿ ತಿಳಿ!'' ಎಂದನು. ಇದನ್ನು ಕೇಳಿ ಪ್ರಹಸ್ತನು ಆ ಹನುಮಂತನನ್ನು ಕುರಿತು, ಬಹಳ ಮೃದುವಾಕ್ಯದಿಂದ "ಎಲೈ ವಾನರನೆ! ಹೆದರಬೇಡ! ಸಮಾಧಾನದಿಂದಿರು! ನಿನಗೆ ಕ್ಷೇಮವಾಗಲಿ! ನೀನು ಈ ರಾವಣಾಲಯಕ್ಕೆ ಬಂದ ಕಾರಣವೇನು? ನಮ್ಮಲ್ಲಿ ಬದ್ಧವೈರವುಳ್ಳ ದೇವೇಂದ್ರನೇನಾದರೂ ನಿನ್ನನ್ನು ಇಲ್ಲಿಗೆ ಕಳುಹಿಸಿರುವನೆ! ಹೇಗಾದರೂ ಇರಲಿ! ಇದ್ದ ಸ್ಥಿತಿಯನ್ನು ನಿಜವಾಗಿ ಹೇಳಿಬಿಡು! ಭಯಪಡಬೇಡ! ನಿನ್ನನ್ನು ನಾವು ಬಿಟ್ಟುಬಿಡುವೆವು! ಅಥವಾ ನೀನು ಕುಬೇರನಿಗಾಗಲಿ, ಯಮನಿಗಾಗಲಿ, ವರುಣನಿಗಾಗಲಿ, ದೂತನಾಗಿ ಈ ಕಪಿರೂಪದಿಂದ ಇಲ್ಲಿಗೆ ಬಂದಿರುವೆಯಾ? ಈ ರಾವಣನನ್ನು ಜಯಿಸುವುದಕ್ಕಾಗಿ ವಿಷ್ಣುವೇನಾದರೂ ಇಲ್ಲಿಗೆ ನಿನ್ನನ್ನು ಕಳುಹಿಸಿರುವನೆ? ಹೇಗಿದ್ದರೂ ಚಿಂತೆಯಿಲ್ಲ! ನಿನ್ನನ್ನು ನಾವೇನನ್ನೂ ಮಾಡುವುದಿಲ್ಲ! ಇದ್ದ ಸ್ಥಿತಿಯನ್ನು ತಿಳಿಸಿಬಿಡು! ರೂಪದಲ್ಲಿ ಮಾತ್ರ ನೀನು ಕಪಿಯಂತಿದ್ದರೂ, ನಿನ್ನ ತೇಜಸ್ಸು ಯಾವ ವಾನರನಿಗೂ ಇಲ್ಲ! ನಡೆದ ಸಂಗತಿಯನ್ನು ಯಥಾಸ್ಥಿತವಾಗಿ ತಿಳಿಸು! ಆ ಮೇಲೆ ನಿನ್ನನ್ನು ಬಿಟ್ಟುಬಿಡುವೆವು. ಸುಳ್ಳಾಡಿದರೆ ಮಾತ್ರ ನೀನು ಬದುಕಿಹೋಗಲಾರೆ! ಅಥವಾ ಬೇರೆ ಯಾರ ಪ್ರೇರಣೆಯೂ ಇಲ್ಲದೆ ನಿನ್ನಿಷ್ಟಕ್ಕೆ ನೀನೇ ಬಂದಿದ್ದರೂ, ಇಷ್ಟು ಪ್ರಯತ್ನಪಟ್ಟಾದರೂ ಈ ರಾವಣಾಲಯಕ್ಕೆ ನೀನು ಬರಬೇಕಾದ ಕಾರಣವೇನು? ಅದನ್ನಾದರೂ ಹೇಳು'' ಎಂದನು. ಹೀಗೆ ಪ್ರಹಸ್ತನು ಎಷ್ಟೋ ಒಳ್ಳೆಮಾತಿನಿಂದ ನಯವಾಗಿ ಕೇಳಿದರೂ ಹನುಮಂತನು ಅತನನ್ನು ಲಕ್ಷ್ಯಮಾಡದೆ, ರಾಕ್ಷಸಪ್ರಭುವಾದ ಆ ರಾವಣನನ್ನೇ ನೋಡಿ, "ಎಲೆ! ನಾನು ಇಂದ್ರನಿಗಾಗಲಿ, ಯಮನಿಗಾಗಲಿ, ವರುಣನಿಗಾಗಲಿ ಚಾರನಾಗಿ ಬಂದವನಲ್ಲ! ಕುಬೇರನೊಡನೆಯೂ ನನಗೆ ಸ್ನೇಹವಿಲ್ಲ! ವಿಷ್ಣುದೇವನೂ ನನ್ನನ್ನು ಇಲ್ಲಿಗೆ ಕಳುಹಿಸಿದವನಲ್ಲ! ನಾನು ವಾನರಜಾತಿಯವನೆಂಬುದೇ ನಿಜವು. ನಾನು ಆ ನನ್ನ ನಿಜರೂಪದಿಂದಲೇ ಇಲ್ಲಿಗೆ ಬಂದಿರುವೆನೇ ಹೊರತು ಇದು ವೇಷವಲ್ಲ. ರಾಕ್ಷಸೇಂದ್ರನಾದ ನಿನ್ನ ದರ್ಶನವು ದುರ್ಲಭವೆಂಬುದನ್ನು ತಿಳಿದು. ಈ ನೆವದಿಂದಲಾದರೂ ನಿನ್ನನ್ನು ನೋಡಬಹುದೆಂಬ ಉದ್ದೇಶದಿಂದಲೇ ನಿನ್ನ ತೋಟವನ್ನು ಹಾಳುಮಾಡಿದೆನು. ನಾನು ಎಣಿಸಿದ್ದಂತೆಯೇ ಬಲಾಢ್ಯರಾದ ಕೆಲವು ರಾಕ್ಷಸರು ನನ್ನಮೇಲೆ ಯುದ್ಧಕ್ಕೆ ಬಂದರು. ನನ್ನ

ದೇಹರಕ್ಷಣೆಗಾಗಿ ನಾನು ಅವರೊಡನೆ ಹೋರಾಡಬೇಕಾಯಿತೇ ಹೊರತು ಬೇರೆಯಲ್ಲ! ದೇವಾಸುರರಿಗೂ ಕೂಡ ಯಾವ ಅಸ್ತ್ರದಿಂದಾಗಲಿ, ಯಾವ ಪಾಶದಿಂದಾಗಲಿ ನನ್ನನ್ನು ಕಟ್ಟುವುದು ಸಾಧ್ಯವಿಲ್ಲ. ನಿನ್ನಂತೆಯೇ ನಾನೂ ಬ್ರಹ್ಮದೇವನಿಂದ ಎಷ್ಟೋ ವರಗಳನ್ನು ಪಡೆದಿರುವೆನು. ರಾಕ್ಷಸರಾಜನಾದ ನಿನ್ನನ್ನು ನೋಡಬೇಕೆಂಬ ಕೋರಿಕೆಯಿಂದಲೇ ನಾನು ನಿನ್ನ ಬ್ರಹ್ಮಾಸ್ತ್ರಕ್ಕೂ ಬದ್ಧನಾಗಿ ಬಂದೆನೇ ಹೊರತು ಬೇರೆಯಲ್ಲ. ಈ ರಾಕ್ಷಸರು ನನ್ನನ್ನು ಸಣಬಿನಿಂದ ಕಟ್ಟಿದೊಡನೆಯೇ ಬೇರೆ ಕಟ್ಟನ್ನು ಸಹಿಸಲಾರದೆ ಬ್ರಹ್ಮಾಸ್ತ್ರವು ನನ್ನನ್ನು ಬಿಟ್ಟು ಹೋಯಿತು. ಇಲ್ಲಿ ನನಗೆ ಒಂದು ರಾಜಕಾರ್ಯವುಂಟು! ಅದಕ್ಕಾಗಿಯೇ ನಿನ್ನಲ್ಲಿಗೆ ಬರಬೇಕಾಯಿತು. ಎಣೆಯಿಲ್ಲದ ತೇಜಸ್ಸುಳ್ಳ ರಾಮನಿಗೆ ನಾನೇ ದೂತನೆಂದು ತಿಳಿ! ಎಲೆ ರಾಜನೆ! ನಾನು ನಿನಗೆ ಹಿತವಾದ ಕೆಲವು ಮಾತುಗಳನ್ನು ಹೇಳುವೆನು. ಇವುಗಳನ್ನು ನೀನು ಲಾಲಿಸಿ ಕೇಳಬೇಕು" ಎಂದನು.

ಇಲ್ಲಿಗೆ ಐವತ್ತನೆಯ ಸರ್ಗವು.

---

ಹನುಮಂತನು ರಾಮನ ವನವಾಸವೇ ಮೊದಲಾಗಿ, ತಾನು ಲಂಕೆಗೆ ಬಂದವರೆಗಿನ ವೃತ್ತಾಂತವನ್ನು ತಿಳಿಸಿ, ಸೀತೆಯನ್ನು ರಾಮನಿಗೊಪ್ಪಿಸಿ ಬಿಡುವಂತೆ ರಾವಣನಿಗೆ ಹಿತೋಪದೇಶವನ್ನು ಹೇಳಿದುದು.

ಬಲಾಢ್ಯನಾದ ಆ ವಾನರೋತ್ತಮನು ರಾವಣನನ್ನು ನೋಡಿ ಬಹಳ ಎಚ್ಚರಿಕೆಯೊಡನೆ ಅರ್ಥವತ್ತಾದ ಈ ವಾಕ್ಯವನ್ನು ಹೇಳುವನು. "ಎಲೆ ರಾಕ್ಷಸೇಂದ್ರನೆ! [1] ನನ್ನೊಡೆಯನಾದ ಸುಗ್ರೀವನು ನಿನಗಾಗಿ ಕೆಲವು ವಿಷಯಗಳನ್ನು ಹೇಳಿ ನನ್ನನ್ನು ಇಲ್ಲಿಗೆ ಕಳುಹಿಸಿರುವನು. ಆದಕ್ಕಾಗಿಯೇ ನಾನು ನಿನಗೆ ನಿವಾಸವಾದ ಈ ಲಂಕೆಗೆ ಬರಬೇಕಾಯಿತು. ಎಲೈ ರಾಜನೆ! ಒಡಹುಟ್ಟಿದವ

---

1. ಸುಗ್ರೀವನು ಹನುಮಂತನೊಡನೆ ರಾವಣನಿಗಾಗಿ ಯಾವಮಾತನ್ನೂ ಹೇಳಿ ಕಳುಹಿಸದಿದ್ದರೂ ದೂತನು ಹೇಳಿದ ಮಾತುಗಳೆಲ್ಲವೂ, ಸ್ವಾಮಿಯು ಹೇಳಿದಂತೆಯೇ ಆಗುವುವೆಂಬ ಭಾವದಿಂದ. ಹೀಗೆ ಹನುಮಂತನು ತಾನಾಗಿ ಈ ಮಾತುಗಳನ್ನು ಕಲ್ಪಿಸಿ ಹೇಳಿದುದಾಗಿ ಗ್ರಾಹ್ಯವು.

ನಂತೆ ನಿನಗೆ ಹಿತೈಷಿಯಾದ ನಮ್ಮ ವಾನರೇಂದ್ರನು ನಿನ್ನ ಕ್ಷೇಮವನ್ನು ವಿಚಾರಿಸಿ ಬರುವಂತೆ ಹೇಳಿರುವನಲ್ಲದೆ, ಮಹಾತ್ಮನಾದ ಆ ಸುಗ್ರೀವನು ಹೇಳಿ ಕಳುಹಿಸಿರುವ ಇನ್ನೂ ಕೆಲವು ಸಂಗತಿಗಳನ್ನೂ ಕೇಳು! ಅವೆಲ್ಲವೂ ಧರ್ಮಾರ್ಥ ಯುಕ್ತವಾಗಿರುವುವಲ್ಲದೆ, ನಿನಗೆ ಇಹಪರಗಳೆರಡರಲ್ಲಿಯೂ ಶ್ರೇಯಸ್ಕರವಾಗಿರು ವುವು. [1] ಸರ್ವೋತ್ತಮವಾದ ರಥಗಜತುರಗಾದಿ ಸೇನಾಸಮೃದ್ಧಿಯಿಂದ ಖ್ಯಾತಿ ಗೊಂಡ ದಶರಥನೆಂಬ ರಾಜನಿದ್ದನು. ಅವನು ಸಮಸ್ತಪ್ರಜೆಗಳಿಗೂ ತಂದೆಯಂತೆ ಪ್ರಿಯನಾದವನು. ಕಾಂತಿಯಲ್ಲಿ ದೇವೇಂದ್ರನಿಗೆಣೆಯಾದವನು. ಆತನಿಗೆ ಮಹಾ ಭುಜನಾಗಿಯೂ, ಮಹಾತೇಜಸ್ವಿಯಾಗಿಯೂ, ಸಮರ್ಥನಾಗಿಯೂ ಇರುವ ರಾಮ ನೆಂಬ ಜ್ಯೇಷ್ಠಪುತ್ರನುಂಟು. ಆತನು ತಂದೆಯಾಜ್ಞೆಯಿಂದ ರಾಜ್ಯವನ್ನು ಬಿಟ್ಟು, ತಮ್ಮನಾದ ಲಕ್ಷ್ಮಣನೊಡನೆಯೂ, ಪತ್ನಿಯಾದ ಸೀತೆಯೊಡನೆಯೂ ವನವಾಸ ಕ್ಕಾಗಿ ಹೊರಟು, ದಂಡಕಾರಣ್ಯವನ್ನು ಪ್ರವೇಶಿಸಿದನು. ಆ ಸೀತೆಯೆಂಬವಳು ಮಹಾತ್ಮನಾದ ಜನಕರಾಜನ ಮಗಳು. ಮಹಾಪತಿವ್ರತೆಯು. ರಾಮನಿ ಕಾಡಿನಲ್ಲಿರುವಾಗ, ತನ್ನ ಪ್ರಿಯಭಾರ್ಯೆಯಾದ ಆ ಸೀತೆಯನ್ನು ಕಳೆದುಕೊಂಡು, ತಮ್ಮನಾದ ಲಕ್ಷ್ಮಣನೊಡಗೂಡಿ ಆಕೆಯನ್ನು ಹುಡುಕುತ್ತ, ಋಷ್ಯಮೂಕ ಪರ್ವತಕ್ಕೆ ಬಂದು ಅಲ್ಲಿ ಸುಗ್ರೀವನೊಡನೆ ಸೇರಿದನು. ಆ ಸುಗ್ರೀವನು ಸೀತೆಯನ್ನು ಹುಡುಕಿಸುವುದಾಗಿ ರಾಮನಿಗೆ ಪ್ರತಿಜ್ಞೆಮಾಡಿಕೊಟ್ಟನು. ಅದಕ್ಕೆ ಪ್ರತಿಯಾಗಿ ರಾಮನೂ ಸುಗ್ರೀವನಿಗೆ ವಾನರರಾಜ್ಯದಲ್ಲಿ ಪಟ್ಟವನ್ನು ಕಟ್ಟುವುದಾಗಿ ಪ್ರತಿಜ್ಞೆ ಮಾಡಿಕೊಟ್ಟನು. ಅದರಂತೆಯೇ ರಾಮನು ವಾಲಿಯನ್ನು ಕೊಂದು ಸುಗ್ರೀವ ನನ್ನು ವಾನರಭಲ್ಲೂಕರಾಜ್ಯಕ್ಕೆ ರಾಜನನ್ನಾಗಿ ಮಾಡಿಬಿಟ್ಟನು. ರಾವಣಾ! ವಾನರರಾಜನಾದ ವಾಲಿಯೆಂಥವನೆಂಬುದನ್ನು ನೀನು ಮೊದಲೇ ಬಲ್ಲೆಯಷ್ಟೆ? ಅಂತಹ ವಾಲಿಯನ್ನೂ ನಮ್ಮ ರಾಮನು ಯುದ್ಧದಲ್ಲಿ ಒಂದೇ ಬಾಣದಿಂದ ಕೊಂದುಬಿಟ್ಟನು. ವಾನರಾಧಿಪನಾದ ಸುಗ್ರೀವನೂ ಪ್ರತಿಜ್ಞೆಗೆ ತಪ್ಪದವ ನಾದುದರಿಂದ, ಸೀತೆಯನ್ನು ಹುಡುಕುವುದರಲ್ಲಿಯೇ ಆತುರವುಳ್ಳವನಾಗಿ, ಸಮಸ್ತ ದಿಕ್ಕುಗಳಿಗೂ ವಾನರರನ್ನು ಕಳುಹಿಸಿದನು. ಈಗಲೂ ವಾನರರು ನೂರುಸಾವಿರ ಲಕ್ಷಸಂಖ್ಯೆಯಿಂದ ಹೋಗಿ ಸಮಸ್ತದಿಕ್ಕುಗಳಲ್ಲಿಯೂ, ಪಾತಾಳದಲ್ಲಿಯೂ, ಭೂಮಿ ಯಲ್ಲಿಯೂ, ಆಕಾಶದಲ್ಲಿಯೂ ಆಕೆಯನ್ನು ಹುಡುಕುತ್ತಿರುವರು. ಅವರಲ್ಲಿ ಬಲಾಢ್ಯ

1. ಹನುಮಂತನು ಮೊದಲು ರಾಮಸುಗ್ರೀವರಿಗಿರುವ ಸಂಬಂಧವನ್ನು ತಿಳಿಸಿ, ಅಲ್ಲಿಂದ ರಾವಣನ ಹೃದಯವನ್ನು ತಿಳಿಯುವುದಕ್ಕಾಗಿ ಸುಗ್ರೀವನ ಸಂದೇಶವೆಂಬ ನೆವ ದಿಂದ ತಾನೇ ಕೆಲವು ಮಾತುಗಳನ್ನು ಕಲ್ಪಿಸಿ ಹೇಳುವನು.

ರಾದ ಕೆಲವರು ವಾನರವೀರರು, ಎಲ್ಲಿಯೂ ತಡೆಯಿಲ್ಲದೆ, ನೆಲವನ್ನೂ ಮುಟ್ಟದೆ ಅಂತರಿಕ್ಷದಲ್ಲಿಯೇ ಅತಿಶೀಘ್ರವಾಗಿ ಹಾರಬಲ್ಲವರಾದುದರಿಂದ, ಗರುಡನಿಗೆ ಸಾಟಿಯೆನಿಸಿಕೊಂಡಿರುವರು, ಮತ್ತೆ ಕೆಲವರು ವಾಯುವಿಗೆ ಸಮಾನರಾಗಿರುವರು. ನಾನು ವಾಯುದೇವನಿಗೆ ಔರಸಪುತ್ರನು. ನನಗೆ ಹನುಮಂತನೆಂದು ಹೆಸರು. ನಾನೂ ಸೀತಾನಿಮಿತ್ತವಾಗಿಯೇ ನೂರುಯೋಜನದ ವಿಸ್ತಾರವುಳ್ಳ ಈ ಸಮುದ್ರವನ್ನು ಲಂಘಿಸಿ, ಆಕೆಯನ್ನು ನೋಡಬೇಕೆಂದು ಇಲ್ಲಿಗೆ ಬಂದೆನು. ನಾನು ನಿನ್ನ ಮನೆಯಲ್ಲಿ ಸುತ್ತುತ್ತಿರುವಾಗ, ದೈವಿಕವಾಗಿ ನನಗೆ ಜನಕಪುತ್ರಿಯಾದ ಆ ಸೀತೆಯು ಸಿಕ್ಕಿಬಿಟ್ಟಳು. ಇದೀಗ ನಡೆದ ಸಂಗತಿಯು. ಎಲೆ ರಾಕ್ಷಸರಾಜನೆ! ನೀನೋ ಶಾಸ್ತ್ರಗಳನ್ನರಿತು ಧರ್ಮಾರ್ಥಸ್ವರೂಪಗಳನ್ನು ಚೆನ್ನಾಗಿ ವಿಮರ್ಶಿಸಿದವನು. ಅನೇಕ ತಪಸ್ಸುಗಳನ್ನು ನಡೆಸಿದವನು. ತಪಸ್ಸೇ ತಾನಾಗಿ ನಿನ್ನನ್ನು ಕೈಕೊಂಡಿರುವುದೆಂದೂ ಹೇಳಬಹುದು. ಇದರಮೇಲೆ ಬಹಳ ಪ್ರಾಜ್ಞನೂ ಆಗಿರುವೆ. ಹೀಗಿದ್ದೂ ನೀನು ಪರಸ್ತ್ರೀಯರನ್ನು ತಂದು ಸೆರೆಯಲ್ಲಿರಿಸಿರುವುದು ಎಷ್ಟುಮಾತ್ರವೂ ಯುಕ್ತವಲ್ಲ. ನಿನ್ನಂತೆ ಬುದ್ಧಿವಂತರಾದವರು ಧರ್ಮವಿರುದ್ಧವಾಗಿಯೂ, ಅಪಾಯಕ್ಕೆಡೆಯಾಗಿಯೂ, ಇರುವ ಇಂತಹ ಕಾರ್ಯಗಳಲ್ಲಿ ಎಂದಿಗೂ ಪ್ರವರ್ತಿಸಲಾರರು. ಒಂದುವೇಳೆ ನೀನು ನಿನ್ನ ವೀರ್ಯಮದದಿಂದ ಯಾವ ಅಪಾಯವನ್ನಾದರೂ ಪರಿಹರಿಸಿಕೊಳ್ಳಬಹುದೆಂದು ತಿಳಿದಿರಬಹುದು. ಮೊದಲೇ ಮೂಲಹಾನಿಯನ್ನುಂಟುಮಾಡತಕ್ಕ ಈ ದುಷ್ಕೃತ್ಯಗಳಿಗೆ ಪರಿಹಾರವೆಂದರೇನು? ಈ ಘೋರಪಾಪವು ಮೊದಲು ನಿನ್ನನ್ನೇ ನಿರ್ಮೂಲವಮಾಡಿಬಿಡುವುದಲ್ಲವೆ? ಮೊದಲು ರಾಮನೂ, ಅವನನ್ನು ನೋಡಿ ಲಕ್ಷ್ಮಣನೂ ಕೋಪಗೊಂಡು ಬಾಣಗಳನ್ನು ಬಿಡುವುದಕ್ಕೆ ತೊಡಗಿದರೆ ಆ ಬಾಣಗಳಮುಂದೆ ನಿಲ್ಲುವುದಕ್ಕೆ ದೇವಾಸುರರಲ್ಲಿಯಾದರೂ ಯಾವನು ಶಕ್ತನಾಗುವನು? ಎಲೆ ರಾಕ್ಷಸರಾಜನೆ! ರಾಮನಿಗೆ ಅಪ್ರಿಯವನ್ನು ಮಾಡಿಯೂ ಸೌಖ್ಯದಿಂದಿರುವವನು ಮೂರುಲೋಕಗಳಲ್ಲಿಯೂ ಯಾವನೊಬ್ಬನೂ ಇಲ್ಲ. ಆದುದರಿಂದ ಈಗ ನೀನು ನಡೆಸಿರುವ ಕೃತ್ಯವು ಬಹಳ ಅಧರ್ಮಹೇತುವಾದುದರಿಂದಲೂ, ರಾಮನಲ್ಲಿ ನೀನು ನಡೆಸಿರುವ ಈ ಮಹಾಪರಾಧವನ್ನು ಈಗಲೇ ಪರಿಹರಿಸಿಕೊಳ್ಳಬೇಕಾದುದು ಅತ್ಯವಶ್ಯವಾದುದರಿಂದಲೂ, ನಮ್ಮ ಪ್ರಭುವಾದ ಸುಗ್ರೀವನು ನಿನಗೆ ಈ ಮಾತುಗಳನ್ನು ಹೇಳಿ ಕಳುಹಿಸಿರುವನು. ಅವನ ಮಾತಿನಂತೆ ಈಗಲೂ ನೀನು ನಡೆದುಕೊಳ್ಳುವುದಾದರೆ, ಅದರಿಂದ ನಿನಗೆ ಹಿಂದೆಯೂ, ಈಗಲೂ, ಮುಂದೆಯೂ ಸೌಖ್ಯವುಂಟು. ನೀನು ಹಿಂದೆ ಸೀತೆಯನ್ನು ಕದ್ದುತಂದ ಪೂರ್ವಕಾಲಾಪರಾಧವೂ ಮರೆತು ಹೋಗುವುದು; ಈಗಿನ ನಿನ್ನ ಐಶ್ವರ್ಯವೂ ಸ್ಥಿರವಾಗಿ

ನಿಲ್ಲುವುದು. ಮುಂದೆಯೂ ನಿನಗೆ ಅನೇಕವಿಧಗಳಾದ ಶ್ರೇಯಸ್ಸುಗಳು ಕೈಗೂಡಿ ಬರುವುವು. ಹೀಗೆ ಅವನ ಈ ಹಿತವಾದವು ಭೂತಭವಿಷ್ಯದ್ವರ್ತಮಾನಕಾಲಗಳು ಮೂರರಲ್ಲಿಯೂ ನಿನಗೆ ಮೇಲ್ಮೆಯನ್ನುಂಟುಮಾಡುವುದು. ಧರ್ಮಕ್ಕೂ ಅನುಗುಣ ವಾಗಿರುವುದು. ಪುರುಷಾರ್ಥಗಳನ್ನೂ ಕೈಗೂಡಿಸುವುದು. ಈ ವಿಷಯಗಳೆಲ್ಲ ವನ್ನೂ ನೀನು ಮನಸ್ಸಿನಲ್ಲಿ ಚೆನ್ನಾಗಿ ಪರ್ಯಾಲೋಚಿಸಿ, ರಾಮನಿಗೆ ಸೀತೆಯ ನ್ನೊಪ್ಪಿಸಿಬಿಡು. ಎಲೆ ರಾವಣಾ! ನೀನು ಸೀತೆಯನ್ನು ಕದ್ದುತಂದ ವಿಷಯವೇನೋ ಲೋಕ ಪ್ರಸಿದ್ಧವಾಗಿರುವುದು. ಇಲ್ಲಿ ನಾನೇ ನನ್ನ ಕಣ್ಣಾರೆ ಸೀತೆಯನ್ನು ನೋಡಿಯೂ ಬಂದಿರುವೆನು. ಬೇರೊಬ್ಬರಿಗೆ ದುರ್ಲಭವಾಗಿದ್ದರೂ ಈ ಸೀತಾದರ್ಶ ನವು ಇಲ್ಲಿ ನನಗೆ ಲಭಿಸಿತು. ಈಗ ನಾನೇ ಆಕೆಯನ್ನು ರಾಮನಬಳಿಗೆ ಸೇರಿಸಬಲ್ಲೆ ನಾಗಿದ್ದರೂ, ಮುಂದೆ ಇಲ್ಲಿ ರಾಮನಿಂದಲೇ ನಡೆಯಬೇಕಾದ ಕೆಲವು ಕಾರ್ಯಗ ಳುಂಟು. ಅವುಗಳನ್ನು ನಡೆಸುವುದಕ್ಕೆ ಮಾತ್ರ ನನಗೆ ಅಪ್ಪಣೆಯಿಲ್ಲ! ಇನ್ನು ಮುಂದಿನ ಕಾರ್ಯವು ಆ ರಾಮನಿಗೇ ಸೇರಿದುದು. ಇಲ್ಲಿ ಸೀತೆಯು ಕೊನೆಮೊದ ಲಿಲ್ಲದ ದುಃಖದಿಂದ ಎಡೆಬಿಡದೆ ಕೊರಗುತ್ತಿರುವುದನ್ನೂ ನಾನು ಕಣ್ಣಾರೆ ನೋಡಿದೆನು. ಎಲೆ ರಾವಣಾ! ಸೀತೆಯು ನಿನ್ನ ವಶದಲ್ಲಿರುವಾಗ ರಾಮನು ಹೇಗೆ ತಾನೇ ಅವಳನ್ನು ಬಿಡಿಸಿಕೊಂಡುಹೋಗಬಲ್ಲನೆಂದು ನೀನು ಕೇಳಬಹುದು. ನೀನು ಸೀತೆಯನ್ನು ಸೆರೆಹಿಡಿದು ತಂದು ನಿನ್ನವಶದಲ್ಲಿರಿಸಿಕೊಂಡಿರುವುದಾಗಿ ನಿನಗೆ ನೀನೇ ಭ್ರಾಂತಿಗೊಂಡಿರುವೆಯೇ ಹೊರತು, ನಿನ್ನ ಪ್ರಾಣಗಳನ್ನು ಹೀರಿ ಬಿಡತಕ್ಕ ಐದುಹೆಡೆಯ ಸರ್ಪವನ್ನು ತಂದು ನಿನ್ನ ಮನೆಯಲ್ಲಿಟ್ಟುಕೊಂಡಿರುವೆ ಯೆಂದು ನಿನಗೆ ತಿಳಿಯಲಿಲ್ಲ. ಜಠರಾಗ್ನಿಯು ಎಷ್ಟೇ ತೀಕ್ಷ್ಣವಾಗಿದ್ದರೂ ವಿಷಮಿಶ್ರ ವಾದ ಅನ್ನವನ್ನು ಜೀರ್ಣಿಸಿಕೊಳ್ಳುವುದು ಸಾಧ್ಯವೆ? ಹಾಗೆಯೇ ದೇವತೆಗಳಾಗಲಿ, ಅಸುರರಾಗಲಿ, ಎಷ್ಟೇ ಪರಾಕ್ರಮವುಳ್ಳವರಾದರೂ ಆಕೆಯನ್ನು ದಕ್ಕಿಸಿಕೊಳ್ಳ ಲಾರರು. ಎಲೆ ರಾಕ್ಷಸರಾಜನೆ! ನೀನು ಎಷ್ಟೋ ಕಷ್ಟಪಟ್ಟು ತಪಸ್ಸುಮಾಡಿ, ಆ ತಪಸ್ಸಿದ್ಧಿಗೆ ಫಲವಾಗಿ, ಇತರರಿಗೆ ದುರ್ಲಭವಾದ ದೀರ್ಘಾಯುಸ್ಸನ್ನು ಪಡೆದು ಕೊಂಡಿರುವೆ. ಅದನ್ನು ಕೆಡಿಸಿಕೊಳ್ಳುವುದು ನ್ಯಾಯವಲ್ಲ. ನೀನು ಸೀತೆಯನ್ನು ಬಿಡದಿದ್ದರೆ ರಾಮನಿಂದ ನಿನಗೆ ಎಂದಿಗೂ ಸಾವು ತಪ್ಪಿದುದಲ್ಲ! ಆದರೆ "ದೇವಾ ಸುರರಿಗೂ ಅವಧ್ಯನಾದ ನನ್ನನ್ನು ಕೊಲ್ಲುವುದಕ್ಕೆ ಅವನಿಂದ ಸಾಧ್ಯವೆ?" ಎಂದು ನೀನು ಕೇಳಬಹುದು. ನೀನು ನಿನ್ನ ತಪೋಬಲದಿಂದ ದೇವಾಸುರರಿಗೂ ಅವಧ್ಯ

ನೆಂಬುದೇನೋ ನಿಜವು. ಅದನ್ನು ನಾನೂ ಚೆನ್ನಾಗಿ ಬಲ್ಲೆನು. [1] ನೀನು ಹಾಗೆ ದೇವಾಸುರರಿಂದ ಅವಧ್ಯನಾದುದರಿಂದಲೇ ನಿನ್ನನ್ನು ಕೊಲ್ಲುವುದಕ್ಕಾಗಿ ಅಪರಿಹಾರ್ಯವಾದ ಇದೊಂದು ದೊಡ್ಡ ನೆವವು ಇದೋ ಈಗಲೇ ಏರ್ಪಟ್ಟಿರುವುದೆಂದು ತಿಳಿ! ಅದು ಬೇರೆ ಯಾವುದೂ ಅಲ್ಲ. ಆ ಕಾರ್ಯನಿರ್ವಾಹಕ್ಕಾಗಿಯೇ ನಮ್ಮ ಪ್ರಭುವಾದ ಸುಗ್ರೀವನು ಜನಿಸಿರುವನು ! ಆ ಸುಗ್ರೀವನು ದೇವತೆಯೂ ಅಲ್ಲ ! ಅಸುರನೂ ಅಲ್ಲ! ರಾಕ್ಷಸನೂ ಅಲ್ಲ! ದಾನವನೂ ಅಲ್ಲ! ಗಂಧರ್ವನೂ ಅಲ್ಲ ! ಯಕ್ಷಪನ್ನಗಜಾತಿಗೂ ಸೇರಿದವನಲ್ಲ. ನೀನು ಯಾರುಯಾರಿಂದ ಸಾವಿಲ್ಲದಂತೆ ವರವನ್ನು ಪಡೆದುಬಂದಿರುವೆಯೋ ಅವರೊಬ್ಬರಲ್ಲಿಯೂ ಸುಗ್ರೀವನು ಸೇರಿದವನಲ್ಲ. ಹೀಗಿರುವಾಗ ಎಲೆ ರಾಕ್ಷಸರಾಜನೆ! ಆ ಸುಗ್ರೀವನ ಕೈಯಿಂದ ನೀನು ಸಾಯದೆ ಹೇಗೆ ಪ್ರಾಣಗಳನ್ನು ರಕ್ಷಿಸಿಕೊಳ್ಳಬಲ್ಲೆ ! [2] “ಈ ಉಪದೇಶಗಳೇಕೆ? ನಾನಂತೂ ಈ

---

1. ರಾವಣನು ಬ್ರಹ್ಮನಿಂದ ವರವನ್ನು ಪಡೆದಾಗ, ವೀರ್ಯದಲ್ಲಿ ಪ್ರಸಿದ್ಧರಾದ ದೇವಾಸುರ ಯಕ್ಷಪನ್ನಗಾದಿ ದೇವಜಾತಿಗಳಿಂದಮಾತ್ರವೇ ತನಗೆ ಸಾವಿಲ್ಲಸಂತೆ ಕೇಳಿಕೊಂಡನೇಹೊರತು, ನರವಾನರಾದಿಗಳೆಲ್ಲರೂ ಅಲ್ಪಬಲವುಳ್ಳವರೆಂದು, ಅವರನ್ನು ಅಲಕ್ಷ್ಯದಿಂದ ಬಿಟ್ಟುಬಿಟ್ಟನು. ಆದುದರಿಂದ ರಾವಣನಿಗೆ ವಾನರಜಾತಿಯ ಸುಗ್ರೀವನೇ ಮರಣಹೇತುವಾಗುವುದರಲ್ಲಿ ತಡೆಯಿಲ್ಲವೆಂದು ಇಲ್ಲಿನ ಭಾವವು.

2. ಇಲ್ಲಿ “ನ ತು ಧರ್ಮೋಪಸಂಹಾರಮಧರ್ಮಫಲಸಂಹಿತಂ। ತದೇವ ಫಲಮನ್ವೇತಿ ಧರ್ಮಶ್ಚಾಧರ್ಮನಾಶನಃ” ಎಂದು ಮೂಲವು. ಇದಕ್ಕೆ ಗೋವಿಂದರಾಜೀಯ ವ್ಯಾಖ್ಯಾನಾನುಸಾರವಾದ ಅರ್ಥವು ಮೇಲೆಯೇ ತೋರಿಸಲ್ಪಟ್ಟಿರುವುದು. ಮಹೇಶ್ವರತೀರ್ಥರು ಇದಕ್ಕೆ ಬೇರೆ ಅರ್ಥಾಂತರವನ್ನು ವಿವರಿಸಿರುವರು. ಹೇಗೆಂದರೆ:— ರೋಗರಾಜ್ಯಗಳೆರಡೂ ಸಮಕಾಲದಲ್ಲಿ ಒಬ್ಬಮನುಷ್ಯನ ಅನುಭವಕ್ಕೆ ಬರುವಂತೆ, ಅಧರ್ಮಫಲದಿಂದ ಆತ್ಮನಾಶವು ಬರಬಹುದಾದರೂ, ಧರ್ಮಫಲದಿಂದ ಆತ್ಮರಕ್ಷಣವೂ ಉಂಟಾಗಬಹುದು. ಅಥವಾ ಅಧರ್ಮವನ್ನು ನಾಶಮಾಡಿ ಧರ್ಮಫಲವೇ ಅನುಭವಕ್ಕೆ ಬಂದರೂ ಬರಬಹುದು. ಎಂಬೀ ಎರಡು ವಿಕಲ್ಪಗಳನ್ನೆತ್ತಿ ಅವೆರಡನ್ನೂ ಈ ಶ್ಲೋಕಾರ್ಧದಿಂದ ಪರಿಹರಿಸುವರು. “ನತು ಧರ್ಮೋಪಸಂಹಾರಮಧರ್ಮಫಲಸಂಹಿತಂ” ರೋಗರಾಜ್ಯಗಳೆರಡೂ ಒಂದಾಗಿ ಸೇರಿ ಬರಬಹುದಾದರೂ, ಪ್ರಕೃತದಲ್ಲಿ ರಾವಣನ ತೀವ್ರತಪಸ್ಸೆಂಬ ಧರ್ಮಕ್ಕೂ, ಪರದಾರಾಪಹರಣವೆಂಬ ಅವನ ಅಧರ್ಮಕ್ಕೂ ಫಲರೂಪಗಳಾದ ವಧ್ಯತ್ವಾವಧ್ಯತ್ವಗಳೆಂಬಿವೆರಡೂ ಒಂದಾಗಿ ಸೇರುವುದುಮಾತ್ರ ಅಸಂಭವವೆಂದು ಭಾವವು. ಇದರಿಂದ ಮೊದಲನೆಯ ವಿಕಲ್ಪವನ್ನು ಪರಿಹರಿಸಿ, ಉತ್ತರಾರ್ಧದಿಂದ ಎರಡನೆಯ ವಿಕಲ್ಪವನ್ನೂ ಪರಿಹರಿಸುವರು. “ತದೇವ ಫಲಮನ್ವೇತಿ ಧರ್ಮೋನಾಧರ್ಮನಾಶನಃ” ಧರ್ಮವು ಧರ್ಮಫಲವನ್ನು ಹೊಂದುವುದೇ

ಪಾಪಕೃತ್ಯಗಳನ್ನು ಮಾಡಿಬಿಟ್ಟಿನು. ಆದಕ್ಕೆ ತಕ್ಕ ಫಲವನ್ನು ಅನುಭವಿಸಿಯೇ ತೀರಬೇಕಲ್ಲವೆ? ಅದನ್ನು ತಪ್ಪಿಸಿಕೊಳ್ಳಲಾದೀತೆ?" ಎಂದು ಈಗಲೂ ನೀನು ನಿರಾಶನಾಗಬೇಡ! ಧರ್ಮಫಲವೆಂಬುದು ಯಾವಾಗಲೂ ಅಧರ್ಮಫಲದೊಡನೆ ಕಲೆ ತಿರತಕ್ಕುದಲ್ಲ! ಅದೂ ಧರ್ಮಫಲದ ಹಿಂದೆಯೇ ಸೇರಿಹೋಗುವುದು. "ಅದರೂ ಅಧರ್ಮವನ್ನು ನಡೆಸಿರುವಾಗ ಆದರ ಫಲವನ್ನೂ ಅನುಭವಿಸಿಯೇ ತೀರಬೇಕಲ್ಲವೆ?" ಎಂದು ಕೇಳುವೆಯಾ? ಧರ್ಮವು ಅಧರ್ಮವನ್ನು ನಾಶಗೊಳಿಸುವುದರಿಂದ ಧರ್ಮದ ಮುಂದೆ ಅಧರ್ಮಫಲವು ನಿಲ್ಲುವುದಿಲ್ಲ. "ಹಾಗಿದ್ದರೆ ಅಧರ್ಮವೇ ಧರ್ಮವನ್ನು ನಾಶ ಮಾಡಲಾರದೆ?" ಎಂದು ನೀನು ಕೇಳಬಹುದು. ಧರ್ಮವು ಅಧರ್ಮವನ್ನು ನಾಶ ಮಾಡುವುದೇ ಹೊರತು ಅಧರ್ಮಬಲದಿಂದ ಧರ್ಮವು ನಾಶವಾಗದು. "ಮೊದಲು ಮಾಡಿದ ಧರ್ಮವೇ ಈಗಿನ ಅಧರ್ಮಗಳೆಲ್ಲವನ್ನೂ ತೊಲಗಿಸಬಾರದೆ?" ಎಂದರೆ, [1] ನಿನ್ನ ಧರ್ಮಫಲವೆಲ್ಲವೂ ಆಗಲೇ ನಿಶ್ಶೇಷವಾಗಿ ಅಳಿಸಿಹೋಗಿರುವುದು. ಇದಕ್ಕೆ

---

ಹೊರತ್ತು ಅಧರ್ಮವನ್ನು ನಾಶಮಾಡಲಾರದು; ಎಂದರೆ, ಧರ್ಮಫಲವು ಧರ್ಮಫಲದೊಡನೆಯೇ ಸೇರಿರುವುದೇ ಹೊರತು ಅಧರ್ಮವನ್ನು ಬಾಧಿಸಿ ಅನುಭವಕ್ಕೆ ಬರುವುದಲ್ಲವೆಂದರ್ಥವು. ಅಥವಾ ಇಲ್ಲಿ ರಾವಣನು "ತಾನು ಯಾರಿಂದ ಅವಧ್ಯತ್ವವನ್ನು ಕೇಳಿಲ್ಲವೋ, ಅವರ ಬೆಸೆಯಿಂದ ರಕ್ಷಿಸುವುದಕ್ಕಾದರೂ ತನ್ನ ಪೂರ್ವಸುಕೃತವೇ ಸಾಲದೆ?" ಎಂದು ಶಂಕಿಸಲು, ಹಾಗಿದ್ದರೆ ಅದೇ ನ್ಯಾಯದಿಂದ ನೀನು ಮಾಡಿದ ಪಾಪಸಂಚಯವೇ ನಿನ್ನನ್ನು ಕೊಲ್ಲಬಹುದೆಂದೂ ತಿಳಿಸುವನು. "ನಹು ಧರ್ಮೋ......ಧರ್ಮಶ್ಚಾಧರ್ಮನಾಶನಃ" ಧರ್ಮಫಲವಾದ ಸುಖವು ಅಧರ್ಮಫಲವಾದ ದುಃಖದೊಡನೆ ಸೇರದು. ಅದು ಸುಖವನ್ನೇ ಅನುವರ್ತಿಸುವುದು. ಹಾಗೆಯೇ ಅಧರ್ಮಫಲವಾದ ದುಃಖವೂ ಧರ್ಮಫಲದೊಡನೆ ಸೇರದೆ, ಅಧರ್ಮಫಲವನ್ನೇ ಅನುವರ್ತಿಸುವುದು. "ಧರ್ಮಫಲವಾದರೂ ಅಧರ್ಮವನ್ನು ನಾಶಮಾಡಲಾರದೆ" ಎಂದರೆ "ಧರ್ಮಶ್ಚಾಧರ್ಮನಾಶನಃ" ಮೊದಲಿನ "ನ" ಕಾರವೇ ಇಲ್ಲಿಯೂ ಅನ್ವಯಿಸುವುದರಿಂದ "ಧರ್ಮಶ್ಚ ಅಧರ್ಮನಾಶನೋ ನ" ಧರ್ಮವಾದರೂ ಅಧರ್ಮವನ್ನು ನಾಶಗೊಳಿಸಲಾರದು" ಎಂದರ್ಥವು. ಧರ್ಮಾಧರ್ಮಗಳೆರಡನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಅನುಭವಿಸಿಯೇ ತೀರಿಸಬೇಕೆಂದು ಮುಖ್ಯಾರ್ಥವು.

1. ಇಲ್ಲಿ "ಪ್ರಾಪ್ತಂ ಧರ್ಮಫಲಂ ತಾವದ್ಭವತಾ ನಾತ್ರ ಸಂಶಯಃ। ಫಲಮಸ್ಯಾಪ್ಯಧರ್ಮಸ್ಯ ಕ್ಷಿಪ್ರಮೇವ ಪ್ರಪತ್ಸ್ಯಸೇ" ಎಂದು ಮೂಲವು. ಇಲ್ಲಿ ಶೂರನಾದ ನೀನು ನಿನ್ನ ಶೌರ್ಯಮಾರ್ಗವನ್ನು ಬಿಟ್ಟು, ಪರಸ್ತ್ರೀಯನ್ನು ಕದ್ದುತರುವುದಕ್ಕೆ ಪ್ರವರ್ತಿಸಿದಾಗಲೇ ನಿನ್ನ ಧರ್ಮಫಲವೆಲ್ಲವೂ ಕ್ಷೀಣಿಸಿಹೋಯಿತೆಂದೂ, ಅಧರ್ಮವನ್ನು ಪುನಃ ನೀನು ಗಳಿಸಿ ಕಾಪಾಡಿಕೊಳ್ಳಬೇಕಾದರೆ, ಈಗಲೂ ರಾಮನಿಗೆ ಸೀತೆಯನ್ನೊಪ್ಪಿಸಿ, ಅವನಲ್ಲಿ ಶರಣಾಗತಿರೂಪವಾದ ಪ್ರಧಾನ ಧರ್ಮವೊಂದನ್ನು ನಡೆಸಿದರೆ ಸಾಕೆಂದೂ ಹನುಮಂತನ ಅಭಿಪ್ರಾಯವೆಂದು ಗ್ರಾಹ್ಯವು.

ಸಂದೇಹವಿಲ್ಲ. ಈಗ ನೀನು ನಡೆಸಿರುವ ಸೀತಾಪಹಾರವೆಂಬ ಅಧರ್ಮವನ್ನು ಕೆಡಿಸ ತಕ್ಕ ಧರ್ಮವೊಂದಾದರೂ ನಿನ್ನಲ್ಲಿಲ್ಲ. ಆದುದರಿಂದ ಈ ನಿನ್ನ ಅಧರ್ಮಕ್ಕೆ ತಕ್ಕ ಫಲವನ್ನು ಶೀಘ್ರದಲ್ಲಿಯೇ ಅನುಭವಿಸಬೇಕಾಗುವುದನು. ಆದುದರಿಂದ ಈಗಲೂ ನೀನು ಧರ್ಮವನ್ನೇ ಆಚರಿಸಿದಪಕ್ಷದಲ್ಲಿ ನಿನ್ನ ಪಾಪಕರ್ಮಗಳೆಲ್ಲವೂ ನಶಿಸುವುವು. ಈ ಧರ್ಮಾಧರ್ಮ ವಿಚಾರವೂ ಹಾಗಿರಲಿ! ನಿನಗೆ ಧರ್ಮಾಪೇಕ್ಷೆಯಿಲ್ಲದಿದ್ದರೂ ಹೋಗಲಿ! ಪ್ರಕೃತಕಾರ್ಯವನ್ನಾದರೂ ನೀನು ಪರ್ಯಾಲೋಚಿಸಬೇಕು. ರಾಮನು ಕೇವಲ ಮನುಷ್ಯಮಾತ್ರನೆಂದೆಣಿಸಬೇಡ. ಆತನು ಜನಸ್ಥಾನದಲ್ಲಿ ತಾನೊಬ್ಬನೇ ನಿಂತು, ರಾಕ್ಷಸರೆಲ್ಲರನ್ನೂ ಕೊಂದುದನ್ನೂ, ಒಂದೇಬಾಣದಿಂದ ಮಹಾ ವೀರನಾದ ವಾಲಿಯನ್ನು ವಧಿಸಿದ ಸಂಗತಿಯನ್ನೂ, ರಾಮಸುಗ್ರೀವರಿಬ್ಬರಿಗೂ ಈಗ ಉಂಟಾಗಿರುವ ಸ್ನೇಹಾತಿಶಯವನ್ನೂ ಚೆನ್ನಾಗಿ ಪರ್ಯಾಲೋಚಿಸಿ, ಮುಂದೆ ನಿನಗೆ ಹಿತವಾಗುವ ರೀತಿಯನ್ನು ಚಿಂತಿಸು. ಎಲೆ ರಾವಣಾ! ಈಗ ನಾನೊಬ್ಬನೇ ಇಲ್ಲಿ ರಥಗಜತುರಗಾದಿಗಳಿಂದ ತುಂಬಿದ ಈ ಲಂಕೆಯನ್ನು ಧ್ವಂಸಮಾಡಿಬಿಡಬಲ್ಲೆನು. ಆದರೂ ಇದು ರಾಮನಿಗೆ ಸಮ್ಮತವಲ್ಲ. ಇಲ್ಲಿ ಸೀತೆಯನ್ನು ಹೀಗೆ ಗೋಳಾಡಿಸಿದ ಶತ್ರುಗಳೆಲ್ಲರನ್ನೂ ತನ್ನ ಕೈಯಿಂದ ತಾನೇ ಕೊಲ್ಲಬೇಕೆಂದು ರಾಮನು ಅನೇಕ ವಾನರಭಲ್ಲೂಕಸಮೂಹಗಳ ಮುಂದೆ ದೃಢ ಪ್ರತಿಜ್ಞೆಯನ್ನು ಮಾಡಿರುವನು. ಸಾಕ್ಷಾದ್ದೇವೇಂದ್ರನಾದರೂ ರಾಮನಿಗೆ ಅಪ ಕಾರವನ್ನು ಮಾಡಿ ಎಷ್ಟುಮಾತ್ರವೂ ಸುಖದಿಂದಿರಲಾರನು. ಇನ್ನು ನಿನ್ನಂತ ವನ ಸಂಗತಿಯನ್ನು ಕೇಳಬೇಕೆ? ನೀನು ಯಾರನ್ನು ಸೀತೆಯೆಂದು ಮಾತ್ರವೇ ತಿಳಿದಿರುವೆಯೋ, ಯಾವಳು ಈಗ ನಿನ್ನ ಕೈಯಲ್ಲಿ ಸಿಕ್ಕಿರುವಳೋ, ಆ ಸ್ತ್ರೀ ವ್ಯಕ್ತಿಯೇ ಈಗ ಈ ಲಂಕೆಯೆಲ್ಲವನ್ನೂ ನಾಶಹೊಂದಿಸತಕ್ಕ ಕಾಳರಾತ್ರಿ ಯೆಂದು ತಿಳಿ! ಆದುದರಿಂದ, ಎಲೆ ರಾವಣಾ! ಸೀತಾರೂಪದಿಂದಿರುವ ಈ ಕಾಲ ಪಾಶವನ್ನು ನಿನ್ನ ಕೈಯಿಂದ ನೀನೇ ಕೊರಲ್ಗೆಗೆ ಸುತ್ತಿಕೊಂಡಂತಾಯಿತು. ಈಗಲೂ ಅದನ್ನು ಬಿಟ್ಟು ನಿನಗೆ ಮುಂದೆ ಹಿತವಾವುದೋ ಅದನ್ನಾಲೋಚಿಸು. ಈ ನಿನ್ನ ಲಂಕೆಯು ಈಗಲೇ ಆ ಸೀತೆಯ ತೇಜಸ್ಸಿನಿಂದ ಅರ್ಧದಗ್ಧವಾಗಿರು ವುದು. ಇನ್ನು ರಾಮನ ಕೋಪಕ್ಕೂ ಪಾತ್ರವಾದರೆ ಇದು ಅಟ್ಟಳೆಗಳೊಡ ನೆಯೂ ರಾಜಬೀದಿಗಳೊಡನೆಯೂ ಸಂಪೂರ್ಣವಾಗಿ ದಗ್ಧವಾಗುವುದು. ಈ ನಿನ್ನ ದುಷ್ಕೃತ್ಯದಿಂದ ನೀನೊಬ್ಬನೇ ಸಾಯುವೆಯೆಂದೆಣಿಸಬೇಡ. ನಿನ್ನ ಮಿತ್ರರೂ, ನಿನ್ನ ಮಂತ್ರಿಗಳೂ, ನಿನ್ನ ಜ್ಞಾತಿಗಳೂ, ನಿನ್ನ ಸಹೋದರರೂ, ನಿನ್ನ ಪುತ್ರ ಕಳತ್ರಾದಿಗಳೂ, ನಿನ್ನ ಭೋಗಭಾಗ್ಯಗಳೂ ನಿನ್ನ ಈ ಲಂಕಾನಗರಿಯೂ

ನಿರ್ಮೂಲವಾಗಿ ನಾಶಹೊಂದುವುವು. ಈಗಲೂ ನೀನು ಇವೆಲ್ಲವನ್ನೂ ಉಳಿಸಿಕೊಳ್ಳುವ ಮಾರ್ಗವನ್ನು ನೋಡು. ಎಲೆ ರಾಕ್ಷಸಚಕ್ರವರ್ತಿ ! ನಾನು ರಾಮನಿಗೆ ಪ್ರಧಾನಭೃತ್ಯನಾದುದರಿಂದ ಆವನ ಪ್ರಭಾವವನ್ನು ಚೆನ್ನಾಗಿ ಬಲ್ಲೆನು. ಆವನ ಕಡೆಯ ರಾಯಭಾರಿಯಾಗಿ ನಾನು ಇಲ್ಲಿಗೆ ಬಂದಿರುವುದರಿಂದ ಮೊದಲು ನಿನಗೆ ಹಿತವನ್ನು ಹೇಳಬೇಕಾದುದೂ ನನ್ನ ಕೃತ್ಯವು. ಇದರಮೇಲೆ ನಾನು ನಿನ್ನಂತೆ ರಾಕ್ಷಸನೂ ಅಲ್ಲ ! ಆ ರಾಮನಂತೆ ಮನುಷ್ಯನೂ ಅಲ್ಲ ! ವಾನರಜಾತಿಯವನಾದುದರಿಂದ, ನಿಮ್ಮಿಬ್ಬರಿಗೂ ಮಧ್ಯಸ್ಥನಾಗಿ ನಿಷ್ಪಕ್ಷಪಾತ ಬುದ್ಧಿಯಿಂದಲೇ ಹೇಳುವೆನು. ಆದುದರಿಂದ ನನ್ನಮಾತನ್ನು ಕೇಳು. ನಾನು ಹೇಳಿದುದೆಲ್ಲವೂ ಸತ್ಯವೆಂದು ನಂಬು ! ನನ್ನ ಮಾತು ತಪ್ಪಲಾರದು. ಆ ರಾಮನನು ಸಾಮಾನ್ಯನೆಂದು ತಿಳಿಯಬೇಡ ! ಮಹಾಯಶಸ್ವಿಯಾದ ಆತನು ಪಂಚಮಹಾಭೂತಗಳೊಡನೆಯೂ, ಸ್ಥಾವರಜಂಗಮಗಳೊಡನೆಯೂ ಕೂಡಿದ ಈ ಸಮಸ್ತ ಲೋಕಗಳನ್ನೂ ತಾನೇ ಸಂಹರಿಸಿ, ತಿರುಗಿ ಅವುಗಳನ್ನು ಯಥಾಪ್ರಕಾರವಾಗಿ ಸೃಷ್ಟಿಸಬಲ್ಲನು. ಆ ರಾಮನು ಪರಾಕ್ರಮದಲ್ಲಿ ವಿಷ್ಣುದೇವನಿಗೆ ಸಮಾನನಾದುದರಿಂದ, ಅವನೊಡನೆ ಯುದ್ಧಮಾಡಬಲ್ಲವರು ದೇವದಾನವರಲ್ಲಿಯಾಗಲಿ, ಕ್ಷತ್ರಿಯರಲ್ಲಿಯಾಗಲಿ, ಯಕ್ಷರಲ್ಲಿಯಾಗಲಿ, ರಾಕ್ಷಸರಲ್ಲಿಯಾಗಲಿ, ವಿದ್ಯಾಧರರಲ್ಲಿಯಾಗಲಿ, ಸಿದ್ಧಗಂಧರ್ವಕಿನ್ನರರಲ್ಲಿಯಾಗಲಿ, ನಾಗರಲ್ಲಿಯಾಗಲಿ, ಪತಗರಲ್ಲಿಯಾಗಲಿ, ಬೇರೆ ಯಾವ ಪ್ರಾಣಿಗಳಲ್ಲಿಯಾಗಲಿ, ಯಾವ ಸ್ಥಳದಲ್ಲಿಯೂ, ಯಾವ ಕಾಲದಲ್ಲಿಯೂ, ಇಲ್ಲ ! ಎಲೆ ರಾವಣಾ ! ಸರ್ವಲೋಕೇಶ್ವರನಾಗಿಯೂ, ರಾಜಸಿಂಹನಾಗಿಯೂ ಇರುವ ಆ ರಾಮನಲ್ಲಿಯೇ ನೀನು ಇಂತಹ ಮಹಾಪರಾಧವನ್ನು ನಡೆಸಿಬಿಟ್ಟೆಯಲ್ಲಾ ! ಇನ್ನು ನಿನಗೆ ನಿನ್ನ ಪ್ರಾಣಗಳನ್ನು ದಕ್ಕಿಸಿಕೊಳ್ಳುವುದು ಸಾಧ್ಯವೆ ?' ಎಲೆ ರಾಕ್ಷಸೇಂದ್ರನೇ ! ಮುಖ್ಯವಾಗಿ ಈ ಮೂರು ಲೋಕಗಳನ್ನು ಸುತ್ತಿನೋಡಿದರೂ ದೇವತೆಗಳಾಗಲಿ, ದೈತ್ಯರಾಗಲಿ, ಗಂಧರ್ವರಾಗಲಿ, ವಿದ್ಯಾಧರರಾಗಲಿ, ಯಕ್ಷಕಿನ್ನರನಾಗರಲಿ, ಯಾರೇ ಇರಲಿ, ಆ ರಾಮನನ್ನಿದಿರಿಸಿ ಯುದ್ಧಕ್ಕೆ ನಿಲ್ಲಲಾರರು. ಈ ಸಾಮಾನ್ಯದೇವತೆಗಳೂ ಹಾಗಿರಲಿ. 1 ವೃತ್ರಾಸುರನನ್ನು ಕೊಂದುದರಿಂದ ಪ್ರಸಿದ್ಧ ಸಾಮರ್ಥ್ಯವುಳ್ಳವನಾಗಿ,

---

1. ಇಲ್ಲಿ "ಬ್ರಹ್ಮಾ ಸ್ವಯಂಭೂಶ್ಚತುರಾನನೋವಾ ರುದ್ರಸ್ತ್ರಿಣೇತ್ರಸ್ತ್ರಿಪುರಾಂತಕೋವಾ । ಇಂದ್ರೋ ಮಹೇಂದ್ರಸ್ಸುರನಾಯಕೋವಾ । ತ್ರಾತುಂ ನ ಶಕ್ತಾ ಯುಧಿ ರಾಮವಧ್ಯಮ್" ಎಂದು ಮೂಲವು, ಇಲ್ಲಿ ಶ್ಲೋಕಾನುಪೂರ್ವಿಯು ಹೀಗಿದ್ದರೂ, ಆಯಾದೇವತೆಗಳ ಪದವಿಯನ್ನನುಸರಿಸಿ ಯೋಜನೆಯನ್ನು ಮಾಡಬೇಕಾದುದರಿಂದ, ಮೊದಲು ಇಂದ್ರ

ಸಮಸ್ತ ದೇವತೆಗಳನ್ನೂ ತನಗೆ ಕೈವಶವಾಗಿ ಸಹಾಯಕ್ಕಿಟ್ಟುಕೊಂಡಿರತಕ್ಕ ತ್ರಿಲೋಕಾಧಿಪತಿಯಾದ ಇಂದ್ರನಾದರೂ, ತ್ರಿಪುರಾಸುರನನ್ನು ಕೊಂದ ಮೂರು ಕಣ್ಣಿನ ಕಾಲರುದ್ರನಾದರೂ, ಅಯೋನಿಜನೆಂದು ಖ್ಯಾತಿಗೊಂಡು ನಾಲ್ಕು ಮುಖವನ್ನು ಹೊತ್ತ ಬ್ರಹ್ಮನಾದರೂ, ಯುದ್ಧದಲ್ಲಿ ರಾಮನ ಕೊಲೆಗೀಡಾದವನನ್ನು ಮಾತ್ರ ಬಿಡಿಸಿ ರಕ್ಷಿಸಲಾರರು. ಈ ಮೂವರೂ ಏಕಕಾಲದಲ್ಲಿ ಒಂದಾಗಿ ಸೇರಿಬಂದರೂ, ರಾಮನಿಗೆ ವಧ್ಯನಾದವನನ್ನು ರಕ್ಷಿಸಲಾರರು" ಎಂದನು. ಹೀಗೆ ಹನುಮಂತನು ನಯಭಯಗಳೆರಡನ್ನೂ ತೋರಿಸುವಂತೆ ನಿರ್ಭಯ

---

ನನ್ನು ಗ್ರಹಿಸಬೇಕು. (ಇಂದ್ರಃ) "ಇದಿಪರಮೈಶ್ವರ್ಯೇ" ಎಂಬ ಧಾತ್ವರ್ಥದಂತೆ ಪರಮೈಶ್ವರ್ಯವುಳ್ಳ ತ್ರಿಲೋಕಾಧಿಪತಿಯೂ ಶಕ್ತನಲ್ಲ. "ತ್ರೈಲೋಕ್ಯಾಧಿಪತ್ಯವಿದ್ದರೂ ಪರನಿರಸನ ಸಾಮರ್ಥ್ಯವಿಲ್ಲದಿರಬಹುದಾದುದರಿಂದ ಅಶಕ್ತನಾಗಿರಬಾರದೆ?" ಎಂದರೆ, ಮಹೇಂದ್ರಃ) "ಯೋ ವೃತ್ರಮವಧೀದಿತಿ ತಸ್ಯ ಹೇಂದ್ರಸ್ಯ ಮಹೇಂದ್ರತ್ವಂ" ಎಂಬಂತೆ, ವೃತ್ರವಧದಿಂದ ಮಹೇಂದ್ರನೆಂದು ಪ್ರಸಿದ್ಧಿಹೊಂದಿದವನಾದರೂ ಶಕ್ತನಲ್ಲವು. ಹಾಗೆ ತಾನು ಚತುರನಾಗಿದ್ದರೂ ಸಹಾಯಸಂಪತ್ತಿಯಿಲ್ಲದಾಗ ಅಶಕ್ತನಾಗಿರನೆ? ಎಂದರೆ (ಸುರನಾಯಕೋವಾ) ಸಮಸ್ತದೇವತಾಗಣಗಳ ಸಹಾಯವುಳ್ಳವನಾದರೂ. ರಾಮನಿಗೆ ವಧ್ಯನಾದವನನ್ನು ರಕ್ಷಿಸಲಾರನು. ಇಂದ್ರನಿಂದ ಸಾಗದಿದ್ದರೂ ಸರ್ವಸಂಹಾರಕನಾದ ರುದ್ರನು ಶಕ್ತನಲ್ಲವೆ?" ಎಂದರೆ (ರುದ್ರಃ) ಪ್ರಳಯಕಾಲದಲ್ಲಿ ಸಮಸ್ತಜಗತ್ತನ್ನೂ ಕೊಲ್ಲ ಶಕ್ಯ ರುದ್ರನಿಗೂ ಸಾಧ್ಯವಲ್ಲವೆಂದು ಭಾವವು. ಇದೇ ಕ್ರಮದಲ್ಲಿ (ತ್ರಿನೇತ್ರಃ) (ತ್ರಿಪುರಾನ್ತಕಃ) ಇತ್ಯಾದಿ ರುದ್ರವಿಶೇಷಣಗಳಿಗೂ, ಹಣೆಗಣ್ಣಿನಿಂದ ಮನ್ಮಥನನ್ನು ದಹಿಸಿದವನೆಂದೂ, ಬೇರೆಯಾವದೇವತೆಗಳಿಗೂ ನಿಗ್ರಹಿಸಲಸಾಧ್ಯನಾದ ತ್ರಿಪುರಾಸುರನನ್ನುಕೊಂದವನೆಂದೂ ಮೇಲೆಮೇಲೆ ಅತಿಶಯವನ್ನು ಗ್ರಹಿಸಬೇಕು. ಇವರಿಬ್ಬರಿಗೂ ಸಾಧ್ಯವಲ್ಲದಿದ್ದರೂ "ಬ್ರಹ್ಮಣಃ ಪುತ್ರಾಯ ಜ್ಯೇಷ್ಠಾಯ ಶ್ರೇಷ್ಠಾಯ" ಎಂಬಂತೆ ಶಿವನಿಗೂ ತಂದೆಯೆನಿಸಿದ ಬ್ರಹ್ಮನಿಗಾದರೂ ಸಾಧ್ಯವಲ್ಲವೆ? ಎಂದರೆ ಅವನೂ ಶಕ್ತನಲ್ಲವೆಂಬುದಕ್ಕಾಗಿ (ಬ್ರಹ್ಮಾ) ಬ್ರಹ್ಮನಿಗೂ ಸಾಧ್ಯವಲ್ಲವೆಂದು ಭಾವವು. ಹಾಗೆಯೇ (ಸ್ವಯಂಭೂಃ ಚತುರಾನನೋವಾ) ಕರ್ಮವಶ್ಯನಲ್ಲದೆ ತನಗೆ ತಾನೇ ಹುಟ್ಟಿದವನಾದರೂ, ನಾಲ್ಕುಮುಖದವನಾಗಿದ್ದರೂ ಶಕ್ತನಲ್ಲವೆಂದರ್ಥವು. ಇವರೊಬ್ಬೊಬ್ಬರೇ ಅಲ್ಲದೆ ಈ ಮೂವರೂ ಒಟ್ಟಾಗಿ ಸೇರಿಬಂದರೂ ಶಕ್ತರಲ್ಲವೆಂಬುದಕ್ಕಾಗಿ (ನ ಶಕ್ತಾಃ) ಎಂದು ಬಹುವಚನವು. (ಯುಧಿ ನ ಶಕ್ತಾಃ) ಯುದ್ಧದಲ್ಲಿ ರಕ್ಷಿಸಿಕೊಳ್ಳಲಾರರೆಂಬುದರಿಂದ ಒಂದುವೇಳೆ ರಾಮನಲ್ಲಿ ಶರಣಾಗತಿಯನ್ನು ಮಾಡಿದರೆ ರಕ್ಷಿಸಬಹುದೆಂದೂ ಸೂಚಿತವು. ಈ ಶ್ಲೋಕಾರ್ಧದಿಂದ "ಹಿರಣ್ಯಗರ್ಭಸ್ಸಮವರ್ತತಾಗ್ರೇ" "ನಸನ್ನಾಸಿಚ್ಛಿವ ಏವ ಕೇವಲಃ" "ಇಂದ್ರೋ ಮಾಯಾಭಿಃ ಪುರುರೂಪ ಈಯತೇ" ಇತ್ಯಾದಿ ಶ್ರುತಿಪ್ರಮಾಣಗಳಿಂದ, ಪರದೇವತೆಗಳೆಂದು ಪ್ರಸಿದ್ಧರಾದ ಬ್ರಹ್ಮೇನ್ದ್ರ ಶಿವರು ಮೂವರಿಗಿಂತಲೂ ಈತನೇ ಮೇಲೆಂದು ಸೂಚಿತವು. ಮತ್ತು ರಕ್ಷಣಕಾರ್ಯದಲ್ಲಿ ಪ್ರಧಾನ ದೇವತೆಗಳನ್ನು ನಿರಾಕರಿಸುವ ಈ ಪ್ರಕರಣದಲ್ಲಿ ವಿಷ್ಣುವನ್ನು ಹೇಳದುದರಿಂದ, ರಾಮನೇ ವಿಷ್ಣುವೆಂದೂ ಪ್ರತಿಪಾದಿತವು. (ಗೋವಿಂದರಾಜರು.)

ವಾಗಿ ಹೇಳಿದ ಮಾತುಗಳನ್ನು ಕೇಳಿ ರಾವಣನು, ಆವನ ಮಾತುಗಳೆಲ್ಲವೂ ತನಗೆ ಅಪ್ರಿಯವೆಂದೆಣಿಸಿ ಕೋಪಗೊಂಡು ಕಣ್ಣಾಲಿಗಳನ್ನು ತಿರುಗಿಸುತ್ತ, ಆಗಲೇ ಆ ಮಹಾಕಪಿಯನ್ನು ಕೊಂದುಬಿಡುವಂತೆ ತನ್ನ ಕಡೆಯ ರಾಕ್ಷಸರಿಗೆ ನಿಯಮಿಸಿದನು.

ಇಲ್ಲಿಗೆ ಐವತ್ತೊಂದನೆಯ ಸರ್ಗವು.

---

ವಿಭೀಷಣನು ದೂತಕಾರ್ಯಕ್ಕಾಗಿ ಬಂದವರನ್ನು ಕೊಲ್ಲು ವುದು ರಾಜಧರ್ಮಕ್ಕೆ ವಿರುದ್ಧವೆಂದು ರಾವಣನಿಗೆ ಬುದ್ಧಿ ವಾದವನ್ನು ಹೇಳಿ ತಡೆದುದು.

ಹೀಗೆ ಮಹಾಪ್ರಭಾವವುಳ್ಳ ಆ ಕಪಿಯು ಹೇಳಿದ ಮಾತನ್ನು ಕೇಳಿ ದೊಡನೆ, ರಾವಣನು ಕೋಪದಿಂದ ಮೈಮರೆತು, ಆಗಲೇ ಆ ಕಪಿಯನ್ನು ಕೊಲ್ಲುವಂತೆ ಅಲ್ಲಿದ್ದ ರಾಕ್ಷಸರಿಗೆ ಆಜ್ಞಾಪಿಸಿದನು. ದುರಾತ್ಮನಾದ ರಾವಣನು ಹೀಗೆ ದೂತಕಾರ್ಯವನ್ನು ತಿಳಿಸುವುದಕ್ಕಾಗಿ ತನ್ನಲ್ಲಿಗೆ ಬಂದಿರುವ ಕಪಿಯನ್ನು ಕೊಲ್ಲಬೇಕೆಂದು ಆಜ್ಞೆಮಾಡಿದ ವಿಷಯವು, ಆವನ ತಮ್ಮನಾದ ವಿಭೀಷಣನ ಮನಸ್ಸಿಗೆ ಸಮ್ಮತವಾಗಲಿಲ್ಲ. ಆದುದರಿಂದ ಕಾರ್ಯಾಕಾರ್ಯಗಳನ್ನು ಚೆನ್ನಾಗಿ ಬಲ್ಲ ಆ ವಿಭೀಷಣನು, ತನ್ನಣ್ಣನಾದ ರಾವಣನು ಹಾಗೆ ಕೋಪದಿಂದ ಮೈಮರೆತು, ದೂತವಧರೂಪವಾದ ಆ ದುಷ್ಕಾರ್ಯಕ್ಕೆ ಕೈಯಿಕ್ಕಿರುವುದನ್ನು ನೋಡಿ, ಇದಕ್ಕೆ ಪರಿಹಾರವೇನೆಂದು ತನ್ನಲ್ಲಿ ತಾನು ಚಿಂತಿಸುತ್ತಿದ್ದನು. ಆಮೇಲೆ ಆವನು ತನ್ನ ಮನಸ್ಸಿನಲ್ಲಿ ತಾನೇ ಯುಕ್ತಾಯುಕ್ತವನ್ನು ಪರ್ಯಾಲೋಚಿಸಿ ನಿಶ್ಚಯಿಸಿಕೊಂಡು, ಆಣ್ಣನಾದ ರಾವಣನನ್ನು ಬಹಳ ಗೌರವದಿಂದ ಮನ್ನಿಸಿ, ಸಾಂತ್ವವಾಕ್ಯಗಳಿಂದಲೇ ಅವನಿಗೆ ಹಿತವಾದಗಳನ್ನು ಹೇಳತೊಡಗಿದನು. ಅಣ್ಣಾ! ನೀನು ರಾಕ್ಷಸರಾಜನಲ್ಲವೇ? ಈ ಕಪಿಯಲ್ಲಿ ಇಷ್ಟು ಕೋಪವೇಕೆ? ಮನ್ನಿಸು! ಕೋಪವನ್ನು ಬಿಡು! ನನ್ನಲ್ಲಿ ಪ್ರಸನ್ನನಾಗು! ನನ್ನ ಮಾತನ್ನು ಲಾಲಿಸಿ ಕೇಳು! ಯುಕ್ತಾಯುಕ್ತ ವಿವೇಕವುಳ್ಳ ರಾಜಶ್ರೇಷ್ಠರು ದೂತಕಾರ್ಯಕ್ಕಾಗಿ ತಮ್ಮಲ್ಲಿಗೆ ಬಂದವರನ್ನು ಎಂದಿಗೂ ಕೊಲ್ಲಿಸಬಾರದು. ದೂತರನ್ನು ಕೊಲ್ಲುವುದು ರಾಜಧರ್ಮಕ್ಕೆ ಬಹಳ ವಿರುದ್ಧವಾದ ಕಾರ್ಯವು! ಲೋಕದ ನಡತೆಯಲ್ಲಿಯೂ ಇದು ಬಹಳ

ನಿಂದಾಸ್ಪದವಾದುದು. ಈ ಕಾಡು ಕಪಿಯನ್ನು ಕೊಲ್ಲುವುದು ಲೋಕೈಕವೀರ ನೆನಿಸಿಕೊಂಡ ನಿನ್ನ ಗೌರವಕ್ಕೂ ಸರಿಯಾದುದಲ್ಲ. ನೀನೋ ಧರ್ಮಸೂಕ್ಷ್ಮಗ ಳಿಲ್ಲವನ್ನೂ ಚೆನ್ನಾಗಿ ಬಲ್ಲವನು. ಕೃತಜ್ಞನು. ರಾಜಧರ್ಮಗಳಲ್ಲಿ ನಿಪುಣನು. ಕಾರ್ಯಾಕಾರ್ಯಗಳನ್ನು ಬಲ್ಲವನು! ಸಮಸ್ತ ಭೂತಗಳಲ್ಲಿಯೂ ನೀನೊಬ್ಬನೇ ಸಮಸ್ತತತ್ವಗಳನ್ನೂ ತಿಳಿದವನು. ನಿನ್ನಂತೆ ಶಾಸ್ತ್ರಜ್ಞಾನವುಳ್ಳವರೇ ಹೀಗೆ ಕೋಪಕ್ಕೆ ವಶರಾದರೆ, ಸಂಪಾದಿಸಿದ ಶಾಸ್ತ್ರಜ್ಞಾನವೆಲ್ಲವೂ ವ್ಯಥಾಶ್ರಮದಲ್ಲಿ ಪರ್ಯವಸಾನಹೊಂದಿದಂತಾಗುವುದಿಲ್ಲವೆ? ಆದುದರಿಂದ ಪ್ರಸನ್ನನಾಗು! ನೀನು ಎಂತಹ ಶತ್ರುಗಳನ್ನಾದರೂ ಸಂಹರಿಸಬಲ್ಲವನು. ಸಮಸ್ತ ರಾಕ್ಷಸರಿಗೂ ಚಕ್ರವರ್ತಿಯು. ಲೋಕದಲ್ಲಿ ಯಾರೂ ನಿನಗಿದಿರಲ್ಲ. ಈ ನಿನ್ನ ಗೌರವಗಳೆಲ್ಲವನ್ನೂ ನೀನು ಚೆನ್ನಾಗಿ ಗಮನಿಸಿ ಯುಕ್ತಾಯುಕ್ತ ಗಳನ್ನೂ ಚೆನ್ನಾಗಿ ನಿಶ್ಚಯಿಸಿಕೊಂಡು, ದೂತರಾಗಿ ಬಂದವರನ್ನು ದಂಡಿಸ ಬೇಕಾದ ರೀತಿಯಲ್ಲಿ ಈ ಕಪಿಯನ್ನು ದಂಡಿಸು'' ಎಂದನು ರಾಕ್ಷಸೇಶ್ವರ ನಾದ ರಾವಣನಾದರೋ, ತನ್ನ ತಮ್ಮನಾದ ವಿಭೀಷಣನು ಹೇಳಿದ ಈ ಬುದ್ಧಿ ವಾದಗಳನ್ನು ಕೇಳಿಯೂ, ತನ್ನ ಅತ್ಯಾಕ್ರೋಶವನ್ನು ತಾನು ಬಿಡದೆ ಅವ ನಿಗೆ ಪ್ರತ್ಯುತ್ತರವನ್ನು ಕೊಡುವನು. "ಎಲೆ ವತ್ಸ ವಿಭೀಷಣಾ! ಪಾಪಿ ಗಳನ್ನು ಕೊಲ್ಲುವುದರಿಂದ ದೋಷವಿಲ್ಲ. ಆದುದರಿಂದ ಪಾಪಿಯಾದ ಈ ವಾನರ ನನ್ನು ನಾನು ಕೊಲ್ಲಿಸುವುದೇ ನಿಜವು'' ಎಂದನು. ಹೀಗೆ ರಾವಣನು ಅಧರ್ಮಹೇತುವಾಗಿಯೂ, ಅತ್ಯಾಕ್ರೋಶಸೂಚಕವಾಗಿಯೂ, ಸಜ್ಜನನಿಂದಿತ ವಾಗಿಯೂ ಇರುವ ಈ ಮಾತುಗಳನ್ನು ಹೇಳಲು, ಅದನ್ನು ಕೇಳಿ ಬುದ್ಧಿ ವಂತರಲ್ಲಿ ಮೇಲೆನಿಸಿಕೊಂಡ ವಿಭೀಷಣನು, ತಿರುಗಿ ಆ ರಾವಣನನ್ನು ಕುರಿತು, ಸಾರವತ್ತಾದ ಒಂದಾನೊಂದು ವಾಕ್ಯವನ್ನು ಹೇಳುವನು. "ಎಲೆ ರಾಕ್ಷ ಸೇಂದ್ರನೆ! ಪ್ರಸನ್ನನಾಗು! ಧರ್ಮಾರ್ಥಯುಕ್ತವಾದ ನನ್ನ ಮಾತನ್ನು ಲಾಲಿಸು! ದೂತರಾಗಿ ಬಂದವರನ್ನು ಯಾವಾಗಲೂ ಎಲ್ಲಿಯೂ ಕೊಲ್ಲಬಾರ ದೆಂದು ಹಿರಿಯರು ಹೇಳಿರುವರು. "ಇವನು ದೂತನೆಂಬ ನೆವದಿಂದ ಬಂದಿದ್ದರೂ, ನಮ್ಮ ಪ್ರೀತಿಯ ಮಗನಾದ ಅಕ್ಷನೇ ಮೊದಲಾದವರನ್ನು ಕೊಂದುದರಿಂದ ಶತ್ರುವೆಂದೆಣಿಸಿ ಇವನನ್ನು ಕೊಲ್ಲಬೇಡವೆ?'' ಎಂದು ನೀನು ಹೇಳಬಹುದು. ಇವನು ನಮಗೆ ಶತ್ರುವೆಂಬುದರಲ್ಲಿ ಸಂದೇಹವೇ ಇಲ್ಲ. ಮೇಲೆಮೇಲೆ ಹೆಚ್ಚಿ ಬರುವ ಇವನ ಕೊಬ್ಬನ್ನು ನಾವು ಅಡಗಿಸಬೇಕಾದುದೂ ಯುಕ್ತವು. ಇವನು ನಮ್ಮಲ್ಲಿ ಎಣಿಸಬಾರದ ಮಹಾಪರಾಧವನ್ನು ಮಾಡಿರುವುದೂ ನಿಜವು. ಹೇಗಿದ್ದರೂ

ದೂತರನ್ನು ಕೊಲ್ಲಬಾರದೆಂದೇ ದೊಡ್ಡವರು ಹೇಳಿರುವರು. ದೂತರನ್ನಡಗಿಸುವುದಕ್ಕೆ ಬೇರೆ ಅನೇಕ ದಂಡನೆಗಳುಂಟು. ಅವರ ಕೈಕಾಲು ಮುಂತಾದ ಅವಯವಗಳನ್ನು ಕತ್ತರಿಸಿ ವಿರೂಪವಮಾಡುವುದು, ಕಶೆಯಿಂದ ಹೊಡೆಸುವುದು, ಮುಂಡನವಮಾಡಿ ಕಳುಹಿಸುವುದು, ಅವಮಾನಸೂಚಕವಾಗಿ ಹಣೆಮುಂತಾದ ಕಡೆಗಳಲ್ಲಿ ಬರೆಯಿಳೆಯುವುದು; ಇವೆಲ್ಲವೂ ದೂತರನ್ನು ದಂಡಿಸತಕ್ಕ ಕ್ರಮಗಳೆಂದು ರಾಜನೀತಿಜ್ಞರು ಹೇಳಿರುವರು. ದೂತರಿಗೆ ವಧರೂಪವಾದ ಶಿಕ್ಷೆಯನ್ನು ನಾನು ಇದುವರೆಗೆ ಎಲ್ಲಿಯೂ ಕೇಳಿದುದೇ ಇಲ್ಲ. ಅಣ್ಣಾ ! ನೀನಾದರೋ ಧರ್ಮಾರ್ಥವಿಚಾರಗಳಲ್ಲಿ ಚೆನ್ನಾಗಿ ಶಿಕ್ಷಿತವಾದ ಬುದ್ಧಿಯುಳ್ಳವನು. ಯುಕ್ತಾಯುಕ್ತಗಳನ್ನು ನಿಶ್ಚಯಿಸಿ ತಿಳಿದವನು. ನಿನ್ನಂತವನೇ ಹೀಗೆ ಕೋಪವಶನಾಗುವುದೆಂದರೇನು? ಧೀರರಾದವರು ಎಷ್ಟೇ ಕೋಪವನ್ನಾದರೂ ಅಡಗಿಸಿಕೊಳ್ಳಬೇಡವೆ? ಎಲೈ ವೀರನೆ! ಶಾಸ್ತ್ರವಿಚಾರಗಳಲ್ಲಿಯಾಗಲಿ ಲೌಕಿಕಾಚಾರಗಳಲ್ಲಿಯಾಗಲಿ, ಶಾಸ್ತ್ರಾರ್ಥಗಳನ್ನು ಕೂಲಂಕಷವಾಗಿ ತಿಳಿದು ಧರ್ಮವನ್ನು ತಿಳಿದು, ನಿರ್ಧರಿಸುವುದರಲ್ಲಿಯಾಗಲಿ, ಲೋಕದಲ್ಲಿ ನಿನಗೆಣೆಯಾದವನೇ ಇಲ್ಲ! ಸಮಸ್ತದೇವಾಸುರರಿಗೂ ನೀನು ಮೇಲೆನಿಸಿಕೊಂಡವನು. ಹೀಗಿದ್ದರೂ ನೀನು ಧರ್ಮವಿರುದ್ಧವಾದ ಈ ಕಾರ್ಯವನ್ನು ಆಜ್ಞಾಪಿಸಬಹುದೆ? ಒಂದುವೇಳೆ ನಿನ್ನ ವೈರಿಗಳು ಇಲ್ಲಿಗೆ ಬರುವರೆಂಬ ಭಯಕ್ಕಾಗಿ ನೀನು ಇಲ್ಲಿಯೇ ಈ ದೂತನನ್ನು ಕೊಲ್ಲಬೇಕೆಂದೆಣಿಸುವೆಯಾ? ಯಾವ ವೈರಿಗಳು ಬಂದರೂ ನಿನಗೆ ಭಯವೇನು? ವೀರ್ಯದಲ್ಲಿಯೂ, ಉತ್ಸಾಹದಲ್ಲಿಯೂ, ಧೈರ್ಯದಲ್ಲಿಯೂ ಮೇಲೆನಿಸಿಕೊಂಡ ದೇವಾಸುರರಾದರೂ ನಿನ್ನನ್ನು ಜಯಿಸಲಾರರು. ಎಣೆಯಿಲ್ಲದ ಮಹಾಪ್ರಭಾವವುಳ್ಳ ನೀನು ಅನೇಕಾವರ್ತಿ ದೇವಗಣಗಳನ್ನೂ, ಕ್ಷತ್ರಿಯರನ್ನೂ ಯುದ್ಧಗಳಲ್ಲಿ ಜಯಿಸಿ ಓಡಿಸಿರುವೆ. ಹೀಗೆ ದೇವಾಸುರರನ್ನೂ ಜಯಿಸಿದ ಶೂರನಾಗಿಯೂ, ವೀರನಾಗಿಯೂ ದುರ್ಜಯನಾಗಿಯೂ ಇರುವ ನಿನ್ನ ವಿಷಯದಲ್ಲಿ ಮನಸ್ಸಿನಿಂದಲಾದರೂ ಕೇಡನ್ನು ಬಯಸಿ ಬದುಕುವವರುಂಟೆ? ಮೊದಲು ನಿನ್ನಿಂದ ತಲೆತಪ್ಪಿಸಿಕೊಂಡು ಬದುಕಿಹೋಗುವುದೇ ನಿನ್ನ ಶತ್ರುಗಳಿಗೆ ಕಷ್ಟವಾಯಿತಲ್ಲವೆ? ಅಣ್ಣಾ! ನೀನು ಈಗ ಈ ಕಪಿಯನ್ನು ಕೊಲ್ಲುವುದರಿಂದ ನನಗೆ ಯಾವ ಗುಣವೂ ತೋರಲಿಲ್ಲ. ನೀನು ಉದ್ದೇಶಿಸಿರುವ ಈ ಕ್ರೂರದಂಡನೆಯನ್ನೇ ಇಲ್ಲಿಗೆ ಈ ಕಪಿಯನ್ನು ಕಳುಹಿಸಿದ ನಿನ್ನ ಶತ್ರುಗಳಲ್ಲಿ ಪ್ರಯೋಗಿಸು! ಈ ವಾನರನು ಸಾಧುವಾಗಲಿ, ಅಥವಾ ದುಷ್ಟನಾಗಲಿ, ಬೇರೊಬ್ಬರ ಮಾತಿನ ಮೇಲೆ ಇಲ್ಲಿಗೆ ಬಂದಿರುವನೇ ಹೊರತು ತಾನಾಗಿ ಬಂದವನಲ್ಲ. ಯಾವವಿಧ

ದಲ್ಲಿಯೂ ಇವನು ಸ್ವತಂತ್ರನಲ್ಲದುದರಿಂದ, ಇವನು ಹೇಳಿದ ಮಾತುಗಳನ್ನೂ ನಿನ್ನ ಶತ್ರುಗಳ ಮಾತುಗಳನ್ನಾಗಿಯೇ ಎಣಿಸಬೇಕಲ್ಲವೆ? ಆದುದರಿಂದ ಪರಾಧೀನನಾಗಿ ಬಂದಿರುವ ಈ ದೂತನನ್ನು ಕೊಲ್ಲುವುದುಚಿತವಲ್ಲ. ಒಂದುವೇಳೆ ನೀನು ಈತನನ್ನು ಕೊಂದುಬಿಟ್ಟರೆ ತಿರುಗಿ ಈ ಮಹಾಸಮುದ್ರವನ್ನು ದಾಟಿ ಇಲ್ಲಿಗೆ ಬರಬಲ್ಲ ಬೇರೊಬ್ಬ ಖೇಚರನಾವನೆಂದು ನನಗೆ ತೋರಲಿಲ್ಲ. ಆ ಮೇಲೆ ಇಲ್ಲಿನ ವೃತ್ತಾಂತವನ್ನು ನಿನ್ನ ಶತ್ರುಗಳಾದ ರಾಮಲಕ್ಷ್ಮಣರಿಗೆ ತಿಳಿಸಿ ಅವರನ್ನು ಇಲ್ಲಿಗೆ ಕರೆತರುವವನಾರು? ಆಗ ನಿನ್ನ ಶತ್ರುಗಳನ್ನು ಕೊಲ್ಲುವುದಕ್ಕೂ ನಿನಗೆ ಅವಕಾಶವಿಲ್ಲದೆ ಹೋಗುವುದಲ್ಲವೆ? ಆದುದರಿಂದ, ಎಲೈ ಪರಂತಪನೆ! ಈ ಕಪಿಯನ್ನು ಕೊಲ್ಲಬೇಕೆಂಬ ಯತ್ನವನ್ನು ಬಿಡು! ನಿನ್ನ ಪರಾಕ್ರಮವಾದರೋ ಇಂದ್ರಾದಿದೇವತೆಗಳಲ್ಲಿ ಮಾತ್ರವೇ ಉಪಯೋಗಿಸುವುದಕ್ಕೆ ಯೋಗ್ಯವಾದುದು. ಅದನ್ನು ಈ ಕಾಡುಕಪಿಯ ಮೇಲೆ ತೋರಿಸಿದರೆ ನಿನ್ನ ಮಾನಕ್ಕೆ ಕಡೆಯುವುದೆ? ನೀನೋ ಯುದ್ಧದಲ್ಲಿ ವಿಶೇಷಪ್ರೀತಿಯುಳ್ಳವನು. ಹೀಗಿರುವಾಗಲೂ ನೀನು ಇಲ್ಲಿಯೇ ಈ ದೂತನನ್ನು ಕೊಂದುಬಿಟ್ಟರೆ, ಇಲ್ಲಿಂದ ಹೋಗಿ ರಾಮಲಕ್ಷ್ಮಣರಿಗೆ ಇಲ್ಲಿ ಸೀತೆಯಿರುವ ಸಂಗತಿಯನ್ನು ತಿಳಿಸಿ ಅವರನ್ನು ಕರೆತರುವವರಾರು? ಅಂತಹ ದೂತನು ಬೇರೊಬ್ಬನಿರುವನೆಂದು ನನಗೆ ತೋರಲಿಲ್ಲ. ಆದುದರಿಂದ ಅವರೊಡನೆ ನಿನಗೆ ಯುದ್ಧವು ತಾನೇ ಹೇಗೆ ಸಂಭವಿಸುವುದು? ನೀನು ರಾಕ್ಷಸರ ಮನಸ್ಸನ್ನು ಉಲ್ಲಾಸಗೊಳಿಸತಕ್ಕವನು. ಧೈರ್ಯೋತ್ಸಾಹ ಪರಾಕ್ರಮಗಳಲ್ಲಿ ಮೇಲೆನಿಸಿದ ದೇವಾಸುರರೂ ನಿನ್ನನ್ನು ಗೆಲ್ಲಲಾರರು. [1] ಇಂತಹ ಮಹಾವೀರನಾದ ನಿನಗೆ ಒಳ್ಳೆಯುದ್ಧವು ಬಂದೊದಗುತ್ತಿರುವಾಗ, ಅದನ್ನು ನೀನೇ ತಪ್ಪಿಸಿಕೊಳ್ಳುವುದು ಯುಕ್ತವೆ? ನಿನ್ನ ವಶದಲ್ಲಿಯೋ ಕೋಟ್ಯನುಕೋಟಿ ರಾಕ್ಷಸಯೋಧರಿರುವರು. ಅವರಲ್ಲಿ ಒಬ್ಬೊಬ್ಬರೂ ನಿನಗೆ ಮನಃಪೂರ್ವಕವಾಗಿ ಹಿತವನ್ನು ಬಯಸತಕ್ಕವರು! ಒಬ್ಬೊಬ್ಬರೂ ಅಸಹಾಯಶೂರರು! ಒಬ್ಬೊಬ್ಬರೂ ದಾನಮಾನಾದಿಗಳಿಂದ ನಿನಗೆ ವಶರಾಗಿರುವವರು! ಒಬ್ಬೊಬ್ಬರೂ ಉತ್ತಮಕುಲದಲ್ಲಿ ಜನಿಸಿದವರು! ಒಬ್ಬೊಬ್ಬರೂ ಮಹಾಧೀರರು! ಒಬ್ಬೊಬ್ಬರೂ ಶಸ್ತ್ರಧಾರಿಗಳಲ್ಲಿ ಮೇಲೆನಿಸಿಕೊಂಡವರು! ಆದುದರಿಂದ ಇವರಲ್ಲಿ ಕೆಲವರು, ನಿನ್ನ ಸೈನ್ಯಗಳಲ್ಲಿ ಕೆಲವನ್ನು ಸಂಗಡ ಕರೆದುಕೊಂಡು, ಈಗಲೇ ನಿನ್ನಾಜ್ಞೆಯಿಂದ ಹೊರಟು,

---

1. ಇಲ್ಲಿ ವಿಭೀಷಣನು, ರಾವಣನು ರಾಜಸಸ್ವಭಾವವುಳ್ಳವನಾದುದರಿಂದ, ಅವನ ಸ್ವಭಾವಕ್ಕನುಗುಣವಾಗಿ ಅವನಿಗೆ ಯುದ್ಧದಾಸೆಯನ್ನೇ ತೋರಿಸಿ, ರಾವಣನನ್ನು ನಿಂದಿಸಿ ಹನುಮಂತನನ್ನು ಕೊಲ್ಲದಹಾಗೆ ಮಾಡುವನೆಂದು ಗ್ರಾಹ್ಯವು.

ಮೂಢರಾದ ರಾಮಲಕ್ಷ್ಮಣರೆಂಬ ಆ ರಾಜಪುತ್ರರಿಬ್ಬರನ್ನೂ ನಿಗ್ರಹಿಸಿ, ಅವರಿಗೆ ನಿನ್ನ ಪ್ರಭಾವವೆಷ್ಟೆಂಬುದನ್ನು ತೋರಿಸಿಬರಲಿ! ಈ ಉಪಾಯಗಳೊಂದನ್ನೂ ಪರ್ಯಾಲೋಚಿಸದೆ ಇಲ್ಲಿಯೇ ಈ ದೂತನನ್ನು ಕೊಂದುಬಿಡುವುದರಿಂದೇನು ಫಲ?'' ಎಂದನು. ರಾಕ್ಷಸಚಕ್ರವರ್ತಿಯಾಗಿಯೂ, ದೇವತೆಗಳಿಗೆ ಮುಖ್ಯಶತ್ರುವಾಗಿಯೂ, ಮಹಾಬಲಾಢ್ಯನಾಗಿಯೂ ಇರುವ ರಾವಣನು, ತನ್ನ ತಮ್ಮನಾದ ವಿಭೀಷಣನು ತನ್ನ ಮನಸ್ಸಿಗೊಪ್ಪುವಂತೆ ಹೇಳಿದ ಈ ಮಾತುಗಳನ್ನು ಕೇಳಿ, ತನ್ನ ಮನಸ್ಸಿನಲ್ಲಿ ತಾನೂ ಪರ್ಯಾಲೋಚಿಸಿ, ಕೊನೆಗೆ ಅವನ ಮಾತನ್ನೇ ಅಂಗೀಕರಿಸಿದನು.

ಇಲ್ಲಿಗೆ ಐವತ್ತೆರಡನೆಯ ಸರ್ಗವು.

---

ರಾವಣಾಜ್ಞೆಯಿಂದ ರಾಕ್ಷಸರು ಹನುಮಂತನ ಬಾಲಕ್ಕೆ ಬೆಂಕಿಯನ್ನು ಹತ್ತಿಸಿ, ಲಂಕೆಯ ಬೀದಿಗಳಲ್ಲಿ ಸುತ್ತಿಸಿದುದು, ಇದನ್ನು ತಿಳಿದು ಸೀತೆಯು ಅಗ್ನಿದೇವನನ್ನು ಪ್ರಾರ್ಥಿಸಲು, ಅಗ್ನಿಯು ಹನುಮಂತನ ಬಾಲವನ್ನು ಸುಡದೆ ಶೀತಲನಾಗಿದ್ದುದು.

ತಮ್ಮನಾದ ವಿಭೀಷಣನು ದೇಶಕಾಲೋಚಿತವಾಗಿ ಹೇಳಿದ ಮಾತನ್ನು ಕೇಳಿ ಮಹಾಬಲಾಢ್ಯನಾದ ರಾವಣನು, ತಿರುಗಿ ಅವನನ್ನು ಕುರಿತು, ''ವಿಭೀಷಣಾ? ನೀನು ಹೇಳಿದುದೇ ಯುಕ್ತವು. ದೂತರನ್ನು ಕೊಲ್ಲುವುದೇನೋ ನಿಂದ್ಯವಾದ ಕಾರ್ಯವೇ ನಿಜವು! ಆದರೆ ಈ ಕಪಿಯನ್ನು ಕೊಲ್ಲದೆ ಹೋದರೂ ಇದಕ್ಕೆ ಬೇರೊಂದು ಶಿಕ್ಷೆಯನ್ನಾದರೂ ಮಾಡಿಯೇ ತೀರಬೇಕು. ಕಪಿಗಳು ತಮ್ಮ ಬಾಲವೇ ತಮಗೊಂದು ದೊಡ್ಡ ಅಲಂಕಾರವೆಂದು ತಿಳಿದು ಬಾಲದಲ್ಲಿ ಬಹಳ ಪ್ರೀತಿಯನ್ನಿಟ್ಟಿರುವುವು ಆದುದರಿಂದ ಇದರ ಬಾಲಕ್ಕೆ ಬೆಂಕಿಯನ್ನು ಹತ್ತಿಸಿ ಸುಡಿಸಿಬಿಡು! ಇದು ಸುಟ್ಟಬಾಲದೊಡನೆಯೇ ತನ್ನೊಡೆಯನ ಬಳಿಗೆ ಹೋಗಲಿ! ಅಂಗಹೀನವಾಗಿ ದೈನ್ಯದಿಂದ ಮುಂದೆ ಬಂದು ನಿಂತಿರುವ ಈ ಕಪಿಯನ್ನು, ಇದರ ಮಿತ್ರರೂ, ಜ್ಞಾತಿಗಳೂ, ಬಂಧುಗಳೂ, ಪ್ರಿಯಜನರೂ ನೋಡಿ ಹಾಸ್ಯಮಾಡಲಿ!'' ಎಂದನು. ಆಮೇಲೆ ರಾವಣನು ಅಲ್ಲಿದ್ದ ರಾಕ್ಷಸಭಟರನ್ನು ನೋಡಿ, ''ಎಲೆ ರಾಕ್ಷಸರೆ! ಈ ಕಪಿಯ ಬಾಲಕ್ಕೆ ಬೆಂಕಿಯನ್ನು ಹತ್ತಿಸಿ, ನಮ್ಮ

ಪಟ್ಟಣದ ಬೀದಿಗಳಲ್ಲಿಯೂ, ಚತುಷ್ಪಥಗಳಲ್ಲಿಯೂ ಸುತ್ತಿಸಿಕೊಂಡು ಬನ್ನಿರಿ" ಎಂದು ನಿಯಮಿಸಿದನು. ರಾವಣನ ಈ ಆಜ್ಞೆಯನ್ನು ಕೇಳಿದೊಡನೆ ಅಲ್ಲಿದ್ದ ರಾಕ್ಷಸಭಟರು ಕೋಪಾವಿಷ್ಟರಾಗಿ ಬಂದು ಆ ಹನುಮಂತನ ಬಾಲಕ್ಕೆ ಹರಕು ಬಟ್ಟೆಗಳನ್ನು ತಂದು ಸುತ್ತಿದರು. ರಾಕ್ಷಸರು ಬಾಲಕ್ಕೆ ಬಟ್ಟೆಯನ್ನು ಸುತ್ತುತ್ತಿರುವಾಗಲೇ ಹನುಮಂತನು ಕೋಪಗೊಂಡು, ಒಣಗಿದ ಕಾಡಿಗೆ ತಗುಲಿದ ಬೆಂಕಿಯಂತೆ ಕ್ಷಣಮಾತ್ರದಲ್ಲಿ ಉಬ್ಬಿಬಳೆದನು. ಆ ಮೇಲೆ ರಾಕ್ಷಸರು ಬಟ್ಟೆ ಸುತ್ತಿದ ಆ ಹನುಮಂತನ ಬಾಲಕ್ಕೆ ಎಣ್ಣೆಯನ್ನು ಸುರಿದು, ಬೆಂಕಿಯನ್ನೂ ತೋರಿಸಿದರು. ಇದರಿಂದ ಹನುಮಂತನಿಗೆ ಮನಸ್ಸಿನಲ್ಲಿ ರೋಷಾವೇಶಗಳು ಉಕ್ಕಿಬರುತ್ತಿರಲು, ಬಾಲಸೂರ್ಯನಂತೆ ಕೆಂಪಾದ ಮುಖವುಳ್ಳವನಾಗಿ, ಉರಿಯುತ್ತಿದ್ದ ಬಾಲವನ್ನು ಗಿರ್ರನೆ ತಿರುಗಿಸಿ ತನ್ನನ್ನು ಸುತ್ತಿಮುತ್ತಿದ್ದ ಸಮಸ್ತ ರಾಕ್ಷಸರನ್ನೂ ಅದರಿಂದಲೇ ಅಪ್ಪಳಿಸಿ ಕೆಡಹಿದನು. ಕಪಿಯ ಬಾಲಕ್ಕೆ ಬೆಂಕಿಯಿಟ್ಟು ಮೆರವಣಿಗೆಮಾಡಿಸುವ ಸುದ್ದಿಯನ್ನು ಕೇಳಿ, ಹೆಂಗಸರು, ಮಕ್ಕಳು, ಮುದುಕರು ಮೊದಲಾಗಿ, ಲಂಕಾನಿವಾಸಿಗಳೆಲ್ಲರೂ ಆ ವಿನೋದವನ್ನು ನೋಡುವುದಕ್ಕಾಗಿ ಸಂತೋಷದಿಂದ ಹೊರಕ್ಕೆ ಬಂದು ನಿಂತಿದ್ದರು. ಬಾಲಕ್ಕೆ ಬೆಂಕಿಯಿಟ್ಟಾಗಲೂ ಆ ಹನುಮಂತನ ಹಾವಳಿಯನ್ನು ತಡೆಯಲಾರದೆ, ಅಲ್ಲಿದ್ದ ಕೆಲವು ಕ್ರೂರರಾಕ್ಷಸರು ಗುಂಪಾಗಿ ಬಂದು ಅತನನ್ನು ತಿರುಗಿ ಹಗ್ಗದಿಂದ ಬಿಗಿದರು. ವೀರನಾದ ಹನುಮಂತನು, ಆಗ ತಾನು ಮಾಡಬೇಕಾದ ಕಾರ್ಯವೇನೆಂದು ತನ್ನಲ್ಲಿ ತಾನೇ ಚಿಂತಿಸುತ್ತ " ಈ ರಾಕ್ಷಸರು ನನ್ನನ್ನು ಹೀಗೆ ಹಗ್ಗಗಳಿಂದ ಬಿಗಿದಿದ್ದರೂ, ಈಗಲೂ ಇವರು ನನ್ನ ವೇಗವನ್ನು ತಡೆದುಕೊಳ್ಳಲಾರರೆಂಬುದೇನೋ ನಿಜವು. ನಾನು ಈಗಲೂ ಈ ಹಗ್ಗಗಳನ್ನು ಕಿತ್ತುಕೊಂಡು ಮೇಲೆ ಹಾರಿ ಒಂದೇ ಪೆಟ್ಟಿಗೆ ಈ ರಾಕ್ಷಸರೆಲ್ಲರನ್ನೂ ಬಡಿದುಕೊಲ್ಲಬಹುದು. ಆದರೆ ಸ್ವಾಮಿಹಿತಾರ್ಥವಾಗಿ ಇಲ್ಲಿ ಬಂದು ಸುತ್ತುತ್ತಿದ್ದ ನನ್ನನ್ನು ಈ ದುಷ್ಟರಾಕ್ಷಸರೂ ಕೂಡ ತಮ್ಮ ಪ್ರಭುವಿನ ಆಜ್ಞೆಯಂತೆಯೇ ಕಟ್ಟಿರುವರು. ಇಷ್ಟುಮಾತ್ರದಿಂದಲೇ ಇವರು ನನಗೆ ಯಾವ ಪ್ರತೀಕಾರವನ್ನೂ ಮಾಡಿದಂತಾಗಲಿಲ್ಲ. ಇದು ಅಷ್ಟಾಗಿ ನನಗೆ ಲಕ್ಷ್ಯವೂ ಇಲ್ಲ. ಇಲ್ಲಿನ ಸಮಸ್ತರಾಕ್ಷಸರಿಗೂ ಯುದ್ಧದಲ್ಲಿ ತಾನೊಬ್ಬನೇ ಸಾಕು! ಆದರೂ ರಾಮನು ತಾನಾಗಿಯೇ ಇಲ್ಲಿ ಬಂದು ರಾವಣನನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿರುವುದರಿಂದ ಅವನು ಆ ಪ್ರತಿಜ್ಞೆಯನ್ನು ತೀರಿಸಿ ಕೃತಾರ್ಥನಾಗಲೆಂದೇ ನಾನು ಈಗ ಇದನ್ನೆಲ್ಲಾ ಸಹಿಸಿಕೊಂಡಿರಬೇಕಾಗಿರುವುದು. ಇದಲ್ಲದೆ, ಈ ರಾಕ್ಷಸರು ನನ್ನನ್ನು ಈ ಲಂಕೆಯಲ್ಲಿ ಸುತ್ತಿಸಬೇಕೆಂದಿರುವುದರಿಂದ, ತಿರುಗಿ ನಾನು ಈ ಪಟ್ಟ

ಣದ ಸನ್ನಿವೇಶಗಳೆಲ್ಲವನ್ನೂ ಚೆನ್ನಾಗಿ ನೋಡಿಕೊಂಡು ಬರಬಹುದು. ನಾನು ಮೊದಲೇ ಸೀತೆಯನ್ನು ಹುಡುಕುವ ನೆವದಲ್ಲಿ ಇಲ್ಲಿನ ಸಮಸ್ತಭಾಗಗಳನ್ನೂ ಒಮ್ಮೆ ಸುತ್ತಿಬಂದಿದ್ದರೂ, ಆಗ ರಾತ್ರಿಯಾದುದರಿಂದ ಇದರ ದುರ್ಗರಹಸ್ಯಾದಿಗಳೆಲ್ಲವನ್ನೂ ಚೆನ್ನಾಗಿ ನೋಡುವುದಕ್ಕಾಗಲಿಲ್ಲ. ಹಗಲುಹೊತ್ತಿನಲ್ಲಿಯೂ ಅವಶ್ಯವಾಗಿ ಈ ಲಂಕೆಯನ್ನು ನೋಡಿ ಬರಬೇಕಾದುದೇ ನ್ಯಾಯವು. ಆದುದರಿಂದ ನನಗೆ ಇವರು ಎಷ್ಟೆಷ್ಟುವಿಧದಿಂದ ಅವಮಾನಮಾಡಿದರೂ ಸಹಿಸಿಕೊಂಡಿರುವೆನು. ಇವರು ನನ್ನನ್ನು ಹಗ್ಗದಿಂದ ಬಿಗಿದರೂ, ಬಾಲಕ್ಕೆ ಬೆಂಕಿಯನ್ನಿಟ್ಟರೂ, ಇನ್ನೂ ನಾನಾವಿಧದಿಂದ ಹಿಂಸಿಸಿದರೂ ಅದರಿಂದ ನನ್ನ ಮನಸ್ಸಿಗೆ ಸ್ವಲ್ಪಮಾತ್ರವೂ ಆಯಾಸವಿಲ್ಲ'' ಎಂದು ತನ್ನಲ್ಲಿ ತಾನೇ ನಿಶ್ಚಯಿಸಿಕೊಂಡು ಸುಮ್ಮನಿದ್ದನು. ಆ ರಾಕ್ಷಸಭಟರಾದರೋ ಕಪಿಶ್ರೇಷ್ಠನಾಗಿಯೂ, ಬುದ್ಧಿವಂತನಾಗಿಯೂ, ಬಲಾಢ್ಯನಾಗಿಯೂ ಇರುವ ಆ ಹನುಮಂತನನ್ನು ಇಂತವನೆಂದು ತಿಳಿಯಲಾರದೆ, ಯಾವುದೋ ಕಪಿಯು ಕೈಗೆ ಸಿಕ್ಕಿತೆಂಬ ಸಂತೋಷದಿಂದ ಎಲ್ಲರೂ ಸೇರಿ ಬೀದಿಯಲ್ಲಿ ಅವನನ್ನೆಳೆದುಕೊಂಡು ಹೋಗುತ್ತಿದ್ದರು. ಕ್ರೂರಕರ್ಮಿಗಳಾದ ಆ ರಾಕ್ಷಸರಲ್ಲಿ ಪರಮಸಂತೋಷದಿಂದ ಮುಂದೆ ಬಂದು ಶಂಖಗಳನ್ನೂದುವರು ಕೆಲವರು ! ಭೇರಿಗಳನ್ನು ಬಾರಿಸುವರು ಕೆಲವರು ! ಸಿಂಹನಾದಗಳನ್ನು ಮಾಡುವರು ಕೆಲವರು ! ಭುಜಗಳನ್ನು ತಟ್ಟುವರು ಕೆಲವರು ! ಹೀಗೆ ಆ ಕಪಿಯನ್ನು ಪಟ್ಟಣದ ಒಂದೊಂದು ಕಡೆಯಲ್ಲಿಯೂ ಸುತ್ತಿಸುತ್ತ ಬಂದರು. ಹನುಮಂತನಾದರೋ ಹೀಗೆ ಅನೇಕ ರಾಕ್ಷಸಸೈನ್ಯವು ತನ್ನನ್ನು, ಹಿಂಬಾಲಿಸಿ ಬರುತ್ತಿರಲು, ಅನಾಯಾಸದಿಂದಲೇ ಆ ಮಹಾಪಟ್ಟಣವೆಲ್ಲವನ್ನೂ ಸುತ್ತಿ, ಅದರೊಳಗಿನ ಸೂಕ್ಷ್ಮಸನ್ನಿವೇಶಗಳನ್ನೆಲ್ಲಾ ಗಮನಿಸಿ ನೋಡುತ್ತ ಬಂದನು. ಆ ಲಂಕೆಯಲ್ಲಿ ಅಲ್ಲಲ್ಲಿದ್ದ ವಿಚಿತ್ರವಿಮಾನಗಳನ್ನೂ, ರಹಸ್ಯಗಳಾದ ಭೂಪ್ರದೇಶಗಳನ್ನೂ ಚೆನ್ನಾಗಿ ಸಂಸ್ಕರಿಸಲ್ಪಟ್ಟ ಅಂಗಳಗಳನ್ನೂ, ಮನೆಗಳ ಸಾಲಿನಿಂದ ತುಂಬಿದ ಬೀದಿಗಳನ್ನೂ, ಚತುಷ್ಪಥಗಳನ್ನೂ ನೋಡುತ್ತ ಬಂದನು. ಹಾಗೆಯೇ ದೊಡ್ಡ ರಾಜಬೀದಿಗಳನ್ನೂ, ಸಣ್ಣ ಬೀದಿಗಳನ್ನೂ, ರಹಸ್ಯವಾದ ಬಾಗಲಿನಿಂದ ಕೂಡಿ ಮೇಘಗಳಂತೆ ವಿಸ್ತಾರವಾದ ಮನೆಗಳನ್ನೂ ಸಣ್ಣಮನೆಗಳನ್ನೂ ನೋಡಿದನು. ಇವನನ್ನು ಹಿಂಬಾಲಿಸಿ ಬರುತಿದ್ದ ರಾಕ್ಷಸರಾದರೋ ಅಲ್ಲಲ್ಲಿ ಮನೆಗಳ ಮುಂದಿನ ಅಂಗಳಗಳಲ್ಲಿಯೂ ಬೀದಿಯ ಚೌಕಗಳಲ್ಲಿಯೂ, ರಾಜಮಾರ್ಗಗಳಲ್ಲಿಯೂ, "ಇದೋ ! ಚಾರನು'' ಎಂದು ಆ ಹನುಮಂತನನ್ನು ತೋರಿಸಿ, ಗಟ್ಟಿಯಾಗಿ ಕೂಗಿ ಸಾರುತ್ತಬಂದರು. ಉರಿಯುವ ಬಾಲದೊಡನೆ ಮೆರವಣಿಗೆ ಬರುತ್ತಿರುವ

ಈ ಕಪಿಯನ್ನು ನೋಡಬೇಕೆಂಬ ಕುತೂಹಲದಿಂದ ಸ್ತ್ರೀಬಾಲವೃದ್ಧರೂ ಹೊರಗೆ ಬಂದು ನಿಂತಿದ್ದರು. ಹೀಗೆ ಹನುಮಂತನ ಬಾಲಕ್ಕೆ ಬೆಂಕಿಯಿಟ್ಟಿದ್ದನ್ನು ನೋಡಿ, ವಿಕೃತಾಕಾರವುಳ್ಳ ಕೆಲವು ರಾಕ್ಷಸಸ್ತ್ರೀಯರು ಸಂತೋಷದಿಂದ ಆಗಲೇ ಸೀತೆಯ ಬಳಿಗೆ ಓಡಿಬಂದು, ಈ ಅಪ್ರಿಯವಾಕ್ಯವನ್ನು ನುಡಿಯುತ್ತ, “ಎಲೆ, ಸೀತೆ! ಇದಕ್ಕೆ ಮೊದಲು ಯಾವುದೋ ಒಂದು ಕಪಿಯು ನಿನ್ನನ್ನು ಮಾತಾಡಿಸಿ ಹೋಗಲಿಲ್ಲವೆ? ಕೆಂಪಾದ ಮೂತಿಯುಳ್ಳ ಆ ಕಪಿಯ ಬಾಲಕ್ಕೆ ಬೆಂಕಿಯನ್ನು ಹತ್ತಿಸಿ, ಇದೋ! ಇಲ್ಲಿನ ಬೀದಿಬೀದಿಗಳಲ್ಲಿ ಮೆರವಣಿಗೆ ಮಾಡಿಸುತ್ತಿರುವರು” ಎಂದು ಹೇಳಿದರು. ಕರ್ಣಕಠೋರವಾದ ಈ ಮಾತನ್ನು ಕೇಳಿದೊಡನೆ ಸೀತೆಯು ತನ್ನ ಪ್ರಾಣವೇ ಹೋದಂತೆ ಬಹಳ ದುಃಖಿತೆಯಾಗಿ, ಹನುಮಂತನ ಶ್ರೇಯಸ್ಸಿಗಾಗಿ, ಶುದ್ಧವಾದ ಮನಸ್ಸಿನಿಂದ ಅಗ್ನಿಯನ್ನುಪಾಸನೆಮಾಡಿ “ಎಲೈ ಅಗ್ನಿದೇವನೆ! ನಾನು ಪತಿಶುಶ್ರೂಷೆಯನ್ನು ಮಾಡಿದವಳಾಗಿದ್ದರೆ, ತಪಸ್ಸನ್ನು ನಡೆಸಿದವಳಾಗಿದ್ದರೆ, ನನ್ನಲ್ಲಿ ಪಾತಿವ್ರತ್ಯವಿದ್ದರೆ, ನೀನು ಈ ಹನುಮಂತನ ವಿಷಯದಲ್ಲಿ ತಣ್ಣಗಿರಬೇಕು. ನನ್ನಪ್ರಿಯನಾದ ರಾಮನಿಗೆ ನನ್ನಲ್ಲಿ ಅಲ್ಪಸ್ವಲ್ಪವಾದರೂ ದಯೆಯಿದ್ದರೆ, ನಾನು ಅನುಭವಿಸಬೇಕಾದ ಭಾಗ್ಯಶೇಷವು ಇನ್ನೂ ಮಿಕ್ಕಿದ್ದರೆ, ಹನುಮಂತನ ವಿಷಯದಲ್ಲಿ ತಣ್ಣಗಿರು! ಎಲೈ ವೀತಿಹೋತ್ರನೆ! ನಾನು ನಿರ್ದೋಷವಾದ ಪಾತಿವ್ರತ್ಯವುಳ್ಳವಳೆಂದೂ, ಈಗಲೂ ನನ್ನ ಪ್ರಿಯನಾದ ರಾಮನನ್ನು ಹೊಂದಬೇಕೆಂದು ಆತುರಪಡುತ್ತಿರುವೆನೆಂದೂ, ಧರ್ಮಾತ್ಮನಾದ ಆ ಹನುಮಂತನಿಗೆ, (ಅಥವಾ ನನ್ನ ಪ್ರಿಯನಾದ ರಾಮನಿಗೆ) ತಿಳಿದಿದ್ದ ಪಕ್ಷದಲ್ಲಿ, ನೀನು ಹನುಮಂತನ ವಿಷಯದಲ್ಲಿ ಶೀತಲನಾಗಿರು. ಸತ್ಯಪ್ರತಿಜ್ಞನಾದ ಸುಗ್ರೀವನು, ಈಗ ನನಗೆ ಬಂದೊದಗಿರುವ ಈ ದುಃಖಸಮುದ್ರದಿಂದ ನನ್ನನ್ನು ದಾಟಿಸುವುದು ನಿಜವಾಗಿದ್ದರೆ ನೀನು ಹನುಮಂತನ ವಿಷಯದಲ್ಲಿ ಶೀತಲನಾಗು!” ಎಂದು ಪ್ರಾರ್ಥಿಸಿದಳು. ಇಷ್ಟರಲ್ಲಿಯೇ ಹನುಮಂತನ ಬಾಲದಲ್ಲಿ ಉರಿಯುತ್ತಿದ್ದ ಬೆಂಕಿಯು, ಆತನಿಗೆ ಯಾವ ಅಪಾಯವೂ ಇಲ್ಲದೆ ಮಂಗಳವೇ ಉಂಟಾಗುವುದೆಂದು ಸೂಚಿಸುವಂತೆ, ಪ್ರದಕ್ಷಿಣವಾಗಿ ಸುತ್ತುವ ತೀಕ್ಷ್ಣಜ್ವಾಲೆಗಳೊಡನೆ ಜಾಜ್ವಲ್ಯಮಾನವಾಗಿ ಉರಿಯುತಿತ್ತು. ಮತ್ತು ಹನುಮಂತನಿಗೆ ವಾಯುವು ತಂದೆಯಾದುದರಿಂದ, ಆತನ ಬಾಲದ ಬೆಂಕಿಯುನ್ನುರುಬತಕ್ಕ ಗಾಳಿಯೂ ಕೂಡ, ಸೀತೆಯ ಮನಸ್ಸಿಗೆ ಸಮಾಧಾನವನ್ನು ಹುಟ್ಟಿಸುತ್ತ ಮಲಯಮಾರುತದಂತೆ ತಂಪಾಗಿ ಬೀಸುತಿತ್ತು. ಇತ್ತಲಾಗಿ ಹನುಮಂತನು ತನ್ನ ಬಾಲವು ಹಾಗೆ ಬೆಂಕಿಯಿಂದುರಿಯುವಾಗಲೂ ತನಗೆ ಸ್ವಲ್ಪವಾದರೂ ಉಷ್ಣವು ತೋರದಿರುವುದನ್ನು ನೋಡಿ,

ತನ್ನಲ್ಲಿ ತಾನು "ಅಹಾ! ನನ್ನ ಬಾಲದಲ್ಲಿ ಇಷ್ಟೊಂದು ಮಹಾಜ್ವಾಲೆಯೊಡನೆ ಈ ಬೆಂಕಿಯು ಉರಿಯುತ್ತಿರುವುದು! ಇಷ್ಟಾದರೂ ನನ್ನನ್ನು ಸುಡದಿರುವು ದಲ್ಲಾ! ಇದರಲ್ಲಿ ಪ್ರತ್ಯಕ್ಷವಾಗಿಯೇ ದೊಡ್ಡಜ್ವಾಲೆಯು ಕಾಣುತ್ತಿರುವುದು. ಬಾಧೆಯು ಮಾತ್ರ ನನಗೆ ಸ್ವಲ್ಪವೂ ಕಾಣುವುದಿಲ್ಲ. ಈಗ ನನ್ನ ಬಾಲಕ್ಕೆ ಶೈತ್ಯೋಪ ಚಾರವನ್ನು ಮಾಡಿದಂತೆಯೇ ತೋರುತ್ತಿರುವುದು! ಇದಕ್ಕೆ ಕಾರಣವೇನು? ಒಂದುವೇಳೆ ಹೀಗಾಗುವುದಕ್ಕೆ ಇದೇ ಕಾರಣವಿರಬಹುದು! ನಾನು ಸಮುದ್ರವನ್ನು ದಾಟುವಾಗಲೂ, ಆ ಮಹಾಸಮುದ್ರದ ನಡುವೆ ಒಂದು ದೊಡ್ಡ ಪರ್ವತವು ಮೇಲೆದ್ದು ಬಂದಂತೆ, ಮಹಾಶ್ಚರ್ಯವನ್ನು ನೋಡಿದೆನಲ್ಲವೆ? ನಡುನೀರಿನಲ್ಲಿ ಪರ್ವ ತವು ಹುಟ್ಟಬೇಕೆಂದರೆ ಅದು ರಾಮನ ಪ್ರಭಾವವೇ ಹೊರತು ಬೇರೆಯಲ್ಲ! ಆದರಂತೆಯೇ ಈ ಬೆಂಕಿಯು ತಣ್ಣಗಿರುವುದೂ ಆತನ ಪ್ರಭಾವದಿಂದಲೇ ಆಗಿರ ಬೇಕು. ಇದರಲ್ಲಿ ಸಂದೇಹವಿಲ್ಲ. ಶ್ರೀರಾಮನ ಸಹಾಯಾರ್ಥವಾಗಿ ಸಮುದ್ರ ಮೈನಾಕಗಳೇ ಹಾಗೆ ಆತುರಗೊಂಡು ಬಂದಾಗ, ಈ ಅಗ್ನಿಯೂ ರಾಮಕಾರ್ಯಕ್ಕೆ ಅನುಕೂಲನಾಗುವುದೊಂದಾಶ್ಚರ್ಯವೆ? ಅಗ್ನಿಯೂ ಕೂಡ, ಸೀತೆಗೆ ನನ್ನಲ್ಲಿ ರುವ ವಾತ್ಸಲ್ಯವನ್ನೂ, ರಾಮನ ಪ್ರಭಾವವನ್ನೂ, ತನಗೆ ನನ್ನ ತಂದೆಯಲ್ಲಿರುವ ಸ್ನೇಹವನ್ನೂ ಭಾವಿಸಿಯೇ ಈಗ ನನ್ನನ್ನು ಸುಡದೆ ಇರಬಹುದು" ಎಂದು ನಿಶ್ಚ ಯಿಸಿಕೊಂಡನು. ವಾನರಶ್ರೇಷ್ಠನಾದ ಹನುಮಂತನು ತಿರುಗಿ ಸ್ವಲ್ಪಹೊತ್ತಿನ ವರೆಗೆ ಮುಂದೆ ಮಾಡಬೇಕಾದ ಕಾರ್ಯವೇನೆಂದು ಆಲೋಚಿಸುತ್ತಿದ್ದು, ಆಗಲೇ ವೇಗದಿಂದ ಮೇಲೆ ಹಾರಿ ಒಂದು ದೊಡ್ಡ ಸಿಂಹನಾದವನ್ನು ಮಾಡಿ, ಅಲ್ಲಿಂದ ಹೊರಟು, ಪರ್ವತಶಿಖರದಂತೆ ಮನೋಹರವಾಗಿಯೂ, ರಾಕ್ಷಸಸಂಚಾರರಹಿತ ವಾಗಿಯೂ ಇದ್ದ ಆ ಪುರದ್ವಾರಕ್ಕೆ ಬಂದಿಳಿದನು. ಅಲ್ಲಿ ಪರ್ವತಾಕಾರವಾಗಿದ್ದ ತನ್ನ ದೇಹವನ್ನು ಕ್ಷಣಮಾತ್ರದಲ್ಲಿ ಬಹಳ ಸಣ್ಣದಾಗಿ ಮಾಡಿಕೊಂಡು, ತನಗೆ ಕಟ್ಟಿದ್ದ ಕಟ್ಟುಗಳೆಲ್ಲವನ್ನೂ ಸಡಿಲಿಸಿ ಕಳೆದುಬಿಟ್ಟನು. ಆ ಕಟ್ಟುಗಳು ಸಡಿಲಿ ದೊಡನೆ ತಿರುಗಿ ಪರ್ವತದಂತೆ ದೊಡ್ಡ ರೂಪವನ್ನು ತಾಳಿ, ನಾಲ್ಕುದಿಕ್ಕುಗಳನ್ನೂ ತಿರುಗಿ ನೋಡುತ್ತ, ಹೊರಬಾಗಿಲಲ್ಲಿದ್ದ ಒಂದು ಕಬ್ಬಿಣದ ಅಗುಳಿಯನ್ನು ಕಂಡನು. ಮಹಾಬಾಹುವಾದ ಆ ವಾಯುಪುತ್ರನು, ಆ ಅಗುಳಿಯನ್ನು ಕೈಗೆತ್ತಿ ಕೊಂಡು, ತನ್ನ ಮೇಲೆ ಕಾವಲಿದ್ದ ಸಮಸ್ತರಾಕ್ಷಸರನ್ನೂ ಅದರಿಂದಲೇ ಬಡಿದು ಕೊಂದನು. ಯುದ್ಧದಲ್ಲಿ ಪ್ರಚಂಡಪರಾಕ್ರಮವುಳ್ಳ ಆ ಹನುಮಂತನು, ಹೀಗೆ ರಾಕ್ಷಸರನ್ನು ಕೊಂದು ತಿರುಗಿ ಲಂಕೆಯ ಕಡೆಗೆ ದೃಷ್ಟಿಯಿಟ್ಟುನೋಡುತ್ತ

ತನ್ನ ಬಾಲದಲ್ಲಿರುವ ಅಗ್ನಿಜ್ವಾಲೆಯೇ ತನ್ನ ದೇಹದ ಸುತ್ತಲೂ ವ್ಯಾಪಿಸಿರಲು, ಸಹಸ್ರ ಕಿರಣಗಳಿಂದ ಪರಿವೃತನಾದ ಸೂರ್ಯನಂತೆ ಪ್ರಕಾಶಿಸುತ್ತಿದ್ದನು.

ಇಲ್ಲಿಗೆ ಐವತ್ತುಮೂರನೆಯ ಸರ್ಗವು.

---

ಹನುಮಂತನು ತನ್ನ ವಾಲಾಗ್ನಿಯಿಂದ ಲಂಕೆಯಲ್ಲಿ ವಿಭೀಷಣ ಗೃಹವೊಂದನ್ನು ಬಿಟ್ಟು ಉಳಿದ ರಾಕ್ಷಸಗೃಹಗಳೆಲ್ಲವನ್ನೂ ಸುಟ್ಟುದು.

ಹನುಮಂತನು ಹೀಗೆ ತಾನು ಬಯಸಿದ ಕೋರಿಕೆಗಳೆಲ್ಲವನ್ನೂ ಈಡೇರಿಸಿ ಕೊಂಡು ತಿರುಗಿ ಲಂಕೆಯನ್ನು ನೋಡಿ ಉತ್ಸಾಹದಿಂದುಬ್ಬಿ ಬಳೆಯುತ್ತ, ತಾನು ಮುಂದೆ ನಡೆಸಬೇಕಾದ ಕಾರ್ಯವೇನೆಂಬುದನ್ನು ಕುರಿತು ತಿರುಗಿ ಆಲೋಚಿಸುವನು. “ಇನ್ನು ಮೇಲೆ ನಾನು ಇಲ್ಲಿ ಮಾಡಬೇಕಾದ ಕಾರ್ಯವೇನು ? ಇಲ್ಲಿನ ರಾಕ್ಷಸರನ್ನು ಮತ್ತಷ್ಟು ಗೋಳಾಡಿಸುವುದಕ್ಕೆ ಉಪಾಯವೇನಿರುವುದು ? ಅಶೋಕವನವನ್ನು ಮುರಿದುದಾಯಿತು ! ಪ್ರಬಲರಾಕ್ಷಸರನೇಕರನ್ನು ಕೊಂದುದಾಯಿತು ! ಇಲ್ಲಿನ ಸೇನೆಯಲ್ಲಿ ಸ್ವಲ್ಪಭಾಗವನ್ನೂ ನಾಶಮಾಡಿದುದಾಯಿತು ! ಇನ್ನು ಮೇಲೆ ಈ ಪಟ್ಟಣದ ದುರ್ಗಗಳನ್ನು ನಾಶಮಾಡಬೇಕಾದುದೊಂದೇ ಉಳಿದಿರುವುದು. ಇಲ್ಲಿನ ದುರ್ಗಗಳನ್ನೂ ಭೇದಿಸಿಬಿಟ್ಟರೆ ಆಗ ಸಮುದ್ರಲಂಘನವೇ ಮೊದಲಾದ ನನ್ನ ಶ್ರಮವೆಲ್ಲವೂ ಸಫಲವಾಗುವುದು. ಈ ಕಾರ್ಯಕ್ಕಾಗಿಯೂ ನಾನು ಈಗ ಅಷ್ಟಾಗಿ ಶ್ರಮಪಡಬೇಕಾದುದಿಲ್ಲ. ಸ್ವಲ್ಪಪ್ರಯತ್ನದಿಂದಲೇ ಈ ಕಾರ್ಯವನ್ನೂ ಸಾಧಿಸ ಬಹುದು ! ಇದನ್ನೂ ನಡೆಸಿಬಿಟ್ಟರೆ ನಾನು ಇದುವರೆಗೆ ಪಟ್ಟಶ್ರಮವೆಲ್ಲವೂ ಸಾರ್ಥಕವಾಗುವುದು. 1 ಈಗ ನನ್ನ ಬಾಲದಲ್ಲಿ ದೇದೀಪ್ಯಮಾನವಾಗಿ ಉರಿ ಯುತ್ತಿರುವ ಅಗ್ನಿಯೂಕೂಡ ನನ್ನಲ್ಲಿ ಪ್ರಸನ್ನನಾಗಿ, ನನಗೆ ಸ್ವಲ್ಪವಾದರೂ ಉರಿಯನ್ನು ತೋರಿಸದಂತೆ ತಣ್ಣಗಿರುವನಲ್ಲವೆ ? ಇದಕ್ಕೆ ಪ್ರತ್ಯುಪಕಾರರೂಪ

---

1. ಹಿಂದೆ ಹನುಮಂತನು ತನ್ನ ಕಟ್ಟುಗಳನ್ನು ಸಡಿಲಿಸುವುದಕ್ಕಾಗಿ ತನ್ನ ಮೈಯನ್ನು ಸಣ್ಣನಾಗಿಸಿಕೊಂಡಾಗ, ತನ್ನ ಬಾಲಕ್ಕೆ ಸುತ್ತಿದ್ದ ಬಟ್ಟೆಯನ್ನು ಮಾತ್ರಮುಂದಿನಕಾರ್ಯಕ್ಕಾಗಿ ಹಾಗೆಯೇ ಉಳಿಸಿಕೊಂಡಿದ್ದನೆಂದು ಗ್ರಾಹ್ಯವು.

ವಾಗಿ, ಈ ಅಗ್ನಿಹೋತ್ರನಿಗೆ ಇಲ್ಲಿನ ಗೃಹಗಳನ್ನು ಆಹುತಿಕೊಟ್ಟು ತೃಪ್ತಿಹೊಂದಿ ಸಬೇಕಾದುದೇ ನ್ಯಾಯವು" ಎಂದು ನಿಶ್ಚಯಿಸಿಕೊಂಡನು. ಹೀಗೆ ನಿಶ್ಚಯಿಸಿದ ಕೂಡಲೇ ಮಿಂಚಿನಿಂದ ಕೂಡಿದ ಮಹಾಮೇಘದಂತೆ, ಉರಿಯುತ್ತಿರುವ ಆ ಬಾಲ ದೊಡನೆ ಲಂಕಾಪುರದ ಮನೆಗಳಮೇಲೆ ಹಾರಿಬಿಟ್ಟನು. ಹೀಗೆ ಆ ಹನುಮಂ ತನು ಸ್ವಲ್ಪವೂ ಭಯವಿಲ್ಲದೆ, ಮನೆಯಿಂದ ಮನೆಗೆ ಹಾರಿ, ಅಲ್ಲಲ್ಲಿನ ಗೋಪುರಗ ಳನ್ನೂ, ಉದ್ಯಾನವನಗಳನ್ನೂ ನೋಡುತ್ತ, ಅಲ್ಲಿನ ಪ್ರತಿಗೃಹಗಳಮೇಲೆಯೂ ಸುತ್ತಿಸುತ್ತಿ ಬರುತ್ತಿದ್ದನು. ವಾಯುಸಮಾನವಾದ ವೇಗವುಳ್ಳವನಾಗಿಯೂ, ಬಲಾಢ್ಯನಾಗಿಯೂ ಇದ್ದ ಆ ಹನುಮಂತನು ಮೊದಲು ಪ್ರಹಸ್ತನ ಮನೆಗೆ ಹಾರಿ ಅದಕ್ಕೆ ಬೆಂಕಿಯಿಟ್ಟನು. ಅಲ್ಲಿಂದ ಮಹಾಪಾರ್ಶ್ವನ ಮನೆಗೆ ಹಾರಿ ಕಾಲಾಗ್ನಿ ಜ್ವಾಲೆಗೆ ಸಮಾನವಾದ ತನ್ನ ಬಾಲದುರಿಯನ್ನು ಅದಕ್ಕೂ ತೋರಿಸಿಬಿಟ್ಟನು. ಅಲ್ಲಿಂದ ಆ ಮಹಾಕಪಿಯು ವಜ್ರದಂಷ್ಟ್ರನ ಮನೆಗೆ ಹಾರಿದನು. ಅಲ್ಲಿಂದ ಶುಕಸಾರಣರೆಂಬ ಮಂತ್ರಿಗಳಿಬ್ಬರ ಮನೆಗ ಹಾರಿದನು. ಅಲ್ಲಿಂದ ಇಂದ್ರಜಿತ್ತಿನ ಮನೆಗೆ ಹಾರಿ, ಅದನ್ನೂ ತನ್ನ ವಾಲಾಗ್ನಿಯಿಂದ ಸುಟ್ಟುಬಿಟ್ಟನು. ಜಂಬು ಮಾಲಿಯ ಮತ್ತು ಸುಮಾಲಿಯ ಮನೆಗಳನ್ನೂ ಸುಟ್ಟನು. ಹಾಗೆಯೇ ಕ್ರಮ ವಾಗಿ, ರಶ್ಮಿಕೇತು, ಸೂರ್ಯಶತ್ರು, ಹ್ರಸ್ವಕರ್ಣ, ದಂಷ್ಟ್ರ, ರೋಮಶರೆಂಬ ರಾಕ್ಷಸರ ಮನೆಗಳೆಲ್ಲವನ್ನೂ, ಸುಡುತ್ತಬಂದನು. ಅಲ್ಲಿಂದ ಮುಂದೆ ಯುದ್ಧೋನ್ಮತ್ತನ ಗೃಹವನ್ನೂ, ಮತ್ತನೆಂಬ ರಾಕ್ಷಸನ ಮನೆಯನ್ನೂ, ಧ್ವಜಗ್ರೀವನ ವಾಸಸ್ಥಲ ವನ್ನೂ, ಭಯಂಕರನಾದ ವಿದ್ಯುಜ್ಜಿಹ್ವನ ನಿವೇಶವನ್ನೂ, ಹಸ್ತಿಮುಖನ ಮನೆ ಯನ್ನೂ, ಕರಾಲ ಪಿಶಾಚರೆಂಬ ರಾಕ್ಷಸರ ಗೃಹಗಳನ್ನೂ, ಶೋಣಿತಾಕ್ಷನ ನಿವಾಸವನ್ನೂ, ಕುಂಭಕರ್ಣನ ಅರಮನೆಯನ್ನೂ, ಮಕರಾಕ್ಷನ ಗೃಹವನ್ನೂ, ಯಜ್ಞಶತ್ರು, ಬ್ರಹ್ಮಶತ್ರುವೆಂಬ ರಾಕ್ಷಸರ ನಿವಾಸಗಳನ್ನೂ ನರಾಂತಕ, ಕುಂಭ, ನಿಕುಂಭರ ಮನೆಗಳನ್ನೂ, ತನ್ನ ಬಾಲದುರಿಯಿಂದ ಸುಟ್ಟುಬಿಟ್ಟನು. ಹೀಗೆ ಆ ವಾನರೋತ್ತಮನು ಆ ಲಂಕೆಯಲ್ಲಿ ವಿಭೀಷಣನ ಮನೆಯೊಂದನ್ನು ಬಿಟ್ಟು, ಉಳಿದ ಒಬ್ಬೊಬ್ಬ ರಾಕ್ಷಸನ ಮನೆಯನ್ನೂ ಬಿಡದೆ ಕ್ರಮವಾಗಿ ಸುಡುತ್ತಬಂದನು. ವೀರ್ಯವಂತನಾದ ಆ ಹನುಮಂತನು ಹೀಗೆ ರಾಕ್ಷಸರ ಮನೆಮನೆಗೂ ಬೆಂಕಿಯಿಟ್ಟ ಮೇಲೆ ರಾಕ್ಷಸೇಂದ್ರನಾದ ರಾವಣನ ಅರಮನೆಯಕಡೆಗೆ ಬಂದನು. ನಾನಾ ರತ್ನಗಳಿಂದ ಭೂಷಿತವಾಗಿಯೂ, ಮೇರುಮಂದರಪರ್ವತಗಳಂತೆ ಮಹೋನ್ನತ ವಾಗಿಯೂ, ಸಮಸ್ತವಿಧಗಳಾದ ಮಂಗಳದ್ರವ್ಯಗಳಿಂದ ಶೋಭಿತವಾಗಿಯೂ, ಲಂಕೆಯಲ್ಲಿರುವ ಮನೆಗಳಿಗೆಲ್ಲಾ ಮೇಲಾಗಿಯೂ ಇದ್ದ ಆ ಅರಮನೆಗೂ ತನ್ನ

ಬಾಲದುರಿಯನ್ನು ತೋರಿಸಿ ಅಲ್ಲಿ ಪ್ರಳಯಕಾಲಮೇಘದಂತೆ ದೊಡ್ಡ ಸಿಂಹನಾದವನ್ನು ಮಾಡಿದನು. ಆಗ ವಾಯುದೇವನೂ ಕೂಡ ತನ್ನ ಶತ್ರುವಾದ ರಾವಣನಲ್ಲಿ ಹಗೆತೀರಿಕೊಳ್ಳುವುದಕ್ಕೆ ಇದೇ ತಕ್ಕಸಮಯವೆಂದು ತಿಳಿದು ತನ್ನ ಸಖನಾದ ಅಗ್ನಿದೇವನಿಗೆ ಸಹಾಯಕನಾಗಿ ಉದ್ರೇಕಗೊಳಿಸುತ್ತಿರಲು ಆ ಅಗ್ನಿಯು ಪ್ರಳಯಕಾಲಾಗ್ನಿಯಂತೆ ಜ್ವಲಿಸುತ್ತ ಮೇಲೆಮೇಲೆ ವೃದ್ಧಿ ಹೊಂದುತ್ತಿತ್ತು. ವಾಯುವು ಆ ಅಗ್ನಿಯನ್ನು ಅರಮನೆಯ ಸಮಸ್ತಭಾಗಗಳಿಗೂ ವ್ಯಾಪಿಸುವಂತೆ ಮಾಡಿತು. ಬಂಗಾರದ ಕಿಟಕಿಗಳಿಂದಲೂ, ಮುತ್ತಿನ ಕುಸುರಿಗಳಿಂದಲೂ, ರತ್ನಮಯವಾದ ಅಲಂಕಾರದಿಂದಲೂ ಶೋಭಿತಗಳಾದ ಆ ಅರಮನೆಯ ದೊಡ್ಡ ದೊಡ್ಡ ನಿವೇಶನಗಳೆಲ್ಲವೂ ಕ್ಷಣಮಾತ್ರದಲ್ಲಿ ಸುಟ್ಟುಬಿದ್ದುವು. ಹೀಗೆ ವಾಯುವಿನ ಸಹಾಯದಿಂದ ಅಗ್ನಿಯು ಕ್ಷಣಮಾತ್ರದಲ್ಲಿ ಲಂಕೆಯೆಲ್ಲವನ್ನೂ ವ್ಯಾಪಿಸಲು, ಪುಣ್ಯಫಲವು ತೀರಿದಮೇಲೆ ಕೆಳಕ್ಕೆ ಬೀಳುವ ಸಿದ್ಧರ ವಿಮಾನಗಳಂತೆ ಅಲ್ಲಿನ ಪ್ರಾಸಾದಗಳೆಲ್ಲವೂ ಉರುಳುತ್ತಿದ್ದುವು. ಅಲ್ಲಿದ್ದ ರಾಕ್ಷಸರೆಲ್ಲರೂ ತಮ್ಮ ತಮ್ಮ ಮನೆಗಳನ್ನು ರಕ್ಷಿಸಿಕೊಳ್ಳುವ ವಿಷಯದಲ್ಲಿ ನಿರಾಶರಾಗಿ, ಭಯದಿಂದ ದಿಕ್ಕುದಿಕ್ಕಿಗೆ ಪಲಾಯನಮಾಡುತ್ತ "ಅಯ್ಯೋ! ನಿಜವಾಗಿಯೂ ಇವನು ವಾನರನಲ್ಲ! ಸಾಕ್ಷಾದಗ್ನಿಹೋತ್ರನೇ ಈ ಕಪಿರೂಪದಿಂದ ಬಂದು ನಮ್ಮ ಲಂಕೆಯನ್ನು ಹಾಳುಮಾಡುತ್ತಿರುವನು! ಇದರಲ್ಲಿ ಸಂದೇಹವಿಲ್ಲ!" ಎಂದು ನಾನಾ ಕಡೆಗಳಿಂದಲೂ ಅರಚಿಕೊಳ್ಳುತ್ತಿದ್ದರು. ಈ ಗದ್ದಲವು ನಾಲ್ಕುದಿಕ್ಕುಗಳಿಗೂ ವ್ಯಾಪಿಸಿತು. ಉಪ್ಪರಿಗೆಗಳಮೇಲೆ ನಿಂತಿದ್ದ ಕೆಲವು ರಾಕ್ಷಸಸ್ತ್ರೀಯರು ಪ್ರಾಣಭಯದಿಂದ ತಮ್ಮ ತಮ್ಮ [1] ಶಿಶುಗಳನ್ನೆತ್ತಿಕೊಂಡು ರೋದನಮಾಡುತ್ತ ತಲೆಯನ್ನು ಬಿಚ್ಚಿಕೊಂಡು, ಮೇಘದಿಂದಿಳಿಯುವ ಮಿಂಚುಗಳಂತೆ ಬೆಂಕಿಯಿಂದಾವೃತವಾದ ಆ ಉಪ್ಪರಿಗೆಗಳಿಂದ, ಕೆಳಕ್ಕೆ ಬೀಳುತಿದ್ದರು. ಅಲ್ಲಿ ಹನುಮಂತನು ವಜ್ರ, ವೈಡೂರ್ಯ, ಮುತ್ತು, ಹವಳ, ಬೆಳ್ಳಿ ಮೊದಲಾದ ನಾನಾರತ್ನಗಳಿಂದ ತುಂಬಿದ ಆ ರಾಜಗೃಹಗಳಿಂದ, ಸ್ವರ್ಣಾದಿವಿಚಿತ್ರಲೋಹಗಳೆಲ್ಲವೂ ಅಗ್ನಿಜ್ವಾಲೆಯಿಂದ ಕರಗಿ ಬೀಳುವುದನ್ನು ನೋಡುತಿದ್ದನು. ಆಹಾ! ಆಗಿನ ಆಶ್ಚರ್ಯವನ್ನು ಕೇಳಬೇಕೆ? ಹುಲ್ಲು, ಸೌದೆ, ಮೊದಲಾದ ಎಷ್ಟೆಷ್ಟಾಹುತಿಗಳು ಸಿಕ್ಕಿದರೂ

1. ಪೂರ್ವದಲ್ಲಿ ರುದ್ರನು ಸುಕೇಶವಂಶದಲ್ಲಿ ಹುಟ್ಟಿದವರಿಗೆ, ಹುಟ್ಟಿದಾಗಲೇ ತಾಯಿಯ ಹಾಗಿರುವಂತೆ ವರವನ್ನು ಕೊಟ್ಟಿರುವಾಗ, ಇಲ್ಲಿ ರಾಕ್ಷಸಿಯರು ಮಕ್ಕಳನ್ನೆತ್ತಿಕೊಂಡು ಬಂದರೆಂಬುದು ಹೇಗೆ? ಎಂದರೆ ಸುಕೇಶವಂಶದವರಿಗೆ ಮಾತ್ರವೇ ಆ ವರವಿದ್ದರೂ, ಆ ವರವಿಲ್ಲದ ಬೇರೆ ಕುಲದ ರಾಕ್ಷಸರೂ ಲಂಕೆಯಲ್ಲಿದ್ದರೆಂದು ಗ್ರಾಹ್ಯವು.

ಅಗ್ನಿಗೆ ತೃಪ್ತಿಯಿಲ್ಲ! ಆ ಅಗ್ನಿಯು ಎಷ್ಟೆಷ್ಟು ಮನೆಗಳನ್ನು ಸುಟ್ಟರೂ ಹನುಮಂತನಿಗೆ ತೃಪ್ತಿಯಿಲ್ಲ! ಎಷ್ಟೆಷ್ಟುಮಂದಿ ರಾಕ್ಷಸರು ಹತರಾಗಿ ಬಿದ್ದರೂ ಅಲ್ಲಿನ ಭೂಮಿಗೆ ತೃಪ್ತಿಯಿರಲಿಲ್ಲ! ಅಲ್ಲಿನ ಅಗ್ನಿಜ್ವಾಲೆಗಳಾದರೋ, ಕೆಲವು ಕಡೆಗಳಲ್ಲಿ ಹೂಬಿಟ್ಟ ಮುತ್ತುಗದ ಮರಗಳಂತೆಯೂ, ಕೆಲವು ಕಡೆಯಲ್ಲಿ ಕುಂಕುಮದಂತೆಯೂ ಬಗೆಬಗೆಯ ಬಣ್ಣಗಳಿಂದ ಪ್ರಕಾಶಿಸುತ್ತಿದ್ದುವು. ವೇಗಶಾಲಿಯಾಗಿಯೂ ಮಹಾತ್ಮನಾಗಿಯೂ ಇರುವ ಹನುಮಂತನು ರುದ್ರನು ತ್ರಿಪುರವನ್ನು ದಹಿಸಿದಂತೆ ಆ ಲಂಕಾನಗರಿಯೆಲ್ಲವನ್ನೂ ಸುಟ್ಟು ಬೂದಿಮಾಡಿದನು. ಹನುಮಂತನು ಮಹಾವೇಗದಿಂದ ಆಯಾ ಮನೆಗಳಲ್ಲಿಟ್ಟ ಅಗ್ನಿಜ್ವಾಲೆಯ ಸಮೂಹವು, ಮುಂದೆ ಮುಂದೆ ವ್ಯಾಪಿಸಿ, ಕೊನೆಗೆ ಆ ಲಂಕಾನಗರಿಗೆ ಮುಖ್ಯಾಧಾರಭೂತವಾದ ತ್ರಿಕೂಟಪರ್ವತದ ಶಿಖರವನ್ನೂ ಮುಟ್ಟಿ, ಅಲ್ಲಿ ಮಹಾಜ್ವಾಲೆಯಿಂದ ಉರಿಯಲಾರಂಭಿಸಿತು. ಹೀಗೆ ಹನುಮಂತನ ವಾಲಾಗ್ನಿಯು, ವಾಯು ಸಹಾಯದಿಂದ ಪ್ರಳಯಕಾಲಾಗ್ನಿಯಂತೆ ವ್ಯಾಪಿಸಿ ಆಕಾಶವನ್ನೂ, ಮುಟ್ಟುವಂತಾಯಿತು. ಮತ್ತು ಆ ಅಗ್ನಿಯು ಸ್ವಲ್ಪವಾದರೂ ಹೊಗೆಯಿಲ್ಲದ ಜ್ವಾಲೆಯಿಂದ, ರಾಕ್ಷಸರ ಮನೆಮನೆಗಳನ್ನೂ ವ್ಯಾಪಿಸಿ ಅಲ್ಲಿನ ರಾಕ್ಷಸರ ದೇಹದ ಕೊಬ್ಬೆಂಬ ಆಜ್ಯಾಹುತಿಯಿಂದ, ಮೇಲೆಮೇಲೆ ಉರಿಯನ್ನು ಕಾರುತ್ತ ವೃದ್ಧಿಹೊಂದಿತು! ಹೀಗೆ ಕೋಟಿ ಸೂರ್ಯಸಮಾನವಾದ ತೇಜಸ್ಸಿನಿಂದ ದೇದೀಪ್ಯಮಾನವಾದ ಆ ಅಗ್ನಿಯು, ಲಂಕಾಪುರನೆಲ್ಲವನ್ನೂ ಸಂಪೂರ್ಣವಾಗಿ ವ್ಯಾಪಿಸಿ, ಸಿಡಿಲಿನಂತೆ ಪ್ರಬಲವಾದ ಛಟಛಟತ್ಕಾರಗಳಿಂದ ಬ್ರಹ್ಮಾಂಡವನ್ನೇ ಭೇದಿಸುವಂತೆ ತೋರಿತು. ಮತ್ತು ಆ ಅಗ್ನಿಯು ನೋಡುವವರ ಕಣ್ಣುಗಳನ್ನು ಕೋರೈಸುವಂತೆ ಕ್ರೂರವಾದ ತೇಜಸ್ಸನ್ನು ಹರಡುತ್ತ, ಮುತ್ತುಗದ ಹೂಗಳಂತಿರುವ ಜ್ವಾಲೆಗಳಿಂದ ಆಕಾಶದವರೆಗೂ ವ್ಯಾಪಿಸಿತು. ಮತ್ತು ಅಲ್ಲಲ್ಲಿ ಉರಿಯಡಗಿ ಶಾಂತವಾದ ಮೇಲೆ ಹುಟ್ಟಿದ ಕಪ್ಪಾದ ಹೊಗೆಯು ಮೇಲೆ ವ್ಯಾಪಿಸಿ, ಮೇಘಗಳನ್ನೂ ಮರೆಸುತ್ತಿರಲು, ಆ ಮೇಘಗಳೆಲ್ಲವೂ ಕನ್ನೈದಿಲೆಯ ಕಾಂತಿಯಿಂದ ಶೋಭಿಸುತ್ತಿದ್ದುವು. ಆ ಲಂಕೆಯಲ್ಲಿ ಜ್ಞಾನಾಧಿಕರಾದ ಕೆಲವು ರಾಕ್ಷಸರು ಗುಂಪುಗುಂಪಾಗಿ ಸೇರಿ, ಅಲ್ಲಿನ ಪ್ರಾಣಿಗಳೂ, ಗೃಹಗಳೂ, ವೃಕ್ಷಗಳೂ, ಕ್ಷಣಮಾತ್ರದಲ್ಲಿ ದಗ್ಧವಾಗುತ್ತಿರುವುದನ್ನು ನೋಡಿ, ಒಬ್ಬರಿಗೊಬ್ಬರು "ಆಹಾ! ಈ ಮಹಾಕಪಿ ಯಾವನೋ ಕಾಣೆವಲ್ಲಾ! ವಜ್ರದಿಂದ ವೃತ್ರನನ್ನು ಕೊಂದ ದೇವೇಂದ್ರನೇ ಹೀಗೆ ಬಂದಿರಬಹುದೆ! ಸಾಕ್ಷಾದ್ಯಮನೇ ಇವನಾಗಿರಬಹುದೆ! ಅಥವಾ ಇವನು ವರುಣನೋ! ವಾಯುವೋ! ರುದ್ರನೋ! ಅಗ್ನಿಯೋ! ಸೂರ್ಯನೋ! ಕುಬೇರನೋ! ಚಂದ್ರನೋ!

ತಿಳಿಯಲಿಲ್ಲ. ಇದು ಕಪಿಯೆಂಬುದೇನೋ ಸುಳ್ಳು! ಇವನೇ ಕಾಲಯಮನಾಗಿರಬಹುದು! ಸಮಸ್ತಲೋಕಗಳಿಗೂ ತಾತನಾಗಿ, ಸಮಸ್ತಜಗತ್ತನ್ನೂ ಭರಿಸತಕ್ಕ ಚತುರ್ಮುಖ ಬ್ರಹ್ಮನೇ ಒಂದುವೇಳೆ ಇಲ್ಲಿನ ರಾಕ್ಷಸರೆಲ್ಲರನ್ನೂ ನಿರ್ಮೂಲಮಾಡಬೇಕೆಂದು ಸಂಕಲ್ಪಿಸಿದುದಕ್ಕಾಗಿ, ಆತನ ಕೋಪವೇ ಹೀಗೆ ಕಪಿರೂಪದಿಂದ ಇಲ್ಲಿಗೆ ಬಂದಿರಬಹುದೆ! ಅಥವಾ ಹೀಗೆಂದು ನಿರ್ಣಯಿಸಲಸಾಧ್ಯವಾಗಿಯೂ, ಇಂದ್ರಿಯಗಳಿಗೆ ಅಗೋಚರವಾಗಿಯೂ, ಮನಸ್ಸಿನಿಂದಲೂ ಚಿಂತಿಸುವುದಕ್ಕೆ ಸಾಧ್ಯವಲ್ಲದುದಾಗಿಯೂ, ಅದ್ವಿತೀಯವಾಗಿಯೂ ಪೂಜ್ಯವಾಗಿಯೂ ಇರುವ ಸರ್ವೋತ್ತಮವಾದ ವೈಷ್ಣವತೇಜಸ್ಸೇ ಹೀಗೆ ರಾಕ್ಷಸರನ್ನು ನಾಶಮಾಡುವುದಕ್ಕಾಗಿ, ಎಣೆಯಿಲ್ಲದ ತನ್ನ ಅದ್ಭುತಶಕ್ತಿಯಿಂದ ಹೀಗೆ ಕಪಿರೂಪವನ್ನು ಧರಿಸಿ ಇಲ್ಲಿಗೆ ಬಂದಿರಬಹುದೆ!” ಎಂದು ನಾನಾವಿಧಗಳಲ್ಲಿ ಮಾತಾಡಿಕೊಳ್ಳುತ್ತಿದ್ದರು. ಆ ಲಂಕೆಯಲ್ಲಿದ್ದ ರಾಕ್ಷಸವೀರರೂ, ರಥಗಜತುರಗಾದಿ ಸೇನಾಸಮೂಹಗಳೂ, ಪಕ್ಷಿಗಳೂ, ಮೃಗಗಳೂ, ಮರಗಳೂ, ಹೀಗೆ ಅಕಸ್ಮಾತ್ತಾಗಿ ಸುಟ್ಟುಹೋಗುತ್ತಿರಲು, ಅಲ್ಲಲ್ಲಿ ಪ್ರಾಣಿಗಳ ಆಕ್ರೋಶಧ್ವನಿಗಳು ನಾನಾಕಡೆಯಿಂದಲೂ ಹೊರಟು, ಆ ಪಟ್ಟಣವೆಲ್ಲವೂ ರೋದನಧ್ವನಿಯಿಂದಲೇ ತುಂಬಿಹೋಯಿತು. ಅಲ್ಲಿ ಬೆಂಕಿಗೆ ಸಿಕ್ಕಿ ರಾಕ್ಷಸರು ಸತ್ತುಬೀಳುವಾಗ “ಹಾ! ತಾತಾ! ಹಾ ಕಂದಾ! ಅಯ್ಯೋ ನನ್ನ ಪ್ರಾಣನಾಥನೆ! ಹಾ ನನ್ನ ಪ್ರಿಯಮಿತ್ರನೆ! ಹಾ ಪ್ರಿಯನೆ! ಹಾ! ನನ್ನ ಪುಣ್ಯಫಲದಿಂದ ಸಂಪಾದಿಸಿದ ಪ್ರಿಯಜೀವನವೆ! ಅಯ್ಯೋ ಕೆಟ್ಟೆನು” ಎಂದು ಒಬ್ಬೊಬ್ಬರೂ ತಮ್ಮ ತಮ್ಮ ತಂದೆ ಮೊದಲಾದ ಪ್ರಿಯಬಂಧುಗಳನ್ನು ಕೂಗಿಕೂಗಿ ನಾನಾವಿಧದಿಂದ ಮೊರೆಯಿಡುತ್ತಿರಲು, ಕಿವಿಯಿಂದ ಕೇಳುವುದಕ್ಕೂ ಭಯಂಕರವಾದ ಆ ಆಕ್ರಂದನಧ್ವನಿಯೇ ಎಲ್ಲೆಲ್ಲಿಯೂ ವ್ಯಾಪಿಸಿತ್ತು. ಹೀಗೆ ಹನುಮಂತನ ಕೋಪೋದ್ರೇಕದಿಂದ ಆ ಲಂಕೆಯೆಲ್ಲವೂ ಅಗ್ನಿಜ್ವಾಲೆಯಿಂದಾವೃತವಾಗಿ, ಅಲ್ಲಿನ ವೀರರೆಲ್ಲರೂ ಸತ್ತು ಅಲ್ಲಿನ ರಾಕ್ಷಸಭಟರೂ ನಿರ್ನಾಮವಾಗುತ್ತಿರಲು, ಆ ಪಟ್ಟಣವು ಅಕಸ್ಮಾತ್ತಾಗಿ ಮಹಾತ್ಮರ ಶಾಪದಿಂದ ಹತವಾದಂತೆ ಕಾಣಿಸಿತು. ಭಯಸಂಭ್ರಮಗಳಿಂದ ದುಃಖಿಸಿ ತತ್ತಳಿಸುವ ರಾಕ್ಷಸರ ಗದ್ದಲದಿಂದಲೂ, ಮಹಾಜ್ವಾಲೆಯಿಂದುರಿಯುವ ಬೆಂಕಿಯಿಂದಲೂ, ರೂಪುಗೆಟ್ಟ ಆ ಲಂಕೆಯನ್ನು ನೋಡಿದಾಗ, ಹನುಮಂತನಿಗೆ, ಪ್ರಳಯಕಾಲದಲ್ಲಿ ಪರಬ್ರಹ್ಮನ ಕೋಪದಿಂದ ಹತವಾಗಿ ಸುಟ್ಟುರಿಯುವ ಭೂಮಿಯೋ ಎಂಬಂತೆ ತೋರುತ್ತಿತ್ತು. ಹೀಗೆ ವಾಯುಪುತ್ರನಾದ ಹನುಮಂತನು, ವೃಕ್ಷಗಳಿಂದಲೂ ನವರತ್ನಗಳಿಂದಲೂ ಪೂರ್ಣವಾದ ಅಶೋಕವನವನ್ನು ಮುರಿದು, ಯುದ್ಧದಲ್ಲಿ

ಬಹಳಮಂದಿ ರಾಕ್ಷಸರನ್ನೂ ಕೊಂದು, ಉತ್ತಮಗೃಹಗಳ ಸಾಲಿನಿಂದ ಶೋಭಿತವಾದ ಲಂಕೆಯನ್ನೂ ತನ್ನ ವಾಲಾಗ್ನಿಯಿಂದ ದಹಿಸಿದಮೇಲೆ ಅವನ ಕೋಪ ಪಡಗಿತು. ಹೀಗೆ ಶಾಂತಚಿತ್ತನಾದ ಆ ವಾನರ ರಾಜಸಿಂಹನು ತನ್ನ ಬಾಲದಲ್ಲಿ ಧಗಧಗಿಸಿ ಉರಿಯುತ್ತಿರುವ ಬೆಂಕಿಯೊಡನೆಯೇ, ವಿಚಿತ್ರವಾದ ಅಲ್ಲಿನ ತ್ರಿಕೂಟ ಶಿಖರದ ತುದಿಯನ್ನೇರಿ ಕುಳಿತಿರಲು, ಸಹಸ್ರಕಿರಣಗಳೊಡನೆ ಕೂಡಿದ ಸೂರ್ಯನಂತೆ ಕಾಣುತಿದ್ದನು. ಮಹಾತ್ಮನಾದ ಹನುಮಂತನು, ಹೀಗೆ ಅನೇಕ ರಾಕ್ಷಸರನ್ನು ಕೊಂದು, ವೃಕ್ಷಗಳಿಂದ ತುಂಬಿದ ಅಶೋಕವನವನ್ನೂ ಭಂಗಿಸಿ ರಾಕ್ಷಸರ ಮನೆಗಳಿಗೂ ಬೆಂಕಿಯಿಟ್ಟಮೇಲೆ, ಅವನಿಗೆ ರಾಮನ ಸ್ಮರಣೆಯು ಬಂದು, ಆಗಲೇ ಅವನಬಳಿಗೆ ಹಿಂತಿರುಗಬೇಕೆಂಬ ಆತುರವೂ ಹುಟ್ಟಿತು. ಮಹಾತ್ಮನಾಗಿಯೂ, ಧೈರ್ಯಶಾಲಿಯಾಗಿಯೂ ಇರುವ ಆ ಹನುಮಂತನು, ರಾಕ್ಷಸರನ್ನು ಕೊಂದುದಕ್ಕಾಗಿ ತಾನು ಕೃತಾರ್ಥನೆಂದೆಣಿಸುತ್ತ, ಆಗಲೇ ತನ್ನ ಮನಸ್ಸಿನಿಂದ ತ್ರಿಲೋಕನಾಥನಾದ ಶ್ರೀರಾಮನ ಪಾದಮೂಲವನ್ನು ಸೇರಿಬಿಟ್ಟನು. ವಾನರವೀರರಲ್ಲಿ ಪ್ರಮುಖನಾಗಿಯೂ, ಮಹಾಬಲನಾಗಿಯೂ, ವಾಯುದೇವನಿಗೆಣೆಯಾದ ವೇಗವುಳ್ಳವನಾಗಿಯೂ, ಬಹಳಧೀಮಂತನಾಗಿಯೂ ಇರುವ, ಆ ವಾಯುಕುಮಾರನನ್ನು ಸಮಸ್ತ ದೇವಗಣಗಳೂ ಸಂತೋಷದಿಂದ ಸ್ತುತಿಸುತ್ತಿದ್ದುವು. ಅಶೋಕವನಭಂಗದಿಂದಲೂ, ರಾಕ್ಷಸರ ಸಂಹಾರದಿಂದಲೂ, ಲಂಕಾದಹನದಿಂದಲೂ, ಆ ಹನುಮಂತನ ತೇಜಸ್ಸು ಮತ್ತಷ್ಟು ವಿಶೇಷವಾಗಿ ಪ್ರಕಾಶಹೊಂದಿತು. ಆ ಮಹಾಕಪಿಯು ನಡೆಸಿದ ಲಂಕಾದಹನವನ್ನು ನೋಡಿ ದೇವತೆಗಳೂ, ಗಂಧರ್ವರೂ ಸಿದ್ಧರೂ, ವಿದ್ಯಾಧರರೂ, ಮಹರ್ಷಿಗಳೂ ಪರಮಾಶ್ಚರ್ಯವನ್ನು ಹೊಂದಿದರು. ಅಲ್ಲಿದ್ದ ಸಮಸ್ತಭೂತಗಳೂ ಆಗ ವಾನರೋತ್ತಮನಾದ ಆ ಹನುಮಂತನನ್ನೇ ಪ್ರಳಯಕಾಲಾಗ್ನಿಯೆಂದೆಣಿಸಿ ಭಯದಿಂದ ನಡುಗುತಿದ್ದುವು. ದೇವತೆಗಳೂ ಮಹರ್ಷಿಗಳೂ, ಗಂಧರ್ವರೂ, ವಿದ್ಯಾಧರರೂ, ಯಕ್ಷರೂ, ನಾಗರೂ ಇತರ ಸಮಸ್ತಭೂತಗಳೂ ಆ ಹನುಮಂತನನ್ನು ಎಣೆಯಿಲ್ಲದ ಪ್ರೀತಿಯಿಂದ ನೋಡುತ್ತಿದ್ದರು.

ಇಲ್ಲಿಗೆ ಐವತ್ತುನಾಲ್ಕನೆಯ ಸರ್ಗವು.

---

ಹನುಮಂತನು ಸಮುದ್ರದಲ್ಲಿ ತನ್ನ ಬಾಲವನ್ನದ್ದಿ ಬೆಂಕಿಯನ್ನಾರಿಸಿದ ಮೇಲೆ, ಅವನಿಗೆ ಸೀತೆಯ ಸ್ಮರಣವು ಬಂದು, ಸೀತೆಯೇನಾದಳೋ ಎಂದು ಭಯದಿಂದ ಚಿಂತಿಸಿದುದು. ಆಮೇಲೆ ಚಾರಣರ ವಾಕ್ಯದಿಂದ ಅವಳ ಕ್ಷೇಮವನ್ನು ತಿಳಿದು, ಅಕೆಯನ್ನು ತಿರುಗಿ ನೋಡಿಬಂದು ಪ್ರಯಾಣಸನ್ನದ್ಧನಾದುದು.

ಮಹಾಬಲಾಢ್ಯನಾದ ಆ ವಾನರೋತ್ತಮನು ಲಂಕೆಯ ಸಮಸ್ತ ಭಾಗಕ್ಕೂ ಬೆಂಕಿಯನ್ನಿಟ್ಟಮೇಲೆ, ಸಮುದ್ರದಲ್ಲಿ ತನ್ನ ಬಾಲವನ್ನದ್ದಿ ಆದರ ಬೆಂಕಿಯನ್ನಾರಿಸಿಬಿಟ್ಟನು. ಆ ಕಪಿಶ್ರೇಷ್ಠನು ಹಾಗೆಯೇ ನಿಂತು, ಇನ್ನೂ, ಆ ಲಂಕೆಯು ಅಗ್ನಿಜ್ವಾಲೆಯಲ್ಲಿ ಧಗಧಗಿಸಿ ಉರಿದುಬೀಳುತ್ತಿರುವುದನ್ನೂ, ಅಲ್ಲಲ್ಲಿ ರಾಕ್ಷಸರು ಸಂಭ್ರಮದಿಂದ ಚದರಿ ಪಲಾಯನಮಾಡುತ್ತಿರುವುದನ್ನೂ ನೋಡಿದನು. ಅವನಿಗೆ ಹಠಾತ್ತಾಗಿ ಒಂದು ಭಯವು ಹುಟ್ಟಿ, ತನ್ನನ್ನೇ ತಾನು ನಿಂದಿಸುವುದಕ್ಕೆ ತೊಡಗಿದನು. “ಅಯ್ಯೋ! ಇದೇನಿದು? ನಾನು ಮಾಡಿದ ಕಾರ್ಯವೇನು? ಈ ಲಂಕೆಯನ್ನು ಸುಟ್ಟುಬಿಟ್ಟೆನಲ್ಲಾ! ನನಗೂ ಹೀಗೊಂದು ದುರ್ಬುದ್ಧಿಯು ಹುಟ್ಟಬಹುದೆ? ಮುಖ್ಯವಾಗಿ ಕೋಪವು ಬಂದಾಗ, ಉರಿಯುವ ಬೆಂಕಿಯನ್ನು ನೀರಿನಿಂದಾರಿಸುವಂತೆ ಸ್ವಬುದ್ಧಿಯಿಂದ ಆ ಕೋಪವನ್ನು ನಿಗ್ರಹಿಸಬಲ್ಲವರೇ ಮಹಾತ್ಮರು! ಅವರೇ ಪುರುಷಶ್ರೇಷ್ಠರು! ಅಂತವರೇ ಧನ್ಯರು! ಕೋಪಗೊಂಡಮೇಲೆ ಪಾಪಮಾಡದವರಾರು? ಕೋಪಗೊಂಡವನು ಗುರುಗಳನ್ನಾದರೂ ಕೊಂದುಬಿಡುವನು! ಕೋಪಗೊಂಡವನು ಸಾಧುಗಳನ್ನು ಪರುಷವಾಕ್ಯದಿಂದ ಧಿಕ್ಕರಿಸುವನು. ಕೋಪವುಳ್ಳವರಿಗೆ ಮಾಡಬಾರದ ಕೆಲಸವಾಗಲಿ, ಆಡಬಾರದ ಮಾತಾಗಲಿ, ಯಾವುದೊಂದೂ ಇಲ್ಲ. ಹಾವುಗಳು ಜೀರ್ಣವಾದ ತಮ್ಮ ಪರೆಯನ್ನು ಬಿಡುವಂತೆ, ಯಾವನು ತಾಳ್ಮೆಯಿಂದ ತನ್ನ ಕೋಪವನ್ನಡಗಿಸಿಬಿಡುವನೋ ಅತನೇ ಮನುಷ್ಯನೆನಿಸುವನು. ಆಹಾ! ಇಲ್ಲಿ ಸೀತೆಯಿರುವುದನ್ನೂ ಭಾವಿಸದೆ ಈ ಲಂಕೆಗೆ ಬೆಂಕಿಯಿಟ್ಟೆನಲ್ಲಾ! ನಾಚಿಕೆಯಿಲ್ಲದ ಪರಮಪಾಪಿಯಾದ ನನ್ನ ಈ ದುರ್ಬುದ್ಧಿಯನ್ನು ಸುಡಬೇಕಲ್ಲವೆ? ಅಯ್ಯೋ! ನನ್ನ ಸ್ವಾಮಿಯನ್ನೇ ಈಗ ನಾನು ಕೊಂದಂತಾಯಿತಲ್ಲಾ! ಈ ಲಂಕೆಯೆಲ್ಲವೂ ಸುಟ್ಟುಹೋದಮೇಲೆ ಇನ್ನು ಸೀತೆಯುಮಾತ್ರ ಬದುಕಿರುವುದುಂಟೆ? ನಿಜವಾಗಿಯೂ ಸೀತೆಯು ಬೆಂಕಿಯಲ್ಲಿ ಸಿಕ್ಕಿ ದಗ್ಧಳಾಗಿದ್ದಪಕ್ಷದಲ್ಲಿ, ಅವಿವೇಕಿಯಾದ ನಾನೇ ನನ್ನ ಸ್ವಾಮಿಕಾರ್ಯವನ್ನು ಕೆಡಿಸಿದಂತಾಯಿತಲ್ಲವೆ? ನಾನು ಯಾವ ಕಾರ್ಯಕ್ಕಾಗಿ ಇಷ್ಟೊಂದು ಪ್ರಯತ್ನಗಳನ್ನು ನಡೆಸಿದೆನೋ ಆ ಕಾರ್ಯಕ್ಕೆ

ನಾನೇ ಮೂಲಚ್ಛೇದವನ್ನು ಮಾಡಿದಂತಾಯಿತು! ಲಂಕೆಯನ್ನು ಸುಡುವಾಗ ಸೀತೆಯನ್ನು ಸಂರಕ್ಷಿಸದೆ ಮರೆತೆನಲ್ಲಾ! ನಾನು ಈ ಮಹಾಸಮುದ್ರವನ್ನು ದಾಟಿದುದಲ್ಲದೆ ಸೀತೆಯಿರುವ ಸ್ಥಳವನ್ನೂ ಕಂಡುಕೊಂಡೆನು! ಹಿಡಿದ ಕಾರ್ಯವನ್ನು ಕೂಡಿದಮಟ್ಟಿಗೂ ಸಾಧಿಸಿದಂತಾಯಿತು! ಈ ಸಂಗತಿಯನ್ನು ರಾಮನಿಗೆ ತಿಳಿಸಿ ಅವನನ್ನು ಕರೆತರಬೇಕಾದ ಸ್ವಲ್ಪ ಕಾರ್ಯವೇ ಉಳಿದಿರುವುದು. ಇಷ್ಟರಲ್ಲಿ ಕೋಪವಶನಾದ ನಾನು ಆ ಕಾರ್ಯಕ್ಕೆ ಮೂಲಚ್ಛೇದವನ್ನೇ ಮಾಡಿದಂತಾಯಿತಲ್ಲವೆ! ಈಗ ಲಂಕೆಯಲ್ಲಿ ಬೆಂದು ಬೂದಿಯಾಗದ ಸ್ಥಳವೊಂದಾದರೂ ಇರುವಂತೆ ತೋರಲಿಲ್ಲ! ಆದುದರಿಂದ ಸೀತೆಯು ಮಾತ್ರ ಬದುಕಿರುವುದೆಂದರೇನು? ಲಂಕೆಯೆಲ್ಲವೂ ಹೀಗೆ ಭಸ್ಮೀಭೂತವಾಗಿರುವಾಗ ಅವಳೂ ದಗ್ಧಳಾಗಿರುವುದರಲ್ಲಿ ಸಂದೇಹವೇ ಇಲ್ಲ! ನನ್ನ ಅವಿವೇಕದಿಂದ ಈ ಕಾರ್ಯವು ನಿಜವಾಗಿಯೂ ಹಾಗೆಯೇ ನಡೆದಿದ್ದ ಪಕ್ಷದಲ್ಲಿ, ನಾನೂ ಇಲ್ಲಿ ಪ್ರಾಣತ್ಯಾಗವನ್ನು ಮಾಡಿಕೊಳ್ಳಬೇಕೇ ಹೊರತು ಮತ್ತೆ ಬೇರೆ ದಾರಿಯಿಲ್ಲ. ಕೈಗೆ ಬಂದ ಕಾರ್ಯವನ್ನು ನನಗೆ ನಾನೇ ಕೆಡಿಸಿಕೊಂಡಮೇಲೆ ಬದುಕಿರುವುದೇ ನನಗೆ ಯುಕ್ತವಲ್ಲ. ಇನ್ನು ನನ್ನ ಪ್ರಾಣತ್ಯಾಗಕ್ಕೆ ಉಪಾಯವೇನು? ನಾನೂ ಈ ಬೆಂಕಿಯಲ್ಲಿಯೇ ಬಿದ್ದು ಪ್ರಾಣವನ್ನು ಬಿಡಲೆ? ಅಥವಾ ಈ ಸಮುದ್ರದೊಳಗಿನ ಬಡಬಾಗ್ನಿಯ ಬಾಯಲ್ಲಿ ಪ್ರವೇಶಿಸಲೆ? ಅಥವಾ ನನ್ನ ಈ ದೇಹವನ್ನು ಇಲ್ಲಿನ ಜಲಚರ ಪ್ರಾಣಿಗಳ ಬಾಯಿಗೆ ತುತ್ತಾಗಿಸಿಬಿಡಲೆ? ನಾನು ಈ ಪ್ರಾಣವನ್ನಿಟ್ಟುಕೊಂಡು ನಮ್ಮ ಪ್ರಭುವಾದ ಸುಗ್ರೀವನನ್ನು ಹೇಗೆ ನೋಡಲಿ! ಮುಂದಿನ ಪ್ರಯತ್ನದ ಆಸೆಯೇ ಇಲ್ಲದಂತೆ ಕಾರ್ಯವನ್ನು ನಿರ್ಮೂಲವಾಗಿ ಕೆಡಿಸಿದ ನಾನು, ಪುರುಷಶ್ರೇಷ್ಠರಾದ ಆ ರಾಮಲಕ್ಷ್ಮಣರನ್ನಾದರೂ ಹೇಗೆ ಕಾಣಲಿ! ಈಗ ನಾನು ನನ್ನ ಕೋಪಾವೇಶದ ದೋಷದಿಂದ ಈ ಲಂಕೆಯನ್ನು ಸುಟ್ಟುಬಂದುದರಲ್ಲಿ, ಕಪಿಸ್ವಭಾವಕ್ಕೆ ತಕ್ಕ ನನ್ನ ಚಪಲಬುದ್ಧಿಯನ್ನು ಮೂರು ಲೋಕಗಳಿಗೂ ಪ್ರಕಟಪಡಿಸಿಕೊಂಡಂತಾಯಿತೇ ಹೊರತು ಬೇರೆಯಲ್ಲ! ಛೀ! ಈ ನನ್ನ ರಾಜಸಸ್ವಭಾವವನ್ನು ಸುಡಬೇಕು! ಕೇವಲ ಚಪಲವಾದ ಈ ರಜೋಗುಣದ ಪ್ರವರ್ತನೆಗೆ ತಡೆಯೇ ಇಲ್ಲವು. ನಾನು ಈ ಕಾರ್ಯಸಾಧನೆಯಲ್ಲಿ ಸಮರ್ಥನೆನಿಸಿದ್ದರೂ, ರಜೋಗುಣ ಸಂಬಂಧವಾದ ಕೋಪಕ್ಕೊಳಗಾಗಿ ಆ ಲಂಕೆಯನ್ನು ಸುಡುವಾಗ ಸೀತೆಯನ್ನು ರಕ್ಷಿಸಿಕೊಳ್ಳದೆ ಹೋದೆನು! ಆಹಾ! ಇಲ್ಲಿ ಸೀತೆಯು ಸತ್ತ ಸುದ್ದಿಯನ್ನು ಕೇಳಿದೊಡನೆ ರಾಮಲಕ್ಷ್ಮಣರಿಬ್ಬರೂ ಪ್ರಾಣವನ್ನು ಬಿಡುವರು. ಅವರಿಬ್ಬರ ಸಾವನ್ನು ಕಂಡರೆ ಸುಗ್ರೀ

ವನೂ ಬಂಧುಸಮೇತನಾಗಿ ಪ್ರಾಣವನ್ನು ಬಿಡುವನು. ಇದನ್ನು ಕೇಳಿದಮೇಲೆ ಧರ್ಮಾತ್ಮನಾಗಿಯೂ, ಭ್ರಾತೃವತ್ಸಲನಾಗಿಯೂ ಇರುವ ಭರತನು ಜೀವವನ್ನಿಟ್ಟು ಕೊಂಡಿರಬಲ್ಲನೆ? ಅವನೂ ಶತ್ರುಘ್ನನೊಡನೆ ಪ್ರಾಣವನ್ನು ಬಿಡುವನು. ಹೀಗೆ ಧರ್ಮಪ್ರಚುರವಾದ ಇಕ್ಷ್ವಾಕುವಂಶವೇ ಕ್ರಮಕ್ರಮವಾಗಿ ನಾಶಹೊಂದುತ್ತ ಬಂದರೆ, ದೇಶದ ಪ್ರಜೆಗಳೆಲ್ಲರೂ ದುಃಖದಿಂದಲೂ ಸಂತಾಪದಿಂದಲೂ ಪೀಡಿತರಾಗಿ ಎಡೆಬಿಡದೆ ಕೊರಗುವರು. ಇದಕ್ಕೆ ಸಂದೇಹವಿಲ್ಲ! ಅಃ! ಹೀಗಾದರೆ ನಾನು ಎಂತಹ ದುರ್ಭಾಗ್ಯನೆನಿಸುವೆನು! ಧರ್ಮಾರ್ಥಗಳೆರಡನ್ನೂ ಕೆಡಿಸಿಕೊಂಡು ಕೋಪವೆಂಬ ಮಹಾದೋಷಕ್ಕೆ ಭಾಗಿಯಾದ ನಾನೇ ಲೋಕನಾಶಕನೆನಿಸಿ ಕೊಳ್ಳುವುದಿಲ್ಲವೆ?'' ಎಂದು ಮನಸ್ಸಿನಲ್ಲಿ ನಾನಾವಿಧದಿಂದ ಕೊರಗಿ ಚಿಂತಿಸು ತ್ತಿರುವಾಗಲೇ, ಅವನಿಗೆ ಹಿಂದೆ ಆಗಾಗ ಸ್ವಲ್ಪಸ್ವಲ್ಪವಾಗಿ ತೋರುತ್ತಿದ್ದ ಕೆಲವು ಶುಭಶಕುನಗಳೇ, ಮೇಲೆಮೇಲೆ ವ್ಯಕ್ತವಾಗಿ ತೋರಿಬಂದುವು. ಆದ್ದರಿಂದ ಅವನು ಸ್ವಲ್ಪವಾಗಿ ಮನಸ್ಸಮಾಧಾನಹೊಂದಿ, ತಿರುಗಿ ತನ್ನಲ್ಲಿ ತಾನು 'ಅಥವಾ ಒಂದುವೇಳೆ ಮಂಗಳಸ್ವರೂಪಿಣಿಯಾದ ಆ ಸುಂದರಾಂಗಿಯು ಅಗ್ನಿಜ್ವಾಲೆಗೆ ಸಿಕ್ಕಿಬಿದ್ದರೂ, ತನ್ನ ಪಾತಿವ್ರತ್ಯದ ತೇಜಸ್ಸಿನಿಂದಲೇ ತಾನು ರಕ್ಷಿತೆಯಾಗಿದ್ದರೂ ಇರಬಹುದು! ಅಗ್ನಿಯೇ ಅಗ್ನಿಯನ್ನು ದಹಿಸಲಾರದಲ್ಲವೆ! ಆಕೆಯೋ ಮಹಾತೇಜಸ್ವಿಯಾದ ಮತ್ತು ಧರ್ಮಾತ್ಮನಾದ ರಾಮನಿಗೆ ಭಾರ್ಯೆಯು! ಅವಳ ಪಾತಿವ್ರತ್ಯವೇ ಅವಳಿಗೆ ರಕ್ಷೆಯಾಗಿರುವುದು. ಅಂತಹ ಸೀತೆಯನ್ನು ಅಗ್ನಿ ಹೋತ್ರನು ಮುಟ್ಟುವುದಕ್ಕೂ ಸಮರ್ಥನಲ್ಲ. ಅಗ್ನಿಗೆ ದಹಿಸುವುದೇ ಸ್ವಭಾವ ವಾಗಿದ್ದರೂ, ಈಗ ನನ್ನನ್ನು ದಹಿಸದಿದ್ದುದೂಕೂಡ ಆ ರಾಮನ ಪ್ರಭಾವದಿಂದಲೂ ಸೀತೆಯ ಪುಣ್ಯದಿಂದಲೂ ಆಗಿರಬೇಕೇ ಹೊರತು ಬೇರೆಯಲ್ಲ. ಭರತಲಕ್ಷ್ಮಣ ಶತ್ರುಘ್ನರು ಮೂವರಿಗೂ ಪರದೇವತೆಯೆನಿಸಿಕೊಂಡು, ಶ್ರೀರಾಮನ ಮನೋ ವಲ್ಲಭೆಯಾದ ಆ ಶುಭಾಂಗಿಗೆ ಯಾವ ವಿಧದಲ್ಲಿಯಾಗಲಿ ನಾಶವೆಂದರೇನು! ಅದೂ ಹೋಗಲಿ! ಅಗ್ನಿಗೆ ಸುಡುವುದೇ ಸ್ವಭಾವಕಾರ್ಯವು. ಮತ್ತು ಅದರ ಪ್ರವರ್ತನೆಗೆ ಎಲ್ಲಿಯೂ ತಡೆಯಿಲ್ಲ, ಅದಕ್ಕೆ ನಾಶವೂ ಇಲ್ಲ. ಇಂತಹ ಅಗ್ನಿಯೂ ನನ್ನನ್ನೇ ಹೀಗೆ ದಹಿಸದಿದ್ದಾಗ, ಇನ್ನು ಪೂಜ್ಯಳಾದ ಆ ಸೀತೆಯ ವಿಷಯದಲ್ಲಿ ಹೇಳಬೇಕಾದು ದೇನು!'' ಎಂದು ತನಗೆ ತಾನೇ ಸಮಾಧಾನಮಾಡಿಕೊಂಡನು. ತಿರುಗಿ ಅತನು ಹಿಂದೆ ಸಮುದ್ರಮಧ್ಯದಲ್ಲಿ ತನಗಿದಿರಾಗಿ ಬಂದು ನಿಂತ ಮೈನಾಕಪರ್ವತದ ವೃತ್ತಾಂತವನ್ನೂ ನೆನೆಸಿಕೊಂಡು ಆಶ್ಚರ್ಯಪಡುತ್ತ ತನ್ನಲ್ಲಿ ತಾನು "ಸೀತಾ ದೇವಿಯು ತನ್ನ ತಪಃಪ್ರಭಾವದಿಂದಲೂ, ತನ್ನ ಸತ್ವಬಲದಿಂದಲೂ, ತನ್ನ

ಪಾತಿವ್ರತ್ಯದ ಮಹಿಮೆಯಿಂದಲೂ, ಅಗ್ನಿಯನ್ನಾದರೂ ತಾನು ದಹಿಸಿಬಿಡಬಲ್ಲಳೇ ಹೊರತು ಅಗ್ನಿಯು ಅವಳನ್ನು ಸುಡಲಾರನು" ಎಂದು ತನಗೆ ತಾನೇ ಚಿಂತಿಸುತ್ತಿದ್ದನು. ಹೀಗೆ ಹನುಮಂತನು ಸೀತಾದೇವಿಯ ಧರ್ಮಪ್ರಭಾವವನ್ನು ಚಿಂತಿಸುತ್ತಿರುವಷ್ಟರಲ್ಲಿಯೇ, ಆಕಾಶದಲ್ಲಿ ಮಹಾತ್ಮರಾದ ಚಾರಣರು ಒಬ್ಬರಿಗೊಬ್ಬರು ಹೇಳಿಕೊಳ್ಳುತಿದ್ದ ಕೆಲವು ಮಾತುಗಳು ಅವನ ಕಿವಿಗೆ ಬಿದ್ದವು. ಆ ಚಾರಣರು ಆಕಾಶದಲ್ಲಿ "ಆಹಾ! ಈ ಹನುಮಂತನು ಮಾಡಿದ ಕಾರ್ಯವು ಎಷ್ಟು ದುಷ್ಕರವಾದುದು! ಈ ಲಂಕೆಯಲ್ಲಿರುವ ಒಂದೊಂದು ರಾಕ್ಷಸಗೃಹಕ್ಕೂ ಬೆಂಕಿಯಿಟ್ಟು ಬಂದನಲ್ಲಾ! ಇದು ಎಷ್ಟು ಭಯಂಕರಕಾರ್ಯವು! ಹೆಂಗಸರು, ಮಕ್ಕಳು, ಮುದುಕರು ಮೊದಲಾಗಿ ಇಲ್ಲಿನ ರಾಕ್ಷಸರೆಲ್ಲರೂ ಭಯದಿಂದ ದಿಕ್ಕುಗೆಟ್ಟು ಪಲಾಯನ ಮಾಡಿದರು. ಇಲ್ಲಿನ ಜನರ ಕೋಲಾಹಲವಾದರೋ ಪರ್ವತಗುಹೆಗಳಲ್ಲಿ ವಿಶೇಷವಾಗಿ ಪ್ರತಿಧ್ವನಿಯನ್ನುಂಟುಮಾಡುತ್ತಿರುವುದರಿಂದ ಈ ಲಂಕಾನಗರಿಯೇ ಗೋಳಾಡುವಂತಿರುವುದು, ಅಟ್ಟಣೆಗಳಿಂದಲೂ, ಪ್ರಾಕಾರಗಳಿಂದಲೂ, ತೋರಣಗಳಿಂದಲೂ ಶೋಭಿತವಾದ ಈ ನಗರವೆಲ್ಲವೂ ಸಂಪೂರ್ಣವಾಗಿ ದಗ್ಧವಾಯಿತು. ಇಷ್ಟಾದರೂ ಸೀತಾದೇವಿಗೆ ಮಾತ್ರ ಯಾವ ಅಪಾಯವೂ ಇಲ್ಲದಿರುವುದನ್ನು ನೋಡಿದರೆ ಆತ್ಯಾಶ್ಚರ್ಯವಾಗಿರುವುದು. ಈ ಪರಮಾಶ್ಚರ್ಯವನ್ನು ನಾವು ಇದುವರೆಗೆ ಹಿಂದೆ ಯಾವಾಗಲೂ ನೋಡಿದ್ದಿಲ್ಲ!" ಎಂದು ಹೇಳಿಕೊಳ್ಳುತ್ತಿದ್ದರು. ಕರ್ಣಾಮೃತಪ್ರಾಯವಾದ ಈ ಮಾತನ್ನು ಕೇಳಿ ಹನುಮಂತನಿಗೆ ಅಪರಿಮಿತವಾದ ಹರ್ಷವುಂಟಾಯಿತು. ಮತ್ತು ಆ ಹನುಮಂತನು ಇದುವರೆಗೆ ಹಿಂದೆ ಅನೇಕಾವರ್ತಿ ತನಗೆ ಫಲಸಿದ್ಧಿಯನ್ನು ತೋರಿಸತಕ್ಕ ಶುಭನಿಮಿತ್ತಗಳನ್ನೇ ಆಗಲೂ ಕಾಣುತಿದ್ದುದರಿಂದಲೂ, ಸೀತೆಯ ಪಾತಿವ್ರತ್ಯವೇ ಮೊದಲಾದ ಕಾರಣಗಳಿಂದಲೂ, ಚಾರಣರ ವಾಕ್ಯದಿಂದಲೂ, ಸೀತೆಗೆ ಯಾವ ಅಪಾಯವೂ ಉಂಟಾಗಿರದೆಂದು ಸಂತುಷ್ಟಹೃದಯನಾಗಿದ್ದನು. ಹೀಗೆ ಹನುಮಂತನು ತಾನು ಉದ್ದೇಶಿಸಿ ಬಂದ ಕಾರ್ಯವು ಕೈಗೂಡಿತೆಂದು ಕೃತಾರ್ಥನಾಗಿ, ಸೀತಾದೇವಿಗೂ ಯಾವ ಅಪಾಯವೂ ಇಲ್ಲವೆಂಬುದನ್ನೂ ತಿಳಿದು, ತಿರುಗಿ ಆ ಸೀತೆಯನ್ನು ಪ್ರತ್ಯಕ್ಷವಾಗಿ ನೋಡಿ ಬಂದಮೇಲೆಯೇ ಹಿಂತಿರುಗಿ ಪ್ರಯಾಣಮಾಡಬೇಕೆಂದು ಮನಸ್ಸಿನಲ್ಲಿ ಉದ್ದೇಶಿಸಿದನು.

ಇಲ್ಲಿಗೆ ಐವತ್ತೈದನೆಯ ಸರ್ಗವು.

———

ಹನುಮಂತನು ಸೀತೆಯನ್ನು ಕಂಡು, ಅವಳ ಅಜ್ಞೆಯನ್ನು ಪಡೆದು ಅರಿಷ್ಟಪರ್ವತವನ್ನೇರಿ ಸಮುದ್ರಲಂಘನಕ್ಕಾಗಿ ಉದ್ಯೋಗಿಸಿದುದು.

ಆಮೇಲೆ ಹನುಮಂತನು ಶಿಂಶುಪಾವೃಕ್ಷದ ಕೆಳಗೆ ಕುಳಿತಿದ್ದ ಸೀತೆಯ ಬಳಿಗೆ ಬಂದು, ಅವಳಿಗೆ ನಮಸ್ಕರಿಸಿ, "ಅಮ್ಮಾ! ಇಷ್ಟು ಅನಾಹುತಗಳಲ್ಲಿಯೂ ಯಾವ ಅಪಾಯಕ್ಕೂ ಸಿಕ್ಕದೆ ಸುಖದಿಂದಿರುವ ನಿನ್ನನ್ನು ನೋಡುವಂತಾದುದು ನನ್ನ ಭಾಗ್ಯವೇ ಹೊರತು ಬೇರೆಯಲ್ಲ! ಎಂದನು. ಪ್ರಯಾಣೋದ್ಯುಕ್ತನಾಗಿ ನಿಂತಿರುವ ಆ ಹನುಮಂತನನ್ನು ಸೀತೆಯು ವಾತ್ಸಲ್ಯದಿಂದ ಬಾರಿಬಾರಿಗೂ ನೋಡುತ್ತ ತನಗೆ ಪತಿಯಲ್ಲಿರುವ ಪ್ರೇಮಕ್ಕೆ ಸೂಚಕವಾದ ಮಾತಿನಿಂದ ಅತನನ್ನು ಕುರಿತು, "ಎಲೈ ಪರಂತಪನೆ! ಇಲ್ಲಿನ ರಾಕ್ಷಸರೆಲ್ಲರನ್ನೂ ನಿರ್ಮೂಲಮಾಡಿ ನನ್ನನ್ನು ರಾಮನ ಬಳಿಗೆ ಸೇರಿಸುವುದಕ್ಕೂ ನೀನೊಬ್ಬನೇ ಸಾಕಾಗಿರುವೆ. ನೀನು ಇಲ್ಲಿ ತೋರಿಸಿದ ನಿನ್ನ ಬಲಾತಿಶಯಗಳೆಲ್ಲವೂ ನಿನಗೆ ಅಪಾರಕೀರ್ತಿಯನ್ನುಂಟುಮಾಡುವುದರಲ್ಲಿ ಸಂದೇಹವಿಲ್ಲ. ಮುಂದೆಯೂ ಹೀಗಾದರೆ ರಾಮನ ಕೀರ್ತಿಯು ಹೊರಕ್ಕೆ ಬರುವುದಕ್ಕೆ ಅವಕಾಶವಿಲ್ಲ. ಪರಂತಪನಾದ ಆ ರಾಮನೇ ಇಲ್ಲಿಗೆ ಬಂದು, ತನ್ನ ಬಾಣಗಳಿಂದ ಈ ಲಂಕೆಯೆಲ್ಲವನ್ನೂ ಉಲ್ಲೋಲಕಲ್ಲೋಲಮಾಡಿ, ನನ್ನನ್ನು ಕರೆದುಕೊಂಡು ಹೋದರೆ, ಆ ಕಾರ್ಯವು ಕಕುತ್ಸ್ಥಕುಲತಿಲಕನಾದ ರಾಮನಿಗೆ ತಕ್ಕುದಾಗಿರುವುದು. ಅದುದರಿಂದ ಮಹಾಶೂರನಾದ ಆ ನನ್ನ ಪ್ರಿಯನು ಇಲ್ಲಿಗೆ ಬಂದು, ತನಗೆ ತಕ್ಕ ರೀತಿಯಲ್ಲಿ ಪರಾಕ್ರಮವನ್ನು ತೋರಿಸಿಹೋಗುವಂತೆ ಘಟಿಸಬೇಕಾದುದು ನಿನ್ನ ಕಾರ್ಯವು" ಎಂದಳು. ಹೀಗೆ ಸೀತೆಯು ಸಕಾರಣವಾಗಿಯೂ, ಸಾರವತ್ತಾಗಿಯೂ, ವಿನಯಯುಕ್ತವಾಗಿಯೂ ಇರುವ ಮಾತನ್ನು ಹೇಳಲು ಅದನ್ನು ಕೇಳಿ ಹನುಮಂತನು ಆ ಮಾತಿಗೆ ಪ್ರತ್ಯುತ್ತರವಾಗಿ "ಅಮ್ಮಾ! ಯುದ್ಧದಲ್ಲಿ ಶತ್ರುಗಳನ್ನು ಕೊಂದು ನಿನ್ನ ದುಃಖವನ್ನು ನೀಗಿಸತಕ್ಕ ಆ ರಾಮನು ಅನೇಕವಾನರಭಲ್ಲೂಕವೀರರೊಡಗೂಡಿ ಶೀಘ್ರದಲ್ಲಿಯೇ ಇಲ್ಲಿಗೆ ಬರುವನು" ಎಂದನು. ಹೀಗೆ ಹನುಮಂತನು ಸೀತೆಗೆ ಸಮಾಧಾನವನ್ನು ಹೇಳಿ, ತಾನು ಪ್ರಯಾಣೋನ್ಮುಖನಾಗಿ, ತಿರುಗಿ ಸೀತೆಗೆ ಸಾಷ್ಟಾಂಗವಾಗಿ ನಮಸ್ಕರಿಸಿದನು. ಆಮೇಲೆ ಆ ವಾನರಸಿಂಹನು ತನ್ನ ಪ್ರಭುವಾದ ರಾಮನನ್ನು ನೋಡುವ ಆತುರದಿಂದ ಆಗಲೇ ಅಲ್ಲಿಂದ ಹೊರಟು, ಅರಿಷ್ಟವೆಂಬ ಪರ್ವತದ ಮೇಲೆ ಹತ್ತಿದನು. ಆ ಪರ್ವತವಾದರೋ ನಡುನಡುವೆ ಪದ್ಮಪರ್ಣವುಳ್ಳ

ದೊಡ್ಡದೊಡ್ಡ ಮರಗಳಿಂದ ತುಂಬಿದ ಕಪ್ಪಾದ ವನರಾಜಿಯಿಂದ, ಚಿತ್ರವರ್ಣವಾದ ನಡುಬಟ್ಟೆಯನ್ನುಟ್ಟು ನಿಂತಂತೆ ಕಾಣುವುದು. ಶಿಖರಗಳ ಮೇಲೆ ತೂಗಾಡುತ್ತಿರುವ ಮೇಘಗಳಿಂದ ಉತ್ತರೀಯವನ್ನು ಧರಿಸಿದಂತೆ ತೋರುವುದು. ಬಾಲಸೂರ್ಯನು ತನ್ನ ಕಿರಣಗಳೆಂಬ ಹಸ್ತಗಳಿಂದ ಆ ಪರ್ವತವನ್ನು ಪ್ರೀತಿಪೂರ್ವಕವಾಗಿ ಎಚ್ಚರಗೊಳಿಸುವಂತೆಯೂ, ಆ ಪರ್ವತವು ತನ್ನಲ್ಲಿರತಕ್ಕ ಗೈರಿಕಾದಿ ಧಾತುಗಳಿಂದ ಕಣ್ಣುತೆರೆದು ನೋಡುವಂತೆಯೂ ತೋರುವುದು. ಶಿಖರಗಳಿಂದ ಬೀಳುವ ಗಿರಿನದಿಗಳ ಪ್ರವಾಹಧ್ವನಿಯಿಂದ ಆ ಪರ್ವತವು ವೇದಾಧ್ಯಯನವನ್ನು ಮಾಡುವಂತೆಯೂ ಸುತ್ತಲೂ ಹೊರಟು ಬರುವ ಸಣ್ಣಸಣ್ಣ ಬಿಲುಮೆಗಳ ಧ್ವನಿಯಿಂದ ಗಾನಮಾಡುವಂತೆಯೂ ಕಾಣುವುದು. ಅದರಲ್ಲಿ ಮಹೋನ್ನತವಾಗಿ ಬೆಳೆದ ದೇವದಾರು ವೃಕ್ಷಸಮೂಹದಿಂದ ಆ ಪರ್ವತವು ಕೈಯೆತ್ತಿ ತಪಸ್ಸು ಮಾಡುವಂತಿರುವುದು. ಅಲ್ಲಲ್ಲಿ ಬೀಳುವ ಜಲಪಾತಗಳ ಮಹಾಧ್ವನಿಯಿಂದ ಗಟ್ಟಿಯಾಗಿ ಕೂಗಿಡುವಂತಿರುವುದು. ಅಲ್ಲಲ್ಲಿ ಶಿಖರಗಳ ಮೇಲೆ ತೂರಿಬರುತ್ತಿರುವ ಶರತ್ಕಾಲದ ಮೇಘಗಳಿಂದ ಭಯಪಟ್ಟು ನಡುಗುವಂತೆ ಕಾಣುವುದು. ಗಾಳಿಯಿಂದ ಶಬ್ದಿಸುವ ಕೀಚಕಗಳೆಂಬ ಬಿದಿರುಗಳ ಧ್ವನಿಯಿಂದ ಆ ಪರ್ವತವೇ ಕೂಗಿಡುವಂತಿರುವುದು. ಅದರೊಳಗಿನ ಮಹಾ ಸರ್ಪಗಳು ಬುಸುಗುಟ್ಟುವ ಧ್ವನಿಯನ್ನು ಕೇಳಿದಾಗ ಆ ಪರ್ವತವು ತನ್ನನ್ನು ಕಾಲಿನಿಂದ ಮೆಟ್ಟಿದ ಹನುಮಂತನ ಮೇಲೆ ಕೋಪಗೊಂಡು ಸಿಟ್ಟು ಸಿರುಬಿಡುವಂತೆ ಕಾಣುವುದು. ಮಂಜುತುಂಬಿ ನಿಶ್ಶಬ್ದವಾಗಿ ಗಂಭೀರವಾಗಿರುವ ಅದರ ಗುಹೆಗಳನ್ನು ನೋಡಿದಾಗ, ಇಂದ್ರಿಯಗಳನ್ನು ತಡೆದು ಮೌನದಿಂದ ತಪಸ್ಸು ಮಾಡುವಂತೆ ಕಾಣುವುದು. ಮೇಘಗಳು ನೆಲಕ್ಕಿಳಿದಂತೆ ತೋರುವ ತನ್ನ ಪ್ರತ್ಯಂತ ಪರ್ವತಗಳಿಂದ ನಡೆದುಹೋಗುವಂತೆಯೂ, ಮೇಘಪರಂಪರೆಗಳಿಂದ ತುಂಬಿದ ಶಿಖರಗಳಿಂದ ಆಕಾಶದಲ್ಲಿ ಮೈಮುರಿಯುವಂತೆಯೂ ತೋರುವುದು. ಹೀಗೆ ಅತಿರಮ್ಯವಾಗಿ ಅನೇಕ ಗುಹೆಗಳಿಂದ ತುಂಬಿದ ಅದರ ಶಿಖರಗಳೆಲ್ಲವೂ, ಹನುಮಂತನ ಕಾಲಿನ ತುಳಿತದಿಂದ ಕ್ಷಣಮಾತ್ರದಲ್ಲಿ ಕದಲಿ ಹೋಗಿದ್ದುವು. ಮತ್ತು ಸಾಲ, ತಾಳೆ, ಅಶ್ವಕರ್ಣ, ಬಿದಿರು ಮುಂತಾದ ಅನೇಕ ವೃಕ್ಷಜಾತಿಗಳೂ, ವಿಸ್ತಾರವಾಗಿ ಪುಷ್ಪಿಸಿ ಬೆಳೆದ ಲತಾಸಮೂಹಗಳೂ, ಗುಂಪುಗುಂಪಾಗಿ ಅಲ್ಲಲ್ಲಿ ಸಂಚರಿಸುತಿದ್ದ ಬಗೆಬಗೆಯ ಮೃಗಸಮೂಹಗಳೂ, ಗೈರಿಕಾದಿಧಾತುರಸಗಳ ಪ್ರವಾಹವೂ, ಆ ಪರ್ವತಕ್ಕೆ ಒಂದು ಅಪೂರ್ವಶೋಭೆಯನ್ನುಂಟುಮಾಡುತಿದ್ದುವು. ಅದರ ಸುತ್ತಲೂ, ಅಸಂಖ್ಯಾತಗಳಾದ ಗಿರಿನದಿಗಳು ಹರಿಯುವುವು, ಎಲ್ಲಿ ನೋಡಿ

ದರೂ ದೊಡ್ಡದೊಡ್ಡ ಕಲ್ಲು ಬಂಡೆಗಳು ದಟ್ಟವಾಗಿ ತುಂಬಿರುವುವು. ಮಹರ್ಷಿಗಳೂ, ಯಕ್ಷರೂ, ಗಂಧರ್ವರೂ, ಕಿನ್ನರರೂ, ಉರಗರೂ, ಅಲ್ಲಿಗೆ ಬಂದು ಅದನ್ನು ಸೇವಿಸುತ್ತಿರುವರು. ಆ ಪರ್ವತದ ಯಾವ ಕಡೆಯಲ್ಲಿ ನೋಡಿದರೂ ಗಿಡಬಳ್ಳಿಗಳು ನಿಬಿಡವಾಗಿ ಬೆಳೆದಿರುವುವು. ಅದರ ಗುಹೆಗಳೆಲ್ಲವೂ ಸಿಂಹಗಳಿಗೆ ನಿವಾಸಸ್ಥಾನವಾಗಿರುವುವು. ಅದರ ಸುತ್ತಲೂ ಹುಲಿಗಳು ಗುಂಪುಗುಂಪಾಗಿ ತಿರುಗುತ್ತಿರುವುವು. ಅದರಲ್ಲಿ ರುಚಿಕರಗಳಾದ ಫಲಮೂಲಗಳಿಂದ ತುಂಬಿದ ವೃಕ್ಷಗಳು ಅನೇಕವಾಗಿ ಬೆಳೆದಿರುವುವು. ಹೀಗೆ ಒಪ್ಪುತ್ತಿದ್ದ ಆ ಅರಿಷ್ಟಪರ್ವತವನ್ನು ನೋಡುತ್ತ, ವಾಯುಪುತ್ರನಾದ ಹನುಮಂತನು, ರಾಮನನ್ನು ನೋಡಬೇಕೆಂಬ ಆತುರದಿಂದಲೂ, ಉತ್ಸಾಹದಿಂದಲೂ ಪ್ರೇರಿತನಾಗಿ, ಆ ಪರ್ವತದಮೇಲೆ ಹತ್ತಿದನು. ಹೀಗೆ ಹನುಮಂತನು ಅತಿ ಮನೋಹರವಾದ ಆ ಪರ್ವತದ ತಪ್ಪಲುಗಳಲ್ಲಿರುವ ಶಿಲೆಗಳನ್ನು ತನ್ನ ಕಾಲುಗಳಿಂದ ಮೆಟ್ಟಿ ಮೇಲೇರಿಹೋಗುವಾಗ, ಆ ಮಹಾಶಿಲೆಗಳೆಲ್ಲವೂ ದೊಡ್ಡ ಧ್ವನಿಯೊಡನೆ ಪುಡಿಪುಡಿಯಾಗಿ ಬೀಳುತಿದ್ದುವು. ಈ ರೀತಿಯಲ್ಲಿ ಆ ಮಹಾಕಪಿಯು ಆ ಅರಿಷ್ಟ ಪರ್ವತವನ್ನೇರಿ, ಸಮುದ್ರದ ದಕ್ಷಿಣತೀರದಿಂದ ಉತ್ತರತೀರಕ್ಕೆ ಹಾರುವುದಕ್ಕಾಗಿ ಸಮುದ್ರವನ್ನು ಪ್ರಾರ್ಥಿಸಿ, ತನ್ನ ದೇಹವನ್ನು ಬಳೆಸಿಕೊಂಡನು. ವೀರನಾದ ವಾಯುಪುತ್ರನು ಆ ಪರ್ವತವನ್ನೇರಿ ನಿಂತು, ಅನೇಕ ಮತ್ಸ್ಯಗಳಿಂದಲೂ, ಸರ್ಪಗಳಿಂದಲೂ, ತುಂಬಿ ಭಯಂಕರವಾದ ಆ ಲವಣ ಸಮುದ್ರವನ್ನು ನೋಡಿಯೂ ಮಹೋತ್ಸಾಹದಿಂದುಬ್ಬುತ್ತ, ತನ್ನ ತಂದೆಯಾದ ವಾಯುವಿನಂತೆ ಆಗಲೇ ಆಕಾಶಕ್ಕೆ ಹಾರಿಬಿಟ್ಟನು. ಈತನು ಹಾರುವಾಗ ಪರ್ವತವನ್ನು ತನ್ನ ಕಾಲಿನಿಂದ ಮೆಟ್ಟಿದೊಡನೆ ಆ ಪರ್ವತವನ್ನಾಶ್ರಯಿಸಿದ್ದ ಸಮಸ್ತ ಪ್ರಾಣಿಗಳೂ ಭಯದಿಂದ ನಡುಗಿ "ಹೋ!" ಎಂದು ಅರಚುತ್ತಿರಲು ಆ ಪರ್ವತವೇ ಗೋಳಿಡುವಂತಿತ್ತು. ಆ ಪರ್ವತಶಿಖರಗಳೆಲ್ಲವೂ ನಡುಗಿ ಹನುಮಂತನ ತುಳಿತದಿಂದ ಕುಗ್ಗಿ ನೆಲಕ್ಕಿಳಿದುವು. ಅದರ ವೃಕ್ಷಗಳೆಲ್ಲವೂ ಮುರಿದುಬಿದ್ದುವು. ಅದರಲ್ಲಿದ್ದ ಪುಷ್ಪಿತಗಳಾದ ಗಿಡಗಳೆಲ್ಲವೂ ಈ ಆಂಜನೇಯನ ತೊಡೆಯ ವೇಗದಿಂದ ಪೀಡಿತಗಳಾಗಿ ಸಿಡಿಲಿನ ಬಡಿತಕ್ಕೆ ಸಿಕ್ಕಿದಂತೆ ನೆಲಕ್ಕುರುಳಿದುವು. ಆ ಪರ್ವತ ಗುಹೆಗಳಲ್ಲಿ ಚೆನ್ನಾಗಿ ಕೊಬ್ಬಿಬೆಳೆದ ಸಿಂಹಗಳೂ ಕೂಡ ಈ ಹನುಮಂತನ ಪಾದಾಘಾತದಿಂದ ಪೀಡಿತಗಳಾಗಿ ಆಕಾಶವನ್ನು ಭೇದಿಸುವಂತೆ ಮಹಾಧ್ವನಿಯಿಂದ ಮೊರೆಯಿಟ್ಟುವು. ಅಲ್ಲಿದ್ದ ವಿದ್ಯಾಧರಸ್ತ್ರೀಯರೆಲ್ಲರೂ ಭಯದಿಂದ ನಡುಗಿ, ಕದಲಿದ ವಸ್ತ್ರಾಭರಣಗಳುಳ್ಳವರಾಗಿ, ಆಗಲೇ ಆ ಪರ್ವತದ ತಪ್ಪಲನ್ನು ಬಿಟ್ಟು ತಟ್ಟನೆ ಆಕಾಶಕ್ಕೆ ಹಾರಿದರು. ಆ ಪರ್ವತದಲ್ಲಿ ಬಲಾಢ್ಯಗಳಾಗಿಯೂ ಉರಿಯುವ ನಾಲಗೆ

ಯುಳ್ಳವುಗಳಾಗಿಯೂ, ಕ್ರೂರವಿಷವುಳ್ಳವುಗಳಾಗಿಯೂ ಇದ್ದ ದೊಡ್ಡ ಸರ್ಪಗಳೆಲ್ಲವೂ ಭಯದಿಂದ ಕುಗ್ಗಿದ ತಲೆಯುಳ್ಳವುಗಳಾಗಿ ನೆಲದಲ್ಲಿ ಹೊರಳುತ್ತಿದ್ದುವು. ಆ ಪರ್ವತದಮೇಲಿದ್ದ ಕಿನ್ನರರೂ, ಉರಗರೂ, ಗಂಧರ್ವರೂ, ಯಕ್ಷರೂ, ವಿದ್ಯಾಧರರೂ, ಭಯಗೊಂಡು ಹನುಮಂತನಿಂದ ಪೀಡಿತವಾದ ಆ ಪರ್ವತವನ್ನು ಅಗಲೇ ಬಿಟ್ಟು ಆಕಾಶಕ್ಕೆಹಾರಿದರು. ಬಲಾಢ್ಯನಾದ ಈ ಹನುಮಂತನ ಕಾಲಿನ ತುಳಿತವನ್ನು ತಡೆಯಲಾರದೆ ಆ ಪರ್ವತವು ತನ್ನಲ್ಲಿರುವ ಸಮಸ್ತ ವೃಕ್ಷಗಳೊಡನೆಯೂ, ಶಿಖರಗಳೊಡನೆಯೂ ಪಾತಾಳವನ್ನು ಪ್ರವೇಶಿಸಿಬಿಡುವಂತೆ ನೆಲಕ್ಕೆ ತಗ್ಗಿಹೋಯಿತು. ಹತ್ತು ಯೋಜನಗಳವಿಸ್ತಾರವುಳ್ಳದಾಗಿಯೂ, ಮೂವತ್ತು ಯೋಜನಗಳಷ್ಟು ಉನ್ನತವಾಗಿಯೂ ಇದ್ದ ಆ ಮಹಾಪರ್ವತವೂ ಕೂಡ, ಹನುಮಂತನ ಕಾಲತುಳಿತದಿಂದ ಕುಗ್ಗಿ ನೆಲಸಮವಾಯಿತು. ಹನುಮಂತನು ಅಲೆಗಳ ಬಡಿತದಿಂದ ಭಯಂಕರವಾದ ಲವಣಸಮುದ್ರವನ್ನು ಲೀಲಾಮಾತ್ರದಿಂದಲೇ ದಾಟಬೇಕೆಂದೆಣಿಸಿ ಒಂದೇ ವೇಗದಿಂದ ಆಕಾಶದಲ್ಲಿ ಹಾರಿ ಬಂದನು.

ಇಲ್ಲಿಗೆ ಐವತ್ತಾರನೆಯ ಸರ್ಗವು.

---

ಹನುಮಂತನು ಸಮುದ್ರವನ್ನು ದಾಟಿ ಉತ್ತರತೀರವನ್ನು ಸೇರಿದುದು. ಅಲ್ಲಿ ಜಾಂಬವಾದಿಗಳು ಆತ್ಯಾತುರದಿಂದ ಲಂಕೆಯ ವೃತ್ತಾಂತವನ್ನು ವಿಚಾರಿಸಿದುದು.

ಹೀಗೆ ಹನುಮಂತನು ಹಾರಿಬರುವಾಗ ಆಕಾಶಪ್ರದೇಶವು ಚಂದ್ರನೆಂಬ ಬಿಳೀನೈದಿಲೆ ಹೂವಿನಿಂದಲೂ, ಸೂರ್ಯನೆಂಬ ಕಾರಂಡವಪಕ್ಷಿಯಿಂದಲೂ, ಪುಷ್ಯಶ್ರವಣ ನಕ್ಷತ್ರಗಳೆಂಬ ಕಲ್ಹಹಂಸದಂಪತಿಗಳಿಂದಲೂ, ಮೇಘಗಳೆಂಬ ಪಾಚಿಗಳ ಮತ್ತು ತೀರದ ಗರಿಕೆಗಳ ಸಮೂಹದಿಂದಲೂ, ಪುನರ್ವಸುವೆಂಬ ಮಹಾಮತ್ಸ್ಯದಿಂದಲೂ ಅಂಗಾರಕ ಗ್ರಹವೆಂಬ ದೊಡ್ಡ ಮೊಸಳೆಯಿಂದಲೂ, ಐರಾವತವೆಂಬ ದ್ವೀಪದಿಂದಲೂ, ಸ್ವಾತಿ ನಕ್ಷತ್ರವೆಂಬ ಹಂಸಸಂಚಾರದಿಂದಲೂ, ಚಂದ್ರಕಿರಣಗಳೆಂಬ ಅಲೆಯಾಡುವ ಶೀತಲಜಲದಿಂದಲೂ, ನಾಗಯಕ್ಷಗಂಧರ್ವರೆಂಬ ಬಣ್ಣಬಣ್ಣದ ತಾವರೆ ನೈದಿಲೆಹೂಗಳಿಂದಲೂ ಕೂಡಿ, ಒಂದು ಮಹಾಸಮುದ್ರದಂತಿರಲು, ಆ ಮಹಾಕಪಿಯು ಸಮುದ್ರವನ್ನು ದಾಟುವ ದೊಡ್ಡ ಹಡಗಿನಂತೆ ಗಂಭೀರವಾಗಿ ದಾಟಬಂದನು. ಇವನು ವೇಗದಿಂದ ಮೇಲೆ

ಹಾರಿಬರುವಾಗ, ಅಂತರಿಕ್ಷವನ್ನೇ ನುಂಗಿಬಿಡುವಂತೆಯೂ, ಚಂದ್ರನನ್ನು ಉಗುರುಗಳಿಂದ ಪರಚುವಂತೆಯೂ, ನಕ್ಷತ್ರಗಳೊಡನೆಯೂ ಸೂರ್ಯಬಿಂಬದೊಡನೆಯೂ ಕೂಡಿದ ಆಕಾಶವನ್ನೇ ಸುರುಟಿಕೊಂಡು ಹೋಗುವಂತೆಯೂ, ಮೇಘಗಳನ್ನಾಕರ್ಷಿಸುವಂತೆಯೂ, ಮುಂದೆ ಮುಂದೆ ಸಾಗಿಬರುತ್ತಿದ್ದನು. ಈ ತೇಜಸ್ವಿಯಾದ ಹನುಮಂತನ ದೇಹಕಾಂತಿಯಿಂದ, ಆಕಾಶದಲ್ಲಿದ್ದ ಮಹಾಮೇಘಗಳಲ್ಲಿ ಕೆಲವು ಬಿಳುಪಾಗಿಯೂ, ಕೆಲವು ಹಸುರಾಗಿಯೂ, ಕೆಲವು ನೀಲವರ್ಣವಾಗಿಯೂ, ಕೆಲವು ಹೊಂಬಣ್ಣವಾಗಿಯೂ, ಕೆಲವು ಹಸುರಾಗಿಯೂ, ಕೆಲವು ಎಳಗೆಂಪುಬಣ್ಣವುಳ್ಳವುಗಳಾಗಿಯೂ ಕಾಣುತ್ತಿದ್ದುವು. ಆ ಹನುಮಂತನೂ ಕೂಡ ಆಗ್ಗಾಗ ಆ ಮೇಘಸಮೂಹದಲ್ಲಿ ಪ್ರವೇಶಿಸಿ, ತಿರುಗಿ ಹೊರಕ್ಕೆ ಕಾಣಿಸಿಕೊಳ್ಳುತ್ತಾ, ಮೇಘಗಳ ಮರೆಯಲ್ಲಿ ನುಗ್ಗಿಬರುವ ಚಂದ್ರನಂತೆ ಕಾಣುತಿದ್ದನು. ಬಿಳೀಬಟ್ಟೆಯನ್ನುಟ್ಟಿದ್ದ ವೀರನಾದ ಆ ಹನುಮಂತನು, ಹೀಗೆ ನಾನಾವಿಧಗಳಾದ ಮೇಘಗಳ ನಡುವೆ ನುಗ್ಗಿ ಬರುವಾಗ ವರ್ಷಾಕಾಲದಲ್ಲಿ ಮೇಘಗಳ ನಡುವೆ ಸೇರಿ, ಕಂಡೂ ಕಾಣದ ಪ್ರಕಾಶವುಳ್ಳ ಚಂದ್ರನಂತೆ ತೋರುತಿದ್ದನು. ಮತ್ತು ಆ ಹನುಮಂತನು ಮೇಘಸಮೂಹಗಳನ್ನು ಭೇದಿಸಿಕೊಂಡು ಕ್ಷಣಕ್ಷಣಕ್ಕೂ ಹೊರಗೆ ಗೋಚರಿಸುತ್ತಾ, ಆಗಾಗ ಮೇಘಧ್ವನಿಯಂತೆ ಮಹಾಧ್ವನಿಯನ್ನೂ ಮಾಡುತ್ತಿರಲು ಆಕಾಶದಲ್ಲಿ ಹಾರಿ ಬರುವ ಗರುಡನಂತೆ ಕಾಣುತಿದ್ದನು. ಮಹಾತೇಜಸ್ವಿಯಾದ ಆ ಕಪಿಶ್ರೇಷ್ಠನು ಲಂಕೆಯಲ್ಲಿ ಅನೇಕ ವೀರರಾಕ್ಷಸರನ್ನು ಕೊಂದು ತನ್ನ ಖ್ಯಾತಿಯನ್ನು ಪ್ರಸಿದ್ಧಪಡಿಸಿ ಆ ಲಂಕಾನಗರಿಯೆಲ್ಲವನ್ನೂ ಸುಟ್ಟು ಉಲ್ಲೋಲಕಲ್ಲೋಲವನ್ನಾಗಿ ಮಾಡಿ, ರಾವಣನಿಗೂ ಮಹಾವ್ಯಸನವನ್ನುಂಟುಮಾಡಿ, ಆವನ ಸೈನ್ಯಗಳೆಲ್ಲವನ್ನೂ ಕೊಂದು ಸೀತೆಗೆ ನಮಸ್ಕರಿಸಿ, ಇಷ್ಟು ಸಾಹಸಕಾರ್ಯಗಳನ್ನು ಮಾಡಿದ್ದರೂ, ಸ್ವಲ್ಪಮಾತ್ರವೂ ಬಳಲಿಕೆಯನ್ನು ತೋರಿಸದೆ ಸಮುದ್ರಮಧ್ಯದಲ್ಲಿ ಒಂದೇ ನೆಗೆತಕ್ಕೆ ಆಕಾಶಮಾರ್ಗವಾಗಿ ಹಾರಿಬಂದನು. ಇವನು ಬರುವಾಗ ಮೊದಲಿನಂತೆಯೇ ಸುನಾಭವೆಂಬ ಮೈನಾಕಪರ್ವತವು ದಾರಿಗಡ್ಡಲಾಗಿ ನಿಂತಿರಲು ಅದನ್ನು ಕೈಯಿಂದ ಸವರಿ, ನಾಣಿನಿಂದ ಹೊರಟ ಬಾಣದಂತೆ ಮಹಾವೇಗದಿಂದ ಮುಂದೆ ಬಂದನು. ಆ ವಾನರೋತ್ತಮನು ಮೈನಾಕವನ್ನು ದಾಟಿ ಸ್ವಲ್ಪದೂರಕ್ಕೆ ಬಂದೊಡನೆಯೇ ಮೇಘದಂತೆ ಕಾಣುತ್ತಿದ್ದ ಮಹೇಂದ್ರಪರ್ವತವನ್ನು ನೋಡಿ, ಆಗಲೇ ಸಂತೋಷದಿಂದ ಒಂದು ಸಿಂಹನಾದವನ್ನು ಮಾಡಿದನು. ಮೇಘಧ್ವನಿಯಂತೆ ಗಂಭೀರಧ್ವನಿಯುಳ್ಳ ಹನುಮಂತನು ಆ ತನ್ನ ಸಿಂಹನಾದದಿಂದಲೇ ಹತ್ತುದಿಕ್ಕುಗಳನ್ನೂ ತುಂಬಿಬಿಟ್ಟನು. ಹಾಗೆಯೇ ಆತನು ಅಂಗದಾದಿವಾನರ

ರಿದ್ದ ಸ್ಥಳವನ್ನು ಸಮೀಪಿಸಿ ಆಗಲೂ ಮತ್ತೊಮ್ಮೆ ತನ್ನ ಗೆಳೆಯರನ್ನು ನೋಡ ಬೇಕೆಂಬ ಉತ್ಸಾಹದಿಂದ ಬಾಲವನ್ನಾಡಿಸುತ್ತಾ, ಸಿಂಹನಾದವನ್ನು ಮಾಡಿದನು. ಹೀಗೆ ಆಕಾಶದಲ್ಲಿ ಬಾರಿಬಾರಿಗೂ ಮಹೋತ್ಸಾಹದಿಂದ ಸಿಂಹನಾದಮಾಡುತ್ತಿದ್ದ ಆ ಹನುಮಂತನ ಧ್ವನಿಗೆ, ಸೂರ್ಯಬಿಂಬಸಹಿತವಾಗಿ ಆಕಾಶವೇ ಒಡೆದು ಹೋಗು ವಂತೆ ತೋರುತ್ತಿತ್ತು. ಹೀಗೆ ಹನುಮಂತನು ಆಗಾಗ ಸಿಂಹನಾದಗಳನ್ನು ಮಾಡುತ್ತ ಮುಂದೆ ಸಾಗಿಬರುತ್ತಿರಲು, ಇತ್ತಲಾಗಿ ಆ ಸಮುದ್ರದ ಉತ್ತರತೀರ ದಲ್ಲಿ ಬಹಳ ಹೊತ್ತಿನಿಂದ ಈತನನ್ನು ನೋಡಬೇಕೆಂದು ಅತ್ಯಾತುರದಿಂದ ಕಾದಿದ್ದ ಅಂಗದಾದಿವಾನರವೀರರೆಲ್ಲರೂ, ವಾಯುಪ್ರೇರಿತಗಳಾದ ಮಹಾಮೇಘಗಳ ಗರ್ಜನೆ ಯಂತಿರುವ ಹನುಮಂತನ ಸಿಂಹನಾದವನ್ನೂ, ಅವನ ತೊಡೆಗಳ ವೇಗದಿಂದುಂ ಟಾದ ಆರ್ಭಟವನ್ನೂ ಕೇಳಿದರು. "ಹನುಮಂತನ ಪ್ರಯತ್ನವೇನಾಗಿರು ವುದೋ" ಎಂದು ಚಿಂತಿಸಿ ಕೊರಗುತಿದ್ದ ಆ ಕಪಿಗಳೆಲ್ಲರಿಗೂ ಮೇಘಗರ್ಜನೆ ಯಂತಿರುವ ಈ ದೊಡ್ಡ ಸಿಂಹನಾದಧ್ವನಿಯು ಕೇಳಿದೊಡನೆಯೇ ಅಲ್ಲಿದ್ದ ವಾನರರೆಲ್ಲರೂ, ಅದನ್ನು ಹನುಮಂತನ ಧ್ವನಿಯೆಂದೇ ತಿಳಿದು ತಮ್ಮ ಪ್ರಿಯಮಿತ್ರನಾದ ಆತನನ್ನು ನೋಡುವುದರಲ್ಲಿ ಅತ್ಯಾತುರದಿಂದ ಸುತ್ತಲೂ ಗುಂಪುಗೂಡಿ ಕಣ್ಣಿಟ್ಟು ಕಾದಿದ್ದರು. ಆಗ ಅಲ್ಲಿನ ಸಮಸ್ತ ವಾನರ ರಿಗೂ ಪ್ರಮುಖನಾದ ಜಾಂಬವಂತನು ಮನಸ್ಸಿನಲ್ಲಿ ಸಂತೋಷದಿಂದುಕ್ಕುತ್ತ ಅಲ್ಲಿದ್ದ ವಾನರರೆಲ್ಲರನ್ನೂ ಕರೆದು ಅವರನ್ನು ಕುರಿತು, "ಎಲೈ ಕಪಿವೀರರೆ! ಹನುಮಂತನು ಸರ್ವವಿಧದಿಂದಲೂ ಕಾರ್ಯವನ್ನು ನಿರ್ವಹಿಸಿಕೊಂಡೇ ಬಂದಿರುವನು! ಅದರಲ್ಲಿ ಸಂದೇಹವಿಲ್ಲ! ಇವನ ಕಾರ್ಯವು ಕೈಗೂಡಿಲ್ಲದ ಪಕ್ಷದಲ್ಲಿ ಅವನ ಕಂಠ ಧ್ವನಿಯು ಈ ರೀತಿಯಾಗಿರದು" ಎಂದನು. ಆಗ ವಾನರರು ಮಹಾತ್ಮನಾದ ಹನುಮಂತನ ವೇಗವನ್ನೂ, ಅವನ ಸಿಂಹನಾದವನ್ನೂ ಕೇಳಿ ಸಂತೋಷದಿಂದು ಕ್ಕುತ್ತ, ನಾನಾಕಡೆಗಳಿಗೂ ಹಾರಿಹಾರಿ ಕುಣಿಯುತಿದ್ದರು. ಆ ವಾನರರೊಬ್ಬೊ ಬ್ಬರೂ ಪರಮಸಂತುಷ್ಟರಾಗಿ ಹನುಮಂತನನ್ನು ನೋಡಬೇಕೆಂಬ ಆತುರದಿಂದ ಮರದಿಂದ ಮರಕ್ಕೂ, ಶಿಖರದಿಂದ ಶಿಖರಕ್ಕೂ ಹಾರುತ್ತ ಎಲ್ಲರೂ ಗುಂಪಾಗಿ ಸೇರಿ ನಿಂತರು. ಮತ್ತು ಅವರು ಸಂತೋಷದಿಂದ ದೊಡ್ಡದೊಡ್ಡ ಮರಗಳನ್ನೇರಿ ಅವುಗಳ ತುದಿಯಕೊಂಬೆಗಳಮೇಲೆ ಕುಳಿತು ಸ್ನೇಹಿತರನ್ನು ಸಂತೋಷದಿಂದ ಸಮೀಪಕ್ಕೆಬರ ಮಾಡಿಕೊಳ್ಳುವುದಕ್ಕಾಗಿ ಬಟ್ಟೆಯನ್ನು ಬೀಸಿ ಕರೆಯುವಂತೆ, ಹನುಮಂತನನ್ನು ಬೇಗನೆ ಸಮೀಪಕ್ಕೆ ಕರೆಯುವುದಕ್ಕಾಗಿ ಆ ಮರದ ಕೊಂಬೆಗಳನ್ನು ಹಿಡಿದಾಡಿಸು ತಿದ್ದರು. ವಾಯುವು ಪರ್ವತಗುಹೆಯಲ್ಲಿ ಸೇರಿ ಗರ್ಜಿಸುವಂತೆ, ವಾಯುಪುತ್ರನಾದ

ಹನುಮಂತನೂ ಆಗಾಗ ಸಿಂಹನಾದಮಾಡುತ್ತಿದ್ದನು. ಈ ವಾನರರೆಲ್ಲರೂ ಮುಂದೆ ಆಕಾಶದಲ್ಲಿ ಮಹಾಮೇಘಂತೆ ಬರುತ್ತಿದ್ದ ಆ ಮಹಾಕಪಿಯನ್ನು ನೋಡಿ ಸಂತೋಷ ದಿಂದ ಬದ್ಧಾಂಜಲಿಗಳಾಗಿ ನಿಂತುಬಿಟ್ಟರು. ಇಷ್ಟರಲ್ಲಿಯೇ ಪರ್ವತಾಕಾರದಿಂದಿದ್ದ ಆ ಹನುಮಂತನೂ ವೇಗದಿಂದ ಬಂದು ವೃಕ್ಷಸಮೂಹಗಳಿಂದ ಕೂಡಿದ ಆ ಮಹೇಂದ್ರಪರ್ವತಶಿಖರದಲ್ಲಿಳಿದನು. ಆ ಹನುಮಂತನಿಗೂ ತನ್ನ ಕಡೆಯ ವಾನರ ರನ್ನು ನೋಡುವ ಸಂತೋಷವು ಮನಸ್ಸಿನಲ್ಲಿ ಪೂರ್ಣವಾಗಿ ಉಕ್ಕಿ ಬರುತ್ತಿರಲು, ಆ ಮಹೇಂದ್ರಪರ್ವತದಲ್ಲಿ ರಮ್ಯವಾದ ಒಂದು ಗಿರಿನದಿಯ ಸಮೀಪದಲ್ಲಿ, ರೆಕ್ಕೆ ಗಳನ್ನು ಕಡಿದ ಕುಲಪರ್ವತದಂತೆ ಆಕಾಶದಿಂದಿಳಿದನು. ವಾನರರೆಲ್ಲರೂ ಮಹಾ ಸಂತೋಷದಿಂದ ಮಹಾತ್ಮನಾದ ಹನುಮಂತನ ಸುತ್ತಲೂ ಬಂದು ಮುತ್ತಿ ಕೊಂಡರು. ಅವರ ಸಂತೋಷಕ್ಕೆ ಪಾರವೇ ಇರಲಿಲ್ಲ. ಕ್ಷೇಮದಿಂದ ಹಿಂತಿರುಗಿ ಬಂದ ಆ ಹನುಮಂತನನ್ನು ಅವರೆಲ್ಲರೂ ಪರಮಾನಂದದಿಂದ ಆದರಿಸಿ ಮನ್ನಿಸುತ್ತ, ಒಬ್ಬೊಬ್ಬರೂ ಅವನನ್ನು ಉಪಚರಿಸತೊಡಗಿದರು. ಕೆಲವರು ಗೆಡ್ಡೆಗೆಣಸುಗಳನ್ನು ತಂದಿಟ್ಟರು. ಕೆಲವರು ಹಣ್ಣುಗಳನ್ನು ತಂದೊಪ್ಪಿಸಿದರು. ಕೆಲವರು ಕಾಣಿಕೆ ಗಳನ್ನು ಸಮರ್ಪಿಸಿದರು. ಅಲ್ಲಿ ಹನುಮಂತನು ಮೊದಲು ಜಾಂಬವಂತನೇ ಮೊದ ಲಾದ ಗುರುಗಳಿಗೂ, ವೃದ್ಧರಿಗೂ ನಮಸ್ಕರಿಸಿ, ಆಮೇಲೆ ಯುವರಾಜನಾದ ಅಂಗ ದನಿಗೂ ವಂದನಮಾಡಿದನು. ಪೂಜ್ಯನಾಗಿಯೂ, ಪರಾಕ್ರಮಶಾಲಿಯಾಗಿಯೂ ಇರುವ ಆತನನ್ನು ಅಂಗದನೂ, ಜಾಂಬವಂತನೂ ಪ್ರೀತಿಯಿಂದಾದರಿಸಿ ಪೂಜಿ ಸಿದರು. ಕಪಿಗಳೆಲ್ಲರೂ ಪ್ರಸನ್ನದೃಷ್ಟಿಯಿಂದ ಆತನನ್ನೇ ನೋಡುತ್ತಿದ್ದರು. ಎಲ್ಲರೂ ಲಂಕೆಯ ವೃತ್ತಾಂತವನ್ನು ತಿಳಿಯಬೇಕೆಂದು ಆತುರಪಡುತ್ತಿರುವು ದನ್ನು ನೋಡಿ, ಹನುಮಂತನು ಮೊದಲು ಅವರಿಗೆ ಸಂದೇಹಪರಿಹಾರವಾಗುವಂತೆ “ ಸಿಕ್ಕಿದಳು ಸೀತೆ ” ಯೆಂಬ ಎರಡು ಮಾತುಗಳನ್ನು ಸಂಕ್ಷೇಪವಾಗಿ ಹೇಳಿ ಬಿಟ್ಟನು. ಆಮೇಲೆ ಹನುಮಂತನು ವಾಲಿಪುತ್ರನಾದ ಅಂಗದನ ಕೈಯನ್ನು ಹಿಡಿದುಕೊಂಡು, ಆ ಮಹೇಂದ್ರಪರ್ವತದಲ್ಲಿ ರಮಣೀಯವಾದ ಒಂದು ಪ್ರದೇಶಕ್ಕೆ ಬಂದು ಕುಳಿತನು. ಅಲ್ಲಿ ಆ ವಾನರೋತ್ತಮನು ಕಪಿವೀರರೆಲ್ಲರನ್ನೂ ನೋಡಿ “ಎಲೈ ಮಿತ್ರರೆ! ಅಶೋಕವನದಲ್ಲಿ ಜನಕಪುತ್ರಿಯಾದ ಸೀತೆಯನ್ನು ಕಂಡು ಬಂದೆನು. ಈಗಲೂ ಅವಳಮೇಲೆ ಬಹಳ ಭಯಂಕರಾಕಾರವುಳ್ಳ ಅನೇಕರಾಕ್ಷಸ ಸ್ತ್ರೀಯರು ಕಾವಲಿರುವರು. ಅಲ್ಲಿ ಸೀತೆಯು ತನ್ನ ಕೂದಲನ್ನು ಒಂದೇ ಜಡೆ ಯಾಗಿ ಬಳೆಸಿ, ರಾಮನನ್ನು ನೋಡಬೇಕೆಂಬ ಆತುರದಿಂದ ಕಳವಳಿಸುತ್ತ ಉಪ ವಾಸದಿಂದ ಕುದಿಕುಂದಿ ಕೃಶಳಾಗಿ, ಕೊಳೆಯೇರಿದ ಮೈಯುಳ್ಳವಳಾಗಿರುವಳು.”

ಎಂದನು. ಆಗ ಅಲ್ಲಿದ್ದ ವಾನರರೆಲ್ಲರೂ ಆ ಹನುಮಂತನು "ಸೀತೆಯನ್ನು ಕಂಡೆನು" ಎಂದು ಹೇಳಿದ ಕರ್ಣಾಮೃತಪ್ರಾಯವಾದ ಆ ಮಾತನ್ನು ಕೇಳಿದ ಮಾತ್ರದಿಂದಲೇ ಸಂತೋಷದಿಂದ ಮೈಮರೆತಿದ್ದರು. ಆಗಲೇ ಆ ವಾನರರಲ್ಲಿ ಕೆಲವರು ಸಿಂಹನಾದವನ್ನು ಮಾಡಿದರು. ಕೆಲವರು ಅವ್ಯಕ್ತವಾದ ಶಬ್ದಧ್ವನಿಯಿಂದ ಕೂಗಿದರು. ಕೆಲವರು ಮೇಘಗಳಂತೆ ಗರ್ಜಿಸಿದರು. ಕೆಲವರು ತಮ್ಮ ಕಪಿಜಾತಿಗೆ ತಕ್ಕಂತೆ ಕಿಲಕಿಲಧ್ವನಿಯನ್ನು ಮಾಡಿದರು. ಒಬ್ಬರ ಗರ್ಜನೆಯನ್ನು ಕೇಳಿ ಮತ್ತೊಬ್ಬರು ಅದಕ್ಕಿಂತಲೂ ಗಟ್ಟಿಯಾಗಿ ಗರ್ಜಿಸಿದರು. ಕೆಲವು ಕಪಿವೀರರು ಸಂತೋಷದಿಂದ ಮೈತಿಳಿಯದೆ, ಉದ್ದವಾಗಿಯೂ, ದಪ್ಪವಾಗಿಯೂ ಇರುವ ತಮ್ಮ ತಮ್ಮ ಬಾಲಗಳನ್ನೂ ಮೇಲಕ್ಕೆತ್ತಿ, ಆ ಬಾಲಗಳನ್ನು ನೆಲಕ್ಕಪ್ಪಳಿಸಿದರು. ಮತ್ತೆ ಕೆಲವು ವಾನರರು ಮದದಾನೆಯಂತಿರುವ ಈ ಹನುಮಂತನನ್ನು ನೋಡಿ ಸಂತೋಷವಶರಾಗಿ, ಆ ಬೆಟ್ಟದ ಶಿಖರಗಳಿಂದ ಒಂದೇ ನೆಗೆತಕ್ಕೆ ಹಾರಿಬಂದು, ಅತನನ್ನು ಬಿಗಿಯಾಗಿ ಅಪ್ಪಿಕೊಂಡರು. ಹನುಮಂತನು ಹೀಗೆ ಒಂದೆರಡು ಮಾತುಗಳನ್ನು ಹೇಳಿ ಮುಗಿಸಿದಮೇಲೆ ಯುವರಾಜನಾದ ಅಂಗದನು ಆ ಸಮಸ್ತ ವಾನರರ ಮಧ್ಯದಲ್ಲಿ ಹನುಮಂತನನ್ನು ಕುರಿತು, "ಎಲೈ ವಾನರವೀರನೆ! ಬಲದಲ್ಲಿಯಾಗಲಿ, ವೀರ್ಯದಲ್ಲಿಯಾಗಲಿ ನಿನಗೆ ಸಮಾನನೊಬ್ಬನೂ ಇಲ್ಲ! ಇಷ್ಟು ವಿಸ್ತಾರವಾದ ಸಮುದ್ರವನ್ನು ಹಾರಿ ಹಿಂತಿರುಗಿ ಬಂದೆಯಲ್ಲವೆ! ಎಲೈ ವಾನರೋತ್ತಮನೆ! ನಮ್ಮೆಲ್ಲರಿಗೂ ನೀನೇ ಈಗ ಪ್ರಾಣದಾನವನ್ನು ಮಾಡಿದಂತಾಯಿತು! ನಾವು ಕೃತಾರ್ಥರಾಗಿ ಹಿಂತಿರುಗಿ ರಾಮನ ಬಳಿಗೆ ಹೋಗುವುದೂ ನಿನ್ನ ಅನುಗ್ರಹವೇ ಹೊರತು ಬೇರೆಯಲ್ಲ. ಆಹಾ! ನಿನ್ನ ಸ್ವಾಮಿಭಕ್ತಿಯೂ, ನಿನ್ನ ವೀರ್ಯವೂ, ನಿನ್ನ ಧೈರ್ಯವೂ ಲೋಕಾದ್ಭುತವು! ಯಶಸ್ವಿನಿಯಾದ ಆ ರಾಮಪತ್ನಿಯು ದೈವವಶದಿಂದ ನಿನಗೆ ಗೋಚರಿಸಿದಳು. ಶ್ರೀರಾಮನು ಸೀತಾವಿರಹದಿಂದುಂಟಾದ ತನ್ನ ದುಃಖವನ್ನು ದೈವಾಧೀನದಿಂದ ನೀಗುವಂತಾಯಿತು." ಎಂದನು. ಆ ಮೇಲೆ ಅಲ್ಲಿದ್ದ ಸಮಸ್ತವಾನರರೂ ಸಂತೋಷದಿಂದ ಅಂಗದನನ್ನೂ, ಜಾಂಬವಂತನನ್ನೂ, ಹನುಮಂತನನ್ನೂ ನಡುವೆ ಬಿಟ್ಟುಕೊಂಡು ಸುತ್ತಲೂ ಅಲ್ಲಲ್ಲಿ ವಿಸ್ತಾರವಾಗಿದ್ದ ಕಲ್ಲುಬಂಡೆಗಳಮೇಲೆ ಕುಳಿತರು. ಅವರೆಲ್ಲರೂ ಹನುಮಂತನು ಸಮುದ್ರವನ್ನು ದಾಟಿದುದು ಮೊದಲು, ಲಂಕೆಯನ್ನೂ, ಸೀತೆಯನ್ನೂ, ರಾವಣನನ್ನೂ ನೋಡಿ ಬಂದ ಕ್ರಮಗಳನ್ನೆಲ್ಲಾ ವಿಸ್ತರವಾಗಿ ಕೇಳಬೇಕೆಂಬ ಕುತೂಹಲದಿಂದ, ಬದ್ಧಾಂಜಲಿಗಳಾಗಿ ಆ ಹನುಮಂತನ ಮುಖವನ್ನೇ ನೋಡುತ್ತಿದ್ದರು. ಅಲ್ಲಿ ಶ್ರೀಮಂತನಾದ ಅಂಗದನು ಸ್ವರ್ಗದಲ್ಲಿ ದೇವತೆಗಳಿಂದ ಪರಿವೃತ

ನಾದ ದೇವೇಂದ್ರನಂತೆ ಅನೇಕ ವಾನರರಿಂದ ಪರಿವೇಷ್ಟಿತನಾಗಿ ಕುಳಿತಿದ್ದನು. ಆಗ ಯಶಸ್ವಿಯಾದ ಹನುಮಂತನೂ ಉತ್ತಮಾಂಗದಗಳಿಂದ ಶೋಭಿತನಾದ ಅಂಗದನೂ, ಸಂತೋಷದಿಂದ ಕುಳಿತಿರಲು, ಮಹೋನ್ನತವಾದ ಆ ಮಹೇಂದ್ರಪರ್ವತ ಶಿಖರವು ಅಪೂರ್ವವಾದ ಒಂದು ಕಾಂತಿವಿಶೇಷದಿಂದ ಬೆಳಗುತಿತ್ತು.

ಇಲ್ಲಿಗೆ ಐವತ್ತೇಳನೆಯ ಸರ್ಗವು.

---

{ ಹನುಮಂತನು ತಾನು ಲಂಕೆಗೆ ಹೋಗಿಬಂದ ವೃತ್ತಾಂತಗಳೆಲ್ಲವನ್ನೂ ವಾನರರಿಗೆ ವಿವರಿಸಿ ತಿಳಿಸಿದುದು. }

ಹೀಗೆ ಹನುಮಂತನೇ ಮೊದಲಾದ ಮಹಾಬಲಾಢ್ಯರಾದ ವಾನರರೆಲ್ಲರೂ, ಮಹೇಂದ್ರಪರ್ವತದ ಶಿಖರದಲ್ಲಿ ಪರಮಸಂತೋಷದಿಂದ ಕುಳಿತಿದ್ದರು. ಆಗ ಹನುಮಂತನ ಸಂದರ್ಶನದಿಂದ ಸಂತೋಷಭರಿತನಾದ ಜಾಂಬವಂತನು, ವಾನರರ ನಡುವೆ ಕುಳಿತಿದ್ದ ಆ ವಾಯುಪುತ್ರನನ್ನು ಕುರಿತು, ಅವನು ಸೀತೆಯನ್ನು ನೋಡಿಬಂದ ಕಾರ್ಯದ ಸಂಗತಿಯನ್ನು ವಿಚಾರಿಸುತ್ತ, "ವತ್ಸ ಆಂಜನೇಯನೆ! ನೀನು ಸೀತಾದೇವಿಯನ್ನು ಹೇಗೆ ನೋಡಿದೆ? ಆಕೆಯು ಅಲ್ಲಿ ಯಾವ ಸ್ಥಿತಿಯಲ್ಲಿರುವಳು? ಕ್ರೂರಕರ್ಮಿಯಾದ ರಾವಣನು ಅವಳ ವಿಷಯದಲ್ಲಿ ಹೇಗೆ ನಡೆಯುತ್ತಿರುವನು? ಇಷ್ಟುದ್ದಿಷ್ಟವಾಗಿ ಎಲ್ಲವನ್ನೂ ನಮಗೆ ತಿಳಿಸು! ಅಲ್ಲಿನ ಸಂಗತಿಗಳನ್ನು ಕೇಳಿ ಮುಂದಿನ ಕಾರ್ಯದ ನಿಶ್ಚಯವನ್ನು ಆಲೋಚಿಸುವೆವು. ನಾವು ಇಲ್ಲಿಂದ ರಾಮನ ಬಳಿಗೆ ಹೋದಮೇಲೆ ಅವನಿಗೆ ಯಾವಯಾವ ವಿಷಯಗಳನ್ನು ತಿಳಿಸಬೇಕೋ, ಯಾವಯಾವ ಸಂಗತಿಗಳನ್ನು ಅವನಿಗೆ ತಿಳಿಸದೆ ಮರೆಸಿಡಬೇಕೋ ಅವೆಲ್ಲವನ್ನೂ ಈಗಲೇ ಇಲ್ಲಿ ನಮಗೆ ತಿಳಿಸಿಬಿಡು" ಎಂದನು. ಈ ಜಾಂಬವಂತನ ಮಾತನ್ನು ಕೇಳಿ ಹನುಮಂತನು ಸಂತೋಷದಿಂದ ಪುಳಕಿತವಾದ ಮೈಯುಳ್ಳವನಾಗಿ, ಮೊದಲು ಸೀತಾದೇವಿಗೆ ತಲೆಬಗ್ಗಿ ನಮಸ್ಕರಿಸಿ, ಹೇಳತೊಡಗಿದನು. "ಎಲೈ ಪ್ರಿಯಮಿತ್ರರೆ! ನೀವು ನೋಡುತ್ತಿದ್ದ ಹಾಗೆಯೇ ನಾನು ಈ ಮಹೇಂದ್ರಪರ್ವತ ಶಿಖರದಿಂದ ಸಮುದ್ರದ ದಕ್ಷಿಣತೀರವನ್ನು ಸೇರುವುದಕ್ಕಾಗಿ ಆಕಾಶಕ್ಕೆ ಹಾರಿದೆನಷ್ಟೆ! ನಾನು ಎಷ್ಟೋ ಎಚ್ಚರಿಕೆಯಿಂದ ಹಾರಿ ಹೋಗುತ್ತಿರುವಾಗಲೂ ನಡುದಾರಿಯಲ್ಲಿ ನನಗೆ ಏನೋ ಒಂದು ಭಯಂಕರವಾದ ಅಡ್ಡಿಯುಂಟಾದಂತೆ

ತೋರಿತು! ನನ್ನ ಮುಂದೆ ದಾರಿಗಡ್ಡಲಾಗಿ ಸುವರ್ಣಮಯವಾದ ಮತ್ತು ಅತಿ ಮನೋಹರವಾದ ಒಂದ ಪರ್ವತಶಿಖರವು ಗೋಚರಿಸಿತು. ಅದು ದಾರಿಗಡ್ಡಲಾಗಿ ನಿಂತಿರುವುದನ್ನು ನೋಡಿ ನನ್ನನ್ನು ತಡೆಯುವುದಕ್ಕಾಗಿಯೇ ಅದು ಹಾಗೆ ನಿಂತಿರಬೇಕೆಂದೆಣಿಸಿದೆನು. ಮುಂದೆ ದಾರಿಗಡ್ಡಲಾಗಿದ್ದ ಆ ಸುವರ್ಣಪರ್ವತವನ್ನು ನೋಡಿದೊಡನೆ, ಅದನ್ನು ಭೇದಿಸಿಬಿಡಬೇಕೆಂದೇ ನನಗೆ ಬುದ್ಧಿಯು ಹುಟ್ಟಿತು. ಆಗಲೇ ನಾನು ಬಾಲದಿಂದ ಅದನ್ನು ಅಪ್ಪಳಿಸಿಹೊಡೆದೆನು. ಸೂರ್ಯಸಮಾನವಾದ ಆ ಪರ್ವತದ ಒಂದು ಶಿಖರವು ಸಹಸ್ರಭಾಗವಾಗಿ ಮುರಿದುಬಿದ್ದಿತು. ಈ ನನ್ನ ಪ್ರಯತ್ನವನ್ನು ನೋಡಿ ಆ ಪರ್ವತವು ನನ್ನ ಮನಸ್ಸನ್ನು ಉಲ್ಲಾಸಗೊಳಿಸುವಂತೆ ಕಿವಿಗಿಂಪಾದ ಮೃದುಸ್ವರದಿಂದ "ಅಪ್ಪ! ಮಗು!" ಎಂದು ನನ್ನನ್ನು ಕರೆದು, "ಎಲೆ ವತ್ಸನೆ! ನಾನು ನಿನ್ನ ತಂದೆಯಾದ ವಾಯುದೇವನಿಗೆ ಮಿತ್ರನಾದುದರಿಂದ ನಿನಗೆ ಚಿಕ್ಕಪ್ಪನೆಂದು ತಿಳಿ! ನನ್ನನ್ನು ಮೈನಾಕವೆಂದು ಕರೆಯುವರು. ನಾನು ಈ ಸಮುದ್ರದಲ್ಲಿಯೇ ವಾಸಮಾಡುತ್ತಿರುವೆನು. ಎಲೆ ಕುಮಾರನೆ! ಪೂರ್ವಕಾಲದಲ್ಲಿ ಪರ್ವತಗಳೆಲ್ಲಕ್ಕೂ ರೆಕ್ಕೆಗಳಿದ್ದುವು. ಆ ರೆಕ್ಕೆಗಳ ಬಲದಿಂದ ಅವು ನಾನಾದಿಕ್ಕುಗಳಿಗೂ ಹಾರಿ ಪ್ರಾಣಿಗಳನ್ನು ಹಿಂಸಿಸುತ್ತಿದ್ದುವು. ಆ ಪರ್ವತಗಳ ಚೇಷ್ಟೆಯನ್ನು ಕೇಳಿ ಇಂದ್ರನು ತನ್ನ ವಜ್ರಾಯುಧದಿಂದ ಆ ಪರ್ವತಗಳ ರೆಕ್ಕೆಗಳನ್ನು ಸಹಸ್ರಭಾಗವಾಗಿ ಭೇದಿಸುತ್ತ ಬಂದನು. ಆದರೆ ನನ್ನನ್ನು ಮಾತ್ರ ಮಹಾತ್ಮನಾದ ನಿನ್ನ ತಂದೆಯು ಈ ಅಪಾಯದಿಂದ ತಪ್ಪಿಸಿ ಕಾಪಾಡಿದನು. ಆಗ ನಿನ್ನ ತಂದೆಯಾದ ವಾಯುದೇವನೇ ನನ್ನನ್ನು ತೂರಿಸಿಕೊಂಡು ಬಂದು ಈ ಸಮುದ್ರದಲ್ಲಿ ಹಾಕಿಬಿಟ್ಟನು. ಇದರಿಂದ ನಿನ್ನ ತಂದೆಗೆ ನಾನು ಎಷ್ಟು ಕೃತಜ್ಞತೆಯನ್ನು ತೋರಿಸಿದರೂ ಸಾಲದು. ಶ್ರೀರಾಮನಿಗೂ ನಾನು ನನ್ನಿಂದಾದ ಸಹಾಯವನ್ನು ಮಾಡಬೇಕಾಗಿರುವುದು. ಶ್ರೀರಾಮನು ಸಾಮಾನ್ಯನಲ್ಲ, ಧಾರ್ಮಿಕರಲ್ಲಿ ಮೇಲೆನಿಸಿಕೊಂಡವನು. ಮಹೇಂದ್ರನಿಗೆಣೆಯಾದ ಪರಾಕ್ರಮವುಳ್ಳವನು. ಆದುದರಿಂದ ವಾಯುಪುತ್ರನಾಗಿಯೂ, ರಾಮದೂತನಾಗಿಯೂ ಇರುವ ನಿನ್ನನ್ನು ನಾನು ಮನ್ನಿಸುವುದಕ್ಕೆ ಪ್ರಬಲವಾದ ಈ ಎರಡು ಕಾರಣಗಳುಂಟು" ಎಂದನು. ಮಹಾತ್ಮನಾದ ಆ ಮೈನಾಕನು ಹೇಳಿದ ಈ ಮಾತನ್ನು ಕೇಳಿ ನಾನೂ ನನ್ನ ಕಾರ್ಯಗೌರವವನ್ನೂ ನನ್ನ ಮನಸ್ಸಿನ ಆತುರವನ್ನೂ ಆ ಪರ್ವತೇಂದ್ರನಿಗೆ ತಿಳಿಸಿ, ಅವನಿಂದ ಮುಂದಿನ ಪ್ರಯಾಣಕ್ಕೆ ಅನುಮತಿಯನ್ನು ಪಡೆದುಕೊಂಡೆನು. ನನ್ನೊಡನೆ ಮೈನಾಕವು ಈ ಮಾತುಗಳನ್ನಾಡುವವರೆಗೂ, ಮನುಷ್ಯರೂಪದಿಂದಿದ್ದು, ನಮ್ಮ ಸಲ್ಲಾಪವು ಮುಗಿಸಿದಮೇಲೆ ಆ

ಮನುಷ್ಯರೂಪವನ್ನು ಮರೆಸಿ ಪರ್ವತಶರೀರದಿಂದ ಸಮುದ್ರದಮೇಲೆಯೇ[1] ನಿಂತಿತ್ತು. ಆ ಮೇಲೆ ನಾನು ನನ್ನ ಹೆಚ್ಚುವೇಗವನ್ನೇ ಹಿಡಿದು ಮುಂದಿನ ಪ್ರಯಾಣಕ್ಕೆ ಹೊರಟೆನು. ಬಹಳಹೊತ್ತಿನವರೆಗೆ ಅದೇ ವೇಗದಿಂದ ಮುಂದಿನ ದಾರಿಯನ್ನು ಹಿಡಿದುಹೋದೆನು. ಇಷ್ಟರಲ್ಲಿ ನಾಗಮಾತೆಯಾದ ಸುರಸೆಯೆಂಬ ವಳನ್ನು ಕಂಡೆನು. ಅವಳು ಸಮುದ್ರಮಧ್ಯದಲ್ಲಿ ನನ್ನನ್ನು ನೋಡಿ "ಎಲೆ ವಾನರೋತ್ತಮನೆ! ದೇವತೆಗಳು ನಿನ್ನನ್ನು ನನ್ನ ಆಹಾರಕ್ಕಾಗಿಯೇ ಏರ್ಪಡಿಸಿರು ವರು. ಆದುದರಿಂದ ನಿನ್ನನ್ನು ನಾನು ಭಕ್ಷಿಸಿಬಿಡುವೆನು. ಬಹುಕಾಲಕ್ಕೆ ಈಗ ನೀನು ನನಗೆ ಸಿಕ್ಕಿದೆ" ಎಂದು ಕೂಗಿಹೇಳಿದಳು. ಈ ಮಾತನ್ನು ಕೇಳಿದೊಡನೆಯೇ ಸ್ವಾಮಿಕಾರ್ಯವು ಕೆಡುವುದೆಂಬ ಚಿಂತೆಯಿಂದ ನನ್ನ ಮುಖವು ಬಣ್ಣಗುಂದಿತು. ಆಗ ನಾನು ಅವಳ ಮುಂದೆ ದೈನ್ಯದಿಂದ ಕೈಜೋಡಿಸಿ ನಿಂತು, "ಅಮ್ಮಾ! ದಶರಥ ಪುತ್ರನಾದ ಶ್ರೀಮಂತನಾದ ರಾಮನು, ತನ್ನ ತಮ್ಮನಾದ ಲಕ್ಷ್ಮಣನೊಡನೆಯೂ, ಪತ್ನಿಯಾದ ಸೀತಾದೇವಿಯೊಡನೆಯೂ ದಂಡಕಾರಣ್ಯಕ್ಕೆ ಬಂದನು. ಅಲ್ಲಿ ದುರಾತ್ಮನಾದ ರಾವಣನು ಶ್ರೀರಾಮನ ಪತ್ನಿಯಾದ ಸೀತೆಯನ್ನು ಕದ್ದುತಂದು ಲಂಕೆಯಲ್ಲಿಟ್ಟಿರುವನು. ಈಗ ನಾನು ಆ ರಾಮನ ಅಜ್ಞೆಯಿಂದ ಅವನ ಪತ್ನಿಯಾದ ಆ ಸೀತೆಯಬಳಿಗೆ ದೂತನಾಗಿ ಹೋಗುತ್ತಿರುವೆನು. ಎಲೆ ದೇವಿ! ನೀನೂ ಆ ರಾಮನ ದೇಶದಲ್ಲಿ ವಾಸಮಾಡುವವಳಲ್ಲವೆ! ನೀನೂ ನಿನ್ನಿಂದಾದ ಮಟ್ಟಿಗೆ ರಾಮನಿಗೆ ಸಹಾಯವನ್ನು ಮಾಡಬೇಕು. ಆದುದರಿಂದ ನನ್ನನ್ನು ಬಿಡು. ಅಥವಾ ನಿನಗೆ ಹೇಗಾದರೂ ನನ್ನನ್ನು ಭಕ್ಷಿಸಿಯೇ ತೀರಬೇಕೆಂಬ ಆಶೆಯಿದ್ದರೆ, ಈಗ ನಾನು ಸೀತೆಯನ್ನು ನೋಡಿಬಂದು, ಆ ವೃತ್ತಾಂತವನ್ನು ರಾಮನಿಗೆ ತಿಳಿಸಿಬರುವವರೆ ಗಾದರೂ ನನ್ನನ್ನು ಬಿಟ್ಟುಕೊಡು! ಆ ಮೇಲೆ ನಾನೇ ಬಂದು ನಿನ್ನ ಬಾಯನ್ನು ಪ್ರವೇಶಿಸಿಬಿಡುವೆನು. ಈ ವಿಷಯದಲ್ಲಿ ಬೇಕಾದರೆ ನಾನು ನಿನಗೆ ಸತ್ಯವಾಗಿ ಆಣೆಯಿಟ್ಟು ಹೇಳುವೆನು." ಎಂದು ಕೇಳಿಕೊಂಡೆನು. ಇಷ್ಟಾದರೂ

---

1 ಈ ಕಾಂಡದ ಮೊದಲನೆಯ ಸರ್ಗದಲ್ಲಿ, ಇಂದ್ರಾನುಗ್ರಹದಿಂದ ಮೈನಾಕವು ನೀರಿನಲ್ಲಿ ಮುಳುಗದೆ ಹಾಗೆಯೇ ಸಮುದ್ರದಮೇಲೆ ನಿಂತಿತ್ತೆಂದು ಹೇಳಲ್ಪಟ್ಟಿರುವುದು. ಹನುಮಂತನು ಹಿಂತಿರುಗಿ ಸಮುದ್ರವನ್ನು ದಾಟಿ ಬರುವಾಗಲೂ "ಪರ್ವತೇಂದ್ರಂ ಸುನಾಭಂಚ ಸಮುಪಸ್ಪೃಶ್ಯ" ಎಂದು ಮೈನಾಕವನ್ನು ಮುಟ್ಟಿಬಂದುದಾಗಿ ಹೇಳಿದೆ. ರಾಮನು ಸೀತೆಯೊಡನೆ ಅಯೋಧ್ಯೆಗೆ ಹಿಂತಿರುಗುವಾಗಲೂ, "ಹಿರಣ್ಯನಾಭಂ ಶೈಲೇಂದ್ರಂ ಕಾಂಚನಂ ಪಶ್ಯ ಮೈಥಿಲಿ" ಎಂದು ಆ ಪರ್ವತವನ್ನು ತೋರಿಸಿರುವುದರಿಂದ ಮೈನಾಕವು ಸಮುದ್ರದ ಮೇಲೆಯೇ ನಿಂತಿತ್ತೆಂಬುದು ಸ್ಪಷ್ಟವು.

ಕಾಮರೂಪಿಣಿಯಾದ ಆ ಸುರಸೆಯು ನನ್ನ ಪ್ರಾರ್ಥನೆಯನ್ನಂಗೀಕರಿಸದೆ ಹಟಹಿಡಿದು ತಿರುಗಿ ನನ್ನನ್ನು ಕುರಿತು “ಎಲೆ ವಾನರನೆ! ನನ್ನ ಕಣ್ಣಿಗೆ ಬಿದ್ದಮೇಲೆ ಯಾವನೊಬ್ಬನೂ ನನ್ನನ್ನು ಮೀರಿಹೋಗಕೂಡದು! ನನಗೆ ಇದೊಂದು ವರವು.” ಎಂದಳು. ನಾನು ಈ ಮಾತನ್ನು ಕೇಳಿದೊಡನೆ ಆ ಸುರಸೆಯ ಬಾಯಲ್ಲಿ ಪ್ರವೇಶಿಸಿ ಬರುವುದಕ್ಕಾಗಿ, ಮೊದಲೇ ಹತ್ತುಯೋಜನಗಳ ವಿಸ್ತಾರವುಳ್ಳ ನನ್ನ ಮೈಯನ್ನು ಮತ್ತಷ್ಟು ದೊಡ್ಡದಾಗಿ ಬೆಳೆಸುತ್ತ ಬಂದೆನು. ಇದನ್ನು ನೋಡಿ ಸುರಸೆಯೂ ನನ್ನ ಮೈಯಳತೆಗೆ ತಕ್ಕಂತೆ ತನ್ನ ಬಾಯನ್ನಗಲಿಸುತ್ತಬಂದಳು. ಹೀಗೆ ಅವಳ ; ಅತಿವಿಶಾಲವಾಗಿ ಬಾಯಗಲಿಸಿರುವುದನ್ನು ನೋಡಿ ನಾನು ಆ ಕ್ಷಣವೇ ನನ್ನ ದೇಹವನ್ನು ಬಹಳ ಸಣ್ಣದಾಗಿ ಒಂದೇ ಅಂಗುಲಪ್ರಮಾಣಕ್ಕೆ ತಂದುಕೊಂಡು ಅವಳ ಬಾಯನ್ನು ಪ್ರವೇಶಿಸಿ ನಿಮಿಷಮಾತ್ರದಲ್ಲಿ ಹೊರಕ್ಕೆ ಬಂದುಬಿಟ್ಟೆನು. ಆಗ ಸುರಸಾದೇವಿಯು ನನ್ನಲ್ಲಿ ಪ್ರಸನ್ನಳಾಗಿ, ತನ್ನ ಮೊದಲಿನ ರೂಪವನ್ನೇ ಧರಿಸಿ ನಿಂತು ನನ್ನನ್ನು ನೋಡಿ, “ಎಲೈ ವಾನರತಿಲಕನೆ! ಇನ್ನು ನೀನು ನಿನ್ನ ಕಾರ್ಯಸಿದ್ಧಿಗಾಗಿ ಸುಖವಾಗಿ ಹೋಗಬಹುದು. ಸೀತೆಯನ್ನು ಕರೆತಂದು ಮಹಾತ್ಮನಾದ ರಾಮನೊಡನೆ ಸೇರಿಸು! ಎಲೈ ಮಹಾಬಾಹುವೆ! ನಿನಗೆ ಕ್ಷೇಮವಾಗಲಿ! ನಿನ್ನಲ್ಲಿ ನನಗೆ ಸಂಪೂರ್ಣಪ್ರೀತಿಯು ಹುಟ್ಟಿತು.” ಎಂದಳು. ಆಗ ಸಮಸ್ತಭೂತಗಳೂ ನನ್ನನ್ನು “ಭಲೆ! ಭಲೆ! ಎಂದು ಕೊಂಡಾಡುತಿದ್ದುವು. ಆ ಮೇಲೆ ನಾನು ಗರುಡನಂತೆ ವೇಗದಿಂದ ಆಕಾಶದಲ್ಲಿ ಹಾರಿಹೋಗುತ್ತಿದ್ದೆನು. ಇಷ್ಟರಲ್ಲಿ ಯಾವುದೋ ಒಂದು ಭೂತವು ನನ್ನ ದೇಹಚ್ಛಾಯೆಯನ್ನು ತಡೆದು ನಿಲ್ಲಿಸಿತು. ಅದು ಯಾವುದೆಂದೇ ನನಗೆ ತಿಳಿಯಲಿಲ್ಲ. ಹೀಗೆ ನನ್ನ ವೇಗವು ನಿಂತುಹೋಗಲು, ದೈನ್ಯದಿಂದ ಹತ್ತುದಿಕ್ಕುಗಳನ್ನೂ ತಿರುಗಿ ನೋಡಿದೆನು. ಎಲ್ಲಿ ನೋಡಿದರೂ ನನ್ನನ್ನು ತಡೆದವರಾರೆಂದು ನನಗೆ ತಿಳಿಯಲಿಲ್ಲ. ನನಗೆ ಆಗ ಮನಸ್ಸಿನಲ್ಲಿ, ‘ಅಹಾ! ಇದೇನು? ಅಂತರಿಕ್ಷದಲ್ಲಿ ನನ್ನ ಗತಿಗೆ ಇದೊಂದು ವಿಘ್ನವುಂಟಾಯಿತು! ಯಾವ ರೂಪವೂ ಕಣ್ಣಿಗೆ ಕಾಣುವುದಿಲ್ಲವಲ್ಲಾ! ಇನ್ನು ಮಾಡುವುದೇನು!’ ಎಂದು ಮಹತ್ತಾದ ಚಿಂತೆಯು ಹುಟ್ಟಿತು. ಆದರೆ ಈ ವ್ಯಸನದಲ್ಲಿ ಮೊದಲು ನಾನು ಕೆಳಗೆ ಸಮುದ್ರವನ್ನು ಚೆನ್ನಾಗಿ ಕಣ್ಣಿಟ್ಟುನೋಡಲಿಲ್ಲ. ಆಮೇಲೆ ಗಮನಿಸಿ ನೋಡಿದಾಗ ಸಮುದ್ರಜಲದಲ್ಲಿ ಭಯಂಕರರೂಪವುಳ್ಳ ಒಬ್ಬ ರಾಕ್ಷಸಿಯನ್ನು ಕಂಡೆನು. ಆಗಲೇ ಆ ಘೋರರಾಕ್ಷಸಿಯು ನನ್ನನ್ನು ನೋಡಿ ಅಟ್ಟಹಾಸದಿಂದ ನಗುತ್ತ, ಸ್ವಲ್ಪವೂ ಭಯವಿಲ್ಲದೆ ಹಟವಾದದಿಂದ “ಎಲೆ! ಎಲ್ಲಿಗೆ ಹೋಗುತ್ತಿರುವೆ? ಚೆನ್ನಾಗಿ ಕೊಬ್ಬಿಬೆಳೆದ ಈ ನಿನ್ನ ಮೈಯು, ಹಸಿದು ಬಂದ

ನನಗೆ ಒಳ್ಳೇ ಆಹಾರವಾಗಿ ಸಿಕ್ಕಿತು. ಬಹುಕಾಲದಿಂದ ಹಸಿದಿರುವೆನು! ನನಗೆ ತೃಪ್ತಿಯಾಗುವಂತೆ ಮಾಡು'' ಎಂದು ಕೂಗಿದಳು. ಆಗ ನಾನು ಅದನ್ನು ಕುರಿತು ''ಎಲೆ ರಾಕ್ಷಸಿ! ಒಳ್ಳೇದು! ಹಾಗೆಯೇ ಆಗಲಿ!'' ಎಂದು ಹೇಳಿ ಆಗಲೇ ನನ್ನ ಮೈಯ್ಯನ್ನು ಆ ರಾಕ್ಷಸಿಯ ಬಾಯಿಗಿಂತಲೂ ದೊಡ್ಡದಾಗಿ ಬೆಳೆಸಿಬಿಟ್ಟೆನು. ಆ ಘೋರರಾಕ್ಷಸಿಯೂಕೂಡ ನನ್ನನ್ನು ನುಂಗುವುದಕ್ಕೆ ತಕ್ಕಂತೆ ತನ್ನ ಬಾಯನ್ನೂ ಮೇಲೆಮೇಲೆ ಅಗಲಿಸುತ್ತ ಬಂದಳು. ಆ ರಾಕ್ಷಸಿಗಾದರೋ ನನ್ನ ಶಕ್ತಿಯಾಗಲಿ, ನನ್ನಿಂದ ತನಗೆ ಸಂಭವಿಸಬಹುದಾದ ಭಂಗವಾಗಲಿ ಮೊದಲು ತಿಳಿಯದೆಹೋಯಿತು. ಇಷ್ಟರಲ್ಲಿ ನಾನು ನನ್ನ ದೊಡ್ಡರೂಪವನ್ನು ನಿಮಿಷಮಾತ್ರದಲ್ಲಿ ಬಹಳ ಸಣ್ಣದಾಗಿ ಮಾಡಿಕೊಂಡು, ಆ ರಾಕ್ಷಸಿಯ ಹೊಟ್ಟೆಯೊಳಗೆ ಪ್ರವೇಶಿಸಿ, ಅಲ್ಲಿ ಮೊದಲಿನಂತೆ ನನ್ನ ಮೈಯನ್ನು ಬೆಳೆಸಿ, ಅವಳ ಎದೆಯನ್ನು ಸೀಳಿಕೊಂಡು ಹೊರಕ್ಕೆ ಬಂದು, ಆಗಲೇ ಆಕಾಶಕ್ಕೆ ಹಾರಿಬಿಟ್ಟೆನು. ನಾನು ಹೀಗೆ ಆಕೆಯ ಎದೆಯನ್ನು ಸೀಳಿಕೊಂಡು ಬಂದೊಡನೆ ಪರ್ವತಾಕಾರವುಳ್ಳ ಆ ರಾಕ್ಷಸಿಯು ತೋಳುಗಳೆಲ್ಲವೂ ಕಳಚಿಬಿದ್ದವು. ಆಗಲೇ ಅವಳು ಸತ್ತು ಸಮುದ್ರದಲ್ಲಿ ಮುಳುಗಿದಳು. ಆಗ ಆಕಾಶದಲ್ಲಿ ನೆರೆದಿದ್ದ ಸಿದ್ಧಚಾರಣಾದಿಗಳೆಲ್ಲರೂ ''ಭಲೆ! ಹನುಮಂತನು ತನ್ನ ಮಹಾವೇಗದಿಂದ ಸಿಂಹಿಕೆಯೆಂಬ ಘೋರರಾಕ್ಷಸಿಯನ್ನೂ ಕೊಂದುಬಿಟ್ಟನು.'' ಎಂದು ಹೇಳಿಕೊಳ್ಳುತ್ತಿದ್ದ ಮಾತು ನನ್ನ ಕಿವಿಗೆ ಕೇಳಿಸಿತು. ಹೀಗೆ ನಾನು ಸಿಂಹಿಕೆಯನ್ನು ಕೊಂದಮೇಲೆ, ಪ್ರಾಣಾಂತಕರವಾದ ಆ ಸಾಹಸಕಾರ್ಯವನ್ನೇ ಮನಸ್ಸಿನಲ್ಲಿ ಆಗಾಗ ಸ್ಮರಿಸುತ್ತ, ಬಹಳ ದೂರದವರೆಗೆ ಹಾರಿಹೋದೆನು. ಮುಂದೆ ಅನೇಕವೃಕ್ಷಗಳಿಂದ ನಿಬಿಡವಾಗಿಯೂ, ಲಂಕೆಗೆ ವಾಸಭೂತವಾಗಿಯೂ ಇರುವ ಸಮುದ್ರದ ದಕ್ಷಿಣತೀರವನ್ನು ಕಂಡೆನು. ಸೂರ್ಯನು ಮುಳುಗಿದಮೇಲೆ ಯಾವ ರಾಕ್ಷಸರಿಗೂ ತಿಳಿಯದಂತೆ ರಾಕ್ಷಸನಿವಾಸವಾದ ಆ ಲಂಕೆಯನ್ನು ಪ್ರವೇಶಿಸುವುದಕ್ಕೆ ಹೋದೆನು. ನಾನು ಹೀಗೆ ಎಚ್ಚರಿಕೆಯಿಂದ ಸಮಯವನ್ನು ನಿರೀಕ್ಷಿಸಿ ಪ್ರವೇಶಿಸುವಾಗಲೂ, ಅಲ್ಲಿ ಪ್ರಳಯಕಾಲದ ಮೇಘಕ್ಕೆ ಸಮಾನವಾದ ಅಟ್ಟಹಾಸದಿಂದ ಕೂಗುತ್ತ ಯಾವಳೋ ಒಬ್ಬ ಹೆಂಗಸು ಮುಂದೆ ಕಾಣಿಸಿದಳು. ಬೆಂಕಿಯುರಿಯಂತೆ ಕೆಂಪಾದ ಕೂದಲುಗಳುಳ್ಳ, ಭಯಂಕರಾಕಾರೆಯಾದ ಆ ರಾಕ್ಷಸಿಯು ನನ್ನನ್ನು ಕಂಡೊಡನೆ ನನ್ನನ್ನು ಕೊಲ್ಲಬೇಕೆಂದು ಮುಂದೆ ಬಂದಳು. ಆಗ ನಾನು ನನ್ನ ಎಡಗೈಯಿಂದಲೇ ಆಕೆಯನ್ನು ಗುದ್ದಿ, ಅವಳನ್ನು ಸೋಲಿಸಿ ಪ್ರದೋಷಕಾಲದಲ್ಲಿ ಲಂಕೆಯನ್ನು ಪ್ರವೇಶಿಸುತ್ತಿದ್ದೆನು. ಇಷ್ಟರಲ್ಲಿ ನನ್ನ ಸಾಮರ್ಥ್ಯಕ್ಕೆ ಭಯಪಟ್ಟ ಆ ಹೆಂಗಸು ತಾನಾಗಿಯೇ ನನ್ನನ್ನು ಕರೆದು, ''ಎಲೈ ವೀರನೇ!

ನಾನೇ ಲಂಕಾಧಿದೇವತೆಯು, ನಿನ್ನ ಪರಾಕ್ರಮಕ್ಕೆ ಸೋತೆನು! ನನ್ನನ್ನೇ ನೀನು ಸೋಲಿಸಿರುವಾಗ ಇಲ್ಲಿನ ಸಮಸ್ತ ರಾಕ್ಷಸರನ್ನೂ ಜಯಿಸುವುದರಲ್ಲಿ ಸಂದೇಹವೇ ಇಲ್ಲ" ಎಂದು ಹೇಳಿ, ತಾನೇ ನನಗೆ ಅನುಜ್ಞೆಯನ್ನು ಕೊಟ್ಟು ಕಳುಹಿಸಿದಳು. ಲಂಕೆಯಲ್ಲಿ ನಾನು ಆ ರಾತ್ರಿಯೆಲ್ಲವೂ ಸೀತೆಯನ್ನು ಹುಡುಕಿದೆನು. ರಾವಣನ ಅಂತಃಪುರಕ್ಕೂ ಹೋದೆನು. ಅಲ್ಲಿಯೂ ಸೀತೆಯನ್ನೂ ಕಾಣಲಿಲ್ಲ. ಆ ರಾವಣನ ಅರಮನೆಗಳಲ್ಲಿ ಎಲ್ಲಿ ನೋಡಿದರೂ ಸೀತೆಯನ್ನು ಕಾಣದುದರಿಂದ, ಬಹಳ ಚಿಂತೆಗೊಂಡು ದುಃಖಸಮುದ್ರದಲ್ಲಿ ಮುಳುಗಿದಂತಿದ್ದೆನು. ಆ ದುಃಖವನ್ನು ಕೊನೆಮುಟ್ಟಿಸುವ ರೀತಿಯೇನೆಂದೂ ನನಗೆ ತೋರಲಿಲ್ಲ. ಹೀಗೆ ನಾನು ಹಿಂದುಮುಂದು ತೋರದೆ ಚಿಂತಿಸುತ್ತಿರುವಾಗಲೇ ಮುಂದೆ ನನಗೆ ಸರ್ವೋತ್ತಮವಾದ ಸುವರ್ಣಪ್ರಾಕಾರದಿಂದ ಪರಿವೇಷ್ಟಿತವಾದ ರಾವಣನ ಗೃಹೋದ್ಯಾನವು ಕಾಣಿಸಿತು. ಆಗಲೇ ಅದರ ಪ್ರಾಕಾರದಮೇಲೆ ಹಾರಿ, ಅನೇಕ ವೃಕ್ಷಸಮೂಹಗಳಿಂದ ತುಂಬಿದ ಆ ತೋಟವನ್ನು ನಾಲ್ಕು ಕಡೆಗಳಿಗೂ ಕಣ್ಣಿಟ್ಟು ನೋಡಿದೆನು. ಆ ತೋಟದ ನಡುವೆ ಒಂದು ದೊಡ್ಡ ಶಿಂಶುಪಾವೃಕ್ಷವನ್ನು ಕಂಡು, ಅದರ ಮೇಲೆ ಹತ್ತಿನೋಡುವಾಗ ಸುವರ್ಣಮಯವಾದ ಒಂದು ಬಾಳೆಯ ತೋಟವು ನನ್ನ ಕಣ್ಣಿಗೆ ಗೋಚರಿಸಿತು. ಇವೆಲ್ಲವನ್ನೂ ನೋಡುತ್ತ ಬರುವಾಗ, ನಾನು ಕುಳಿತಿದ್ದ ಶಿಂಶುಪಾವೃಕ್ಷಕ್ಕೆ ಸ್ವಲ್ಪದೂರದಲ್ಲಿ, ಶ್ಯಾಮವರ್ಣದ ಮೈಯುಳ್ಳವಳಾಗಿಯೂ, ಕಮಲದಂತೆ ಕಣ್ಣುಳ್ಳವಳಾಗಿಯೂ ಇದ್ದ ಸೀತೆಯನ್ನೂ ಕಂಡೆನು. ಅವಳು ಉಪವಾಸದಿಂದ ಬಾಡಿದ ಮುಖವುಳ್ಳವಳಾಗಿ ಒಂದೇ ಬಟ್ಟೆಯನ್ನುಟ್ಟು, ಕೊಳೆ ಮುಚ್ಚಿದ ತಲೆಕೂದಲುಳ್ಳವಳಾಗಿದ್ದಳು. ದುಃಖದಿಂದಲೂ, ಸಂಕಟದಿಂದಲೂ ಅವಳ ದೇಹವು ಬಹಳವಾಗಿ ಕೃಶಿಸಿಹೋಗಿದ್ದಿತು. ಅನವರತವೂ ಅವಳು ಪತಿಕ್ಷೇಮವನ್ನೇ ಚಿಂತಿಸಿ ಕೊರಗುತ್ತಿದ್ದಳು. ರಕ್ತಮಾಂಸಗಳಿಂದಲೇ ಹೊಟ್ಟೆ ಹೊರೆಯುತಕ್ಕ ವಿಕೃತಾಕಾರವುಳ್ಳ ಕೆಲವು ಘೋರರಾಕ್ಷಸಿಯರು, ಹೆಣ್ಣುಜಿಂಕೆಯನ್ನು ಮುತ್ತಿದ್ದ ಹುಲಿಗಳಂತೆ ಅವಳ ಸುತ್ತಲೂ ಆವರಿಸಿ ನಿಂತಿದ್ದರು. ಆ ರಾಕ್ಷಸಿಯರು ಆಗಾಗ ಅವಳನ್ನು ಕ್ರೂರವಾಕ್ಯಗಳಿಂದಲೂ ಹೆದರಿಸುತಿದ್ದರು. ಆಕೆಯು ತನ್ನ ಕೂದಲುಗಳನ್ನು ಒಂದೇ ಜಡೆಯಾಗಿ ಬಳೆಯಿಸಿ, ಅನವರತವೂ ತನ್ನ ಪ್ರಿಯಪತಿಯಾದ ರಾಮನನ್ನೇ ಚಿಂತಿಸಿ ಕೊರಗುತ್ತಿದ್ದಳು. ಬರಿನೆಲದ ಮೇಲೆ ಮಲಗುತ್ತಿದ್ದುದರಿಂದ ಹಿಮಗಾಲದ ಕಮಲದಂತೆ ಬಣ್ಣಗೆಟ್ಟ ಮೈಯುಳ್ಳವಳಾಗಿ ಕುಳಿತಿದ್ದಳು. ಅವಳು (ರಾವಣನ ಹಿಂಸೆಯನ್ನು ತಡೆಯಲಾರದೆ ತನ್ನ ಜೀವದ ಮೇಲೆಯೇ ಆಸೆಯನ್ನು ಬಿಟ್ಟು) ಪ್ರಾಣತ್ಯಾಗಕ್ಕಾಗಿ ನಿಶ್ಚಯಿಸಿಕೊಂಡಿದ್ದಳು.

ಇಷ್ಟರಲ್ಲಿ ನಾನೂ ಹೇಗೋ ದೈವವಶದಿಂದ ಅಲ್ಲಿಗೆ ಬಂದು ಸೇರಿದೆನು. ಯಶಸ್ವಿನಿಯಾದ ಆ ಸೀತಾದೇವಿಯು ಆ ರೀತಿಯಲ್ಲಿ ಅನುಭವಿಸುತಿದ್ದ ದುರ್ದಶೆಯನ್ನು ನೋಡುತ್ತ, ಆ ಶಿಂಶುಪಾವೃಕ್ಷದಲ್ಲಿಯೇ ಮರೆಯಾಗಿ ಕುಳಿತಿದ್ದೆನು. ಇಷ್ಟರಲ್ಲಿ ರಾವಣನ ಅರಮನೆಯ ಕಡೆಯಿಂದ,ಹೆಂಗಸರ ಕಾಲಂದುಗೆ ಮೊದಲಾದ ಆಭರಣಗಳ ಧ್ವನಿಗಳೊಡನೆ, ಅತಿ ಗಂಭೀರವಾದ ಜನಗಳ ಕೋಲಾಹಲವು ನನ್ನ ಕಿವಿಗೆ ಕೇಳಿಸಿತು. ಆಗ ನಾನು ಬಹಳ ಬೆಜ್ಜರಗೊಂಡು ನನ್ನ ಆಕಾರವನ್ನು ಡುಗಿಸಿ,ಆ ಶಿಂಶುಪಾವೃಕ್ಷದ ಎಲೆಗಳ ಮರೆಯಲ್ಲಿ ಹಕ್ಕಿಯಂತೆ ಮರೆಯಾಗಿ ಕುಳಿತು ನೋಡುತ್ತಿದ್ದೆನು. ಇಷ್ಟರಲ್ಲಿ ಮಹಾ ಬಲಾಢ್ಯನಾದ ಆ ರಾವಣನೂ, ಅವನ ಪತ್ನಿಯರೂ ಗುಂಪಾಗಿ, ನೆಟ್ಟಗೆ ಸೀತೆಯು ಕುಳಿತಿದ್ದ ಸ್ಥಳಕ್ಕೇ ಬಂದರು. ಆ ರಾಕ್ಷಸನು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿದೊಡನೆ ಸೀತೆಯು, ತನ್ನ ತೊಡೆಗಳನ್ನು ಚೆನ್ನಾಗಿ ಉಡುಗಿಸಿಕೊಳ್ಳುತ್ತ ಉಬ್ಬಿದ ತನ್ನ ಎರಡು ಸ್ತನಗಳನ್ನೂ ತೋಳುಗಳಿಂದ ಮರೆಸಿಟ್ಟುಕೊಂಡು ಸಂಕುಚಿತಗಾತ್ರಿಯಾಗಿ ಕುಳಿತಳು. ಆಗ ಆಕೆಯು ಮಿತಿಮೀರಿದ ಭಯದಿಂದಲೂ ದುಃಖದಿಂದಲೂ ನಾಲ್ಕುಕಡೆಗಳಿಗೂ ಕಣ್ಣಿಟ್ಟು ನೋಡಿ, ರಕ್ಷಕರೊಬ್ಬರನ್ನೂ ಕಾಣದೆ ನಡುಗುತ್ತಿದ್ದಳು. ಅಷ್ಟರಲ್ಲಿಯೇ ದುರಾತ್ಮನಾದ ರಾವಣನು ನೆಟ್ಟಗೆ ಅವಳ ಸಮೀಪಕ್ಕೆ ಬಂದು, ಅವಳ ಮನಸ್ಸಂಕಟವನ್ನೂ ಲಕ್ಷ್ಯಮಾಡದೆ ಮಾತನಾಡಿಸತೊಡಗಿದನು. ಕಾಮವಶನಾದ ಆ ಪಾಪಿಯು ಮೊದಲು ಅವಳಿಗೆ ತಲೆಬಗ್ಗಿ ನಮಸ್ಕರಿಸುತ್ತ "ಎಲೆ ದೇವಿ! ಸೀತೆ! ನನ್ನನ್ನು ಮನ್ನಿಸು!" ಎಂದು ಬಹಳ ದೈನ್ಯದಿಂದ ಪ್ರಾರ್ಥಿಸುತ್ತಿದ್ದು, ಕೊನೆಕೊನೆಗೆ ಕೋಪಗೊಂಡು, ಅವಳನ್ನು ಕುರಿತು, "ಎಲೆ ಗರ್ವಿಷ್ಠಳೆ! ನೀನು ನಿನ್ನ ಕೊಬ್ಬಿನಿಂದ ಈಗಲೂ ನನ್ನ ಮಾತನ್ನು ನಡೆಸದಿರುವೆಯಷ್ಟೆ? ಇರಲಿ! ಇನ್ನೆರಡು ತಿಂಗಳುಗಳ ಗಡುವು ಮಾತ್ರವೇ ಉಳಿದಿರುವುದು. ಆಮೇಲೆ ನಿನ್ನ ರಕ್ತವನ್ನು ಹೀರಿಬಿಡುವುದೇ ನಿಜವು" ಎಂದನು. ದುರಾತ್ಮನಾದ ರಾವಣನ ಈ ಮಾತನ್ನು ಕೇಳಿ ಸೀತೆಯು ಪರಮಕುಪಿತಳಾಗಿ, ಅವನಿಗೆ ತಕ್ಕ ಪ್ರತ್ಯುತ್ತರವನ್ನು ಹೇಳುವಳು. "ಎಲೆ ರಾಕ್ಷಸಾಧಮನೆ! ಎಣೆಯಿಲ್ಲದ ದಿವ್ಯತೇಜಸ್ಸುಳ್ಳ ರಾಮನಿಗೆ ಭಾರ್ಯೆಯಾಗಿ, ಇಕ್ಷ್ವಾಕುಕುಲನಾಥನಾದ ದಶರಥನಿಗೆ ಸೊಸೆಯಾದ ನನ್ನೊಡನೆಯೂ ಹೀಗೆ ಆಡಬಾರದ ಮಾತುಗಳನ್ನಾಡುವೆಯಾ? ಛೀ ಪಾಪಿ! ನಿನ್ನ ನಾಲಗೆಯು ಸೀಳಿಹೋಗಬೇಡವೆ? ಎಲೆ ಅನಾರ್ಯನೆ! ನಾನು ಪತಿಯನ್ನಗಲಿರುವಾಗ ಮಹಾತ್ಮನಾದ ಆತನ ಕಣ್ಣಿಗೆ ಬೀಳದಂತೆ ನನ್ನನ್ನು ಕದ್ದು ತಂದ ನಿನ್ನ ವೀರ್ಯವೊಂದು ವೀರ್ಯವೆ? ಯಾವ ವಿಧದಲ್ಲಿಯೂ ನೀನು ಆ ರಾಮನಿಗೆಣೆಯಲ್ಲ! ಕೊನೆಗೆ ಅವನಲ್ಲಿ ದಾಸ್ಯಮಾಡುವು

ದಕ್ಕೂ ನಿನಗೆ ಯೋಗ್ಯತೆಯಿಲ್ಲ. ಆತನೋ ಅನೇಕ ಯಜ್ಞಗಳನ್ನು ನಡೆಸಿದವನು. ಸತ್ಯಸಂಧನು. ಯುದ್ಧದಲ್ಲಿ ಕೀರ್ತಿಯನ್ನು ಪಡೆದವನು. ರಘುವಂಶೋತ್ತಮನು. ಎಲೆ ಪಾಪಿ! ಆತನೊಡನೆಯೂ ನಿನಗೆ ಹೋರಾಟವೆ! ಛೀ ಹೋಗು" ಎಂದಳು. ಹೀಗೆ ಸೀತೆಯು ತನ್ನನ್ನು ಧಿಕ್ಕರಿಸಿ ಹೇಳಿದ ಕ್ರೂರವಾಕ್ಯಗಳನ್ನು ಕೇಳಿ ರಾವಣನು ಚಿತೆಯೊಳಗಣ ಬೆಂಕಿಯಂತೆ ಕೋಪದಿಂದುರಿಯುತ್ತಿದ್ದನು. ಮತ್ತು ಅವನು ತಡೆಯಲಾರದ ಕೋಪದಿಂದ ಕಣ್ಣಾಲಿಗಳನ್ನು ತಿರುಗಿಸುತ್ತ, ಅಗಲೇ ತನ್ನ ಬಲಗೈಯ ಮುಷ್ಟಿಯನ್ನೆತ್ತಿ ಹಿಡಿದು, ಸೀತೆಯನ್ನು ಕೊಲ್ಲುವುದಕ್ಕಾಗಿ ಮುಂದೆ ಬಂದನು. ಇದನ್ನು ನೋಡಿ ಅಲ್ಲಿ ಅವನೊಡನೆ ಬಂದಿದ್ದ ಸ್ತ್ರೀಯರೆಲ್ಲರೂ "ಹಾ! ಹಾ!" ಎಂದು ಕೂಗಿದರು. ಆಗ ರಾವಣನಿಗೆ ಪಟ್ಟಮಹಿಷಿಯಾಗಿ ಗುಣಸಂಪನ್ನೆಯಾದ [1] ಮಂಡೋದರಿಯೆಂಬವಳು. ಆ ಸ್ತ್ರೀಯರ ಮಧ್ಯದಿಂದ ಥಟ್ಟನೆ ಮೇಲೆದ್ದು ಬಂದು, ದುರಾತ್ಮನಾದ ಆ ರಾವಣನನ್ನು ತಡೆದು ನಿಲ್ಲಿಸಿದಳು. ಮತ್ತು ಕಾಮಪೀಡಿತನಾಗಿ ಮೈಮರೆತಿರುವ ಆತನನ್ನು ಕುರಿತು ಬಹಳ ಮೃದುವಾದ ಸಾಂತ್ವವಾಕ್ಯದಿಂದ "ಎಲೈ ಪ್ರಿಯನೆ! ನೀನು ಮಹೇಂದ್ರನಿಗೆಣೆಯಾದ ಪರಾಕ್ರಮವುಳ್ಳವನು. ನಿನಗೆ ಮನುಷ್ಯಮಾತ್ರಳಾದ ಈ ಸೀತೆಯಿಂದಾಗಬೇಕಾದುದೇನು! ನನ್ನೊಡನೆ ಕ್ರೀಡಿಸಬಾರದೆ? ನನಗಿಂತಲೂ ಸೀತೆಯು ಮೇಲೆಂದೆಣಿಸುವೆಯಾ? ಇದಲ್ಲದೆ ನಿನ್ನ ವಶದಲ್ಲಿ ಇನ್ನೂ ಎಷ್ಟೋ ಮಂದಿ ದೇವಕನ್ಯೆಯರುಂಟು! ಎಷ್ಟೋ ಮಂದಿ ಗಂಧರ್ವಕನ್ಯೆಯರುಂಟು! ಎಷ್ಟೋ ಮಂದಿ ಯಕ್ಷಕನ್ಯೆಯರುಂಟು? ಅವರೊಡನೆ ಯಥೇಚ್ಛವಾಗಿ ವಿಹರಿಸು! ಸೀತೆಯಿಂದ ನಿನಗೇನು?" ಎಂದಳು. ಹಾಗೆಯೇ ಅಲ್ಲಿದ್ದ ಇತರಸ್ತ್ರೀಯರೂ ಆತನನ್ನು ಅನೇಕವಿಧದಿಂದ ಸಮಾಧಾನಮಾಡಿ ಅರಮನೆಗೆ ಕರೆತಂದು ಸೇರಿಸಿದರು. ಅತ್ತಲಾಗಿ ರಾವಣನು ಹೊರಟು ಹೋದ ಮೇಲೆಯೂ, ಇಲ್ಲಿ ಸೀತೆಯ ಮೇಲೆ ಕಾವಲಿದ್ದ ವಿಕಾರಮುಖವುಳ್ಳ ಕೆಲವು ರಾಕ್ಷಸಿಯರು, ಅತಿಭಯಂಕರವಾಗಿಯೂ, ಕ್ರೂರವಾಗಿಯೂ ಇರುವ ಮಾತುಗಳಿಂದ ಸೀತೆಯನ್ನು ಹೆದರಿಸಿ ನಿರ್ಬಂಧಿಸುತ್ತಿದ್ದರು. ಎಷ್ಟು ಹೆದರಿಸಿದರೇನು? ಜನಕಪುತ್ರಿಯಾದ ಸೀತೆಯು, ಅವರ ಬೆದರಿಕೆಯ ಮಾತುಗಳನ್ನೂ, ಅವರ ಗರ್ಜನೆಗಳನ್ನೂ ಹುಲ್ಲಿಗೆ ಸಮಾನವಾಗಿ ಭಾವಿಸಿ ಅಲಕ್ಷ್ಯದಿಂದಿದ್ದಳು. ಅವರ ನಿರ್ಬಂಧಗಳೆಲ್ಲವೂ ನಿರರ್ಥಕಗಳಾದುವು. ಹೀಗೆ ಮಾಂಸಭಕ್ಷಕರಾದ ಆ ರಾಕ್ಷಸಸ್ತ್ರೀಯರೆಲ್ಲರೂ ತಾವು ಇದುವರೆಗೆ ಮಾಡಿದ ಆರ್ಭಟಗಳೂ ಗರ್ಜನೆಗಳೂ ಸೀತೆಯಲ್ಲಿ ವಿಫಲ

1. ಹಿಂದೆ ಧಾನ್ಯಮಾಲಿನಿಯು ತಡೆದುದಾಗಿ ಹೇಳಿದೆ. ಇಲ್ಲಿ ಮಂಡೋದರಿಯು ತಡೆದುದಾಗಿ ಹೇಳಿದೆ. ಇದರಿಂದ ಆ ಕಾಲದಲ್ಲಿ ಇಬ್ಬರೂ ಬಂದು ತಡೆದುದಾಗಿ ಗ್ರಹಿಸಬೇಕು.

ವಾದುದನ್ನು ನೋಡಿ, ಆಶಾಭಂಗವನ್ನು ಹೊಂದಿ, ಮುಂದೆ ಏನನ್ನೂ ಮಾಡ ಲಾರದೆ ರಾವಣನಬಳಿಗೆ ಹೋಗಿ, ಸೀತೆಗಿದ್ದ ಬಲವಾದ ಮನೋದಾರ್ಢ್ಯವನ್ನು ಅವನಿಗೆ ತಿಳಿಸಿಬಿಟ್ಟರು. ಕೊನೆಗೆ ಅವರೆಲ್ಲರೂ ಸೀತೆಯಸುತ್ತಲೂ ಮಲಗಿ ನಿದ್ರೆ ಯಿಂದ ಮೈಮರೆತಿದ್ದರು. ಇವರೆಲ್ಲರೂ ಹಾಗೆ ಮಲಗಿದಮೇಲೆಯೂ, ಪತಿಕ್ಷೇಮ ಪರಾಯಣೆಯಾದ ಆ ಸೀತೆಯು, ನಾನಾವಿಧದಲ್ಲಿ ದೈನ್ಯದಿಂದ ವಿಲಪಿಸುತ್ತ ಬಹಳ ವಾಗಿ ದುಃಖಿಸಿ ಕೊರಗುತ್ತಿದ್ದಳು. ಆಗಾಗ ಎಚ್ಚರಗೊಂಡ ರಾಕ್ಷಸಿಯರು ಸೀತೆ ಯನ್ನು ನೋಡಿ ಅವಳನ್ನು ಭಕ್ಷಿಸಿಬಿಡುವುದಾಗಿ ಹೆದರಿಸುತ್ತಿದ್ದರು. ಇದನ್ನು ಸಹಿಸಲಾರದೆ, ಅಲ್ಲಿ ತ್ರಿಜಟೆಯೆಂಬವಳೊಬ್ಬಳು ಕೋಪದಿಂದ ಥಟ್ಟನೆ ಮೇಲೆದ್ದು ಆ ರಾಕ್ಷಸಸ್ತ್ರೀಯರನ್ನು ನೋಡಿ “ ಎಲೆ ಘಾತುಕಿಯರೆ! ಇನ್ನು ಶೀಘ್ರದಲ್ಲಿಯೇ ನೀವೇ ನಿಮ್ಮ ಹೆಣವನ್ನು ತಿನ್ನಬೇಕಾಗುವುದೇ ಹೊರತು ಸೀತೆಗೆ ಎಂದಿಗೂ ನಾಶ ವಿಲ್ಲ! ಜನಕರಾಜನ ಮಗಳಾಗಿ, ಮಹಾಪತಿವ್ರತೆಯಾಗಿ, ದಶರಥರಾಜನ ಸೊಸೆ ಯಾದ ಈಕೆಯನ್ನು ನೀವು ಭಕ್ಷಿಸುವಿರಾ! ಛೀ ಹೋಗಿರಿ! ಈಗಲೇ ನಾನು ಮಹಾಭಯಂಕರವಾದ ಒಂದು ಸ್ವಪ್ನವನ್ನು ಕಂಡೆನು. ಅದನ್ನು ನೆನೆಸಿಕೊಂಡ ಮಾತ್ರಕ್ಕೆ ಮೈನಡುಗಿ ರೋಮಾಂಚವೇಳುತ್ತಿರುವುದು! ಆ ಸ್ವಪ್ನವೇ ರಾಕ್ಷಸರ ವಿನಾಶವನ್ನೂ, ಈಕೆಯ ಪತಿಗೆ ಜಯವನ್ನೂ ಸೂಚಿಸುತ್ತಿರುವುದು. ಈಗಲೂ ಆ ರಾಮನಿಂದ ನಮ್ಮ ಕಡೆಯ ರಾಕ್ಷಸಿಯರನ್ನು ರಕ್ಷಿಸಿಕೊಳ್ಳಬೇಕಾದರೆ, ಈ ಸೀತೆ ಯಲ್ಲಿಯೇ ನಾವೆಲ್ಲರೂ ಮರೆಹೊಕ್ಕು ಪ್ರಾರ್ಥಿಸುವುದು ಮೇಲೆಂದು ನನಗೆ ತೋರಿರು ವುದು. ಇವಳು ಹೀಗೆ ದುಃಖಿತೆಯಾಗಿರುವಾಗಲೇ ನಾನು ಈ ದುಸ್ಸ್ವಪ್ನವನ್ನು ಕಂಡಿರುವುದರಿಂದ, ಇವಳು ಈ ದುಃಖದಿಂದ ಬಿಡುಗಡೆಹೊಂದಿ, ಮೇಲಾದ ಸುಖ ವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ಜನಕಪುತ್ರಿಯಾದ ಈ ಸೀತೆಯಾದರೋ ತನ್ನ ಮನಸ್ಸಿನಲ್ಲಿ ಎಷ್ಟೇ ಕೋಪವಿದ್ದರೂ ತನ್ನ ಅಪರಾಧಿಗಳು ಒಂದಾವರ್ತಿ ತಲೆ ಬಗ್ಗಿದ ಮಾತ್ರಕ್ಕೆ ಪ್ರಸನ್ನಳಾಗುವ ಸ್ವಭಾವವುಳ್ಳವಳು. ಆದುದರಿಂದ ಇವಳನ್ನೇ ಪ್ರಸನ್ನಳನ್ನಾಗಿ ಮಾಡಿಕೊಳ್ಳಿರಿ” ಎಂದಳು. ತ್ರಿಜಟೆಯು ಹೇಳಿದ ಶರಣಾಗತಿ ಯೆಂಬ ಮಾತನ್ನು ಕೇಳಿದೊಡನೆ ಸೀತೆಯ ಮನಸ್ಸು ಪ್ರಸನ್ನವಾಯಿತು. ಆ ಬಾಲೆಯು ಪತಿಯ ವಿಜಯವಾರ್ತೆಯನ್ನು ಕೇಳಿ ಹರ್ಷಗೊಂಡು, ಸ್ವಲ್ಪ ಲಜ್ಜೆ ಯನ್ನೂ ತೋರಿಸುತ್ತಾ, ಅಲ್ಲಿದ್ದ ರಾಕ್ಷಸಿಯರನ್ನು ಕುರಿತು “ಎಲೆ ರಾಕ್ಷಸಿಯರೆ! ಈ ತ್ರಿಜಟೆಯು ಹೇಳಿದಂತೆಯೇ ಆಗುವುದಾದರೆ ನಾನು ನಿಜವಾಗಿ ನಿಮಗೆ ರಕ್ಷಕೆ ಯಾಗಿರುವೆನು! ಹೆದರಬೇಡಿರಿ!” ಎಂದು ಹೇಳಿ ಅಭಯವನ್ನು ಕೊಟ್ಟಳು. ಹಾಗೆ ಅತಿಭಯಂಕರವಾದ ದುರ್ದಶೆಯನ್ನನುಭವಿಸುತ್ತಿದ್ದ ಆ ಸೀತೆಯನ್ನು ನೋಡಿದಾಗ,

ನನಗೆ ಮಹತ್ತಾದ ಚಿಂತೆಯುಂಟಾಯಿತು. ಎದೆಗುಂದದೆ ಧೈರ್ಯವನ್ನು ತಂದುಕೊಳ್ಳುವುದರಲ್ಲಿ ನಾನು ಎಷ್ಟೋ ಸಮರ್ಥನಾದರೂ, ನನ್ನ ಮನಸ್ಸಿಗೆ ನೆಮ್ಮದಿಯಿಲ್ಲದೇ ಹೋಯಿತು. ಆಗ ನಾನು ಸೀತೆಯನ್ನು ಮಾತಾಡಿಸುವುದಕ್ಕೆ ಉಪಾಯವೇನೆಂದು ಚಿಂತಿಸಿ, ಕೊನೆಗೆ ಇಕ್ಷ್ವಾಕುವಂಶವನ್ನೇ ಮುಂದಿಟ್ಟುಕೊಂಡು ರಾಮನ ಗುಣಗಳನ್ನು ವರ್ಣಿಸುವುದಕ್ಕೆ ತೊಡಗಿದೆನು. ಸಮಸ್ತರಾಜರ್ಷಿಗಳ ಸಮೂಹಕ್ಕೂ ಪೂಜ್ಯವಾದ ಆ ನನ್ನ ಮಾತು ಸೀತೆಯ ಕಿವಿಗೆ ಬೀಳುತಿದ್ದಾಗಲೆ ಆವಳ ಕಣ್ಣುಗಳಲ್ಲಿ ಫಳಫಳನೆ ದುಃಖಬಾಷ್ಪವು ಹೊರಟಿತು. ಆಗ ಅವಳು ನನ್ನನ್ನು ನೋಡಿ, "ಎಲೈ ಕಪಿಶ್ರೇಷ್ಠನೆ! ನೀನು ಯಾರು? ಇಲ್ಲಿಗೆ ಬಂದುದೇಕೆ? ನೀನು ಇಲ್ಲಿಗೆ ಬಂದ ಬಗೆಯೇನು? ನಿನಗೆ ರಾಮನೊಡನೆ ಸ್ನೇಹವುಂಟಾಗುವುದಕ್ಕೆ ಕಾರಣವೇನು? ಇವೆಲ್ಲವನ್ನೂ ನನಗೆ ತಿಳಿಸಬೇಕು" ಎಂದಳು. ಸೀತೆಯೇ ಹೇಳಿದ ಈ ಮಾತನ್ನು ಕೇಳಿ ನಾನು ಆಕೆಯನ್ನು ಕುರಿತು, "ಎಲೆ ದೇವಿ! ನಿನ್ನ ಪ್ರಿಯನಾದ ರಾಮನಿಗೆ ನಾನು ಸಹಾಯಕನಾಗಿ ಬಂದಿರುವೆನು. ನಾನು ಭಯಂಕರ ಪರಾಕ್ರಮವುಳ್ಳವನು. ಮಹಾಬಲಾಢ್ಯನಾದ ಸುಗ್ರೀವನೆಂಬ ವಾನರನೊಬ್ಬನುಂಟು. ನಾನು ಅವನ ಕಡೆಯ ಭೃತ್ಯನು. ನನಗೆ ಹನುಮಂತನೆಂದು ಹೆಸರು. ನಿನಗಾಗಿಯೇ ನಿನ್ನ ಪತಿಯಾದ ರಾಮನು ನನ್ನನ್ನು ಇಲ್ಲಿಗೆ ಕಳುಹಿಸಿರುವನು. ಎಲೆ ಯಶಸ್ವಿನಿ! ಪುರುಷೋತ್ತಮನಾಗಿಯೂ, ಶ್ರೀಮಂತನಾಗಿಯೂ ಇರುವ ಆ ದಶರಥಪುತ್ರನು, ಇದೋ ಈ ಉಂಗುರವನ್ನು ಗುರುತಿಗಾಗಿ ನಿನ್ನಲ್ಲಿಗೆ ಕಳುಹಿಸಿಕೊಟ್ಟಿರುವನು. ಎಲೆ ದೇವಿ! ಮುಂದೆ ನಾನು ಮಾಡಬೇಕಾದ ಕೆಲಸವೇನೆಂದು ನಿನ್ನ ಆಜ್ಞೆಯನ್ನು ನಿರೀಕ್ಷಿಸುವೆನು. ಈಗಲೇ ನಾನು ನಿನ್ನನ್ನು ರಾಮಲಕ್ಷ್ಮಣರ ಬಳಿಗೆ ಸೇರಿಸುವುದಕ್ಕೂ ಸಿದ್ಧನಾಗಿರುವೆನು. ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು!" ಎಂದು ಕೇಳಿದೆನು. ಜನಕಪುತ್ರಿಯಾದ ಸೀತೆಯು, ಈ ನನ್ನ ಮಾತನ್ನು ಕೇಳಿ ತನ್ನಲ್ಲಿ ತಾನು ಪರ್ಯಾಲೋಚಿಸಿ, ನನ್ನನ್ನು ಕುರಿತು, "ರಾಮನೇ ಇಲ್ಲಿಗೆ ಬಂದು ರಾವಣನನ್ನು ಕೊಂದು ನನ್ನನ್ನು ಕರೆದುಕೊಂಡು ಹೋಗಲಿ!" ಎಂದಳು. ಆ ಮೇಲೆ ನಾನು ಪೂಜ್ಯಳಾದ ಆ ಸೀತೆಗೆ ತಲೆಬಗ್ಗಿ ನಮಸ್ಕರಿಸಿ, "ಎಲೆ ದೇವಿ! ಹಾಗೆ ನೀನು ನನ್ನೊಡನೆ ಬಾರದಿದ್ದರೆ, ರಾಮನ ಮನಸ್ಸಿಗೆ ನಂಬಿಕೆ ಹುಟ್ಟುವಂತೆ ಏನಾದರೂ ಒಂದು ಗುರುತನ್ನು ಕೊಡು" ಎಂದು ಯಾಚಿಸಿದೆನು. ಆಗ ಸೀತೆಯು ನನ್ನನ್ನು ಕುರಿತು, ವಾನರೋತ್ತಮನೆ! ಇದೋ! ಉತ್ತಮವಾದ ಈ ನನ್ನ ಚೂಡಾಮಣಿಯನ್ನು ನಾನು ಕೊಟ್ಟಿದಾಗಿ ರಾಮನಿಗೆ ಕೊಡು! ಇದನ್ನು ನೋಡಿದೊಡನೆ ಮಹಾಬಾಹುವಾದ ರಾಮನು ನಿನ್ನನ್ನು ಬಹಳವಾಗಿ

ಮನ್ನಿಸುವನು." ಎಂದು ಹೇಳುತ್ತ, ಅದ್ಭುತಕಾಂತಿಯುಳ್ಳ ಸರ್ವೋತ್ತಮವಾದ ಈ ಚೂಡಾಮಣಿಯನ್ನು ಬಹಳ ದುಃಖದೊಡನೆ ನನ್ನ ಕೈಗೆ ಕೊಟ್ಟಳು. ಮತ್ತು ತನ್ನ ಪ್ರಿಯನಾದ ರಾಮನಿಗೆ ಮಾತ್ರವೇ ತಿಳಿಯಬಹುದಾದ ಕೆಲವು ಏಕಾಂತ ವೃತ್ತಾಂತಗಳನ್ನೂ ರಾಮನಿಗೆ ಗುರುತಾಗಿ ಹೇಳುವಂತೆ ನನ್ನೊಡನೆ ಹೇಳಿದಳು. ಆಗಲೇ ನನಗೆ ಇತ್ತಲಾಗಿ ಹೊರಟು ಬರಬೇಕೆಂಬ ಆತುರವು ಮನಸ್ಸಿನಲ್ಲಿ ಹುಟ್ಟಿತು. ಪ್ರಯಾಣಸನ್ನದ್ಧನಾಗಿ ಸೀತೆಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಹೊರಡುವುದಕ್ಕೆ ಸಿದ್ಧನಾಗಿ ನಿಂತೆನು. ತಿರುಗಿ ಸೀತೆಯು ದುಃಖದಿಂದ ಮನಸ್ಸಿನಲ್ಲಿ ಚಿಂತಿಸುತ್ತ ನನ್ನನ್ನು ಕರೆದು "ಎಲೈ ಹನುಮಂತನೆ! ಇಲ್ಲಿನ ನನ್ನ ಸಂಗತಿಗಳೆಲ್ಲವನ್ನೂ ನೀನು ರಾಮನಿಗೆ ಚೆನ್ನಾಗಿ ತಿಳಿಸಬೇಕು. ನೀನು ಇಲ್ಲಿನ ವಿಷಯಗಳನ್ನು ತಿಳಿಸಿದ ಕ್ಷಣವೇ ರಾಮಲಕ್ಷ್ಮಣರಿಬ್ಬರೂ ಸುಗ್ರೀವನೊಡನೆ ಇಲ್ಲಿಗೆ ಹೊರಟುಬರುವಂತೆ ಮಾಡುವ ಭಾರವು ನಿನಗೆ ಸೇರಿದೆ. ಹಾಗೆ ಅವರು ಶೀಘ್ರದಲ್ಲಿಯೇ ಬಾರದಿದ್ದರೆ ಮಾತ್ರ ರಾಮನು ತಿರುಗಿ ನನ್ನನ್ನು ನೋಡಲಾರನು. ಇನ್ನೆರಡು ತಿಂಗಳುಮಾತ್ರವೇ ನನ್ನ ಪ್ರಾಣಕ್ಕೆ ಅವಧಿಯು. ಅದಕ್ಕೆ ಮೇಲೆ ನಾನು ದಿಕ್ಕಿಲ್ಲದ ವಳಂತೆ ಸಾಯಬೇಕಾಗಿರುವುದು. ಆ ಮೇಲೆ ರಾಮನು ಇಲ್ಲಿಗೆ ಬಂದರೂ ಫಲ ವಿಲ್ಲ. ಬಂದರೂ ನನ್ನನ್ನು ಕಾಣಲಾರನು. ಬರಬೇಕಾದ ಅವಶ್ಯವೂ ಇಲ್ಲ" ಎಂದಳು. ಬಹಳ ಸಂಕಟಕರವಾದ ಈ ಮಾತನ್ನು ಕೇಳಿ ನನಗೆ ದುರಾತ್ಮ ರಾದ ಆ ರಾಕ್ಷಸರಮೇಲೆ ತಡೆಯಲಾರದ ಕೋಪವುಂಟಾಯಿತು. ಅಲ್ಲಿ ನಾನು ಮುಂದೆ ಮಾಡಬೇಕಾಗಿ ಉಳಿದಿರುವ ಕಾರ್ಯವೇನೆಂದು ಸ್ವಲ್ಪಹೊತ್ತಿನ ವರೆಗೆ ಆಲೋಚಿಸುತ್ತ ನಿಂತಿದ್ದೆನು. ಕೊನೆಗೆ ನನ್ನ ಮನಸ್ಸಿಗೆ ಒಂದು ನಿಶ್ಚಯವು ಹುಟ್ಟಿ ಅಲ್ಲಿನ ರಾಕ್ಷಸರೊಡನೆ ಹೇಗಾದರೂ ಜಗಳವನ್ನು ತೆಗೆಯಬೇಕೆಂದು ತೋರಿತು. ಆಗಲೆ ನನ್ನ ದೇಹವನ್ನು ಪರ್ವತಾಕಾರವಾಗಿ ಬೆಳೆಸಿಬಿಟ್ಟೆನು. ಮೊದಲು ರಾವಣನಿಗೆ ಕೋಪವನ್ನು ಹುಟ್ಟಿಸುವುದಕ್ಕಾಗಿ ಅವನಿಗೆ ಬಹಳ ಪ್ರೇಮ ಪಾತ್ರವಾದ ಅಶೋಕವನವನ್ನೆಲ್ಲಾ ನಾಶಮಾಡುವುದಕ್ಕೆ ತೊಡಗಿದೆನು. ಹೀಗೆ ನಾನು ಆ ತೋಟವನ್ನು ಹಾಳುಮಾಡುತ್ತಿರುವಾಗ, ಅಲ್ಲಲ್ಲಿ ಮರಗಳು ಮುರಿದು ಬೀಳುವ ಧ್ವನಿಯನ್ನು ಕೇಳಿ, ಅಲ್ಲಿನ ಮೃಗಪಕ್ಷಿಗಳೆಲ್ಲವೂ ಭಯದಿಂದ ಚೆಲ್ಲಾಚದರಾಗಿ ಓಡುತ್ತಿದ್ದುವು. ಆ ತೋಟದಲ್ಲಿ ಕಾವಲಿದ್ದ ವಿಕಾರಮುಖವುಳ್ಳ ರಾಕ್ಷಸಿಯರು ಈ ಗದ್ದಲವನ್ನು ನೋಡಿ ಬೆಚ್ಚರ ಬಿದ್ದು, ಇದರ ಕಾರಣ ವನ್ನು ತಿಳಿಯುವುದಕ್ಕಾಗಿ ಅಲ್ಲಲ್ಲಿ ಸುತ್ತಿನೋಡುವಾಗ ಆ ತೋಟದಲ್ಲಿ ನನ್ನನ್ನು ಕಂಡರು. ನನ್ನ ಅದ್ಭುತರೂಪವನ್ನು ನೋಡಿದಾಗಲೇ ಅವರಿಗೆ ನಾನೇ ಆ ವನ

ವನ್ನು ಹಾಳುಮಾಡಿರಬೇಕೆಂದು ತೋರಿತು. ಅಲ್ಲಲ್ಲಿದ್ದ ರಾಕ್ಷಸಿಯರೆಲ್ಲರೂ ಒಂದಾಗಿ ಸೇರಿ, ಆ ಕ್ಷಣವೇ ರಾವಣನ ಬಳಿಗೆ ಓಡಿಹೋಗಿ ಅವನನ್ನು ಕುರಿತು "ಅಯ್ಯೋ ಮಹಾರಾಜನೆ! ನಿನ್ನ ಪರಾಕ್ರಮವನ್ನು ತಿಳಿಯದ ಯಾವುದೋ ಒಂದು ಕಾಡುಕಪಿಯು, ಬೇರೊಬ್ಬರಿಗೆ ದುರ್ಗಮವಾದ ನಮ್ಮ ತೋಟಕ್ಕೆ ಪ್ರವೇಶಿಸಿ, ಅದನ್ನು ಸಂಪೂರ್ಣವಾಗಿ ಹಾಳುಮಾಡಿಬಿಟ್ಟಿರುವುದು. ಹೀಗೆ ನಿನಗೆ ಅಪ್ರಿಯವನ್ನುಂಟುಮಾಡಿದ ಆ ದುಷ್ಟಕಪಿಯನ್ನು ಈಗಲೇ ಕೊಂದು ಹಾಕುವಂತೆ ಅಪ್ಪಣೆಯಾಗಬೇಕು" ಎಂದರು. ಈ ಮಾತನ್ನು ಕೇಳಿದೊಡನೆ ರಾವಣನು ಅತ್ಯಾಕ್ರೋಶಗೊಂಡು, ಯಾರಿಗೂ ದುರ್ಜಯರಾಗಿಯೂ, ತನ್ನ ಮನಸ್ಸನ್ನನುವರ್ತಿಸಿ ನಡೆಯುವವರಾಗಿಯೂ ಇದ್ದ ಕಿಂಕರರೆಂಬ ಕೆಲವು ರಾಕ್ಷಸರನ್ನು ಕರೆದು, ನನ್ನನ್ನು ಹಿಡಿದು ತರುವುದಕ್ಕಾಗಿ ಕಳುಹಿಸಿದನು. ಆಗಲೇ ಎಂಬತ್ತು ಸಾವಿರಮಂದಿ ಆ ಕಿಂಕರರು, ಶೂಲಮುದ್ಗರಾದಿ ವಿವಿಧಾಯುಧಗಳನ್ನು ಹಿಡಿದು ನನ್ನ ಕಡೆಗೆಬಂದರು. ನಾನು ಆ ತೋಟದ ಬಾಗಿಲಿಗೆ ಹಾಕಿದ್ದ ಒಂದು ದೊಡ್ಡ ಅಗುಳಿಯನ್ನೇ ಕೈಗೆತ್ತಿಕೊಂಡು ಅವರೆಲ್ಲರನ್ನೂ ಅದರಿಂದಲೇ ಬಡಿದು ಧ್ವಂಸಮಾಡಿದೆನು. ಅವರಲ್ಲಿ ಸತ್ತುಳಿದ ಕೆಲವು ರಾಕ್ಷಸರು ಆ ಕ್ಷಣವೇ ರಾವಣನ ಬಳಿಗೆ ಹೋಗಿ, ಆ ಕಿಂಕರಸೈನ್ಯವು ನನ್ನಿಂದ ಪೂರ್ಣವಾಗಿ ಹತವಾದ ಸಂಗತಿಯನ್ನು ತಿಳಿಸಿದರು. ಇಷ್ಟರಲ್ಲಿ ಇತ್ತಲಾಗಿ ನನಗೆ ಬೇರೊಂದಾಲೋಚನೆಯು ತೋರಿತು. ಆ ತೋಟದ ನಡುವೆ ಮಹೋನ್ನತವಾಗಿದ್ದ ಚೈತ್ಯಪ್ರಾಸಾದವೆಂಬ ಗೋಪುರದ ಮೇಲಕ್ಕೆ ಹಾರಿದೆನು. ಅದರಲ್ಲಿ ಒಂದು ಕಂಬವನ್ನು ಕಿತ್ತುಕೊಂಡು, ಅಲ್ಲಿ ಕಾವಲಿದ್ದ ನೂರಾರುಮಂದಿ ರಾಕ್ಷಸರನ್ನೂ ಆ ಕಂಬದಿಂದಲೇ ಬಡಿದು ಕೊಂದೆನು. ಲಂಕಾನಗರಕ್ಕೆ ಮುಖ್ಯಾಲಂಕಾರದಂತಿದ್ದ ಆ ಪ್ರಾಸಾದವನ್ನೂ ಅದರಿಂದಲೇ ಅಗೆದು ಕೆಡಹಿದೆನು. ಇಷ್ಟರಲ್ಲಿ ಅತ್ತಲಾಗಿ ರಾವಣನು ಪ್ರಹಸ್ತಪುತ್ರನಾದ ಜಂಬುಮಾಲಿಯೆಂಬವನನ್ನು, ಅನೇಕ ಘೋರರಾಕ್ಷಸಸೈನ್ಯದೊಡನೆ ನನ್ನ ಮೇಲೆ ಯುದ್ಧಕ್ಕೆ ಕಳುಹಿಸಿದನು. ಬಲಾಢ್ಯನಾಗಿಯೂ, ಯುದ್ಧದಲ್ಲಿ ನಿಪುಣನಾಗಿಯೂ ಇದ್ದ ಆ ರಾಕ್ಷಸನನ್ನೂ, ಅವನ ಸಮಸ್ತ ಸೈನ್ಯಗಳನ್ನೂ ನಾನು ಆ ಬಾಗಿಲಗುಳಿಯಿಂದಲೇ ಹೊಡೆದು ಕೊಂದೆನು. ಈ ಸಂಗತಿಯೂ ಆ ಕ್ಷಣವೇ ರಾವಣನ ಕಿವಿಗೆ ಮುಟ್ಟಿತು. ಆಗ ರಾವಣನು ಬಹಳ ಬಲಾಢ್ಯರಾದ ಏಳುಮಂದಿ ಮಂತ್ರಿಪುತ್ರರನ್ನು ಅನೇಕ ಪದಾತಿಸೇನೆಯೊಡನೆ ನನ್ನ ಮೇಲೆ ಕಳುಹಿಸಿದನು. ಅವರನ್ನೂ ನಾನು ಆ ಪರಿಘದಿಂದಲೇ ಕೊಂದು ಯಮಪುರಿಗೆ ಕಳುಹಿಬಿಟ್ಟೆನು. ಯುದ್ಧವಿಶಾರದರಾದ ಆ ಮಂತ್ರಿಪುತ್ರರೂ ಹಾಗೆ

ನನ್ನಿಂದ ಹತರಾದುದನ್ನು ಕೇಳಿ ರಾವಣನು ಶೂರರಾದ ಐದುಮಂದಿ ಸೇನಾಪತಿಗಳನ್ನು ತಿರುಗಿ ನನ್ನಲ್ಲಿಗೆ ಕಳುಹಿಸಿದನು. ನಾನು ಅವರನ್ನೂ, ಅವರ ಸೇನೆಯನ್ನೂ ನಿಶ್ಶೇಷವಾಗಿ ಕೊಂದೆನು. ಆಮೇಲೆ ರಾವಣನು ಬಲಾಢ್ಯರಲ್ಲಿ ಮೇಲೆನಿಸಿಕೊಂಡ ತನ್ನ ಮಗನಾದ ಅಕ್ಷಕುಮಾರನನ್ನು ದೊಡ್ಡ ಸೇನೆಯೊಡನೆ ನನ್ನ ಮೇಲೆ ಕಳುಹಿಸಿದನು, ಆ ಅಕ್ಷನೆಂಬವನು ಮಂಡೋದರಿಯ ಹೊಟ್ಟೆಯಲ್ಲಿ ಹುಟ್ಟಿದವನು. ಯುದ್ಧದಲ್ಲಿ ಮಹಾನಿಪುಣನು. ಆತನು ನನ್ನನ್ನು ಕಂಡೊಡನೆ ಕೋಪದಿಂದ ಥಟ್ಟನೆ ಆಕಾಶಕ್ಕೆ ಹಾರುತ್ತಿರುವಾಗ, ನಾನು ಅವನ ಕಾಲುಗಳನ್ನು ಬಲವಾಗಿ ಹಿಡಿದುಬಿಟ್ಟೆನು. ಕೈಯಲ್ಲಿ ಕತ್ತಿಯನ್ನೂ, ಗುರಾಣಿಯನ್ನೂ ಹಿಡಿದು, ಆಕಾಶಕ್ಕೆ ಹಾರುತ್ತಿದ್ದ ಆ ಅಕ್ಷಕುಮಾರನ ಕಾಲುಗಳನ್ನು ಹಿಡಿದು ಅವನನ್ನು ನೂರಾವರ್ತಿ ಗಿರಗಿರನೆ ತಿರುಗಿಸಿ ನೆಲಕ್ಕೆ ಬಡಿದು, ಕೈಕಾಲುಗಳೊಂದೂ ಕಾಣಿಸದಂತೆ ಅವನ ದೇಹವನ್ನು ತಿಕ್ಕಿ ಒಂದೇ ಮುದ್ದೆಯಾಗಿ ಮಾಡಿಬಿಟ್ಟೆನು. ಹೀಗೆ ಅಕ್ಷಕುಮಾರನೂ ಹತನಾದುದನ್ನು ಕೇಳಿ ರಾವಣನಿಗೆ ತಡೆಯಲಾರದ ಕೋಪವುಂಟಾಯಿತು. ತಿರುಗಿ ಆ ರಾವಣನು ಬಲಾಢ್ಯನಾಗಿಯೂ, ಯುದ್ಧದಲ್ಲಿ ಕೊಬ್ಬಿದವನಾಗಿಯೂ ಇದ್ದ ಇಂದ್ರಜಿತ್ತೆಂಬ ಬೇರೊಬ್ಬ ಮಗನನ್ನು ನನ್ನ ಮೇಲೆ ಯುದ್ಧಕ್ಕಾಗಿ ಕಳುಹಿಸಿದನು. ನಾನು ಕ್ಷಣಮಾತ್ರದಲ್ಲಿ ಅವನೊಡನೆ ಬಂದಿದ್ದ ಸೇನೆಯೆಲ್ಲವನ್ನೂ ಕೊಂದು, ಆ ಇಂದ್ರಜಿತ್ತಿನ ವೀರ್ಯವನ್ನೂ ಅಡಗಿಸಿ ಸಂತೋಷಗೊಂಡಿದ್ದೆನು. ಮಹಾಬಾಹುವಾದ ಆ ಇಂದ್ರಜಿತ್ತು ಬಹಳ ಬಲಶಾಲಿಯೆಂದು ಹೆಸರುಗೊಂಡವನಾದುದರಿಂದ, ತಪ್ಪದೆ ನನ್ನನ್ನು ಕೊಲ್ಲಬಹುದೆಂಬ ದೃಢವಾದ ನಂಬಿಕೆಯಿಂದಲೇ ರಾವಣನು ಅನೇಕ ರಾಕ್ಷಸವೀರರೊಡನೆ ಅವನನ್ನು ನನ್ನ ಮೇಲೆ ಕಳುಹಿಸಿದ್ದನು. ಆದರೇನು? ಆ ಇಂದ್ರಜಿತ್ತಿಗೆ ನನ್ನನ್ನು ಜಯಿಸುವುದು ಅಸಾಧ್ಯವೆಂದೇ ತೋರಿತಲ್ಲದೆ, ತನ್ನ ಸಮಸ್ತಸೈನ್ಯವೂ ನನ್ನಿಂದ ಹತವಾದುದನ್ನೂ ತಿಳಿದು, ಕೊನೆಗೆ ಮಹಾವೇಗದಿಂದ ನನ್ನ ಮೇಲೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ, ಅದರಿಂದ ನನ್ನನ್ನು ಬಂಧಿಸಿಬಿಟ್ಟನು. ಆಗ ಅಲ್ಲಿ ಸೇರಿದ್ದ ರಾಕ್ಷಸರಿಗೂ ಧೈರ್ಯವು ಹುಟ್ಟಿತು. ಆಗಲೇ ಆ ರಾಕ್ಷಸರೆಲ್ಲರೂ ಹಗ್ಗಗಳಿಂದ ನನ್ನ ದೇಹವನ್ನು ಬಿಗಿದು, ನನ್ನನ್ನು ರಾವಣನ ಬಳಿಗೆ ಕರೆತಂದು, ಅವನ ಮುಂದೆ ನಿಲ್ಲಿಸಿದರು. ದುರಾತ್ಮನಾದ ರಾವಣನು ನನ್ನನ್ನು ನೋಡಿ ನಾನು ಲಂಕೆಗೆ ಬಂದುದಕ್ಕೂ, ಅಲ್ಲಿನ ರಾಕ್ಷಸರನ್ನು ಕೊಂದುದಕ್ಕೂ ಕಾರಣವೇನೆಂದು ತನ್ನ ಕಡೆಯವರಿಂದ ಪ್ರಶ್ನೆ ಮಾಡಿಸಿದನು. ಆಗ ನಾನು "ಇವೆಲ್ಲವನ್ನೂ ಸೀತೆಗಾಗಿಯೇ ಮಾಡಿದೆನು" ಎಂದು ಸ್ಪಷ್ಟವಾಗಿ ಹೇಳಿಬಿಟ್ಟೆನು. ಮತ್ತು

ನಾನು ಅಷ್ಟರಲ್ಲಿಯೇ ಸುಮ್ಮನಿರದೆ ತಿರುಗಿ ರಾವಣನನ್ನು ಕುರಿತು, "ಎಲೆ ರಾಜನೆ! ಸೀತೆಯನ್ನು ನೋಡುವುದಕ್ಕಾಗಿಯೇ ನಾನು ನಿನ್ನ ಮನೆಗೆ ಬಂದೆನು." ನಾನು ವಾಯುವಿಗೆ ಔರಸಪುತ್ರನು. ಕಪಿಜಾತಿಗೆ ಸೇರಿದವನು. ಹನುಮಂತನೆಂದು ನನಗೆ ಹೆಸರು. ನಾನು ಆ ಶ್ರೀರಾಮನಿಗೆ ದೂತನೆಂದೂ, ಸುಗ್ರೀವನ ಮಂತ್ರಿಯೆಂದೂ ತಿಳಿ. ಆ ರಾಮನ ದೂತಕಾರ್ಯಕ್ಕಾಗಿಯೇ ನಿನ್ನಲ್ಲಿಗೆ ಬಂದೆನು. ಮಹಾತೇಜಸ್ವಿಯಾದ ಸುಗ್ರೀವನು ನಿನ್ನ ಕ್ಷೇಮವನ್ನು ವಿಚಾರಿಸುವಂತೆ ಹೇಳಿರುವನು. ಮತ್ತು ಅವನು ಬಹುಧರ್ಮಯುಕ್ತವಾಗಿರುವು ದರಿಂದ ಪರಲೋಕಸಾಧಕವಾಗಿಯೂ, ಅರ್ಥಕಾಮಗಳನ್ನು ಕೈಗೂಡಿಸುವುದರಿಂದ ಈ ಲೋಕದಲ್ಲಿ ಉಪಕಾರಕವಾಗಿಯೂ ಇರುವ ಕೆಲವು ಹಿತವಾದಗಳನ್ನೂ ನಿನಗೆ ಹೇಳಿ ಕಳುಹಿಸಿರುವನು. ನಾವು ಅನೇಕವೃಕ್ಷಗಳಿಂದ ತುಂಬಿದ ಋಷ್ಯಮೂಕಗಿರಿ ಯಲ್ಲಿರುವಾಗ ರಣಪಂಡಿತನಾದ ರಾಮನೊಡನೆ ಸುಗ್ರೀವನಿಗೆ ಸ್ನೇಹವುಂಟಾ ಯಿತು. ಅವರಿಬ್ಬರಿಗೂ ಸ್ನೇಹವುಂಟಾದಮೇಲೆ, ರಾಮನು ಅವನನ್ನು ಕುರಿತು ತನ್ನ ಹೆಂಡತಿಯನ್ನು ಯಾವನೋ ರಾಕ್ಷಸನು ಕದ್ದುಯ್ದನೆಂದೂ ಅವಳನ್ನು ಹುಡುಕುವ ವಿಷಯದಲ್ಲಿ ಸಹಾಯವನ್ನು ಮಾಡಬೇಕೆಂದೂ ಕೇಳಿದನು. ಆಗ ನಮ್ಮ ರಾಜನಾದ ಸುಗ್ರೀವನೂ ರಾಮನನ್ನು ಕುರಿತು, ನನ್ನ ಅಣ್ಣನಾದ ವಾಲಿಯನ್ನು ಕೊಂದು ನನಗೆ ಸಹಾಯಮಾಡುವುದಾಗಿ ಮೊದಲು ನೀನು ಪ್ರತಿಜ್ಞೆಮಾಡಿ ಕೊಟ್ಟರೆ, ನಾನೂ ನಿನಗೆ ಬೇಕಾದ ಸಹಾಯವನ್ನು ಮಾಡುವುದರಲ್ಲಿ ತಡೆ ಯಿಲ್ಲ" ಎಂದನು. ಆದರಂತೆಯೇ ಲೋಕಪ್ರಭುವಾದ ರಾಮನು ಲಕ್ಷ್ಮಣ ಸಹಿತನಾಗಿ, ವಾಲಿಯಿಂದ ರಾಜ್ಯಭ್ರಷ್ಟನಾಗಿ ಮಾಡಲ್ಪಟ್ಟಿದ್ದ ಸುಗ್ರೀವನಿಗೆ ಅಗ್ನಿಸಾಕ್ಷಿಕವಾಗಿ ಪ್ರತಿಜ್ಞೆಮಾಡಿಕೊಟ್ಟು ಸ್ನೇಹವನ್ನು ಬೆಳೆಸಿದನು. ತನ್ನ ಪ್ರತಿಜ್ಞೆಯಂತೆಯೇ ವಾಲಿಯನ್ನು ಒಂದೇ ಬಾಣದಿಂದ ಯುದ್ಧದಲ್ಲಿ ಕೊಂದು ಸುಗ್ರೀವನಿಗೆ ವಾನರರಾಜ್ಯದಲ್ಲಿ ಪಟ್ಟವನ್ನೂ ಕಟ್ಟಿದನು. ನಾವೂ ಆ ರಾಮ ನಿಗೆ ಹೇಗಾದರೂ ಸಹಾಯವನ್ನು ಮಾಡಿಯೇ ತೀರಬೇಕಲ್ಲವೆ? ಆದುದರಿಂದ ಸುಗ್ರೀವನು ಧರ್ಮಲೋಪವಿಲ್ಲದೆ ನಿನ್ನಲ್ಲಿಗೆ ನನ್ನನ್ನು ಕಳುಹಿಸಿರುವನು. ಇದ ಕ್ಕಾಗಿ ಸುಗ್ರೀವನು ನಿನಗೆ ಹೇಳಿಕಳುಹಿಸಿರುವ ಮಾತನ್ನೂ ಹೇಳುವೆನು ಕೇಳು. "ಎಲೆ ರಾವಣಾ! ಸೀತೆಯನ್ನು ಈಗಲೇ ತಂದು ರಾಮನಿಗೊಪ್ಪಿಸಿಬಿಡು. ಹಾಗಿಲ್ಲದಪಕ್ಷದಲ್ಲಿ ಮಹಾವೀರರಾದ ಕಪಿಗಳು ನಿನ್ನ ಪಟ್ಟಣಕ್ಕೆ ಪ್ರವೇಶಿಸಿ, ನಿನ್ನ ಸಮಸ್ತ ಸೈನ್ಯವನ್ನೂ ಧ್ವಂಸಮಾಡಿಬಿಡುವರು. ಅಷ್ಟರೊಳಗಾಗಿ ನೀನು ಸೀತೆಯನ್ನು ತಂದೊಪ್ಪಿಸುವುದು ಮೇಲು! ನಮ್ಮಕಡೆಯ ವಾನರರ

ಪ್ರಭಾವವನ್ನು ಲೋಕದಲ್ಲಿ ತಿಳಿಯದವರೇ ಯಾರೂ ಇಲ್ಲ. ದೇವಾಸುರಯುದ್ಧಗಳಲ್ಲಿಯೂ ಇವರು ದೇವತೆಗಳ ಪ್ರಾರ್ಥನೆಯಮೇಲೆ ಅವರ ಸಹಾಯಕ್ಕಾಗಿ ಹೋಗುವುದುಂಟು. ಆದುದರಿಂದ ನಮ್ಮ ಕಡೆಯ ಕಪಿಗಳನ್ನು ಸಾಮಾನ್ಯರೆಂದು ತಿಳಿಯಬೇಡ" ಎಂದು ನಮ್ಮ ಸುಗ್ರೀವರಾಜನೇ ನಿನಗೆ ಹೇಳಿ ಕಳುಹಿಸಿರುವನು" ಎಂದು ನಾನು ರಾವಣನಿಗೆ ತಿಳಿಸಿದೆನು. ಇದನ್ನು ಕೇಳಿ ರಾವಣನು ಕಣ್ಣುಗಳಿಂದಲೇ ನನ್ನನ್ನು ದಹಿಸಿಬಿಡುವಂತೆ ದುರದುರನೆ ನೋಡುತ್ತಿದ್ದನು. ಮತ್ತು ಕ್ರೂರಕರ್ಮಿಯಾದ ಆ ರಾಕ್ಷಸನು ನನ್ನ ಮಹಿಮೆಯನ್ನು ತಿಳಿಯದೆ ನನ್ನನ್ನು ಕೊಲ್ಲುವಂತೆ ತನ್ನ ಕಡೆಯ ದೂತರಿಗೆ ಆಜ್ಞಾಪಿಸಿದನು. ಆಗ ಮಹಾಬುದ್ಧಿಶಾಲಿಯಾದ ವಿಭೀಷಣನೆಂಬ ಅವನ ತಮ್ಮನು, ಆ ರಾಕ್ಷಸರಾಜನನ್ನು ಕುರಿತು, ನನಗಾಗಿ ಬಹಳ ವಿಧದಲ್ಲಿ ಅವನಿಗೆ ಕೋಪಸಮಾಧಾನವನ್ನು ಮಾಡುತ್ತ ಆತನನ್ನು ಕುರಿತು "ಎಲೈ, ರಾಕ್ಷಸೇಂದ್ರನೇ! ನೀನು ಹೀಗೆ ಮಾಡಬಾರದು! ಈ ನಿಶ್ಚಯವನ್ನು ಬಿಟ್ಟುಬಿಡು! ರಾಜನೀತಿಗೆ ವಿರುದ್ಧವಾದ ದಾರಿಯನ್ನು ಹಿಡಿಯುವೆಯಲ್ಲಾ! ದೂತವಧವೆಂಬುದನ್ನು ಯಾವ ರಾಜನೀತಿಶಾಸ್ತ್ರವೂ ಒಪ್ಪುವುದಿಲ್ಲ. ದೂತನಾದವನು ಶತ್ರುರಾಜರ ಮುಂದೆ ತನಗೆ ತೋರಿದ ಹಿತವಾದವನ್ನು ತಿಳಿಸಬೇಕಾದುದೇ ನ್ಯಾಯವು. ದೂತನಾಗಿ ಬಂದವನು ಎಷ್ಟೇ ತಪ್ಪನ್ನು ಮಾಡಿದ್ದರೂ ಅವನಿಗೆ ಅಂಗಭಂಗವನ್ನು ಮಾಡಿ ಕಳುಹಿಸಬಹುದೆಂಬ ವಿಧಿಯುಂಟೇ ಹೊರತು, ಯಾವ ರಾಜಶಾಸ್ತ್ರದಲ್ಲಿಯೂ ದೂತವಧವು ವಿಧಿಸಲ್ಪಟ್ಟಿರುವಂತೆ ತೋರಲಿಲ್ಲ" ಎಂದನು. ಈ ವಿಭೀಷಣನ ಮಾತನ್ನು ಕೇಳಿ ರಾವಣನು, ಅದಕ್ಕೊಪ್ಪಿ, ಅಲ್ಲಿದ್ದ ರಾಕ್ಷಸರನ್ನು ಕರೆದು ನನ್ನ ಬಾಲವನ್ನು ಸುಡುವಂತೆ ಆಜ್ಞೆಮಾಡಿದನು. ಆಗಲೇ ರಾಕ್ಷಸರು ರಾವಣಾಜ್ಞೆಯಂತೆ ನನ್ನ ಬಾಲಕ್ಕೆ ಗೋಣಿಗಳನ್ನೂ ಹರಕುಬಟ್ಟೆಗಳನ್ನೂ ಸುತ್ತಿದರು. ಮತ್ತು ಪ್ರಚಂಡಪರಾಕ್ರಮವುಳ್ಳ ಆ ರಾಕ್ಷಸರೆಲ್ಲರೂ ತೈಲಸೇಚನವೇ ಮೊದಲಾದ ಸಮಸ್ತ ಸನ್ನಾಹಗಳನ್ನೂ ಮಾಡಿಕೊಂಡು, ದೊಣ್ಣೆಗಳಿಂದಲೂ, ಮುಷ್ಟಿಗಳಿಂದಲೂ ನನ್ನನ್ನು ಹೊಡೆಯುತ್ತ ನನ್ನ ಬಾಲಕ್ಕೆ ಬೆಂಕಿಯನ್ನೂ ತೋರಿಸಿದರು. ರಾಕ್ಷಸರು ನನ್ನನ್ನು ಎಷ್ಟೋ ಹಗ್ಗಗಳಿಂದ ಬಿಗಿದರು. ನಾನು ಅತ್ತಿತ್ತ ಚಲಿಸದಂತೆ ನನ್ನನ್ನು ಸುತ್ತಿಮುತ್ತಿ ಹೊಡೆಯುತ್ತಿದ್ದರು. ಇಷ್ಟಾದರೂ ಪಟ್ಟಣವನ್ನು ಸುತ್ತಿನೋಡಬೇಕೆಂಬ ಆತುರದಿಂದಿದ್ದ ನನಗೆ ಯಾವುದೊಂದು ಬಾಧೆಯೂ ತೋರಲಿಲ್ಲ. ಹೀಗೆ ಆ ರಾಕ್ಷಸರೆಲ್ಲರೂ ನನ್ನನ್ನು ಕಟ್ಟಿ, ನನ್ನ ಬಾಲಕ್ಕೆ ಬೆಂಕಿಯನ್ನಿಟ್ಟುದಲ್ಲದೆ ಬೀದಿಬೀದಿ

ಗಳಲ್ಲಿ ಸಾರುತ್ತ ಮೆರವಣಿಗೆಯನ್ನು ಮಾಡಿಸಿದರು. ಕೊನೆಗೆ ನನ್ನನ್ನು ಪಟ್ಟಣದ ಬಾಗಿಲಿಗೆ ಕರೆತಂದರು. ಅಲ್ಲಿಗೆ ಬಂದಮೇಲೆ ನಾನು ನನ್ನದೇಹವನ್ನು ಸಣ್ಣದಾಗಿ ಮಾಡಿ, ಆ ಕಟ್ಟುಗಳನ್ನು ಸಡಿಲಿಸಿಕೊಂಡು ಸಹಜವಾದ ರೂಪವನ್ನು ಹೊಂದಿ ಅಲ್ಲಿದ್ದ ಒಂದು ಕಬ್ಬಿಣದ ಬಾಗಿಲಗುಳಿಯನ್ನು ಕೈಗೆ ತೆಗೆದುಕೊಂಡು ಅದರಿಂದ ಆ ರಾಕ್ಷಸರೆಲ್ಲರನ್ನೂ ಧ್ವಂಸಮಾಡಿದೆನು. ಆಗಲೇ ಅಲ್ಲಿಂದ ಪುರದ್ವಾರದ ಗೋಪುರಕ್ಕೆ ಹಾರಿ ಕುಳಿತೆನು. ಮತ್ತು ಪ್ರಳಯಕಾಲಾಗ್ನಿಯು ಪ್ರಜೆಗಳನ್ನು ದಹಿಸುವಂತೆ ಉರಿಯುತಿದ್ದ ನನ್ನ ಬಾಲದ ಬೆಂಕಿಯಿಂದಲೇ ಆ ಲಂಕಾನಗರಿಯೆಲ್ಲವನ್ನೂ ದಹಿಸಿಬಿಟ್ಟೆನು. ಅಟ್ಟಲೆಗಳಿಂದಲೂ ಗೋಪುರಗಳಿಂದಲೂ ನಿಬಿಡವಾದ ಲಂಕೆಯು ಸಂಪೂರ್ಣವಾಗಿ ಸುಟ್ಟುಹೋದುದನ್ನು ನೋಡಿದಮೇಲೆ ನನ್ನ ಮನಸ್ಸಿಗೆ ಭಯವು ಹುಟ್ಟಿತು. ಆಗ ನನ್ನಲ್ಲಿ ನಾನು “ ಓಹೋ! ಈ ಪಟ್ಟಣವೆಲ್ಲವೂ ಸಂಪೂರ್ಣವಾಗಿ ಭಸ್ಮವಾಗಿ ಹೋಯಿತು. ಈ ಲಂಕೆಯಲ್ಲಿ ಸುಡದ ಭಾಗವೊಂದಾದರೂ ಇಲ್ಲ. ಸೀತೆಯೂ ಇದರಲ್ಲಿ ದಗ್ಧಳಾಗಿರಬೇಕು. ಇದರಲ್ಲಿ ಸಂದೇಹವಿಲ್ಲ. ಅಯ್ಯೋ! ಈ ಲಂಕೆಯನ್ನು ಸುಡುವ ಸಂಭ್ರಮದಲ್ಲಿ ಸೀತೆಗೂ ಅಪಾಯವನ್ನು ತಂದಿಟ್ಟು, ಶ್ರೀರಾಮನ ಕಾರ್ಯವನ್ನು ನಾನೇ ಕೆಡಿಸಿದಂತಾಯಿತಲ್ಲಾ ” ಎಂದು ಮಹಾವ್ಯಸನದಿಂದ ಪೀಡಿತನಾಗಿ ಚಿಂತಿಸುತ್ತಿದ್ದೆನು. ಇಷ್ಟರಲ್ಲಿ ನನಗೆ ಅತ್ಯಾಶ್ಚರ್ಯವನ್ನೂ, ಪರಮಸಂತೋಷವನ್ನೂ ಉಂಟುಮಾಡುವಂತೆ ಆಕಾಶದಲ್ಲಿ ಚಾರಣರು “ ಸೀತೆಯು ದಗ್ಧಳಾಗಲಿಲ್ಲ ” ಎಂದು ಹೇಳುತ್ತಿದ್ದ ಮಾತು ನನ್ನ ಕಿವಿಗೆ ಬಿದ್ದಿತು. ಈ ಆಶ್ಚರ್ಯಕರವಾದ ಮಾತನ್ನು ಕೇಳಿದ ಮೇಲೆಯೇ ನನಗೆ ಸೀತೆಗೆ ಅಪಾಯವಿಲ್ಲವೆಂಬ ನಿಶ್ಚಯವುಂಟಾಯಿತು. ಆಗ ನನಗೆ ಕೆಲವು ಶುಭಶಕುನಗಳೂ ಕಂಡುಬಂದುವು. ನನ್ನ ಬಾಲವನ್ನು ಸುಡುವಾಗಲೂ ನನಗೆ ಸ್ವಲ್ಪವಾದರೂ ಕಾವು ತೋರದೆ, ನನ್ನ ಮನಸ್ಸಿನಲ್ಲಿಯೂ ಯಾವುದೋ ಒಂದು ವಿಧವಾದ ಉಲ್ಲಾಸವು ಕಾಣುತ್ತಿತ್ತು. ಸುವಾಸನೆಯುಳ್ಳ, ಮಂಗಳಕರವಾದ ವಾಯುವೂ ಬೀಸುತ್ತಿತ್ತು. ಸಿದ್ಧವಾದ ಫಲವನ್ನು ತೋರಿಸತಕ್ಕ ಈ ಶುಭಶಕುನಗಳಿಂದಲೂ, ಯಾವಾಗಲೂ ಸುಳ್ಳಾಗದ ಆ ಸಿದ್ಧಚಾರಣಾದಿಗಳ ಮಾತಿನಿಂದಲೂ, ಇನ್ನೂ ಕೆಲವು ಕಾರಣಗಳಿಂದಲೂ ನನ್ನ ಮನಸ್ಸಿಗೆ ಸಂಪೂರ್ಣವಾದ ಹರ್ಷವುಂಟಾಯಿತು. ಆಗಲೇ ನಾನು ಹಿಂತಿರುಗಿ ಸೀತೆಯಬಳಿಗೆ ಹೋಗಿ, ಅವಳ ಅನುಮತಿಯನ್ನು ಪಡೆದು ಇತ್ತಲಾಗಿ ಪ್ರಯಾಣಕ್ಕೆ ಸಿದ್ಧನಾದೆನು. ನಿಮ್ಮನ್ನು ನೋಡಬೇಕೆಂಬ ಆತುರವೂ ನನಗೆ ಮೇಲೆಮೇಲೆ ಹುಟ್ಟುತ್ತಿತ್ತು. ಅಲ್ಲಿದ್ದ ಅರಿಷ್ಟವೆಂಬ ಪರ್ವತವನ್ನೇರಿ ಈ ಕಡೆಗೆ ಹಾರಿಬರುವುದಕ್ಕೆ ಪ್ರಯತ್ನಿಸಿದೆನು. ಆಗಲೇ ನಾನು

ಚಂದ್ರಸೂರ್ಯಾದಿಗ್ರಹಗಳಿಗೂ, ವಾಯುದೇವನಿಗೂ, ಸಿದ್ಧಗಂಧರ್ವಾದಿಗಳಿಗೂ ಸಂಚಾರಯೋಗ್ಯಕರವಾದ ಅಂತರಿಕ್ಷಮಾರ್ಗದಲ್ಲಿ ಹಾರಿಬಂದು, ಇಲ್ಲಿ ನಿಮ್ಮನ್ನು ಕಂಡೆನು. ಎಲೈ ವೀರರೆ! ಶ್ರೀರಾಮನ ಪ್ರಭಾವದಿಂದಲೂ, ನಿಮ್ಮ ಅನುಗ್ರಹ ಬಲದಿಂದಲೂ, ನಾನು ನಮ್ಮ ಪ್ರಭುವಾದ ಸುಗ್ರೀವನ ಕಾರ್ಯಸಿದ್ಧಿಗಾಗಿ ಇಷ್ಟೆಲ್ಲ ವನ್ನೂ ಮಾಡಿ ಬಂದೆನು. ಅಲ್ಲಿ ನಾನು ನಡೆಸಿಬಂದ ಸಂಗತಿಗಳೆಲ್ಲವನ್ನೂ, ನಿಮಗೆ ಯಥಾಸ್ಥಿತವಾಗಿ ತಿಳಿಸಿರುವೆನು. ಇನ್ನು ಮಾಡಬೇಕಾದ ಕಾರ್ಯವೇ ನಾದರೂ ಉಳಿದಿದ್ದರೆ ಅದನ್ನು ಮುಂದೆ ನೀವು ಮಾಡಿಕೊಳ್ಳಬೇಕು" ಎಂದನು.

ಇಲ್ಲಿಗೆ ಐವತ್ತೆಂಟನೆಯ ಸರ್ಗವು.

---

{ ಹನುಮಂತನು ತಿರುಗಿ ಲಂಕೆಯ ವೃತ್ತಾಂತವನ್ನು ಮುಂದು ವರಿಸಿ, ತನ್ನ ಸಾಮರ್ಥ್ಯವನ್ನು ಹೇಳಿಕೊಂಡುದು. }

ಹೀಗೆ ವಾಯುಪುತ್ರನಾದ ಹನುಮಂತನು, ತಾನು ಲಂಕೆಯಲ್ಲಿ ಸೀತೆಯನ್ನು ನೋಡಿಬಂದ ವೃತ್ತಾಂತಗಳೆಲ್ಲವನ್ನೂ ಹೇಳಿ, ತಿರುಗಿ ಮುಂದಿನ ವಿಷಯವನ್ನಾ ರಂಭಿಸಿ, ಅಲ್ಲಿದ್ದ ವಾನರರನ್ನು ಕುರಿತು, "ಎಲೈ ಮಿತ್ರರೆ! ಸೀತೆಯೋ ಮಹಾ ಶೀಲವತಿಯು! ಪತಿವ್ರತಾಶಿರೋಮಣಿಯು! ಆದುದರಿಂದ ಶ್ರೀರಾಮನ ಪ್ರಯ ತ್ನವೂ, ಸುಗ್ರೀವನ ಉತ್ಸಾಹವೂ ಸಫಲಗಳಾಗುವುವು. ನನ್ನ ಮನಸ್ಸೂ ಮೊದ ಲಿಂದಲೇ ಆಕೆಯಲ್ಲಿ ಅತ್ಯಂತ ಭಕ್ತಿವಿಶಿಷ್ಟವಾಗಿರುವುದು. ಆಹಾ! ರಾಕ್ಷಸೇಶ್ವರ ನಾದ ಆ ರಾವಣನ ಮಹಿಮೆಯಾದರೂ ಸಾಮಾನ್ಯವಲ್ಲ! ಅವನು ತನ್ನ ತಪೋ ಬಲದಿಂದಲೇ ಸಮಸ್ತಲೋಕಗಳನ್ನೂ ಧರಿಸಬಲ್ಲನು ಕೋಪವುಂಟಾದರೆ ಇವನ್ನು ದಹಿಸುವುದಕ್ಕೂ ಶಕ್ತನು. ಯಾವ ವಿಧದಿಂದ ನೋಡಿದರೂ ಅವನು ಬಹಳ ಮೇಲಾದ ತಪಸ್ವಿಯೇ! ಅತನು ಮಹಾಪತಿವ್ರತೆಯಾದ ಸೀತೆಯನ್ನು ಕೈಯಿಂದ ಮುಟ್ಟಿದರೂ, ಅವನ ತಪೋಬಲವೇ ಅವನನ್ನು ರಕ್ಷಿಸುತ್ತಿರುವುದೆಂದು ತೋರು ವುದು. ಆ ಸೀತೆಯನ್ನು ಕೈಯಿಂದ ಮುಟ್ಟಿದಾಗ ಅವಳಿಗೆ ಕೋಪವುಂಟಾದರೆ, ಅವಳು ಮಾಡುವ ಕಾರ್ಯವನ್ನು ಅಗ್ನಿಜ್ವಾಲೆಯೂ ಮಾಡಲಾರದು! ಆಕೆಯು

ತನ್ನ ಪತಿಯ ಕೈಯಿಂದಲೇ ರಾವಣನನ್ನು ಕೊಲ್ಲಿಸಬೇಕೆಂಬ [1] ವೀರಪತ್ನಿಯರ ಧರ್ಮವನ್ನವಲಂಬಿಸಿ, ರಾವಣನಮೇಲೆ ಕೋಪಗೊಳ್ಳದಿರುವಳು. ಆದರಿಂದಲೇ ಇದುವರೆಗೆ ರಾವಣನೂ ಜೀವದಿಂದಿರುವನು. ಅಲ್ಲಿನ ಕಾರ್ಯಸ್ಥಿತಿಯಂತೂ ಹೀಗಿರುವುದು. ಈಗಲೂ ನನಗೆ ತೋರುವುದೇನೆಂದರೆ ಈ ಜಾಂಬವಂತನೇ ಮೊದಲಾದ ವಾನರೋತ್ತಮರನ್ನೂ, ನಿಮ್ಮನ್ನೂ ಒಪ್ಪಿಸಿ, ನಿಮ್ಮೆಲ್ಲರೊಡನೆ ನಾನೂ ತಿರುಗಿ ಲಂಕೆಗೆ ಹೋಗಿ ಈಗಲೂ ಆಕೆಯನ್ನು ಕರೆತಂದು, ಅವಳೊಡನೆಯೇ ರಾಜಪುತ್ರರಾದ ಆ ರಾಮಲಕ್ಷ್ಮಣರನ್ನು ನೋಡುವುದು ಯುಕ್ತವೆಂದು ತೋರಿರುವುದು. ಎಲೈ ವಾನರರೇ! ನಾನೊಬ್ಬನೇ ಲಂಕೆಯಲ್ಲಿರುವ ಸಮಸ್ತರಾಕ್ಷಸರನ್ನೂ, ಮಹಾ ಬಲಾಢ್ಯನಾದ ರಾವಣನನ್ನೂ ನನ್ನ ವೇಗದಿಂದ ಕೊಲ್ಲಬಲ್ಲೆನು. ಇನ್ನು ಪರಾಕ್ರಮಿಗಳಾಗಿಯೂ, ಬಲಾಢ್ಯರಾಗಿಯೂ, ಬುದ್ಧಿವಂತರಾಗಿಯೂ, ಶಸ್ತ್ರಾಸ್ತ್ರಗಳಲ್ಲಿ ನಿಪುಣರಾಗಿಯೂ ಶೂರರಾಗಿಯೂ, ಜಯಕಾಂಕ್ಷಿಗಳಾಗಿಯೂ ಇರುವ ನೀವೂ ನನ್ನ ಸಹಾಯಕ್ಕಿದ್ದರೆ ಮತ್ತೆ ಹೇಳಬೇಕಾದುದೇನು! ನಾನೊಬ್ಬನೇ ಯುದ್ಧದಲ್ಲಿ ರಾವಣನನ್ನೂ, ಅವನ ಸೈನ್ಯಗಳನ್ನೂ ಅವನ ಪುತ್ರಮಿತ್ರಪರಿಜನಾದಿಗಳೆಲ್ಲವನ್ನೂ ಕೊಂದುಬರಬಹುದು. ಆ ಇಂದ್ರಜಿತ್ತೇ ಮತ್ತೊಮ್ಮೆ ಯುದ್ಧಕ್ಕೆ ಬಂದು ಕಣ್ಣಿಂದ ನೋಡುವುದಕ್ಕೂ ಅಸಾಧ್ಯವಾದ ಬ್ರಹ್ಮಾಸ್ತ್ರವನ್ನಾಗಲಿ, ಐಂದ್ರಾಸ್ತ್ರವನ್ನಾಗಲಿ, ರೌದ್ರಾಸ್ತ್ರವನ್ನಾಗಲಿ, ವಾಯವ್ಯಾಸ್ತ್ರವನ್ನಾಗಲಿ, ವಾರುಣಾಸ್ತ್ರವನ್ನಾಗಲಿ, ಬೇರೆಯಾವ ಮಹಾಸ್ತ್ರಗಳನ್ನಾಗಲಿ, ನನ್ನ ಮೇಲೆ ಪ್ರಯೋಗಿಸಿದರೂ, ಅವೆಲ್ಲವನ್ನೂ ನಾನು ವ್ಯರ್ಥಮಾಡಿ ಸಮಸ್ತ ರಾಕ್ಷಸರನ್ನೂ ನಿರ್ಮೂಲಮಾಡುವೆನು. ಈಗಲೂ ನೀವು ಅನುಮತಿಸಿದ ಪಕ್ಷದಲ್ಲಿ ನಾನೇ ನನ್ನ ವೀರ್ಯದಿಂದ ರಾವಣನನ್ನೂ ಕೊಂದುಬರುವೆನು. ಎಲೈ ವಾನರೋತ್ತಮರೆ! ನಾನು ಯುದ್ಧದಲ್ಲಿ ಶತ್ರುಗಳಮೇಲೆ ಎಡೆಬಿಡದೆ ಕಲ್ಮಳೆಯನ್ನು ಕರೆಯುತ್ತಿದ್ದರೆ ದೇವತೆಗಳಾದರೂ ಬದುಕಿಹೋಗಲಾರರು. ಇನ್ನು ಆ ರಾಕ್ಷಸರ ಪಾಡನ್ನು ಕೇಳಬೇಕೇ! ನನ್ನ ವಿಷಯವೂ ಹಾಗಿರಲಿ! ಸಮುದ್ರವಾದರೂ ಎಲ್ಲೆಯನ್ನು ಮೀರಬಹುದು! ಮಂದರಪರ್ವತವಾದರೂ ಚಲನಹೊಂದಬಹುದು! ಈ ಜಾಂಬವಂತನನ್ನು ಮಾತ್ರ ಎಂತಹ ಶತ್ರುಸೈನ್ಯವಾದರೂ ಎಷ್ಟುಮಾತ್ರವೂ ಕದಲಿಸಲಾರದು! ಮತ್ತು ವೀರನಾದ

---

1. ತನ್ನ ಪತಿಯ ಮೂಲವಾಗಿಯೇ ಶತ್ರುಗಳನ್ನು ಕೊಲ್ಲಿಸಿ ಜಗತೋರಿಸಿಕೊಳ್ಳಬೇಕಾದುದು ವೀರಪತ್ನಿಯರ ಧರ್ಮವು. ಹಾಗೆ ಮಾಡದೆ ತಾನಾಗಿಯೇ ಸ್ವತಂತ್ರಿಸಿದ ಪಕ್ಷದಲ್ಲಿ ಪತಿಯನ್ನು ಅನಾದರಿಸಿದಂತಾಗುವುದೆಂದು ತಿಳಿದು, ಸೀತೆಯು ತಾನಾಗಿಯೇ ರಾವಣನನ್ನು ಕೊಲ್ಲುವುದಕ್ಕೆ ಪ್ರಯತ್ನಿಸಲಿಲ್ಲವೇ ಹೊರತು, ತನ್ನಿಂದಾಗದೆ ಬಿಟ್ಟವಳಲ್ಲವೆಂಬುದು ಭಾವವು.

ಈ ವಾಲಿಪುತ್ರನೊಬ್ಬನೇ ಸಮಸ್ತ ರಾಕ್ಷಸಸಮೂಹವನ್ನೂ, ಆಯಾ ಸೈನ್ಯದ ಪ್ರಮುಖರಾಕ್ಷಸರೊಡನೆ ಕೊಲ್ಲಬಲ್ಲನು. ಮಹಾತ್ಮನಾದ, ಈ ಪನಸನ ಮತ್ತು ಈ ನೀಲನ ತೊಡೆಯ ವೇಗಕ್ಕೆ ಮಂದರಪರ್ವತವಾದರೂ ಒಡೆದು ಹೋಗುವುದು. ಎಲೈ ವಾನರರೇ! ದೇವತೆಗಳಲ್ಲಿಯಾಗಲಿ, ವಾನರರಲ್ಲಿಯಾಗಲಿ, ನಾಗ ಗಂಧರ್ವ ಯಕ್ಷ ಪನ್ನಗ ಚಾರಣರಲ್ಲಿಯಾಗಲಿ, ಈ ಮೈಂದದ್ವಿವಿದರೊಡನೆ ಯುದ್ಧಕ್ಕೆ ನಿಲ್ಲುವ ವೀರನೊಬ್ಬನಾದರೂ ಉಂಟೆ? ಈ ವಾನರೋತ್ತಮರಿಬ್ಬರೂ ಅಶ್ವಿನೀ ದೇವತೆಗಳಿಂದ ಹುಟ್ಟಿದವರು. ಮಹಾಮಹಿಮೆಯುಳ್ಳವರು. ಯುದ್ಧದಲ್ಲಿ ಇವರೊಡನೆ ಇದಿರಾಗಿ ನಿಂತು ಹೋರಾಡುವ ವೀರನೊಬ್ಬನಾದರೂ ಇಲ್ಲವು. ಇವರಿಬ್ಬರೂ ಬ್ರಹ್ಮನ ವರಬಲದಿಂದ ಬಹಳವಾಗಿ ಕೊಬ್ಬಿದವರು. ಇತರರಿಗೆ ದುರ್ಲಭವಾದ ಅಮೃತವನ್ನೂ ಭುಜಿಸಿಬಂದವರು. ಸಮಸ್ತವಾನರರಿಗೂ ಮೇಲೆನಿಸಿಕೊಂಡವರು. ಪೂರ್ವದಲ್ಲಿ ಸರ್ವಲೋಕಪಿತಾಮಹನಾದ ಬ್ರಹ್ಮನು, ಇವರ ತಂದೆಗಳಾದ ಅಶ್ವಿನೀದೇವತೆಗಳ ಸಂತೋಷಕ್ಕಾಗಿ ಇವರಿಗೆ ಯಾರಿಂದಲೂ ಮರಣವಿಲ್ಲದಂತೆ ವರವನ್ನೂ ಕೊಟ್ಟಿರುವನು. ಆ ವರದ ಬಲದಿಂದಲೇ ಈ ಕಪಿವೀರರಿಬ್ಬರೂ ಸಮಸ್ತ ದೇವಸೈನ್ಯವನ್ನೂ ಕದಲಿಸಿ, ಅಮೃತವನ್ನು ಕುಡಿದು ಬಂದಿರುವರು. ಉಳಿದ ವಾನರರೆಲ್ಲರೂ ಹಾಗಿರಲಿ! ಇವರಿಬ್ಬರೇ ಆ ಲಂಕೆಯನ್ನು ಅದರಲ್ಲಿರತಕ್ಕ ಚತುರಂಗಸೈನ್ಯದೊಡನೆ ಧ್ವಂಸಮಾಡಬಲ್ಲರು. ಇದುವರೆಗೇ ನಾನು ಆ ಲಂಕೆಯೆಲ್ಲವನ್ನೂ ಸುಟ್ಟು ಬೂದಿಮಾಡಿ ಬಂದಿರುವೆನು. ಅಲ್ಲಿನ ಬೀದಿಬೀದಿಗಳಲ್ಲಿಯೂ ನನ್ನ ಹೆಸರನ್ನು ಉದ್ಘೋಷಿಸಿರುವೆನು. ನನ್ನ ಹೆಸರನ್ನು ಮಾತ್ರವೇ ಅಲ್ಲದೆ, ಅಲ್ಲಲ್ಲಿ ರಾಕ್ಷಸರು ಗುಂಪುಕೂಡಿದ ಕಡೆಗಳಲ್ಲೆಲ್ಲಾ ನಾನು ಅವರ ಮುಂದೆ ಕೈಯೆತ್ತಿ ನಿಂತು "ಅತಿಬಲಾಢ್ಯನಾದ ರಾಮನಿಗೆ ಜಯವು! ಮಹಾಬಲವುಳ್ಳ ಲಕ್ಷ್ಮಣನಿಗೆ ಜಯವು! ರಾಮನಿಂದ ರಕ್ಷಿತನಾದ ಸುಗ್ರೀವರಾಜನಿಗೆ ಜಯವು. ಕೋಸಲೇಂದ್ರನಾದ ಆ ರಾಮಚಂದ್ರನಿಗೆ ನಾನೇ ದಾಸನು! ವಾಯುದೇವನ ಮಗನು. ನನಗೆ ಹನುಮಂತನೆಂದು ಹೆಸರು" ಎಂದು ನನ್ನ ಖ್ಯಾತಿಯನ್ನೂ ಸಾರಿ ಬಂದಿರುವೆನು. ಇದರಿಂದ ಆ ಲಂಕೆಯ ಯಾವಕಡೆಯಲ್ಲಿ ನೋಡಿದರೂ ನನ್ನ ಹೆಸರೇ ಹೆಸರಾಗಿರುವುದು. ಎಲೈ ವಾನರರೆ! ದುರಾತ್ಮನಾದ ರಾವಣನಿಗೆ ಸೇರಿದ ಅಶೋಕವನದ ನಡುವೆ ಪತಿವ್ರತೆಯಾದ ಆ ಸೀತೆಯು ಶಿಂಶುಪಾವೃಕ್ಷದ ಕೆಳಗೆ ದುಃಖದಿಂದ ಕುಳಿತಿರುವಳು! ಸಂಕಟದಿಂದ ಕೊರಗಿ ಕೃಶಳಾಗಿರುವಳು! ಅನೇಕಘೋರ ರಾಕ್ಷಸಿಯರು ಆಕೆಯ ಸುತ್ತಲೂ ಮುತ್ತಿ ನಿಂತಿರುವರು. ಹೀಗೆ ರಾಕ್ಷಸಿಯರಿಂದ ಪರಿವೃತೆಯಾಗಿ, ಸಂತಾಪದಿಂದ ಕೃಶಳಾದ ಆಕೆಯು ಮೋಡಮುಚ್ಚಿದ ಚಂದ್ರ

ಕಳೆಯಂತಿರುವಳು. ಮದೋನ್ಮತ್ತನಾದ ರಾವಣನನ್ನು ಮನಸ್ಸಿನಿಂದಲಾದರೂ ಸ್ಮರಿಸದೆ, ಎಡೆಬಿಡದೆ ರಾಮಧ್ಯಾನದಲ್ಲಿರುವ ಆಕೆಯ ಸ್ಥಿತಿಯನ್ನು ನೋಡಿದರೆ
೧ ಎಂತವರಿಗೂ ಮನಸ್ಸು ಕರಗುವುದು. ಆ ವಿದೇಹರಾಜಪುತ್ರಿಯು ರಾವಣನಲ್ಲಿ ಸೆರೆ ಬಿದ್ದವಳಾದರೂ, ನಹುಷನಲ್ಲಿ ಸೆರೆಸಿಕ್ಕಿದ ಶಚಿಯು ದೇವೇಂದ್ರನನ್ನು ಹೇಗೋ ಹಾಗೆ ಸರ್ವವಿಧದಿಂದಲೂ ರಾಮನನ್ನೇ ಚಿಂತಿಸುತ್ತ, ಬೇರೊಂದರ ಸ್ಮರಣೆಯೇ ಇಲ್ಲದೆ ಸಂಕಟದಿಂದ ಕೊರಗುತ್ತಿರುವಳು. ಒಂದೇ ಬಟ್ಟೆಯನ್ನುಟ್ಟು, ಕೊಳೆಹಿಡಿದ ಮೈಯುಳ್ಳವಳಾಗಿ ಸಂಕಟದಿಂದ ಕೊರಗುತ್ತ ಅನವರತವೂ ತನ್ನ ಪತಿಯ ಕ್ಷೇಮವನ್ನೇ ಬಯಸುತ್ತಿರುವಳು. ಎಲೈ ವಾನರರೆ! ವಿಕೃತಾಕಾರವುಳ್ಳ ಅನೇಕ ರಾಕ್ಷಸಿಯರು ಆಕೆಯನ್ನು ಸುತ್ತಿನಿಂತು, ಆ ಪ್ರಮದಾವನದಲ್ಲಿ ಅವಳನ್ನು ಬಾರಿ ಬಾರಿಗೂ ಹೆದರಿಸುತ್ತಿರುವಾಗ ನಾನು ಅವಳನ್ನು ಕಂಡೆನು. ಆಕೆಯು ತನ್ನ ತಲೆ ಕೂದಲನ್ನು ಒಂದೇ ಜಡೆಯಾಗಿ ಬೆಳೆಬಿಟ್ಟು, ದುಃಖದಿಂದ ಕೃಶಳಾಗಿ ಎಡೆಬಿಡದೆ ತನ್ನ ಪತಿಯನ್ನೇ ಚಿಂತಿಸುತ್ತಿರುವಳು. ಬರೀನೆಲದಮೇಲೆ ಮಲಗುತ್ತಿರುವಳು. ಹಿಮಗಾಲದ ತಾವರೆಬಳ್ಳಿಯಂತೆ ಬಹಳವಾಗಿ ಬಣ್ಣಗುಂದಿರುವಳು. ರಾವಣನು ಆಕೆಯನ್ನು ವಶಪಡಿಸಿಕೊಳ್ಳುವುದಕ್ಕಾಗಿ ಎಷ್ಟೆಷ್ಟೋ ಪ್ರಲೋಭನವಾಕ್ಯಗಳನ್ನಾಡಿದರೂ ಆಕೆಯಲ್ಲಿ ಅವೆಲ್ಲವೂ ನಿಷ್ಪ್ರಯೋಜನಗಳಾದುವು. ಕೊನೆಗೆ ಅವಳು ಆ ದುರಾತ್ಮನ ಹಿಂಸೆಯನ್ನು ತಡೆಯಲಾರದೆ ಆತ್ಮಹತ್ಯೆಗಾಗಿಯೂ ನಿಶ್ಚಯಿಸಿಕೊಂಡಿದ್ದಳು. ಈ ಸಂದರ್ಭದಲ್ಲಿ ನಾನು ಅವಳಿಗೆ ಎಷ್ಟೋ ಕಷ್ಟದಿಂದ ನನ್ನ ವೃತ್ತಾಂತವನ್ನು ತಿಳಿಸಿ ನಂಬಿಕೆಯನ್ನು ಹುಟ್ಟಿಸಿದೆನು. ಹಾಗೆಯೇ ನಾನು ಅವಳೊಡನೆ ಸಂಭಾಷಿಸಿ, ರಾಮನ ಪ್ರಯತ್ನವೇ ಮೊದಲಾದ ಇಲ್ಲಿನ ವೃತ್ತಾಂತವೆಲ್ಲವನ್ನೂ ತಿಳಿಸಿದೆನು. ರಾಮಸುಗ್ರೀವರಿಬ್ಬರಿಗೂ ಸ್ನೇಹವುಂಟಾದುದನ್ನು ಕೇಳಿ ಆಕೆಗೆ ಸಂತೋಷವು ಹುಟ್ಟಿತು. ಆ ಸೀತೆಯಲ್ಲಿರುವ ಸದಾಚಾರವೂ, ಆಕೆಯ ಪತಿಭಕ್ತಿಯೂ ಸರ್ವೋತ್ತಮನಾದುದು. ಇಂತಹ ಮಹಾಮಹಿಮೆಯುಳ್ಳ ಆ ಸೀತೆಯು, ತಾನೇ ರಾವಣನನ್ನು ಕೊಲ್ಲದಿರುವುದಕ್ಕೆ ಕಾರಣವೇನೆಂದು ನೀವು ಕೇಳಬಹುದು. ಆ ರಾವಣನು ಅಷ್ಟು ಮಹಾಪರಾಧಿಯಾಗಿದ್ದರೂ ಅವನು ಮಹಾತ್ಮನಾದುದರಿಂದ ಅವನಿಗೆ ಶಾಪರೂಪವಾದ ದುರ್ಮರಣವು ಸಂಭವಿಸಲಾರದು. ಆದುದರಿಂದ ಆ ರಾವಣನವಧೆಕ್ಕೆ ರಾಮನು ನಿಮಿತ್ತಮಾತ್ರವಾಗಿ ನಿಂತಿರುವನು. ಸೀತೆಯೇ ಪ್ರಧಾನಕಾರಣವು. ಸೀತೆಯು ಸಹಜವಾಗಿಯೇ ಸೂಕ್ಷ್ಮವಾದ ದೇಹವುಳ್ಳವಳು. ಇದರಮೇಲೆ ಪತಿವಿಯೋಗದಿಂದ ಮತ್ತಷ್ಟು, ಕೃಶಳಾಗಿರುವಳು! ಪಾಡ್ಯದಿನದಲ್ಲಿ ಓದುವ ಸ್ವಭಾವವುಳ್ಳವನ ವಿದ್ಯೆಯು, ಕ್ರಮಕ್ರಮವಾಗಿ ಕರಗುವಂತೆ ಕರಗುತ್ತಿರು

ವಳು. ಎಲೈ ಮಹಾತ್ಮರೆ! ಸೀತೆಯಂತೂ ಈ ಸ್ಥಿತಿಯಲ್ಲಿ ಅನವರತವೂ ದುಃಖದಿಂದ ತಪಿಸುತ್ತಿರುವಳು. ಇದಕ್ಕೆ ಮುಂದೆ ಯಾವವಿಧದಲ್ಲಿ ಪ್ರತೀಕಾರವನ್ನು ಮಾಡಬೇಕೋ, ಅದನ್ನು ನೀವು ಯೋಚಿಸಿರಿ" ಎಂದನು.

ಇಲ್ಲಿಗೆ ಐವತ್ತೊಂಬತ್ತನೆಯ ಸರ್ಗವು.

---

ಅಂಗದನೂ ಹನುಮಂತನ ಮಾತನ್ನನುಮೋದಿಸಿ, ತಾನೇ ಸೀತೆಯನ್ನು ಕರೆತಂದು ರಾಮನ ಬಳಿಗೆ ಸೇರಿಸಬೇಕೆಂದು ಹೇಳಲು, ಜಾಂಬವಂತನು ಅವನ ಮಾತನ್ನು ನಿವಾರಿಸಿ ಸಮಾಧಾನಹೇಳಿದುದು.

ಹನುಮಂತನ ಮಾತನ್ನು ಕೇಳಿ ಅಂಗದನು "ಎಲೈ ವಾನರರೆ! ನಾವು ಸೀತೆಯನ್ನು ನೋಡಿಬಂದಮೇಲೆ ಅವಳನ್ನು ಬಿಟ್ಟು, ರಾಮನಬಳಿಗೆ ಹೋಗುವುದು ಮಾತ್ರ ಎಂದಿಗೂ ಯುಕ್ತವಲ್ಲ. ನಾವೆಲ್ಲರೂ ಇಷ್ಟು ಪ್ರಸಿದ್ಧಪರಾಕ್ರಮವುಳ್ಳವರಾಗಿರುವಾಗಲೂ, ರಾಮನಮುಂದೆ ನಿಂತು 'ನಾವು ಸೀತೆಯನ್ನು ನೋಡಿ ಬಂದೆವೇ ಹೊರತು ಅವಳನ್ನು ಕರೆತರಲಿಲ್ಲ' ವೆಂದು ಹೇಳುವುದು ನಮ್ಮ ಮಾನಕ್ಕೆ ಕಡಿಮೆಯೆಂದೇ ನನಗೆ ತೋರುವುದು. ಎಲೈ, ವಾನರೋತ್ತಮರೆ! ದೇವತೆಗಳಲ್ಲಿಯಾಗಲಿ, ದಾನವರಲ್ಲಿಯಾಗಲಿ, ಇತರ ಲೋಕಗಳಲ್ಲಿಯಾಗಲಿ ಹಾರಿಹೋಗುವುದರಲ್ಲಿಯೂ ಪರಾಕ್ರಮದಲ್ಲಿಯೂ ನಮಗೆ ಸಮಾನರೊಬ್ಬರೂ ಇಲ್ಲ. ಇದರಮೇಲೆ ಮೊದಲೇ ಹನುಮಂತನು ಲಂಕೆಯಲ್ಲಿ ಅನೇಕ ವೀರರಾಕ್ಷಸರನ್ನು ಕೊಂದೂ ಬಂದಿರುವನು. ಇನ್ನು ನಾವು ನಡೆಸಬೇಕಾದ ಕಾರ್ಯವೇನಿರುವುದು? ಸೀತಾದೇವಿಯನ್ನು ಕರೆದುಕೊಂಡು ಹೋಗುವುದೊಂದೇ ಅಲ್ಲವೆ? ಅದನ್ನೂ ನಡೆಸಿಯೇ ಬಿಡಬೇಕು" ಎಂದನು. ವಾನರೋತ್ತಮನಾದ ಜಾಂಬವಂತನಿಗೆ ಅಂಗದನು ಹೇಳಿದ ಈ ಮಾತನ್ನು ಕೇಳಿದೊಡನೆ ಅವನ ದೃಢವಾದ ಸಂಕಲ್ಪವನ್ನು ನೋಡಿ ಸಂತೋಷಹುಟ್ಟಿತು. ಆದರೂ ಅವನು ಕಾರ್ಯಾಕಾರ್ಯಗಳನ್ನು ಬಲ್ಲ ವಿವೇಕಿಯಾದುದರಿಂದ, ಆ ಅಂಗದನನ್ನು ಕುರಿತು ಅರ್ಥಯುಕ್ತವಾದ ಮಾತಿನಿಂದ "ಎಲೈ ಯುವರಾಜನೆ! ನಿನ್ನ ಆಲೋಚನೆಯೇನೋ ನನಗೂ ಯುಕ್ತವಾಗಿಯೇ ತೋರುವುದು. ಈ ಕಾರ್ಯಕ್ಕೆ ನಾವು ಸಮರ್ಥರೆಂಬುದೂ

ನಿಜವು. ಆದರೂ ನಾವು ಶ್ರೀರಾಮನ ಅಜ್ಞೆಯನ್ನನುಸರಿಸಿಯೇ ಯಾವ ಕಾರ್ಯ ವನ್ನಾದರೂ ನಡೆಸಬೇಕಲ್ಲವೆ? ಅದುದರಿಂದ ಮೊದಲು ಆ ರಾಮನ ಮನಸ್ಸು ಹೇಗಿರುವುದೋ ಅದನ್ನು ತಿಳಿದು, ಅವನ ಅಭಿಪ್ರಾಯವನ್ನನುಸರಿಸಿಯೇ ನಾವು ಮುಂದಿನ ಕಾರ್ಯವನ್ನು ಮಾಡುವುದುತ್ತಮವು" ಎಂದನು.

ಇಲ್ಲಿಗೆ ಅರುವತ್ತನೆಯ ಸರ್ಗವು.

---

ಹನುಮಂತಾದಿ ವಾನರರೆಲ್ಲರೂ, ಹಿಂತಿರುಗಿ ರಾಮನ ಬಳಿಗೆ ಪ್ರಯಾಣಹೊರಟು, ನಡುದಾರಿಯಲ್ಲಿ ಮಧುವನವನ್ನು ಪ್ರವೇಶಿಸಿ, ಅಲ್ಲಿ ಅಂಗದನ ಅನುಮತಿಯಿಂದ ಜೇನನ್ನು ಕುಡಿಯುತ್ತಿರಲು, ಅಲ್ಲಿ ಕಾವಲಿದ್ದ ದಧಿಮುಖನು ಅವರನ್ನು ಅಕ್ಷೇಪಿಸಿ ತಡೆದುದು.

ಜಾಂಬವಂತನು ಹೇಳಿದ ಈ ಮಾತನ್ನು ಕೇಳಿ ಹನುಮಂತನೂ, ಅಂಗದನೇ ಮೊದಲಾದ ಇತರ ವಾನರರೂ, ಅವನ ಮಾತಿಗೊಪ್ಪಿ ಸುಮ್ಮನಾದರು. ಆಗಲೇ ಬಲಾಢ್ಯರಾದ ಆ ವಾನರರೆಲ್ಲರೂ ಹನುಮಂತನನ್ನು ಮುಂದಿಟ್ಟುಕೊಂಡು ಮಹೇಂದ್ರಪರ್ವತವನ್ನು ಬಿಟ್ಟು ಮೇಲೆ ಹಾರಿದರು. ಮೇರುಮಂದರಪರ್ವತಗಳಂತೆಯೂ, ಮದಿಸಿದ ಮಹಾಗಜಗಳಂತೆಯೂ, ದೊಡ್ಡದೊಡ್ಡದೇಹವುಳ್ಳ ಆ ವಾನರ ರೆಲ್ಲರೂ ಒಟ್ಟಾಗಿ ಆಕಾಶವನ್ನೇ ಮರೆಸುವಂತೆ ಸಾಗಿ ಬರುತ್ತಿದ್ದರು. ಆ ವಾನರರಲ್ಲಿ ಒಬ್ಬೊಬ್ಬರೂ, ಸಮಸ್ತಭೂತಗಳಿಗೂ ಪೂಜ್ಯನಾಗಿಯೂ, ಧೀರನಾಗಿಯೂ ಬಲಾಢ್ಯನಾಗಿಯೂ, ವೇಗಶಾಲಿಯಾಗಿಯೂ ಇರುವ ಆ ಹನುಮಂತನನ್ನೇ ಎವೆ ಮುಚ್ಚದೆ ನೋಡುತ್ತಾ, ತಮ್ಮ ದೃಷ್ಟಿಗಳಿಂದಲೇ ಅತನನ್ನೆತ್ತಿತರುವಂತೆ ಕಾಣು ತ್ತಿದ್ದರು. ಆ ವಾನರರೊಬ್ಬೊಬ್ಬರೂ ತಾವೇ ಕಾರ್ಯವನ್ನು ಸಾಧಿಸಿ, ವಿಶೇಷ ವಾದ ಕೀರ್ತಿಯನ್ನು ಪಡೆಯಬೇಕೆಂಬ ಉದ್ದೇಶವುಳ್ಳವರಾದುದರಿಂದ, ತಾವು ಬಂದಕಾರ್ಯವನ್ನಿ ಡೇರಿಸಿಕೊಂಡು, ಆ ಕಾರ್ಯಸಿದ್ಧಿಯಿಂದ ಇತರ ವಾನರರಿಗಿಂತಲೂ ತಾವೇ ಮೇಲೆನಿಸಿಕೊಂಡವರು. ಅವರಲ್ಲಿ ಒಬ್ಬೊಬ್ಬರೂ ರಾಮನಿಗೆ ಸೀತಾದರ್ಶನ ವೆಂಬ ಪ್ರಿಯವಾಕ್ಯವನ್ನು ಹೇಳುವುದರಲ್ಲಿ ಅತುರವುಳ್ಳವರು. ಒಬ್ಬೊಬ್ಬರೂ ರಾಮನಿಗೆ ಪ್ರತ್ಯುಪಕಾರವನ್ನು ಮಾಡಬೇಕೆಂಬ ನಿಶ್ಚಯದಿಂದ ಉತ್ಸಾಹ ಪೂರ್ಣವಾದ ಮನಸ್ಸುಳ್ಳವರು! ಒಬ್ಬೊಬ್ಬರೂ ಯುದ್ಧೋತ್ಸಾಹವುಳ್ಳವರು! ಇಂತಹ ವಾನರರೆಲ್ಲರೂ ಆ ಮಹೇಂದ್ರಪರ್ವತವನ್ನು ಬಿಟ್ಟು ಆಕಾಶತುರದಿಂದ

ಆಕಾಶದಲ್ಲಿ ಹಾರಿ ಬರುತ್ತಿರುವಾಗ, ನಡುದಾರಿಯಲ್ಲಿ ಅವರಿಗೆ ಒಂದು ತೋಟವು ಕಾಣಿಸಿತು. ಆ ತೋಟವಾದರೋ ಬಗೆಬಗೆಯ ಗಿಡಬಳ್ಳಿಗಳಿಂದ ತುಂಬಿ, ದೇವೇನ್ದ್ರನ ನಂದನವನದಂತೆ ಕಾಣುತ್ತಿರುವುದು. ಅದಕ್ಕೆ ಮಧುವನ ವೆಂದು ಹೆಸರು. ಸುಗ್ರೀವನಿಂದ ರಕ್ಷಿತವಾದ ಆ ವನವನ್ನು ಪ್ರವೇಶಿಸಿ ನೋಡುವುದಕ್ಕಾದರೂ ಯಾವಪ್ರಾಣಿಗಳಿಗೂ ಸಾಧ್ಯವಿಲ್ಲ. ಅದು ಸಮಸ್ತಭೂತ ಗಳ ಮನಸ್ಸನ್ನೂ ಆಕರ್ಷಿಸುವಂತಿರುವುದು. ಮಹಾತ್ಮನಾಗಿಯೂ, ಕಪಿಶ್ರೇಷ್ಠ ನಾಗಿಯೂ ಇರುವ ದಧಿಮುಖನೆಂಬ ವಾನರನು ಅದಕ್ಕೆ ಕಾವಲಾಗಿರುವನು. ಆ ದಧಿಮುಖನು ಸುಗ್ರೀವನಿಗೆ ಸೋದರಮಾವನು. ಸುಗ್ರೀವನಿಗೆ ಬಹಳಪ್ರೀತಿ ಪಾತ್ರವಾಗಿಯೂ, ವಿಸ್ತಾರವಾಗಿಯೂ ಇರುವ ಆ ತೋಟವನ್ನು ಕಂಡೊಡನೆ, ವಾನರರೆಲ್ಲರೂ, ಅವರಲ್ಲಿ ಪ್ರವೇಶಿಸಿ, ಅಲ್ಲಿದ್ದ ಜೇನನ್ನು ಕುಡಿಯಬೇಕೆಂದು ಆತುರ ಪಡುತ್ತಿದ್ದರು. ಮಧುವಿನಂತೆ ಪಿಂಗಳದೇಹವುಳ್ಳ ಆ ಕಪಿಗಳೆಲ್ಲರೂ, ಆ ಮಧುವನ ವನ್ನು ಕಂಡು ಪರಮಸಂತೋಷದಿಂದ, ಯುವರಾಜನಾದ ಅಂಗದನ ಬಳಿಗೆ ಹೋಗಿ, ತಮಗೆ ಅಲ್ಲಿನ ಜೇನನ್ನು ಕೊಡಿಸಬೇಕೆಂದು ಪ್ರಾರ್ಥಿಸಿದರು. ಆಗ ಅಂಗ ದನು ಜಾಂಬವಂತನೇ ಮೊದಲಾದ ವೃದ್ಧವಾನರರಿಗೆ ಈ ವಿಷಯವನ್ನು ತಿಳಿಸಿ ಅವರ ಅನುಜ್ಞೆಯನ್ನು ಪಡೆದು, ಆ ವಾನರರನ್ನು ಅಲ್ಲಿನ ಮಧುಪಾನಕ್ಕಾಗಿ ಅನುಮತಿಸಿದನು. ಮೊದಲೇ ಆ ವಾನರರೆಲ್ಲರೂ ಸೀತೆಯನ್ನು ನೋಡಿ ಬಂದ ಸಂತೋಷದಿಂದ ಉಬ್ಬಿಹೋಗಿದ್ದರು. ಇದರಮೇಲೆ ಅಂಗದನು ತಮಗೆ ಆ ತೋಟದಲ್ಲಿ ಮಧುಪಾನಕ್ಕೂ ಅನುಮತಿಯನ್ನು ಕೊಟ್ಟಮೇಲೆ ಅವರ ಸಂತೋಷಕ್ಕೆ ಪಾರವುಂಟೆ? ಅಂಗದನೂ ಅವರನ್ನು ಯಥೇಷ್ಟವಾಗಿ ಮಧು ವನ್ನು ಕುಡಿಯುವಂತೆ ಮೇಲೆಮೇಲೆ ಪ್ರೇರಿಸುತ್ತಿದ್ದನು. ಆ ಸಂತೋಷದಲ್ಲಿ ಅಲ್ಲಿದ್ದ ಕಪಿಗಳೆಲ್ಲರೂ, ತಮ್ಮ ತಮ್ಮ ಚೇಷ್ಟೆಯನ್ನಾರಂಭಿಸಿಬಿಟ್ಟರು. ಅವರಲ್ಲಿ ಹಾಡುವರು ಕೆಲವರು! ತಲೆಕೆಳಗಾಗಿ ಲಾಗಹಾಕುವವರು ಕೆಲವರು! ಅಟ್ಟ ಹಾಸದಿಂದ ನಗುವವರು ಕೆಲವರು! ಕುಣಿಯುವವರೆ ಕೆಲವರು! ಹಾರಿಬೀಳುವವರು ಕೆಲವರು! ಓಡುವವರು ಕೆಲವರು! ನೆಗೆಯುವವರು ಕೆಲವರು! ಕೇಕೆ ಹಾಕುವರು ಕೆಲವರು! ಒಬ್ಬರ ಮೇಲೊಬ್ಬರು ಹಾರುವವರು ಕೆಲವರು! ಒಬ್ಬರಿ ಗೊಬ್ಬರು ಸೇರಿ ಆಟವಾಡುವವರು ಕೆಲವರು! ಮರದಿಂದ ಮರಕ್ಕೆ ಹಾರುವವರು ಮತ್ತೆ ಕೆಲವರು! ಮರದ ಕೊಂಬೆಯನ್ನೇರಿ ನೆಲಕ್ಕೆಧುಮುಕುವವರು ಕೆಲವರು! ನೆಲದಿಂದ ಹಾರಿ ಮರದ ಕೊಂಬೆಗಳನ್ನು ಹಿಡಿಯುವವರು ಕೆಲವರು! ಮತ್ತು, ಒಬ್ಬನು ಹಾಡುವಾಗ ಮತ್ತೊಬ್ಬನು ಪಕಪಕನೆ ನಗುತ್ತ ಬಂದು ಮೇಲೆಬೀಳು

ವನು! ನಗುವವನ ಮುಂದೆ ಗಟ್ಟಿಯಾಗಿ ಅಳುತ್ತ ಬರುವವನೊಬ್ಬನು. ಅಳುವವನನ್ನು ಹಿಂದಿನಿಂದ ನೂಕುತ್ತ ಬರುವವನೊಬ್ಬನು. ನೂಕುವವನ ಹಿಂದೆ ಕೂಗುತ್ತ ಬರುವವನೊಬ್ಬನು. ಹೀಗೆ ಆ ವಾನರಸಮೂಹವೆಲ್ಲವೂ ಯಥೇಚ್ಛವಾಗಿ ಜೇನನ್ನು ಕುಡಿದು, ಮದದಿಂದ ಮೈಮರೆತು ನಾನಾಚೇಷ್ಟೆಗಳನ್ನು ಮಾಡುತಿದ್ದರು. ಆ ವಾನರರಲ್ಲಿ ಆಗ ಮದ್ಯಪಾನದಿಂದ ಮದವೇರದವನಾಗಲಿ, ಹಣ್ಣುಗಳನ್ನು ತಿಂದು ತೃಪ್ತಿಯಿಲ್ಲದವನಾಗಲಿ, ಒಬ್ಬನಾದರೂ ಇರಲಿಲ್ಲ! ಇಷ್ಟರಲ್ಲಿ ಆ ತೋಟಕ್ಕೆ ಕಾವಲಿದ್ದ ದಧಿಮುಖನೆಂಬ ವಾನರನು, ಆ ತೋಟದಲ್ಲಿಯ ಜೇನು ಮೊದಲಾದ ಆಹಾರಪದಾರ್ಥಗಳೆಲ್ಲವೂ ಕಪಿಗಳಿಂದ ಭಕ್ಷಿಸಲ್ಪಡುವುದನ್ನೂ, ಅಲ್ಲಿನ ಫಲ, ಪುಷ್ಪಾದಿಗಳು ನಾಶಹೊಂದುತ್ತಿರುವುದನ್ನೂ ಕಂಡು, ಕೋಪದಿಂದ ಬಂದು ಆ ಕಪಿಗಳನ್ನು ತಡೆದನು. ಈ ದಧಿಮುಖನಾದರೋ ಬಹಳ ವೃದ್ಧನು. ಮೊದಲೇ ಪ್ರಾಯದ ಮದದಿಂದಲೂ, ಆದರಮೇಲೆ ಮಧ್ವಮದದಿಂದಲೂ ಕೊಬ್ಬಿದ ಈ ವಾನರರು ಆ ಮುದುಕನ ಮಾತಿಗೆ ಲಕ್ಷ್ಯಕೊಡುವರೆ? ಈ ಕಪಿಗಳೆಲ್ಲರೂ ಸೇರಿ ಅವನನ್ನೇ ಗದರಿಸುತ್ತ, ತಮ್ಮ ಕಾರ್ಯವನ್ನೇ ತಾವು ನೋಡುತ್ತಿದ್ದರು. ಇದನ್ನು ನೋಡಿ ಉಗ್ರತೇಜಸ್ವಿಯಾದ ಆ ದಧಿಮುಖನು, ಹೇಗಾದರೂ ತನ್ನ ತೋಟಕ್ಕೆ ಆ ಕಪಿಗಳ ಹಾವಳಿಯನ್ನು ತಪ್ಪಿಸಬೇಕೆಂದು, ತಿರುಗಿ ತಿರುಗಿ ಅವರನ್ನು ತಡೆಯುತ್ತಿದ್ದನು. ಅವರಲ್ಲಿ ಭೀರುಸ್ವಭಾವವುಳ್ಳ ಕೆಲವರನ್ನು ಪರುಷವಾಕ್ಯದಿಂದ ಹೆದರಿಸಿದನು. ತನಗೆ ಸಮಾನವುಳ್ಳ ಕೆಲವರೊಡನೆ ಜಗಳವಾಡಿದನು. ಪ್ರಬಲರಾದ ಕೆಲವರಿಗೆ ಒಳ್ಳೆಯಮಾತುಗಳಿಂದ ಬುದ್ಧಿವಾದಗಳನ್ನು ಹೇಳಿದನು. ಇಷ್ಟಾದರೂ ಆ ವಾನರರು ಸ್ವಲ್ಪವೂ ಭಯಪಡದೆ, ತಮ್ಮ ತಪ್ಪನ್ನೂ ತಾವು ನೋಡದೆ, ಎಲ್ಲರೂ ಒಂದಾಗಿ ಸೇರಿ, ಅವನನ್ನು ಸುತ್ತಿಮುತ್ತಿಕೊಂಡು, ಅವನನ್ನೇ ಬಾಯಿಗೆ ಬಂದಹಾಗೆ ಬೈದು ತಿರಸ್ಕರಿಸಿ ಭಂಗಿಸುತಿದ್ದರು. ಆಗ ಕಪಿಗಳ ಕೈಗೆ ಸಿಕ್ಕಿಬಿದ್ದ ಆ ದಧಿಮುಖನ ಅವಸ್ಥೆಯನ್ನು ಕೇಳಬೇಕೆ? ಅವನನ್ನು ಉಗುರುಗಳಿಂದ ಪರಚುವವರು ಕೆಲವರು! ಹಲ್ಲುಗಳಿಂದ ಕಡಿಯುವವರು ಕೆಲವರು! ಅಂಗೈಯಿಂದ ಅಪ್ಪಳಿಸುವವರು ಕೆಲವರು! ಕಾಲುಗಳಿಂದ ಒದೆಯುವವರು ಕೆಲವರು! ಹೀಗೆ ಮದದಿಂದ ಕೊಬ್ಬಿದ ಆ ಕಪಿಗಳೆಲ್ಲರೂ ಒಂದಾಗಿ ಸೇರಿ, ದಧಿಮುಖನನ್ನು ಮೃತಪ್ರಾಯನನ್ನಾಗಿ ಮಾಡಿ ಕಳುಹಿಸಿದುದಲ್ಲದೆ, ಇತ್ತಲಾಗಿ ಆ ತೋಟದಲ್ಲಿಯೂ ಫಲಪುಷ್ಪಾದಿ ಭೋಗ್ಯವಸ್ತುಗಳೊಂದೂ ಇಲ್ಲದಂತೆ ಅದನ್ನು ಶುದ್ಧಶೂನ್ಯವಾಗಿ ಮಾಡಿಬಿಟ್ಟರು.

ಇಲ್ಲಿಗೆ ಅರುವತ್ತೊಂದನೆಯ ಸರ್ಗವು.

———

ದಧಿಮುಖನಿಂದ ನಿವಾರಿತರಾದ ವಾನರರನ್ನು, ಹನುಮಂತನೂ, ಅಂಗದನೂ ಮತ್ತಷ್ಟು ಪ್ರೋತ್ಸಾಹಿಸಿದುದು. ದಧಿಮುಖನು ವಾನರರ ಪ್ರಹಾರದಿಂದ ನೊಂದು ಸುಗ್ರೀವನ ಬಳಿಗೆ ಓಡಿಹೋದುದು.

ಆಮೇಲೆ ವಾನರೋತ್ತಮನಾದ ಹನುಮಂತನು ಅಲ್ಲಿ ದಧಿಮುಖನ ಕಲಹಕ್ಕೆ ಹೆದರಿ ಸುಮ್ಮನಿದ್ದ ಕೆಲವು ವಾನರರನ್ನು ಕುರಿತು, "ಎಲೈ ವಾನರರೆ! ಹೆದರಬೇಡಿರಿ! ನೀವು ನಿಶ್ಚಿಂತರಾಗಿ ಮಧುವನ್ನು ಕುಡಿಯಿರಿ! ಯಾರು ನಿಮ್ಮನ್ನು ತಡೆದರೂ ನಾನಿರುವೆನು!" ಎಂದನು. ಹನುಮಂತನ ಮಾತನ್ನು ಕೇಳಿ ಕಪಿಶ್ರೇಷ್ಠನಾದ ಅಂಗದನೂ ಅವರಲ್ಲಿ ಪ್ರಸನ್ನನಾಗಿ ಆ ವಾನರರನ್ನು ಕುರಿತು, "ಇಲ್ಲಿರುವ ವಾನರರೆಲ್ಲರೂ ಯಥೇಷ್ಟವಾಗಿ ಮಧುವನ್ನು ಕುಡಿಯಬಹುದು. ಮುಖ್ಯವಾಗಿ ನಾವು ಉದ್ದೇಶಿಸಿಬಂದ ಕಾರ್ಯವನ್ನು ಸಾಧಿಸಿದವನು ಈ ಹನುಮಂತನು! ಇವನು ಏನಾದರೂ ಒಂದು ಅಕಾರ್ಯವನ್ನು ಮಾಡಬೇಕೆಂದು ಹೇಳಿದರೂ ಈಗ ನಾವು ಅವಶ್ಯವಾಗಿ ಅದನ್ನು ನಡೆಸಿಯೇ ತೀರಬೇಕು. ಇನ್ನು ಇವನೇ ಈ ಕಾರ್ಯಕ್ಕೆ ಅನುಮತಿಸಿರುವಾಗ ಹೇಳಬೇಕಾದುದೇನು?" ಎಂದು ಅವರೆಲ್ಲರಿಗೂ ಮತ್ತೆ ಆಜ್ಞೆಮಾಡಿದನು. ಅಂಗದನ ಬಾಯಿಂದ ಈ ಮಾತು ಬಂದೊಡನೆ, ಆ ವಾನರರೆಲ್ಲರೂ ಪರಮಾನಂದಭರಿತರಾಗಿ "ಭಲೆ! ಭಲೆ!" ಎಂದು ಅಂಗದನನ್ನು ಮನ್ನಿಸಿ, ನದೀಪ್ರವಾಹದಂತೆ ಮಹಾವೇಗದಿಂದ ತಿರುಗಿ ಮಧುವನಕ್ಕೆ ನುಗ್ಗಿದರು. ಆ ವಾನರರಿಗಾದರೋ ಮೊದಲೇ ತಾವು ಸೀತೆಯ ವೃತ್ತಾಂತವನ್ನು ತಿಳಿದು ಬಂದ ಹೆಮ್ಮೆಯೊಂದು! ಸಹಜವಾದ ವೀರ್ಯವೊಂದು! ಅಂಗದನು ಕೊಟ್ಟ ಸ್ವಾತಂತ್ರ್ಯವೊಂದು! ಹೀಗೆ ಇವೆಲ್ಲವೂ ಒಂದಾಗಿ ಸೇರಿರಲು ಎಲ್ಲರೂ ಮಹೋತ್ಸಾಹಗೊಂಡವರಾಗಿ, ಆ ತೋಟಕ್ಕೆ ನುಗ್ಗಿ, ಅಲ್ಲಿದ್ದ ಕಾವಲುಗಾರರೆಲ್ಲರನ್ನೂ ಬಲಾತ್ಕಾರದಿಂದೋಡಿಸಿ, ಅಲ್ಲಿ ಯಥೇಚ್ಛವಾಗಿ ಮಧುವನ್ನು ಕುಡಿದರು. ಬೇಕಾದ ಹಣ್ಣುಗಳನ್ನೂ ಭಕ್ಷಿಸಿದರು. ಹೀಗೆ ಆ ವಾನರರೆಲ್ಲರೂ ಯಥೇಚ್ಛವಾಗಿ ತಿಂದು ತೇಗುತ್ತ ಅಲ್ಲಿ ತಮ್ಮನ್ನು ತಡೆಯುವುದಕ್ಕಾಗಿ ಬಂದ ಒಬ್ಬೊಬ್ಬ ಕಾವಲಿನವನನ್ನೂ ನಾನಾವಿಧದಿಂದ ಹೊಡೆದೋಡಿಸುತ್ತಿದ್ದರು. ಅಲ್ಲಲ್ಲಿ ಕೆಲವು ವಾನರರು ಒಟ್ಟಾಗಿ ಸೇರಿಕೊಂಡು, ಒಂದೊಂದು ಕೊಳಗದಷ್ಟು ಜೇನುಳ್ಳ ಗೂಡುಗಳನ್ನೂ ಕೈಗಳಿಂದೊತ್ತಿ ಬಾಯಿಗೆ ಹಿಂಡಿಕೊಳ್ಳುತ್ತಿದ್ದರು. ಬೇರೆ ಕೆಲವರು ಹಿಂಡಿದ ಗೂಡುಗಳನ್ನು ಕಿತ್ತು ಹಾಕುತ್ತಿರುವರು. ಕೆಲವರು ಜೇನನ್ನು ಕುಡಿದು ಗೂಡನ್ನು ಬಿಸುಡುವರು. ಕೆಲವರು

ಮದ್ಯಪಾನದಿಂದ ಮತ್ತೇರಿ ಮೈಮರೆತು ಅದರ ಮೋಹದಿಂದಲೇ ಪರಸ್ಪರವಾಗಿ ಹೊಡೆದಾಡುತ್ತಿರುವವರು. ಕೆಲವರು ನಡೆಯಲಾರದೆ ಮತ್ತೇರಿ ಮರದ ಬುಡದಲ್ಲಿ ಶಾಖೆಯನ್ನೊರಗಿಕೊಂಡು ನಿಂತಿರುವವರು. ನಿಲ್ಲುವುದಕ್ಕೂ ತ್ರಾಣವಿಲ್ಲದ ಕೆಲವರು ಮರದಡಿಯಲ್ಲಿ ಎಲೆಗಳನ್ನು ಹಾಸಿ ಮಲಗಿರುವವರು. ಇದಲ್ಲದೆ ಅವರಲ್ಲಿ ಪಾನಮದ ದಿಂದ ಹುಚ್ಚು ಹಿಡಿದವರು ಕೆಲವರು! ಸಂತೋಷದಿಂದ ಮೈಮರೆತವರು ಕೆಲವರು! ಒಬ್ಬರನ್ನೊಬ್ಬರು ಮೇಲಕ್ಕೆತ್ತಿ ಹಾಕುವವರು ಕೆಲವರು! ನಡೆಯಲಾರದೆ ತಡ ಬಡಿಸುವವರು ಕೆಲವರು. ಸಿಂಹನಾದ ಮಾಡುವವರು ಕೆಲವರು. ಅಟ್ಟಹಾಸದಿಂದ ಕೂಗುವವರು ಕೆಲವರು. ಪಾನಮದದಿಂದ ಪ್ರಜ್ಞೆತಪ್ಪಿ ನೆಲದಲ್ಲಿ ಮಲಗಿದವರು ಕೆಲವರು. ಬಾಯಿಂದಾಡಬಾರದ ಯಾವುದೋ ಒಂದು ಅಸಹ್ಯಕಾರ್ಯವನ್ನು ಮಾಡಿ ನಗುತ್ತಿರುವವರು ಕೆಲವರು. ಅದನ್ನು ನೋಡಿ ಅದರಂತೆಯೇ ಬೇರೊಂದು ಗ್ರಾಮ್ಯ ಕಾರ್ಯವನ್ನು ನಡೆಸುವವರು ಕೆಲವರು. ತಾವುಮಾಡಿದ ಅಸಹ್ಯಕಾರ್ಯವನ್ನು ಬಾಯಿಂ ದಲೂ ಆಡುತ್ತಿದ್ದವರು ಕೆಲವರು. ಅದರಂತೆಯೇ ಬೇರೊಂದು ಗ್ರಾಮ್ಯಕಾರ್ಯಕ್ಕೆ ಉದ್ದೇಶಿಸಿ ನಿಂತವರು ಕೆಲವರು. ಹೀಗೆ ಮದದಿಂದ ಕೊಬ್ಬಿದ ಆ ವಾನರರು, ಆ ತೋಟಕ್ಕೆ ಕಾವಲಿದ್ದ ದಧಿಮುಖನ ಕಡೆಯ ಒಬ್ಬೊಬ್ಬ ವಾನರನನ್ನೂ ಹೊಡೆದೋಡಿಸುತ್ತಿರಲು ಅವರೆಲ್ಲರೂ ಭಯದಿಂದ ದಿಕ್ಕುದಿಕ್ಕಿಗೆ ಪಲಾಯನ ಮಾಡಿದರು. ಮತ್ತು ಆ ವಾನರರು ತಮ್ಮನ್ನು ತಡೆಯುವುದಕ್ಕಾಗಿ ಬಂದ ಒಬ್ಬೊಬ್ಬ ವನಪಾಲಕನನ್ನೂ, ಮೊಳಕಾಲುಗಳಲ್ಲಿ ಹಿಡಿದೆಳೆದು, 1 ಅವರ ಗುದ ದ್ವಾರವನ್ನೇ ಅವರ ಮುಖದ ಕಡೆಗೆ ತೋರಿಸಿ ಅವಮಾನಪಡಿಸುತ್ತಿರಲು ಅವರೆಲ್ಲರೂ ಬಹಳ ದುಃಖಿತರಾಗಿ, ದಧಿಮುಖನ ಬಳಿಗೆಬಂದು, "ಸ್ವಾಮೀ! ಹನು ಮಂತನ ಬಲದಿಂದ ಆ ವಾನರರೆಲ್ಲರೂ ನಮ್ಮ ಮಧುವನವನ್ನೆಲ್ಲಾ ಹಾಳುಮಾಡಿ ಬಿಟ್ಟರು. ನಮ್ಮ ಮೊಳಕಾಲುಗಳನ್ನು ಹಿಡಿದೆಳೆದು, ನಮ್ಮ ಗುದದ್ವಾರವನ್ನೇ ನಮ್ಮ ಮುಖದ ಕಡೆಗೆ ತಿರುಗಿಸಿ ತೋರಿಸಿದರು" ಎಂದರು. ಹೀಗೆ ವಾನರ ರಿಂದ ತನ್ನ ತೋಟವು ಹಾಳಾದುದಲ್ಲದೆ, ಅವರ ಕುಚೇಷ್ಟೆಗಳನ್ನೂ ಕೇಳಿ, ದಧಿ ಮುಖನಿಗೆ ತಡೆಯಲಾರದ ಕೋಪವುಂಟಾಯಿತು. ಆ ಮೇಲೆ ಆ ದಧಿಮುಖನು ದುಃಖಿತರಾಗಿ ಬಂದ ತನ್ನ ಕಡೆಯ ವಾನರರನ್ನು ಸಮಾಧಾನಪಡಿಸುತ್ತ "ಎಲೆ

---

1. ಇಲ್ಲಿ "ಜಾನುಭಿಸ್ತು ಪ್ರಕೃಷ್ಟಾಶ್ಚ ದೇವಮಾರ್ಗಂ ಪ್ರದರ್ಶಿತಾಃ" ಎಂದು ಮೂಲವು. ಇಲ್ಲಿ ದೇವಮಾರ್ಗವೆಂದರೆ ಆಕಾಶವೆಂಬ ಅರ್ಥಮಾಡಿ, ಆ ವಾನರರ ಕಾಲು ಗಳನ್ನು ಹಿಡಿದೆಳೆದು ಆಕಾಶಕ್ಕೆಸೆಯುತ್ತಿದ್ದರೆಂದು ಅರ್ಥಾಂತರವನ್ನೂ ಹೇಳಬಹುದು. ಅಥವಾ ಆ ವಾನರರು ಮೊಳಕಾಲುಗಳ ಹಿಂದೆ ಹೊಡೆದು, ಮೇಲುಮುಖವಾಗಿ ಕೆಳಕ್ಕುರು ಳಿಸಿ, ಆಕಾಶವನ್ನು ನೋಡುವಂತೆ ಮಾಡಿದರೆಂದೂ ಅರ್ಥಾಂತರವುಂಟು.

ವಾನರರೇ! ಇಲ್ಲಿ ಬನ್ನಿರಿ! ಈಗ ನಾವೆಲ್ಲರೂ ಒಟ್ಟಾಗಿಯೇ ಸೇರಿಹೋಗುವೆವು. ಅಲ್ಲಿಹೋಗಿ, ನಮ್ಮ ತೋಟದ ಮಧುವೆಲ್ಲವನ್ನೂ ಕುಡಿದು ಬಲದಿಂದ ಕೊಬ್ಬಿದ ಆ ವಾನರರ ಕೊಬ್ಬನ್ನು ಮುರಿಯುವೆವು'' ಎಂದನು. ಇದನ್ನು ಕೇಳಿ ಆ ತೋಟಕ್ಕೆ ಕಾವಲಿದ್ದ ಕಪಿಗಳೆಲ್ಲರೂ, ದಧಿಮುಖನನ್ನು ಮುಂದಿಟ್ಟುಕೊಂಡು ತಿರುಗಿ ವೇಗದಿಂದ ಮಧುವನಕ್ಕೆ ಹೋದರು. ಅಲ್ಲಿಂದ ಹೊರಡುವಾಗಲೇ ದಧಿಮುಖನು ಒಂದು ದೊಡ್ಡಮರವನ್ನು ಕಿತ್ತು ಕೈಯಲ್ಲಿ ಹಿಡಿದುಕೊಂಡು, ತನ್ನ ಕಡೆಯ ವಾನರರಿಂದ ಪರಿವೃತನಾಗಿ ವೇಗದಿಂದ ಬಂದನು. ಆ ವಾನರರಲ್ಲಿಯೂ ಕೆಲವರು ಕಲ್ಲುಗಳನ್ನೂ, ಕೆಲವರು ಮರಗಳನ್ನೂ, ಕೆಲವರು ಬೆಟ್ಟಗಳನ್ನೂ, ಕೈಗೆತ್ತಿಕೊಂಡು ಕೋಪದಿಂದ ದಧಿಮುಖನೊಡನೆ ಬರುತ್ತಿದ್ದರು. ಹೀಗೆ ಈ ಕಪಿವೀರರೆಲ್ಲರೂ, ಸಾಲ ತಾಳೆ ಮೊದಲಾದ ಮರಗಳನ್ನೂ, ಕಲ್ಲುಗಳನ್ನೂ ಆಯುಧಗಳನ್ನಾಗಿ ಹಿಡಿದು, ತಮ್ಮೊಡೆಯನಾದ ದಧಿಮುಖನ ಆಜ್ಞೆಯಂತೆ ಅಂಗದಾದಿಗಳಿದ್ದ ಕಡೆಗೆ ಓಡಿಬಂದರು. ಆ ವನಪಾಲಕರೆಲ್ಲರೂ, ಸಾವಿರಾರು ಲೆಕ್ಕದಿಂದ ಹೊರಟುಬಂದು, ಆ ತೋಟದಲ್ಲಿ ಮರಗಳ ಮೇಲೆಯೂ, ನೆಲದಲ್ಲಿಯೂ, ಅಲ್ಲಲ್ಲಿ ಗುಂಪುಗುಂಪಾಗಿ ಸೇರಿದ್ದ ವಾನರರನ್ನು ಮುತ್ತಿಸಿಂತರು. ಆಗ ಅಲ್ಲಿದ್ದ ಹನುಮಂತನೇ ಮೊದಲಾದ ವಾನರೋತ್ತಮರೆಲ್ಲರೂ, ತಮ್ಮ ಕಡೆಗೆ ಕೋಪದಿಂದ ಬರುತ್ತಿದ್ದ ದಧಿಮುಖನನ್ನು ನೋಡಿ ಅವನನ್ನೋಡಿಸುವುದಕ್ಕಾಗಿ ಮುಂದೆ ಬಂದರು. ಇಷ್ಟರಲ್ಲಿಯೇ ಅಂಗದನು ತನಗಿದಿರಾಗಿ ಕೈಯಲ್ಲಿ ಮರವನ್ನು ಹಿಡಿದು ಬರುತ್ತಿದ್ದ ದಧಿಮುಖನನ್ನು ನೋಡಿ, ಬಹಳವಾಗಿ ಕೋಪಗೊಂಡು, ಆಗಲೇ ತನ್ನ ಎರಡು ಕೈಗಳಿಂದಲೂ ಆ ದಧಿಮುಖನನ್ನು ಬಲವಾಗಿ ಅಪ್ಪಳಿಸಿದನು. ಯುವರಾಜನಾದ ಆ ಅಂಗದನೂಕೂಡ, ಮದಾಂಧನಾಗಿದ್ದುದರಿಂದ ಆ ದಧಿಮುಖನು ತನಗೆ ತಾತನೆಂಬುದನ್ನೂ ಭಾವಿಸದೆ, ಅವನಲ್ಲಿ ಪೂಜ್ಯಭಾವವನ್ನೂ ತೋರಿಸದೆ ಅವನನ್ನು ಹೀಗೆ ಭಂಗಪಡಿಸಿದುದಲ್ಲದೆ ಆ ದಧಿಮುಖನನ್ನು ಕೈಯಿಂದೆತ್ತಿ ಬಲವಾಗಿ ನೆಲದಲ್ಲಿ ಕುಕ್ಕಿಬಿಟ್ಟನು. ಇದರಿಂದ ಆ ದಧಿಮುಖನಿಗೆ ತೋಳು, ತೊಡೆ, ಹೆಗಲು ಮುಂತಾದ ಸರ್ವಾವಯವಗಳೂ ಜರ್ಝರಿತಗಳಾದುವು. ಅವನ ದೇಹವೆಲ್ಲವೂ ರಕ್ತಮಯವಾಯಿತು. ಒಂದು ಮುಹೂರ್ತಕಾಲದವರೆಗೆ ಮೈಮೇಲೆ ಪ್ರಜ್ಞೆಯಿಲ್ಲದೆ ಮೂರ್ಛೆಹೋದನು. ಸ್ವಲ್ಪಕಾಲದಮೇಲೆ ಹೇಗೋ ಚೇತರಿಸಿಕೊಂಡು, ತಿರುಗಿ ಬಹಳ ಕೋಪಗೊಂಡು, ಮಧುಪಾನದಿಂದ ಮೈಮರೆತಿದ್ದ ಆ ವಾನರರನ್ನು ನಿಗ್ರಹಿಸಬೇಕೆಂದು ಕೈಯಲ್ಲಿ ಒಂದು ದೊಣ್ಣೆಯನ್ನು ಹಿಡಿದು ಮುಂದೆ ಹೋದನು. ಆಗಲೂ ಅವನ ಪ್ರಯತ್ನವು ವಿಫಲವಾಯಿತು. ಅಂಗದಾದಿಗಳ ಕೈಯಿಂದ ತಪ್ಪಿಸಿ

ಕೊಂಡು ಬರುವುದೇ ಅವನಿಗೆ ಕಷ್ಟವಾಯಿತು. ಕೊನೆಗೆ ಎಷ್ಟೋ ಪ್ರಯಾಸದಿಂದ ಹಿಂತಿರುಗಿ ಬಂದು, ಏಕಾಂತವಾದ ಒಂದು ಸ್ಥಲವನ್ನು ಸೇರಿ, ಅಲ್ಲಿ ತನ್ನ ಕಡೆಯ ಭೃತ್ಯರನ್ನು ನೋಡಿ, "ಎಲೈ ವಾನರರೇ! ಇನ್ನು ನಮ್ಮಿಂದ ಸಾಧ್ಯವಿಲ್ಲ! ಈ ಅಂಗದಾದಿಗಳ ಮೇಲೆ ನಮ್ಮ ಶಕ್ತಿಯು ಸಾಗದು! ಇವರೆಲ್ಲರೂ ಇಲ್ಲಿಯೇ ಇರಲಿ! ಈಗಲೇ ನಾವು ನಮ್ಮ ಪ್ರಭುವಾದ ಸುಗ್ರೀವನೂ, ರಾಮನೂ ಸೇರಿರತಕ್ಕ ಸ್ಥಳಕ್ಕೆ ಹೋಗುವೆವು. ಈ ಅಂಗದನು ಮಾಡಿರತಕ್ಕ ತಪ್ಪುಗಳೆಲ್ಲವನ್ನೂ ಅತನಲ್ಲಿ ಸ್ಪಷ್ಟವಾಗಿ ತಿಳಿಸಿಬಿಡುವೆವು. ನಮ್ಮ ಪ್ರಭುವಾದ ಸುಗ್ರೀವನೋ ಬಹಳಕೋಪಸ್ವಭಾವವುಳ್ಳವನು. ಈ ಮಾತನ್ನು ಕೇಳಿದ ಮಾತ್ರಕ್ಕೆ ಈ ವಾನರರೆಲ್ಲರನ್ನೂ ಕೊಂದೇಬಿಡುವನು. ಈ ಮಧುವನವನ್ನು ಹಾಳುಮಾಡಿದ ಸಂಗತಿಯು ಅವನ ಕಿವಿಗೆ ಬಿದ್ದಮಾತ್ರದಲ್ಲೇ ಅವನು ಇವರನ್ನು ಸುಮ್ಮನೆಬಿಡುವವನಲ್ಲ. ಈ ತೋಟವು ಮಹಾತ್ಮನಾದ ನಮ್ಮ ಸುಗ್ರೀವನಿಗೆ ಪಿತೃಪಿತಾಮಹಪರಂಪರೆಯಿಂದ ಬಂದಿರುವುದು. ದೇವತೆಗಳಿಗಾದರೂ ಇದನ್ನು ಪ್ರವೇಶಿಸುವುದು ಸಾಧ್ಯವಲ್ಲ. ದಿವ್ಯವಾದ ಈ ತೋಟದಲ್ಲಿ ಅವನೂ ಎಷ್ಟೋ ಪ್ರೀತಿಯನ್ನಿಟ್ಟಿರುವನು. ಜೇನಿನ ಆಸೆಗಾಗಿ ಈ ತೋಟವನ್ನು ಹಾಳುಮಾಡಿದ ಈ ವಾನರಸೇನಾಪತಿಗಳಿಗೂ, ಇವರ ಕಡೆಯವರಿಗೂ, ಮರಣದಂಡನೆಯನ್ನೇ ವಿಧಿಸುವನು. ಈ ವಾನರರ ಆಯುಃಪ್ರಮಾಣವು ಇಂದಿಗೆ ತೀರಿತೆಂದೇ ಹೇಳಬೇಕು. ರಾಜಾಜ್ಞೆಯನ್ನೂ ಲಕ್ಷ್ಯಮಾಡದ ಈ ದುರಾತ್ಮರಿಗೆ ವಧವೇ ಸರಿಯಾದ ಶಿಕ್ಷೆಯು. ಸುಗ್ರೀವನು ಇವರನ್ನು ಕೊಲ್ಲಿಸುವುದರಲ್ಲಿ ಸಂದೇಹವೇ ಇಲ್ಲ. ನಮಗೆ ಇವರ ಮೇಲೆ ಹಗೆತೀರಿಸಿಕೊಳ್ಳುವುದಕ್ಕೆ ಇದೇ ಉಪಾಯವು" ಎಂದನು. ಹೀಗೆ ದಧಿಮುಖನು ತನ್ನ ಕಡೆಯ ವನಪಾಲಕರಿಗೆ ತಿಳಿಸಿ ಅವರನ್ನೂ ಕರೆದುಕೊಂಡು ವೇಗದಿಂದ ಸುಗ್ರೀವನಕಡೆಗೆ ಹೊರಟನು. ಎವೆಮುಚ್ಚುವಷ್ಟರಲ್ಲಿಯೇ ಅವರೊಡನೆ ಸೂರ್ಯಪುತ್ರನಾದ ಸುಗ್ರೀವನಿದ್ದ ಸ್ಥಲಕ್ಕೆ ಬಂದು ಸೇರಿ, ಅಲ್ಲಿ ರಾಮನನ್ನೂ, ಲಕ್ಷ್ಮಣನನ್ನೂ, ಸುಗ್ರೀವನನ್ನೂ ನೋಡಿ ಹಳ್ಳತಿಟ್ಟಿಲ್ಲದ ಒಂದು ಸಮಪ್ರದೇಶದಲ್ಲಿ ಆಕಾಶದಿಂದ ಕೆಳಕ್ಕಿಳಿದು ನಿಂತನು. ವನಪಾಲಕರೆಲ್ಲರಿಗೂ ಪ್ರಭುವಾದ ಈ ದಧಿಮುಖನು ತನ್ನ ಭೃತ್ಯರಿಂದ ಪರಿವೃತನಾಗಿ, ಸುಗ್ರೀವನಮುಂದೆ ಬಹಳ ದೈನ್ಯದಿಂದ ತಲೆಯಮೇಲೆ ಕೈಜೋಡಿಸಿ ನಿಂತು ಸುಗ್ರೀವನ ಕಾಲುಗಳೆರಡನ್ನೂ ಹಿಡಿದು [1] ನಮಸ್ಕರಿಸಿದನು.

ಇಲ್ಲಿಗೆ ಅರುವತ್ತೆರಡನೆಯ ಸರ್ಗವು.

---

1. ದಧಿಮುಖನು ಸುಗ್ರೀವನಿಗೆ ಮಾವನಾದುದರಿಂದ ನಮಸ್ಕರಿಸಬಾರದಾಗಿದ್ದರೂ, ಇಲ್ಲಿ ರಾಜಭೃತ್ಯಭಾವದಿಂದ ನಮಸ್ಕರಿಸಿದುದು ದೋಷವಲ್ಲವೆಂದು ಗ್ರಾಹ್ಯವು.

ದಧಿಮುಖನು ಸುಗ್ರೀವನೊಡನೆ ಮಧುವನಭಂಗವನ್ನು ಹೇಳಲು,
ಅಂಗದಾದಿವಾನರರೇ ಸೀತೆಯನ್ನು ನೋಡಿ ಬಂದ
ಸಂತೋಷದಿಂದ ಹಾಗೆ ಮಾಡಿರಬಹುದೆಂದು ಸುಗ್ರೀವನು
ಲಕ್ಷ್ಮಣನಿಗೆ ತಿಳಿಸಿ, ಅವರನ್ನು ಬೇಗನೆ ಕರೆತರುವಂತೆ
ದಧಿಮುಖನನ್ನು ಕಳುಹಿಸಿದುದು.

ಹೀಗೆ ದಧಿಮುಖನು ತಲೆಬಗ್ಗಿ ಸುಗ್ರೀವನ ಕಾಲಿಗೆ ಬೀಳಲು, ಅವನನ್ನು ನೋಡಿ ಸುಗ್ರೀವನ ಮನಸ್ಸಿಗೆ ಬಹಳ ಭಯವು ತೋರಿತು! ತನಗೆ ಪೂಜ್ಯನಾದ ಮಾವನು ತನ್ನ ಕಾಲಮೇಲೆಬಿದ್ದು ಮೊರೆಯಿಡುವುದಕ್ಕೆ ಕಾರಣವೇನೆಂದು ಕಳವಳಿಸುತ್ತ ಆ ದಧಿಮುಖನನ್ನು ಕುರಿತು, "ಆರ್ಯನೆ! ಏಳೇಳು! ಇದೇನು! ಪೂಜ್ಯನಾದ ನೀನು ನನ್ನ ಕಾಲಿಗೆ ಬೀಳುವುದೆಂದರೇನು? ಹೆದರಬೇಡ! ನಡೆದಿರುವ ಸಂಗತಿಯೆಲ್ಲವನ್ನೂ ಹೇಳು!" ಎಂದನು. ಹೀಗೆ ಸುಗ್ರೀವನು ಅಭಯವನ್ನು ಕೊಟ್ಟಮೇಲೆ, ದಧಿಮುಖನು ನಂಬಿಕೆಯಿಂದ ಮೇಲಕ್ಕೆದ್ದು, ಅವನೊಡನೆ, "ಎಲೈ ರಾಜನೆ! ನಾನೇನು ಹೇಳಲಿ! ನಿನ್ನ ತಂದೆಯಾದ ಋಕ್ಷರಜಸ್ಸಾಗಲಿ, ನಿನ್ನಣ್ಣನಾದ ವಾಲಿಯಾಗಲಿ, ನೀನಾಗಲಿ, ಇದುವರೆಗೆ ಒಂದು ದಿನವಾದರೂ ನಮ್ಮ ಮಧುವನವನ್ನು ಸ್ವಲ್ಪಮಾತ್ರವೂ ನೋಯಿಸಿದವರಲ್ಲ! ನಿಮಗೆ ಅಷ್ಟು ಪ್ರೀತಿಪಾತ್ರವಾದ ತೋಟವನ್ನೂ ಈಗ ಕೆಲವರು ವಾನರರು ತಿಂದು ತೀರಿಸಿಬಿಟ್ಟರು! ನಮ್ಮ ಕಡೆಯ ಈ ಕಾವಲಿನವರು ಎಷ್ಟು ತಡೆದರೂ ಇವರನ್ನೂ ಲಕ್ಷ್ಯಮಾಡದೆ, ಅಲ್ಲಿನ ಹಣ್ಣುಗಳೆಲ್ಲವನ್ನೂ ತಿಂದು, ಅಲ್ಲಿನ ಜೇನನ್ನೂ ಇಷ್ಟಬಂದ ಹಾಗೆ ಕುಡಿಯುತ್ತಿರುವರು. ಅವರಲ್ಲಿ ಕೆಲವರು ಇನ್ನೂ ಅಲ್ಲಲ್ಲಿ ಉಳಿದಿರುವ ಜೇನುಗೂಡುಗಳನ್ನು ಕಿತ್ತು ಧ್ವಂಸಮಾಡುತ್ತಿರುವರು. ಬೇರೆ ಕೆಲವರು ತಿನ್ನುತ್ತಿರುವರು. ಈ ನಮ್ಮ ವನಪಾಲಕರು ಅವರನ್ನು ತಡೆದಾಗ ಅವರು ಹುಬ್ಬುಗಳನ್ನು ಕುಣಿಸಿ ಇವರನ್ನೇ ಹೆದರಿಸಿಬಿಟ್ಟರು. ಇವರೆಲ್ಲರೂ ಎಷ್ಟೋ ಆತುರದಿಂದ ಆ ವಾನರರನ್ನು ತೋಟದಿಂದ ಹೊರಡಿಸಬೇಕೆಂದು ಪ್ರಯತ್ನಿಸಿದರು. ವೀರರಾದ ಆ ಅಂಗದಾದಿಗಳು ಕೋಪದಿಂದ ಕೆಂಪೇರಿದ ಕಣ್ಣುಳ್ಳವರಾಗಿ ಹುಬ್ಬುಗಳನ್ನು ಕುಣಿಸುತ್ತ ಎಲ್ಲರೂ ಒಟ್ಟಾಗಿ ಸೇರಿ ಇವರನ್ನೇ ಹೆದರಿಸಿ,ಓಡಿಸಿಬಿಟ್ಟರು. ಇದಲ್ಲದೆ ಕೆಲವರನ್ನು ಕೈಗಳಿಂದ ಹೊಡೆದಟ್ಟಿದರು. ಕೆಲವರನ್ನು ಮೊಳಕಾಲುಗಳಿಂದ ಗುದ್ದಿ ಕೆಡಹಿದರು. ನಮ್ಮಲ್ಲಿ ಕೆಲವರನ್ನು ಸಿಕ್ಕಿದಹಾಗೆ ಎಳೆದಾಡಿಬಿಟ್ಟರು. ಕೆಲವರನ್ನು ತಲೆಕೆಳಗಾಗಿ ನಿಲ್ಲಿಸಿ, ಅವರ ಗುದದ್ವಾರವನ್ನೇ ಅವರ ಮುಖದ ಕಡೆಗೆ ತಿರುಗಿಸಿ ತೋರಿಸಿಬಿಟ್ಟರು. ಪ್ರಭುವಾದ ನೀನಿರುವಾಗಲೇ ಆ ವಾನರರು ನಮ್ಮ ಕಡೆಯ ಈ ಕಾವಲಿನವರನ್ನು ಹೀಗೆ ಹೊಡೆದೋಡಿಸಿದರಲ್ಲಾ! ಅದೂ ಹಾಗಿರಲಿ! ಈಗಲೂ ನಮ್ಮ ತೋಟದಲ್ಲಿರುವ

ಮಧುಫಲಾದಿಗಳೆಲ್ಲವನ್ನೂ ಇಷ್ಟಬಂದಹಾಗೆ ಭಕ್ಷಿಸುತ್ತಿರುವರು ” ಎಂದನು. ಹೀಗೆ ದಧಿಮುಖನು, ವಾನರೇಂದ್ರನಾದ ಸುಗ್ರೀವನಿಗೆ ವಿಜ್ಞಾಪಿಸುತ್ತಿರುವಾಗಲೇ ಪರಂತಪನಾಗಿಯೂ ಪ್ರಾಜ್ಞನಾಗಿಯೂ ಇರುವ ಲಕ್ಷ್ಮಣನು ಸುಗ್ರೀವನನ್ನು ನೋಡಿ, ‘ ಎಲೈ ವಾನರೇಂದ್ರನೆ! ನಿನ್ನ ವನಪಾಲಕನಾದ ಈ ವಾನರನು ಇಲ್ಲಿಗೇಕೆ ಬಂದನು ? ಯಾವುದಕ್ಕಾಗಿ ಹೀಗೆ ದುಃಖಿಸುತ್ತಿರುವನು ? ಯಾವ ಉದ್ದೇಶವನ್ನು ಕುರಿತು ನಿನ್ನೊಡನೆ ವಿಜ್ಞಾಪಿಸುತ್ತಿರುವನು ?” ಎಂದನು. ಮಹಾತ್ಮನಾದ ಲಕ್ಷ್ಮಣನು ಈ ಮಾತನ್ನು ಕೇಳಲು, ಸುಗ್ರೀವನು ಆತನನ್ನು ಕುರಿತು, “ ಆರ್ಯ ಲಕ್ಷ್ಮಣಾ! ಈ ದಧಿಮುಖನು ಹೇಳುವ ವಿಷಯವು ಬೇರೇನೂ ಇಲ್ಲವು. ನಾವು ಸೀತೆಯನ್ನು ಹುಡುಕಿ ಬರುವುದಕ್ಕಾಗಿ ದಕ್ಷಿಣದಿಕ್ಕಿಗೆ ಕೆಲವು ವಾನರರನ್ನು ಕಳುಹಿಸಿದ್ದೆವಲ್ಲವೆ ? ಅಂಗದನೇ ಮೊದಲಾದ ಆ ವಾನರರೆಲ್ಲರೂ ನಮ್ಮ ಮಧುವನದಲ್ಲಿ ಯಥೇಚ್ಛವಾಗಿ ಮಧುವನ್ನು ಕುಡಿಯುತ್ತಿರುವರಂತೆ. ಆದರೆ ಆ ಅಂಗದಾದಿಗಳು ದಾರಿಯಲ್ಲಿ ಬರುವಾಗ ಹೀಗೆ ನಮ್ಮ ತೋಟದಲ್ಲಿ ಪ್ರವೇಶಿಸಿ, ಅಲ್ಲಿನ ಗಿಡಗಳನ್ನು ಮುರಿದು ಅಲ್ಲಿನ ಮಧುವೆಲ್ಲವನ್ನೂ ಕುಡಿದು ತೀರಿಸಬೇಕಾದರೆ ಅವರು ಇಲ್ಲಿಂದ ಉದ್ದೇಶಿಸಿ ಹೋದ ಕಾರ್ಯವನ್ನು ನಡೆಸಿ ಬಂದಿರಬೇಕೆಂದೇ ತೋರುವುದು. ಹಾಗೆ ಅವರಿಗೆ ಹೋದಕಾರ್ಯವು ಕೈಗೂಡದಿದ್ದಪಕ್ಷದಲ್ಲಿ ಈ ಚೇಷ್ಟೆಗೆ ಉಪಕ್ರಮಿಸಲಾರರು. ಆ ವಾನರರು ಸ್ವತಂತ್ರಿಸಿ ನಮ್ಮ ಮಧುವನಕ್ಕೆ ಪ್ರವೇಶಿಸಿದಾಗಲೇ, ಅವರು ತಮ್ಮ ಕಾರ್ಯವನ್ನು ಸಾಧಿಸಿಕೊಂಡು ಬಂದಿರಬೇಕೆಂಬುದು ಸ್ಪಷ್ಟವು. ಅವರು ಸೀತೆಯನ್ನು ನೋಡಿಯೇ ಬಂದಿರಬೇಕು. ಇದರಲ್ಲಿ ಸಂದೇಹವಿಲ್ಲ. ಅವರಲ್ಲಿಯೂ ಹನುಮಂತನೇ ಆ ಕಾರ್ಯವನ್ನು ಸಾಧಿಸಿರಬೇಕು. ಹನುಮಂತನ ಹೊರತು ಬೇರೊಬ್ಬರೂ ಆ ಕಾರ್ಯವನ್ನು ಸಾಧಿಸಲಾರರು. ಕಾರ್ಯವನ್ನು ಸಾಧಿಸುವ ಶಕ್ತಿಯೂ, ಬುದ್ಧಿಯೂ, ಉತ್ಸಾಹವೂ, ಪರಾಕ್ರಮವೂ, ವಿದ್ಯೆಯೂ, ಇವೆಲ್ಲವೂ ವಾನರೋತ್ತಮನಾದ ಆ ಹನುಮಂತನಲ್ಲಿಯೇ ದೃಢವಾಗಿ ಬೇರೂರಿರುವುವು. ಯಾವ ಕಾರ್ಯಕ್ಕೆ ಜಾಂಬವಂತನೂ, ಬಲಾಢ್ಯನಾದ ಅಂಗದನೂ ನಿಯಾಮಕರಾಗಿಯೂ, ಹನುಮಂತನು ಸಾಧಕಶಕ್ತನಾಗಿಯೂ ನಿಲ್ಲುವರೋ, ಆ ಕಾರ್ಯವು ತಪ್ಪದೆ ಸಿದ್ಧಿಸುವುದೇ ಹೊರತು ಅದಕ್ಕೆ ಬೇರೆ ಗತಿಯೆಂದರೇನು ? ಲಕ್ಷ್ಮಣಾ! ಆ ಅಂಗದಾದಿ ವಾನರರೇ ಬಂದು ಈಗ ನಮ್ಮ ಮಧುವನವನ್ನು ಹಾಳುಮಾಡುತ್ತಿರುವರಂತೆ! ಅವರನ್ನು ತಡೆಯುವುದಕ್ಕಾಗಿ ಈ ವನಪಾಲಕರೆಲ್ಲರೂ ಒಂದಾಗಿ ಸೇರಿಹೋಗಲು, ಅವರು ಇವರನ್ನು ಮೊಳಕಾಲಿನಿಂದ ಗುದ್ದಿ ಓಡಿಸಿದರಂತೆ. ಪರಾಕ್ರಮದಲ್ಲಿ ಪ್ರಸಿದ್ಧನಾದ ಇವನು ದಧಿಮುಖನೆಂದು ಹೆಸರುಗೊಂಡವನಲ್ಲವೆ ? ಅವನ

ಹೆಸರಿಗೆ ತಕ್ಕಂತೆ ನಮಗೆ ಪ್ರಿಯವಾಕ್ಯವನ್ನು ಹೇಳುವುದಕ್ಕಾಗಿಯೇ ಇಲ್ಲಿಗೆ ಬಂದನೇ ಹೊರತು ಬೇರೆಯಲ್ಲ! ಆರ್ಯ ಲಕ್ಷ್ಮಣಾ! ಹೇಗಾದರೂ ಆಗಲಿ! ಇಲ್ಲಿಂದ ಹೋದ ವಾನರರು ಸೀತೆಯನ್ನು ನೋಡಿಯೇ ಬಂದಿರಬೇಕು." ನೀನೂ ಈ ವಿಷಯವನ್ನು ಚೆನ್ನಾಗಿ ಪರ್ಯಾಲೋಚಿಸಿ ನೋಡು. ಆ ಉತ್ಸಾಹದಿಂದಲೇ ಅಂಗದಾದಿ ವಾನರರೆಲ್ಲರೂ ಹಾಗೆ ನಿರ್ಭಯವಾಗಿ ನಮ್ಮ ತೋಟವನ್ನು ಪ್ರವೇಶಿಸಿ, ಅಲ್ಲಿ ಯಥೇಚ್ಛವಾಗಿ ಜೇನನ್ನೂ ಕುಡಿಯುತ್ತಿರುವರು. ದಕ್ಷಿಣದಿಕ್ಕಿಗೆ ಹೋದ ಆ ವಾನರರೊಬ್ಬೊಬ್ಬರೂ ಬುದ್ಧಿಯಲ್ಲಿಯೂ, ಪರಾಕ್ರಮದಲ್ಲಿಯೂ, ಖ್ಯಾತಿ ಹೊಂದಿದವರೇ ಹೊರತು ಮಂದಬುದ್ಧಿಯವರಲ್ಲ! ಅಂಥವರು ಸೀತೆಯನ್ನು ನೋಡದೆಯೇ ಬಂದಿದ್ದ ಪಕ್ಷದಲ್ಲಿ, ಹೀಗೆ ಧೈರ್ಯದಿಂದ ನಮ್ಮ ಮಧುವನಕ್ಕೆ ಕಾಲಿಡ ಲಾರರು. ಆ ಮಧುವನವಾದರೂ ಸಾಮಾನ್ಯವಲ್ಲ. ಅದು ಬ್ರಹ್ಮಾನುಗ್ರಹದಿಂದ ನನ್ನ ತಂದೆಗೆ ವರವಾಗಿ ಕೊಡಲ್ಪಟ್ಟ ದಿವ್ಯವನವು" ಎಂದನು. ಇದನ್ನು ಕೇಳಿ ರಾಮಲಕ್ಷ್ಮಣರಿಬ್ಬರಿಗೂ ಅಪರಿಮಿತವಾದ ಸಂತೋಷವುಂಟಾಯಿತು. ಸುಗ್ರೀ ವನ ಬಾಯಿಂದ ಹೊರಟ ಕರ್ಣಾಮೃತವಾದ ಆ ಮಾತನ್ನು ಕೇಳಿ, ಅವರಿಬ್ಬರೂ ಪರಮಾನಂದಭರಿತರಾಗಿ ನಿಂತಿದ್ದರು. ಇಷ್ಟರಲ್ಲಿ ಸುಗ್ರೀವನು ದಧಿಮುಖನ ಮಾತನ್ನು ಕೇಳಿ ಸಂತುಷ್ಟಹೃದಯನಾಗಿ, ತಿರುಗಿ ಆ ವನಪಾಲಕ ನನ್ನು ಕುರಿತು, "ಎಲೆ ಆರ್ಯನೆ! ಆ ವಾನರರು ತಾವು ಉದ್ದೇಶಿಸಿ ಹೋದ ಕಾರ್ಯವನ್ನು ನಡೆಸಿ ಕೃತಾರ್ಥರಾಗಿ ಬಂದಿರುವರು. ಆದುದರಿಂದ ಅವರು ನಮ್ಮ ತೋಟದಲ್ಲಿ ಮಧುವನ್ನು ಕುಡಿದುದಕ್ಕಾಗಿ ನನಗೆ ಸಂತೋಷವೇ ಹೊರತು ವ್ಯಸನ ವಿಲ್ಲ. ಅವರು ನಮ್ಮ ಕಾರ್ಯವನ್ನು ಸಾಧಿಸಿ ಬಂದಿರುವುದರಿಂದ, ಅವರು ಎಷ್ಟೇ ಚೇಷ್ಟೆಗಳನ್ನು ಮಾಡಿದರೂ ನಾವು ಕ್ಷಮಿಸಬೇಕಾದುದೇ ನ್ಯಾಯವು. ಆದು ದರಿಂದ ನಾನು ಕ್ಷಮಿಸಿರುವೆನು ಹೋಗು! ಆದರೆ ಕೃತಾರ್ಥರಾಗಿ ಬಂದ ಆ ಹನುಮದಾದಿಗಳನ್ನು, ಶೀಘ್ರದಲ್ಲಿಯೇ ಕಣ್ಣಾರೆ ನೋಡುವುದಕ್ಕೂ, ಸೀತೆ ಯನ್ನು ಕಾಣುವುದಕ್ಕಾಗಿ ಅವರು ಪಟ್ಟ ಪ್ರಯಾಸವನ್ನು ಕಿವಿಯಿಂದ ಕೇಳುವು ದಕ್ಕೂ ನನಗೂ ಈ ರಾಮಲಕ್ಷ್ಮಣರಿಗೂ ಮೇಲೆಮೇಲೆ ಆತುರವು ಹೆಚ್ಚು ತ್ತಿರುವುದು. ಆದುದರಿಂದ ಅವರನ್ನು ಬೇಗನೆ ಕಳುಹಿಸು ಹೋಗು" ಎಂದನು. ತಮ್ಮ ಕಾರ್ಯವು ಕೈಗೂಡಿತೆಂಬ ಸಂತೋಷದಿಂದ ಅರಳಿದ ಕಣ್ಣುಳ್ಳವರಾಗಿಯೂ, ಪುಳಕಿತವಾದ ಮೈಯುಳ್ಳವರಾಗಿಯೂ ಮುಂದೆ ನಿಂತಿದ್ದ ಆ ರಾಮಲಕ್ಷ್ಮಣರನ್ನು ನೋಡಿ, ಸುಗ್ರೀವನೂ ಸಂತೋಷದಿಂದ ರೋಮಾಂಚಿತಗಾತ್ರನಾಗಿ, ಕಾರ್ಯ ಸಿದ್ಧಿಯೇ ಕೈಗೆ ಬಿದ್ದಂತೆ ಪರಮಾನಂದಭರಿತನಾಗಿದ್ದನು.

ಇಲ್ಲಿಗೆ ಅರುವತ್ತಮೂರನೆಯ ಸರ್ಗವು.

---

ದಧಿಮುಖನು ಅಂಗದಾದಿಗಳನ್ನು ಸುಗ್ರೀವನಬಳಿಗೆ ಕರೆತಂದುದು. ಹನುಮಂತನು ಸೀತೆಯನ್ನು ನೋಡಿಬಂದ ಸಂಗತಿಯನ್ನು ರಾಮನಿಗೆ ತಿಳಿಸಿದುದು.

ಸುಗ್ರೀವನು ಈ ಮಾತನ್ನು ಹೇಳಿದಕೂಡಲೇ ದಧಿಮುಖನ ಕೋಪವೂ ಶಾಂತವಾಗಿ ಅವನಿಗೂ ಸಂತೋಷವು ಹುಟ್ಟಿತು. ಆಗ ಅವನು ರಾಮನಿಗೂ, ಲಕ್ಷ್ಮಣನಿಗೂ, ಸುಗ್ರೀವನಿಗೂ ಕ್ರಮವಾಗಿ ವಂದನವನ್ನು ಮಾಡಿ, ತನ್ನ ಕಡೆಯ ವನಪಾಲಕರೊಡನೆ ಆಗಲೇ ಆಕಾಶಕ್ಕೆ ಹಾರಿಬಿಟ್ಟನು. ತಾನು ಬಂದ ರೀತಿಯಲ್ಲಿಯೇ ವೇಗದಿಂದ ಹೊರಟು ಮಧುವನದಲ್ಲಿ ಆಕಾಶದಿಂದ ನೆಲಕ್ಕಿಳಿದನು. ಹೀಗೆ ದಧಿಮುಖನು ಮಧುವನವನ್ನು ಪ್ರವೇಶಿಸುವಷ್ಟರಲ್ಲಿ, ಅಲ್ಲಿದ್ದ ವಾನರೋತ್ತಮರೆಲ್ಲರೂ ಮತ್ತಿಳಿದು, ಮೊದಲು ತಾವು ಪಾನಮಾಡಿದ್ದ ಜೇನನ್ನೂ, ಅನುಪಾನವಾಗಿ ಕುಡಿದ ನೀರನ್ನೂ ಮೂತ್ರದ್ವಾರದಿಂದ ಬಿಡುತ್ತಿರುವುದನ್ನು ಕಂಡನು. ವೀರನಾದ ಆ ದಧಿಮುಖನು ಸಂತೋಷದಿಂದ ಕೈಮುಗಿಯುತ್ತ ಮುಂದೆ ಹೋಗಿ, ಬಹುಮೃದುವಾದ ವಾಕ್ಯದಿಂದ ಅಂಗದನನ್ನು ಕುರಿತು, 'ಎಲೈ ಸೌಮ್ಯನೆ! ನಮ್ಮ ತಪ್ಪನ್ನು ಮನ್ನಿಸಬೇಕು! ನಾವು ತಡೆದೆವೆಂದು ಕೋಪಮಾಡಕೂಡದು! ಈ ವನಪಾಲಕರು ಏನೋ ಕೋಪದಿಂದಲೂ, ಅಜ್ಞಾನದಿಂದಲೂ ನಿಮ್ಮನ್ನು ತಡೆದರು. ನೀನು ಯುವರಾಜನಾದುದರಿಂದ ಈ ತೋಟದಲ್ಲಿ ನಿನಗೆ ಪೂರ್ಣಾಧಿಕಾರವುಂಟು! ಅಜ್ಞಾನದಿಂದ ನಾವು ನಿನ್ನಲ್ಲಿ ತಪ್ಪನ್ನು ನಡೆಸಿಬಿಟ್ಟೆವು. ನಮ್ಮನ್ನು ಮನ್ನಿಸಬೇಕು! ನಾನು ಇಲ್ಲಿಂದ ಹೋಗಿ ನಿನ್ನ ಚಿಕ್ಕಪ್ಪನಾದ ಸುಗ್ರೀವನೊಡನೆ ನೀವೆಲ್ಲರೂ ಇಲ್ಲಿಗೆ ಬಂದಿರುವ ಸಂಗತಿಯನ್ನು ತಿಳಿಸಿದೆನು. ಈ ಮಾತನ್ನು ಕೇಳಿದೊಡನೆ ಆತನು ಬಹಳ ಸಂತೋಷಗೊಂಡನೇ ಹೊರತು, ನೀವು ತೋಟವನ್ನು ಕೆಡಿಸಿದ ಸಂಗತಿಯನ್ನು ಕೇಳಿಯೂ ಸ್ವಲ್ಪಮಾತ್ರವೂ ಕೋಪಿಸಲಿಲ್ಲ. ಇದಲ್ಲದೆ ನಮ್ಮ ಪ್ರಭುವಾದ ಆ ಸುಗ್ರೀವನು ನಿಮ್ಮ ಆಗಮನಕ್ಕಾಗಿ ಬಹಳ ಸಂತೋಷಗೊಂಡು, ಈಗಲೇ ನಿಮ್ಮನ್ನು ಕರೆತರುವಂತೆಯೂ ನನಗೆ ಆಜ್ಞಾಪಿಸಿ ಕಳುಹಿಸಿದನು" ಎಂದನು. ದಧಿಮುಖನು ಹೇಳಿದ ಈ ಪ್ರಿಯವಾಕ್ಯವನ್ನು ಕೇಳಿ ಮಾತಿನಲ್ಲಿ ಚತುರನಾದ ಅಂಗದನು ಅಲ್ಲಿದ್ದ ವಾನರರನ್ನು ಕುರಿತು, "ಎಲೈ ವಾನರೋತ್ತಮರೆ? ಓಹೋ! ನಾವು ಇಲ್ಲಿಗೆ ಬಂದ ವಿಷಯವು ಆಗಲೇ ರಾಮನ ಕಿವಿಗೆ ಮುಟ್ಟಿದಂತಿದೆ. ಕಾರ್ಯವನ್ನು ಸಾಧಿಸಿ ಬಂದ ನಾವು, ಇನ್ನು ಮೇಲೆ ಇಲ್ಲಿ ತಡಮಾಡಿ ನಿಲ್ಲುವುದು ಯುಕ್ತವಲ್ಲ! ಇಲ್ಲಿರುವ ವಾನರರೆಲ್ಲರೂ ಈ ತೋಟದಲ್ಲಿ ಯಥೇಚ್ಛವಾಗಿ ಮಧುವನ್ನು ಕುಡಿದು ವಿಶ್ರಾಂತಿಯನ್ನೂ ಹೊಂದಿದುದಾಯಿ

ತಪ್ಪೆ? ಇನ್ನು ಮೇಲೆ ನಾವು ನಡೆಸಬೇಕಾದ ಕಾರ್ಯಶೇಷವೇನು? ನಮ್ಮ ಪ್ರಭು ವಾದ ಸುಗ್ರೀವನನ್ನು ನೋಡಬೇಕಾದುದೊಂದೇ ಅಲ್ಲವೆ! ಆದರೆ ನಾನು ಯಾವ ವಿಷಯದಲ್ಲಿಯೂ ನಿಮ್ಮನ್ನು ನಿರ್ಬಂಧಿಸಲಾರೆನು! ಎಲೆ ವಾನರಶ್ರೇಷ್ಠರೆ? ಈಗಲೂ ನೀವೆಲ್ಲರೂ ಸೇರಿ ಹೇಗೆ ನಿಯಮಿಸುವಿರೋ ಹಾಗೆಯೇ ನಾನೂ ನಡೆದು ಕೊಳ್ಳತಕ್ಕವನು. ನಾನು ನಿಮಗೆ ಪರತಂತ್ರನೇ ಹೊರತು ಸ್ವತಂತ್ರನಲ್ಲ. ಇಲ್ಲಿ ನಾನು ಯುವರಾಜನೆಂಬ ಹೆಸರನ್ನು ಹೊತ್ತಿದ್ದರೂ ಈಗ ಯಾವ ವಿಷಯಕ್ಕಾಗಲಿ ನಿಮ್ಮನ್ನು ನಿಯಮಿಸುವುದಕ್ಕೆ ಮಾತ್ರ ಸ್ವತಂತ್ರನಲ್ಲ! ಹೇಗಿದ್ದರೂ ನೀವು ಕಾರ್ಯ ವನ್ನು ಸಾಧಿಸಿ ಬಂದವರು! ನಿಮ್ಮ ಮೇಲೆ ಅಧಿಕಾರವನ್ನು ಬೀರುವುದೂ ಯುಕ್ತ ವಲ್ಲ!" ಎಂದನು. ಹೀಗೆ ಅಂಗದನು ಎಂದೆಂದಿಗೂ ತಮ್ಮ ಮನಸ್ಸಿನಲ್ಲಿ ನಾಟುವಂತೆ ಹೇಳಿದ ಈ ವಾಕ್ಯವನ್ನು ಕೇಳಿ, ಅಲ್ಲಿದ್ದ ವಾನರರೆಲ್ಲರೂ ಸಂತುಷ್ಟ ಹೃದಯರಾಗಿ, ಆ ಅಂಗದನನ್ನು ಕುರಿತು, "ಎಲೈ ಯುವರಾಜನೆ! ಈಗ ಲೀಗ ನೀನು ವಾನರೋತ್ತಮನೆಂಬುದು ಸ್ಪಷ್ಟವಾಯಿತು! ಪ್ರಭುತ್ವವಿರು ವಾಗಲೂ ಹೀಗೆ ಹೇಳುವವನಾವನುಂಟು! ಪ್ರಭುತ್ವವು ಬಂದಾಗ ಲೋಕದಲ್ಲಿ ಪ್ರತಿಯೊಬ್ಬನೂ ಆ ಅಧಿಕಾರದಿಂದ ಮೈಮರೆತು ಗರ್ವಪಡುವನೇ ಹೊರತು ಹೀಗೆ ವಿನಯವನ್ನು ತೋರಿಸಲಾರನು! ಈ ಮಾತು ನಿನಗುಚಿತವಾಗಿಯೇ ಇರು ವುದು. ಇಷ್ಟು ವಿನಯವು ಬೇರೊಬ್ಬರಿಗೆ ಉಂಟಾಗಲಾರದು. ಈ ನಿನ್ನ ವಿನ ಯವೇ ನಿನಗೆ ಮುಂದೆಬರುವ ಶ್ರೇಯಸ್ಸನ್ನೂ ಸೂಚಿಸುವುದು. ನಾವೆಲ್ಲರೂ ಮೊದಲೇ ನಮ್ಮ ಪ್ರಭುವಾದ ಸುಗ್ರೀವನ ಬಳಿಗೆ ಹೋಗುವುದಕ್ಕೆ ಸಿದ್ಧರಾಗಿ ಸಮಯವನ್ನು ನಿರೀಕ್ಷಿಸುತ್ತ ಆತುರದಿಂದ ಕಾದಿರುವೆವು. ಆದರೇನು? ವಾನರರಾದ ನಮಗೆ ನಿನ್ನ ಅಪ್ಪಣೆಯಿಲ್ಲದೆ, ಎಲ್ಲಿಗಾದರೂ ಒಂದು ಹೆಜ್ಜೆಯನ್ನಿಟ್ಟು ಹೋಗುವುದಕ್ಕೂ ಸಾಧ್ಯವಲ್ಲ. ಈ ಮಾತು ಸತ್ಯವು?" ಎಂದರು. ಇದನ್ನು ಕೇಳಿ ಪುನಃ ಅಂಗದನು ಅವರನ್ನು ಕುರಿತು, "ಸರಿ! ಹಾಗಾದಲೆ ಹೊರಡುವೆವು." ಎಂದನು. ಈ ಮಾತು ಅಂಗದನ ಬಾಯಿಂದ ಹೊರಡುತ್ತಿರುವಾಗಲೇ ಮಹಾ ಬಲಾಢ್ಯರಾದ ಕೆಲವು ವಾನರರು ಆಕಾಶಕ್ಕೆ ಹಾರಿಬಿಟ್ಟರು. ಅಂಗದನು ಮುಂದಾಗಿ ಹಾರಿದುದನ್ನು ಕಂಡು ಅಲ್ಲಿದ್ದ ಸಮಸ್ತವಾನರರೂ ಮೇಲೆ ಹಾರಿದರು. ಹೀಗೆ ಆ ಕಪಿವೀರರೆಲ್ಲರೂ ಯಂತ್ರಗಳಿಂದ ಹಾರಿಸಲ್ಪಟ್ಟ ಪರ್ವತಗಳಂತೆ, ಮೇಲೆ ಹಾರಿ ಆಕಾಶವನ್ನು ಎಡೆಬಿಡದೆ ವ್ಯಾಪಿಸಿ ಅಂಗದನ ಹಿಂದೆ ಹೊರಟು, ವಾಯು ಪ್ರೇರಿತಗಳಾದ ಮಹಾಮೇಘಗಳಂತೆ, ಮಹಾಧ್ವನಿಯಿಂದ ಕೂಗುತ್ತ ಮಹಾವೇಗದಿಂದ ಹಾರಿಬರುತ್ತಿದ್ದರು. ಅಂಗದನು ಬಂದಿಳಿಯುವಷ್ಟರಲ್ಲಿ ಇತ್ತಲಾಗಿ ಕಪಿರಾಜನಾದ ಸುಗ್ರೀವನು, ಸೀತಾವಿರಹದುಃಖದಿಂದ ಕೊರಗುತ್ತಿದ್ದ ರಾಮನನ್ನು

ನೋಡಿ “ರಾಮಾ! ಇನ್ನು ನಿನ್ನ ದುಃಖವನ್ನು ಬಿಡು. ಸಮಾಧಾನದಿಂದಿರು. ನಿನಗೆ ಮಂಗಳವಾಗಲಿ. ಸೀತೆಯು ಸಿಕ್ಕಿರುವಳು! ಇದಕ್ಕೆ ಸಂದೇಹವಿಲ್ಲ. ಆ ವಾನರರು ಸೀತೆಯನ್ನು ನೋಡದಿದ್ದ ಪಕ್ಷದಲ್ಲಿ, ನಾನು ನಿರ್ಣಯಿಸಿದ್ದ ಕಾಲವೂ ಅತಿಕ್ರಮಿಸಿ ಹೋಗಿರುವಾಗ ಇಲ್ಲಿಗೆ ಬರುತ್ತಲೇ ಇರಲಿಲ್ಲ. ಅದರಲ್ಲಿಯೂ ಮುಖ್ಯವಾಗಿ ಯುವರಾಜನಾದ ಅಂಗದನು, ‘ತಾನು ಹೋದಕಾರ್ಯವು ನಡೆಯದಿದ್ದಪಕ್ಷದಲ್ಲಿ ತಿರುಗಿ ನನ್ನಲ್ಲಿಗೆ ಬರುವುದೆಂದರೇನು? ಒಂದುವೇಳೆ ಅವರು ಕಾರ್ಯವನ್ನು ಸಾಧಿಸದಂತೆಯೇ ಬಂದು, ವನಭಂಗವೆಂಬ ಈ ಚೇಷ್ಟೆಗೆ ತೊಡಗಿದ್ದ ಪಕ್ಷದಲ್ಲಿ, ಆ ಕಾರ್ಯವನ್ನು ಮಾಡಿಸಿದುದಕ್ಕಾಗಿ, ನಮ್ಮ ಅಂಗದನಿಗೆ ಮನಸ್ಸಿನಲ್ಲಿ ಬಹಳವಾಗಿ ಕಳಕಳವೂ, ಮುಖದಲ್ಲಿ ದೈನ್ಯವೂ ಇರುತ್ತಿತ್ತೇ ಹೊರತು ಆಗ ಅವನಿಗೆ ಇಷ್ಟು ಉತ್ಸಾಹವೆಂದರೇನು? ಆ ಮಧುವನವಾದರೋ! ನಮಗೆ ತಂದೆತಾತಂದಿರ ಕಾಲದಿಂದ ಬಂದಿರುವುದು. ನಮ್ಮ ಹಿರಿಯರೆಲ್ಲರೂ ಎಷ್ಟೋ ಜಾಗರೂಕತೆಯಿಂದ ಅದನ್ನು ರಕ್ಷಿಸುತ್ತಿದ್ದರು. ಅಂತಹ ವನವನ್ನು ಈ ಅಂಗದನು ನಿರ್ಭಯವಾಗಿ ಕೆಡಿಸಬೇಕಾದರೆ ಅವನ ಮನಸ್ಸಿನಲ್ಲಿ ಎಷ್ಟೋ ಸಂತೋಷವಿರಬೇಕು. ಸಂತೋಷವಿಲ್ಲದಿದ್ದರೆ. ಮಾತ್ರ ಎಂದಿಗೂ ಅವನು ಈ ಕಾರ್ಯಕ್ಕೆ ಅವಕಾಶಕೊಡುತ್ತಿರಲಿಲ್ಲ! ಎಲೈ ವ್ರತನಿಷ್ಠನೆ! ಇನ್ನು ನಿನ್ನ ದುಃಖವನ್ನು ಬಿಟ್ಟು ಸಮಾಧಾನದಿಂದಿರು. ನೀನು ಕುಶಲಿಯಾದುದರಿಂದ ನಿನ್ನನ್ನು ಪಡೆದ ಕೌಸಲ್ಯೆಯು ಸುಪುತ್ರವತಿಯೆನಿಸಿಕೊಂಡಳು. ಸೀತೆಯು ಸಿಕ್ಕಿರುವುದರಲ್ಲಿ ಸಂದೇಹವಿಲ್ಲ. ನಮ್ಮ ಹನುಮಂತನೇ ಅವಳನ್ನು ನೋಡಿ ಬಂದಿರಬೇಕು. ಹನುಮಂತನು ಹೊರತು ಬೇರೆ ಯಾರೂ ಈ ಕಾರ್ಯವನ್ನು ಸಾಧಿಸಲಾರರು. ಸೂರ್ಯನಲ್ಲಿ ತೇಜಸ್ಸು ಹೇಗೋ ಹಾಗೆ ಅವನಲ್ಲಿ ಕಾರ್ಯಸಿದ್ಧಿಯೂ, ಬುದ್ಧಿಯೂ, ಉತ್ಸಾಹವೂ, ಪರಾಕ್ರಮವೂ, ಸ್ಥಿರವಾಗಿ ನೆಲೆಗೊಂಡಿರುವುವು. ಯಾವಕಾರ್ಯಕ್ಕೆ ಅಂಗದನು ನಿಯಾಮಕನಾಗಿಯೂ, ಜಾಂಬವಂತನು ಮಂತ್ರಿಯಾಗಿಯೂ, ಹನುಮಂತನು ಸಾಧಕನಾಗಿಯೂ ನಿಲ್ಲುವನೋ, ಅಂತಹ ಕಾರ್ಯವು ತಪ್ಪದೆ ಸಿದ್ಧಿಸುವುದೇ ಹೊರತು ಬೇರೆ ಗತಿಯನ್ನು ಹೊಂದದು! ರಾಮಾ! ಇನ್ನು ನಿನ್ನ ಚಿಂತೆಯನ್ನು ಬಿಡು” ಎಂದನು. ಇಷ್ಟರಲ್ಲಿ, ಅಂಗದಾದಿವಾನರರೆಲ್ಲರೂ ಕಿಷ್ಕಿಂಧೆಯನ್ನು ಸಮೀಪಿಸಿದರು. ಅವರೆಲ್ಲರೂ ಹನುಮಂತನು ಸಾಧಿಸಿಬಂದ ಕಾರ್ಯದಿಂದ ಹೆಮ್ಮೆಗೊಂಡವರಾಗಿ, ಆಕಾಶದಿಂದಲೇ ತಮ್ಮ ಕಾರ್ಯಸಿದ್ಧಿಯನ್ನು ಕೂಗಿ ಹೇಳುವಂತೆ, ಒಬ್ಬರಿಗೆ ಮೇಲೊಬ್ಬರು ಕಿಲಕಿಲಶಬ್ದವಿಯೊಡನೆ ಸಿಂಹನಾದವನ್ನು ಮಾಡುತ್ತಿರಲು, ಆ ಉತ್ಸಾಹದ ಗದ್ದಲವನ್ನು ಸುಗ್ರೀವನು ಕೇಳಿ, ಮನಸ್ಸಿನಲ್ಲಿ ಸಂತೋಷದಿಂದುಕ್ಕುತ್ತ ತನ್ನ ಬಾಲವನ್ನು ಉದ್ದಕ್ಕೆ ಬೀಸಿ,

ಆ ಮಾಲ್ಯವತ್ಪರ್ವತದ ಶಿಖರದಲ್ಲಿಯೇ ಸ್ತಬ್ಧನಾಗಿ ನಿಂತಿದ್ದನು. ಆ ವಾನರರೆಲ್ಲರೂ, ಅಂಗದನನ್ನೂ, ಹನುಮಂತನನ್ನೂ, ಮುಂದಿಟ್ಟುಕೊಂಡು, ರಾಮದರ್ಶನಾತುರದಿಂದ ಮುಂದೆ ಬಂದರು. ಅವರೆಲ್ಲರೂ ಸಂತೋಷದಿಂದ ಪುಳಕಿತವಾದ ಮೈಯುಳ್ಳವರಾಗಿ, ರಾಮಸುಗ್ರೀವರ ಸಮೀಪದಲ್ಲಿದ್ದರು. ಅಲ್ಲಿ ಮಹಾಬಾಹುವಾದ ಹನುಮಂತನು, ರಾಮಸುಗ್ರೀವರಿಬ್ಬರಿಗೂ ತಲೆಬಗ್ಗಿ ಸಾಷ್ಟಾಂಗಪ್ರಣಾಮವನ್ನು ಮಾಡಿ "ಸ್ವಾಮಿ! ಸೀತಾದೇವಿಯು ಯಾವ ಅಪಾಯವೂ ಇಲ್ಲದೆ ತನ್ನ ಸಾತಿವ್ರತ್ಯನಿಯಮದೊಡನೆ ಕುಶಲದಿಂದಿರುವಳು" ಎಂದು ರಾಮನಲ್ಲಿ ವಿಜ್ಞಾಪಿಸಿದನು. ಆಗ ವಾಯುಪುತ್ರನಾದ ಆ ಹನುಮಂತನೇ ಈ ಕಾರ್ಯವನ್ನು ಸಾಧಿಸಿರಬೇಕೆಂದು, ಲಕ್ಷ್ಮಣಸುಗ್ರೀವರಿಬ್ಬರೂ ಮನಸ್ಸಿನಲ್ಲಿ ನಿಶ್ಚಯಿಸಿ, ಪರಮಾನಂದಭರಿತರಾಗಿ, ಗೌರವದೃಷ್ಟಿಯಿಂದ ಆ ಹನುಮಂತನನ್ನೇ ನೋಡುತ್ತಿದ್ದರು. ಹಾಗೆಯೇ ಪರಂತಪನಾದ ರಾಮನೂ ಕೂಡ ಪ್ರೀತಿಯಿಂದಲೂ, ಗೌರವದಿಂದಲೂ ಹನುಮಂತನನ್ನು ನೋಡುತ್ತ ಸಂತೋಷದಿಂದಿದ್ದನು.

ಇಲ್ಲಿಗೆ ಅರುವತ್ತುನಾಲ್ಕನೆಯ ಸರ್ಗವು.

---

{ ಹನುಮಂತನು ರಾಮಸನ್ನಿಧಿಯಲ್ಲಿ ಸೀತಾವೃತ್ತಾಂತವೆಲ್ಲವನ್ನೂ ತಿಳಿಸಿ ಚೂಡಾಮಣಿಯನ್ನು ಕೊಟ್ಟುದು. }

ಹೀಗೆ ಆ ವಾನರರು ವಿಚಿತ್ರವನಗಳಿಂದ ತುಂಬಿದ ಪ್ರಸ್ರವಣಪರ್ವತವನ್ನು ಸೇರಿ, ಅಲ್ಲಿ ರಾಮನಿಗೂ, ಮಹಾಬಲಾಢ್ಯನಾದ ಲಕ್ಷ್ಮಣನಿಗೂ, ಸಾಷ್ಟಾಂಗಪ್ರಣಾಮವನ್ನು ಮಾಡಿ, ಸುಗ್ರೀವನಿಗೂ ನಮಸ್ಕರಿಸಿ, ಯುವರಾಜನಾದ ಅಂಗದನನ್ನು ಮುಂದಿಟ್ಟುಕೊಂಡು, ಸೀತಾವೃತ್ತಾಂತವನ್ನು ಹೇಳತೊಡಗಿದರು. ಆ ವಾನರರಲ್ಲಿ ಒಬ್ಬೊಬ್ಬರೂ ರಾಮನಿಗೆ ಸೀತಾವೃತ್ತಾಂತವೆಂಬ ಪ್ರಿಯವಾರ್ತೆಯನ್ನು ತಿಳಿಸುವುದರಲ್ಲಿ, ನಾನು ತಾನೆಂಬ ಆತುರದಿಂದ, ಕ್ರಮವಿಲ್ಲದೆ ಎಲ್ಲರೂ ಒಟ್ಟಾಗಿ ಸೇರಿ, ರಾವಣಾಂತಃಪುರದಲ್ಲಿ ಸೀತೆಯು ಸೆರೆಸಿಕ್ಕಿರುವುದನ್ನೂ, ರಾಕ್ಷಸಸ್ತ್ರೀಯರು ಆಕೆಯನ್ನು ಸುತ್ತಿಮುತ್ತಿ ಹೆದರಿಸುತ್ತಿರುವುದನ್ನೂ, ಸೀತೆಗೆ ರಾಮನಲ್ಲಿರುವ ಅತ್ಯಂತಾನುರಾಗವನ್ನೂ ರಾವಣನು ಸೀತೆಗೆ ನಿರ್ಣಯಿಸಿರುವ ಎರಡು ತಿಂಗಳ ಗಡುವನ್ನೂ; ಇನ್ನೂ ಕೆಲಕೆಲವು ಮುಖ್ಯಾಂಶಗಳನ್ನೂ ರಾಮನ ಮುಂದೆ ಒಂದೇ ಕೂಗಾಗಿ ಕೂಗಿಬಿಟ್ಟರು. ಆದರೆ ರಾಮನು ಮುಖ್ಯವಾಗಿ ಸೀತಾದೇವಿಗೆ

ಯಾವ ಅಪಾಯವೂ ಇಲ್ಲವೆಂಬ ಸಂಗತಿಯನ್ನು ಮಾತ್ರ ಆ ವಾನರಮುಖದಿಂದ ಕೇಳಿ ಸಂತೋಷಯುಕ್ತನಾಗಿ, ಆ ವಾನರರನ್ನು ಕುರಿತು, "ಎಲೈ ವಾನರೋತ್ತಮರೆ ? ಸೀತೆಯು ಈಗ ಎಲ್ಲಿರುವಳು ? ಆಕೆಯ ಮನಸ್ಸು ನನ್ನಲ್ಲಿ ಹೇಗಿರುವುದು ? ಸೀತೆಯ ವಿಷಯವಾದ ಸಂಗತಿಗಳೆಲ್ಲವನ್ನೂ ನೀವು ನನಗೆ ಇನ್ನೂ ಚೆನ್ನಾಗಿ ವಿವರಿಸಿ ತಿಳಿಸಬೇಕು" ಎಂದು ಕೇಳಿದನು. ರಾಮನು ಹೇಳಿದ ಈ ಮಾತನ್ನು ಕೇಳಿ ಆ ವಾನರರು ಸೀತೆಯ ವೃತ್ತಾಂತವನ್ನು ಚೆನ್ನಾಗಿ ತಿಳಿದ ಹನುಮಂತನ ಮುಖವನ್ನು ನೋಡುತ್ತ ರಾಮಸನ್ನಿಧಿಯಲ್ಲಿ ಅಲ್ಲಿನ ಸಂಗತಿಗಳೆಲ್ಲವನ್ನೂ ಚೆನ್ನಾಗಿ ವಿವರಿಸುವಂತೆ ಅವನನ್ನೇ ಪ್ರೇರಿಸಿದರು. ಈ ವಾನರರ ಪ್ರೇರಣೆಯಿಂದ ವಾಯುಪುತ್ರನಾದ ಹನುಮಂತನು, ಸೀತೆಯಿರುವ ದಿಕ್ಕಿನಕಡೆಗೆ ತಿರುಗಿ, ತಲೆಬಗ್ಗಿ ನಮಸ್ಕರಿಸಿ, ತಾನು ಆಕೆಯನ್ನು ನೋಡಿಬಂದ ವಿಷಯವನ್ನು ರಾಮನಿಗೆ ವಿವರಿಸುವನು. "ಸ್ವಾಮಿ ! ನಾನು ಸೀತೆಯನ್ನು ನೋಡಬೇಕೆಂಬ ಕೋರಿಕೆಯಿಂದ ನೂರುಯೋಜನಗಳ ವಿಸ್ತಾರವುಳ್ಳ ಸಮುದ್ರವನ್ನೂ ದಾಟಿ ಹೋದೆನು. ಆ ಸಮುದ್ರದ ದಕ್ಷಿಣತೀರದಲ್ಲಿ ದುರಾತ್ಮನಾದ ರಾವಣನಿಗೆ ರಾಜಧಾನಿಯಾದ ಲಂಕೆಯೆಂಬ ಪಟ್ಟಣವೊಂದಿರುವುದು. ಅಲ್ಲಿನ ರಾವಣಾಂತಃಪುರದಲ್ಲಿ ಪತಿವ್ರತೆಯಾಗಿಯೂ ಸುಂದರೀಮಣಿಯಾಗಿಯೂ ಇರುವ ಸೀತೆಯನ್ನು ಕಂಡೆನು. ಆಕೆಯಾದರೋ ತನ್ನ ಕೋರಿಕೆಗಳೆಲ್ಲವನ್ನೂ ನಿನ್ನಲ್ಲಿಯೇ ಇರಿಸಿ, ನಿನ್ನ ಆಸೆಯಿಂದಲೇ ಈಗಲೂ ಪ್ರಾಣವನ್ನಿಟ್ಟುಕೊಂಡಿರುವಳು. ಆ ಅಂತಃಪುರಕ್ಕೆ ಸೇರಿದ ಅಶೋಕವನವೆಂಬ ತೋಟದಲ್ಲಿ ನಿನ್ನ ಪ್ರಿಯಪತ್ನಿಯಾದ ಸೀತೆಯು ಅನೇಕ ರಾಕ್ಷಸಸ್ತ್ರೀಯರ ನಡುವೆ ಸಿಕ್ಕಿಬಿದ್ದಿರುವಳು. ವಿಕಾರರೂಪವುಳ್ಳ ಆ ರಾಕ್ಷಸಸ್ತ್ರೀಯರೆಲ್ಲರೂ ಆಕೆಯನ್ನು ಸುತ್ತಿಮುತ್ತಿ ಬಾರಿಬಾರಿಗೂ ಹೆದರಿಸುತ್ತಿರುವಾಗಲೇ, ಆಕೆಯನ್ನು ನಾನು ನೋಡಿದೆನು. ಸ್ವಲ್ಪಮಾತ್ರವೂ ದುಃಖವೆಂಬುದನ್ನೇ ಅರಿಯದ ಆ ಸತೀಮಣಿಯು, ಈಗ ನಾನಾವಿಧದುಃಖದಿಂದ ಕೊರಗಿ ಸಂಕಟಪಡುತ್ತಿರುವಳು. ಆ ರಾವಣಾಂತಃಪುರದಲ್ಲಿ ಅನೇಕ ರಾಕ್ಷಸಸ್ತ್ರೀಯರು ಅವಳ ಮೇಲೆ ಕಾವಲಿರುವರು. ಆಕೆಯು ತನ್ನ ಕೂದಲನ್ನು ಒಂದೇ ಜಡೆಯಾಗಿ ಬಿಳಿಸಿಬಿಟ್ಟಿರುವಳು. ಬಹಳ ದೀನದಶೆಯನ್ನು ಹೊಂದಿರುವಳು. ಅನವರತವೂ ನಿನ್ನನ್ನೇ ಧ್ಯಾನಿಸುತ್ತಿರುವಳು. ಬರೀ ನೆಲದಮೇಲೆ ಮಲಗುವಳು. ಹಿಮಗಾಲದ ತಾವರೆಯಂತೆ ಅವಳ ದೇಹವೆಲ್ಲವೂ ಬಣ್ಣಗುಂದಿರುವುದು. ರಾವಣನು ಆಕೆಯನ್ನು ವಶಪಡಿಸಿಕೊಳ್ಳುವುದಕ್ಕಾಗಿ ಎಷ್ಟೆಷ್ಟೋ ಪ್ರಯತ್ನಗಳನ್ನು ಮಾಡಿದರೂ, ಆಕೆಯಲ್ಲಿ ಅವನ ಪ್ರಯತ್ನವೊಂದೂ ಸಫಲವಾಗಲಿಲ್ಲ. ದುರಾತ್ಮನಾದ ರಾವಣನ ಬಾಧೆಯನ್ನು ತಡೆಯಲಾರದೆ, ಆ

ಸೀತೆಯು ತಾನಾಗಿ ಪ್ರಾಣತ್ಯಾಗವನ್ನು ಮಾಡಿಕೊಳ್ಳುವುದಕ್ಕೆ ನಿಶ್ಚಯಿಸಿರುವಳು. ರಾಮಾ! ನಿನ್ನಲ್ಲಿಯೇ ಮನಸ್ಸಿಟ್ಟು ಕೊರಗುತ್ತಿರುವ ಆ ಸೀತಾದೇವಿಯನ್ನು ನಾನು ಎಷ್ಟೋ ಪ್ರಯತ್ನದಿಂದ ನೋಡುವಂತಾಯಿತು ಎಲೈ ಪುರುಷೋತ್ತಮನೆ! ಅಲ್ಲಿ ನಾನು ಮೊದಲು ಇಕ್ಷ್ವಾಕುವಂಶದ ಖ್ಯಾತಿಯನ್ನೇ ಪ್ರಶಂಸೆ ಮಾಡುತ್ತ, ಅವಳಿಗೆ ನನ್ನಲ್ಲಿ ನಂಬಿಕೆಯುಂಟಾಗುವಂತೆ ಮಾಡಿಕೊಂಡೆನು ಆದರ ಮೇಲೆ ಅವಳೊಡನೆ ಮಾತಾಡುವುದಕ್ಕಾರಂಭಿಸಿ ಇಲ್ಲಿ ನಡೆದ ಸಂಗತಿಗಳೆಲ್ಲವನ್ನೂ ತಿಳಿಸಿದೆನು. ಅವಳು ನಿನಗೂ, ಸುಗ್ರೀವನಿಗೂ ಉಂಟಾದ ಸ್ನೇಹವನ್ನು ಕೇಳಿ ಬಹಳ ಸಂತೋಷಪಟ್ಟಳು. ಆಕೆಯಲ್ಲಿ ಸದಾಚಾರವೆಂಬುದು ಸ್ಥಿರವಾಗಿ ನಿಂತಿರುವುದು. ಹಾಗೆಯೇ ನಿನ್ನಲ್ಲಿ ಭಕ್ತಿಯೂ ಆಕೆಗೆ ದೃಢವಾಗಿರುವುದು. ಎಲೈ ಪುರುಷಶ್ರೇಷ್ಠನೆ! ಉಗ್ರವಾದ ಪಾತಿವ್ರತ್ಯವೆಂಬ ಮಹಾತಪಸ್ಸಿನಿಂದಲೂ, ನಿನ್ನಲ್ಲಿ ದೃಢಭಕ್ತಿಯಿಂದಲೂ ಕೂಡಿದ ಮಹಾಭಾಗೆಯಾದ ಆ ಸೀತೆಯನ್ನು ನಾನು ಕಂಡು ಮಾತಾಡಿಸಿದಾಗ, ಆಕೆಯು ಮೊದಲು ಚಿತ್ರಕೂಟದಲ್ಲಿ ನೀನಿದ್ದಾಗ ಅಲ್ಲಿ ನಡೆದ ಒಂದು ಕಾಗೆಯ ವೃತ್ತಾಂತವನ್ನು ನಿನಗೆ ಗುರುತಾಗಿ ನನ್ನೊಡನೆ ಹೇಳಿರುವಳು. ರಾಮಾ! ಅವಳು ನನಗಾಗಿ ಹೇಳಿ ಕಳುಹಿಸಿರುವ ಇನ್ನೂ ಕೆಲವು ಸಂಗತಿಗಳುಂಟು. ಇವೆಲ್ಲವನ್ನೂ ತಿಳಿಸುವೆನು ಕೇಳು. ಅವಳು ನನ್ನೊಡನೆ "ಎಲೈ ವಾಯುಪುತ್ರನೇ! ಇಲ್ಲಿ ನೀನು ಕಣ್ಣಾರೆ ನೋಡುತ್ತಿರುವಾಗಲೇ, ರಾವಣನು ಬಂದುದು ಮೊದಲಾದ ವೃತ್ತಾಂತಗಳೆಲ್ಲವನ್ನೂ, ಪುರುಷೋತ್ತಮನಾದ ಆ ನನ್ನ ಪ್ರಿಯನಲ್ಲಿ ಇದ್ದುದಿದ್ದಂತೆ ವಿಜ್ಞಾಪಿಸಬೇಕು. ಮತ್ತು ನಿಮ್ಮ ಪ್ರಭುವಾದ ಸುಗ್ರೀವನೂ ಕೇಳುತ್ತಿರುವ ಹಾಗೆಯೇ ಈಗ ನಾನು ಹೇಳುವ ಮಾತುಗಳೆಲ್ಲವನ್ನೂ ಹೇಳು. ಆ ರಾಮನಿಗೆ ನಂಬಿಕೆಯನ್ನು ಹುಟ್ಟಿಸುವುದಕ್ಕಾಗಿ, ಇದೋ! ಈ ನನ್ನ ಚೂಡಾಮಣಿಯನ್ನೂ ಅತನ ಕೈಗೆ ಕೊಡು! ಸಂಪದ್ಯುಕ್ತವಾದ ಈ ಚೂಡಾಮಣಿಯನ್ನು ನಾನು ಬಹಳ ಪ್ರಯತ್ನದಿಂದ ಕಾಪಾಡಿಟ್ಟಿರುವೆನು. ಇದನ್ನು ರಾಮನಿಗೆ ಗುರುತಾಗಿ ಕೊಡುವಾಗ ನನ್ನ ಮಾತಿನಿಂದ ನೀನು ಅವನಿಗೆ "ಎಲೈ ಪ್ರಿಯನೆ! ಒಮ್ಮೆ ನನ್ನ ಹಣೆಯಲ್ಲಿದ್ದ ಬೊಟ್ಟು ಅಳಿಸಿ ಹೋಗಲು, ನೀನು ಪರಿಹಾಸಕ್ಕಾಗಿ ಮಣಿಶಿಲೆಯನ್ನು ಬೊಟ್ಟುಮಾಡಿ ನನ್ನ ಕೆನ್ನೆಯಲ್ಲಿಟ್ಟೆಯಲ್ಲವೆ? ಅದನ್ನೂ ನೀನು ಜ್ಞಾಪಿಸಿಕೊಂಡು ನೋಡು. ಎಲೈ ದೋಷರಹಿತನೆ! ಸಮುದ್ರದಲ್ಲಿ ಹುಟ್ಟಿದ ಈ ದಿವ್ಯಚೂಡಾಮಣಿಯನ್ನೂ ಈಗ ನಾನು ನಿನ್ನಲ್ಲಿಗೆ ಕಳುಹಿಸಿಬಿಟ್ಟೆನು. ಈ ಮಹಾವ್ಯಸನದಲ್ಲಿಯೂ

ಸಾಧ್ಯವಿಲ್ಲ. ಹೇಗಾದರೂ ಇನ್ನೊಂದು ತಿಂಗಳವರೆಗೆ ಈ ಪ್ರಾಣಗಳನ್ನು ತಡೆದುಕೊಂಡಿರುವೆನು. ಈ ರಾಕ್ಷಸರ ಬಾಧೆಯಲ್ಲಿ ಸಿಕ್ಕಿ ಒಂದು ತಿಂಗಳಮೇಲೆ ಕ್ಷಣಮಾತ್ರವೂ ಬದುಕಿರಲಾರೆನು" ಎಂದು ವಿಜ್ಞಾಪಿಸುವಂತೆ ಹೇಳಿರು ವಳು. ಆಕೆಯ ಅವಯವಗಳೆಲ್ಲವೂ ದುಃಖದಿಂದ ಕೃಶಿಸಿ ಹೋಗಿದ್ದರೂ, ಅವಳು ತನ್ನ ಪತಿವ್ರತಾಧರ್ಮವನ್ನು ಮಾತ್ರ ಬಿಡದೆ ನಡೆಸುತ್ತಿರುವಳು. ರಾವಣಾಂತಃ ಪುರದಲ್ಲಿ ಸೆರೆಸಿಕ್ಕಿರುವ ಆ ಸೀತೆಯು, ಹೆಣ್ಣು ಜಿಂಕೆಯಂತೆ ಅರಳಿದ ಕಣ್ಣುಗಳಿಂದ ನನ್ನನ್ನು ನೋಡಿ ಇಷ್ಟು ಮಾತುಗಳನ್ನು ಹೇಳಿರುವಳು. ರಾಮಾ! ಸೀತೆಯು ನನ್ನೊಡನೆ, ಯಾವಯಾವುದನ್ನು ಹೇಗೆಹೇಗೆ ಹೇಳಿದ್ದಳೋ, ಅವೆಲ್ಲವನ್ನೂ ನಿನಗೆ ಹಾಗೆಯೇ ಹೇಳಿಬಿಟ್ಟೆನು. ಮುಖ್ಯವಾಗಿ ಈಗ ನೀನು ಮೊದಲು ಸಮುದ್ರ ವನ್ನು ದಾಟುವುದಕ್ಕೆ ಬೇಕಾದ ಪ್ರಯತ್ನವನ್ನು ನೋಡಬೇಕು" ಎಂದನು. ಹೀಗೆ ಹನುಮಂತನು ರಾಜಪುತ್ರರಾದ ಆ ರಾಮಲಕ್ಷ್ಮಣರಿಬ್ಬರಿಗೂ ಈ ವೃತ್ತಾಂತ ವನ್ನು ತಿಳಿಸಿ, ಇದರಿಂದ ಅವರ ಮನಸ್ಸಿನಲ್ಲಿ ಸ್ವಲ್ಪ ಸಮಾಧಾನವುಂಟಾದುದನ್ನು ತಿಳಿದು, ಸೀತೆಯು ಕೊಟ್ಟಿದ್ದ ಚೂಡಾಮಣಿಯನ್ನು ರಾಮನ ಕೈಗೆ ಕೊಟ್ಟು, ಅವಳು ಹೇಳಿ ಕಳುಹಿಸಿದ್ದ ಸಂಗತಿಗಳನ್ನೂ [1] ಕ್ರಮವಾಗಿ ಅವರ ಮುಂದೆ ತಿಳಿಸಿಬಿಟ್ಟನು.

ಇಲ್ಲಿಗೆ ಅರುವತ್ತೈದನೆಯ ಸರ್ಗವು.

---

—{ ರಾಮನು ಚೂಡಾಮಣಿಯನ್ನು ನೋಡಿ ದುಃಖಿಸುತ್ತ, ತಿರುಗಿ ಸೀತಾವೃತ್ತಾಂತವನ್ನು ಇನ್ನೂ ವಿಸ್ತರವಾಗಿ ತಿಳಿಸುವಂತೆ ಹನುಮಂತನನ್ನು ಕೇಳಿದುದು. }—

ಹನುಮಂತನು ಹೀಗೆಂದು ಹೇಳಿ ಚೂಡಾಮಣಿಯನ್ನು ಕೈಯಲ್ಲಿ ಕೊಟ್ಟೊ ಡನೆ, ದಶರಥಪುತ್ರನಾದ ರಾಮನು ಆ ಚೂಡಾಮಣಿಯನ್ನು ತನ್ನ ಎದೆಯ ಮೇಲಿಟ್ಟುಕೊಂಡು, ದುಃಖದಿಂದ ರೋದಿಸುತ್ತಿದ್ದನು. ಅವನನ್ನು ನೋಡಿ ಲಕ್ಷ್ಮ ಣ

---

1. ಹನುಮಂತನು ಹಿಂದೆ ಮಹೇಂದ್ರಪರ್ವತದಲ್ಲಿ ಅಂಗದಾದಿ ವಾನರರೊಡನೆ ತಾನು ನಡೆಸಿದ ಸುರಸಾನಿರಸನವೇ ಮೊದಲಾದ ಒಂದೊಂದು ಸಾಹಸಕಾರ್ಯವನ್ನೂ ವಿವರವಾಗಿ ತಿಳಿಸಿದ್ದರೂ, ಇಲ್ಲಿ ರಾಮಸುಗ್ರೀವರಮುಂದೆ, ಅವೆಲ್ಲವನ್ನೂ ಹೇಳಿದರೆ, ಪ್ರಭುಗಳ ಮುಂದೆ ಆತ್ಮಸ್ತುತಿಯನ್ನು ಮಾಡಿಕೊಂಡಂತಾಗುವುದೆಂಬ ಭಾವದಿಂದ, ರಾಮನಿಗೆ ಅವಶ್ಯವಾಗಿ ತಿಳಿಸಬೇಕಾದ ಸೀತಾವೃತ್ತಾಂತವನ್ನು ಮಾತ್ರವೇ ಸೂಚಿಸಿದುದಾಗಿ ತಿಳಿಯಬೇಕು.

ಣನೂ ಅಳುವುದಕ್ಕಾರಂಭಿಸಿದನು. ಉತ್ತಮರತ್ನವಾದ ಆ ಚೂಡಾಮಣಿಯನ್ನು ನೋಡಿದೊಡನೆ, ರಾಮನು ದುಃಖದಿಂದ ಕುಗ್ಗುತ್ತ ಕಣ್ಣೀರು ತುಂಬಿಕೊಂಡು, ಸುಗ್ರೀವನನ್ನು ಕುರಿತು "ಮಿತ್ರನೆ! ತನ್ನ ಕರುವಿನಮೇಲೆ ಮೋಹಗೊಂಡ ಹಸುವು, ಆ ಕರುವನ್ನು ಕಂಡಾಗ ಅದರಲ್ಲಿ ಪ್ರೀತಿಯಿಂದ ಸೊರೆಯುಕ್ಕುವಂತೆ, ಈ ಚೂಡಾಮಣಿಯನ್ನು ನೋಡಿ ನನ್ನ ಮನಸ್ಸು ಕರಗುತ್ತಿರುವುದು. ವಿವಾಹ ಕಾಲದಲ್ಲಿ ಈ ಮಣಿರತ್ನವನ್ನು ನನ್ನ ಮಾವನಾದ ಜನಕನು ಸೀತೆಗೆ ಕೊಟ್ಟನು. ಇದನ್ನು ಸೀತೆಯ ತಲೆಗೆ ತೊಡಿಸಿದಾಗ, ಇದು ಆಕೆಯ ತಲೆಗೇ ಒಂದು ಅಪೂರ್ವ ಶೋಭೆಯನ್ನುಂಟುಮಾಡಿತು. ಇದು ಸಮುದ್ರದಲ್ಲಿ ಹುಟ್ಟಿದುದು. ಸಜ್ಜನರಿಂದ ಪೂಜಿತವಾದುದು. ಮೊದಲು ಜನಕನು ಒಂದು ಯಜ್ಞವನ್ನು ನಡೆಸಿದಾಗ ಅದರಿಂದ ಸಂತುಷ್ಟನಾದ ದೇವೇಂದ್ರನು ಈ ರತ್ನವನ್ನು ಆತನಿಗೆ ಕೊಟ್ಟನು. ಎಲೈ ಸೌಮ್ಯನೆ! ಈ ಚೂಡಾಮಣಿಯನ್ನು ನೋಡಿದರೆ, ಈಗಲೂ ನನಗೆ ನನ್ನ ತಂದೆಯಾದ ದಶರಥರಾಜನನ್ನೂ, ಮಾವನಾದ ಜನಕರಾಜನನ್ನೂ [1] ಸೀತೆಯ ತಾಯಿಯನ್ನೂ ನೋಡಿದಂತಿರುವುದು. ಈ ರತ್ನವು ನನ್ನ ಪ್ರಿಯಪತ್ನಿಯಾದ ಸೀತೆಯ ತಲೆಗೆ ಅಲಂಕಾರವಾಗಿಯೂ ಇದ್ದುದರಿಂದ, ಈಗಲೂ ಇದನ್ನು ನೋಡಿದರೆ ನನ್ನ ಪ್ರಿಯೆಯೇ ಇಲ್ಲಿಗೆ ಬಂದು ನನ್ನಿದಿರಾಗಿ ನಿಂತಂತೆಯೂ ತೋರುವುದು" ಎಂದನು. ಆಮೇಲೆ ರಾಮನು ಹನುಮಂತನ ಕಡೆಗೆ ತಿರುಗಿ "ಎಲೈ ಸೌಮ್ಯನೆ! ದಾಹಗೊಂಡವನಿಗೆ ನೀರನ್ನು ಕೊಟ್ಟು ದಾಹವನ್ನಡಗಿಸುವಂತೆ, ಸೀತೆಯು ನನ್ನ ತಾಪಶಾಂತಿಗಾಗಿ ಮತ್ತಾವ ಪ್ರಿಯವಾಕ್ಯಗಳನ್ನು ಹೇಳಿ ಕಳುಹಿಸಿರುವಳು?" ಎಂದು ಕೇಳಿದನು. ಆಮೇಲೆ ಲಕ್ಷ್ಮಣನಕಡೆಗೆ ತಿರುಗಿ, "ವತ್ಸ ಲಕ್ಷ್ಮಣಾ! ನನ್ನ ಪ್ರಿಯೆಯಾದ ಸೀತೆಯನ್ನು ಬಿಟ್ಟು ಸಮುದ್ರಜನ್ಯವಾದ ಈ ರತ್ನವು ಮಾತ್ರವೇ ಇಲ್ಲಿ ನನ್ನ ಮುಂದೆ ಬಂದಿರುವುದನ್ನು ನೋಡುತ್ತಿರುವೆನಲ್ಲಾ! ಇದಕ್ಕಿಂತಲೂ ಇನ್ನು ನನಗೆ ಬೇರೆ ಹೆಚ್ಚಾದ ದುಃಖವೇನಾಗಬೇಕು? ಎಲೈ ಸೌಮ್ಯನೆ! ಇನ್ನೊಂದು ತಿಂಗಳವರೆಗೂ ಸೀತೆಯು ಬದುಕಿರುವುದು ನಿಜವಾಗಿದ್ದರೆ, ಅವಳಿನ್ನು ಚಿರಂಜೀವಿನಿಯೆಂದೇ ಹೇಳಬೇಕಾಗಿದೆ! ನಾನಾದರೋ ಅಸಿತೇಕ್ಷಣೆಯಾದ ಆ ಪ್ರಿಯೆಯನ್ನು ಬಿಟ್ಟು ಕ್ಷಣಮಾತ್ರವಾದರೂ ಇನ್ನು ಬದುಕಿರಲಾರೆನು" ಎಂದನು. ಆ ಮೇಲೆ

---

1. ಇಲ್ಲಿ ಮೂಲದಲ್ಲಿ ಜನಕದಶರಥರಿಬ್ಬರನ್ನೇ ಸ್ಮರಿಸಿಕೊಂಡುದಾಗಿ ಕಾಣಿಸುವರೂ, ಹಿಂದೆ ಸೀತೆಯು ಹನುಮಂತನ ಕೈಗೆ ಚೂಡಾಮಣಿಯನ್ನು ಕೊಟ್ಟಾಗ "ತ್ರಯಾಣಾಂ ಸಂಸ್ಮರಿಷ್ಯತಿ" ಎಂಬುದಾಗಿ ತನ್ನ ತಾಯಿಯನ್ನೂ ಸೇರಿಸಿರುವುದರಿಂದ ಇಲ್ಲಿಯೂ ಆ ಮೂವರನ್ನೂ ಸ್ಮರಿಸಿಕೊಂಡುದಾಗಿಯೇ ತಿಳಿಯಬೇಕು.

ತಿರುಗಿ ಹನುಮಂತನನ್ನು ನೋಡಿ, “ಎಲೈ ಭದ್ರನೆ, ನೀನು ನನ್ನ ಪ್ರಿಯೆಯಾದ ಸೀತೆಯನ್ನು ಯಾವ ಸ್ಥಳದಲ್ಲಿ ನೋಡಿ ಬಂದೆಯೋ, ಅಲ್ಲಿಗೆ ನನ್ನನ್ನೂ ಈಗಲೇ ಕರೆದುಕೊಂಡು ಹೋಗು. ಅವಳ ವೃತ್ತಾಂತವನ್ನು ತಿಳಿದಮೇಲೆ ನಾನು ಕ್ಷಣಮಾತ್ರವೂ ಇಲ್ಲಿ ನಿಲ್ಲಲಾರೆನು. ಆಹಾ! ಬಹಳ ಭಯಸ್ವಭಾವವುಳ್ಳ ನನ್ನ ಪ್ರಿಯೆಯು, ಭಯಂಕರಸ್ವರೂಪವುಳ್ಳ ಆ ಘೋರರಾಕ್ಷಸಿಯರ ನಡುವೆ ಹೇಗಿರಬಲ್ಲಳು! ಕತ್ತಲೆಯಿಲ್ಲದ ಶರತ್ಕಾಲದಲ್ಲಿ ಸ್ವಚ್ಛವಾದ ಚಂದ್ರಿಕೆಯನ್ನು ಬೀರುವ ಚಂದ್ರನು ಮೇಘದಿಂದ ಮರೆಸಲ್ಪಡುವಂತೆ ಘೋರರಾಕ್ಷಸಿಯರ ನಡುವೆ ಸಿಕ್ಕಿಬಿದ್ದ ಆ ಸೀತೆಯ ಮುದ್ದುಮುಖವು ಎಷ್ಟುಮಾತ್ರವೂ ಶೋಭಿಸಲಾರದು. ಇದು ನಿಜವು! ಎಲೈ ಹನುಮಂತನೇ! ಸೀತೆಯು ಇನ್ನೇನನ್ನು ಹೇಳಿರುವಳು! ಅವೊಂದನ್ನೂ ಮರೆಸದೆ ಇದ್ದುದಿದ್ದಂತೆ ನನಗೆ ತಿಳಿಸು. ಔಷಧದಿಂದ ರೋಗಿಯು ಬದುಕುವಂತೆ ಆ ಸೀತೆಯ ಮಾತಿನಿಂದಲೇ ನಾನು ಬದುಕಬೇಕಾಗಿರುವುದು. ಎಲೈ ವಾನರೋತ್ತಮನೆ! ಸುಂದರಾಂಗಿಯಾಗಿಯೂ, ಮಧುರಭಾಷಿಣಿಯಾಗಿಯೂ, ನನ್ನ ಪ್ರಾಣಪ್ರಿಯೆಯಾಗಿಯೂ ಇರುವ ಆ ಸೀತೆಯು ನನ್ನ ವಿರಹದುಃಖದಿಂದ ಪೀಡಿತೆಯಾಗಿ ನಿನ್ನೊಡನೆ ಹೇಳಿದ ಮಾತುಗಳೆಲ್ಲವನ್ನೂ ನನಗೆ ಹೇಳು” ಎಂದನು.

ಇಲ್ಲಿಗೆ ಅರುವತ್ತಾರನೆಯ ಸರ್ಗವು.

---

## ಹನುಮಂತನು ಸೀತೆಯ ಸಂದೇಶವನ್ನು ಸವಿಸ್ತರವಾಗಿ ರಾಮನಿಗೆ ತಿಳಿಸಿದುದು.

ಮಹಾತ್ಮನಾದ ರಾಮನು ನಿರ್ಬಂಧಿಸಿ ಕೇಳಿದುದರಮೇಲೆ, ಹನುಮಂತನು ತಿರುಗಿ ರಾಮನಿಗೆ ಸೀತೆಯು ಹೇಳಿದ ಮಾತುಗಳೆಲ್ಲವನ್ನೂ ವಿವರಿಸಿ ತಿಳಿಸುತ್ತ, “ಎಲೈ ಪುರುಷಸಿಂಹನೆ! ಸೀತೆಯು ಚಿತ್ರಕೂಟದಲ್ಲಿ ನಡೆದ ವೃತ್ತಾಂತವನ್ನು ಅಲ್ಲಿ ನಡೆದಂತೆಯೇ ನನ್ನೊಡನೆ ನಿನಗೆ ಗುರುತಾಗಿ ಹೇಳಿರುವಳು. ಅಲ್ಲಿ ಸೀತೆಯು ನಿನ್ನೊಡನೆ ಮಲಗಿ ಸುಖವಾಗಿ ನಿದ್ರಿಸುತ್ತಿದ್ದು ಮೊದಲು ತಾನು ಎಚ್ಚರಗೊಂಡಳು! ಆಗ ತಟ್ಟನೆ ಒಂದು ಕಾಗೆಯು ಹಾರಿಬಂದು ಅವಳ ಸ್ತನಮಧ್ಯವನ್ನು ಗೀರಿತು. ಎಲೈ ಭರತಾಗ್ರಜನೆ! ಅವಳು ಎಚ್ಚರಗೊಂಡಮೇಲೆ ನೀನೂ ಅವಳ ತೊಡೆಯಮೇಲೆ ತಲೆಯಿಟ್ಟು ನಿದ್ರಿಸುತ್ತಿದ್ದೆ! ಆ ಕಾಗೆಯು ತಿರುಗಿ ಹಾರಿಬಂದು ಅವಳನ್ನು ಪೀಡಿಸುವುದಕ್ಕೆ ತೊಡಗಿತು. ಹೀಗೆ ಆ ಕಾಗೆಯು ಬಾರಿ

ಬಾರಿಗೂ ಹಾರಿಬಂದು ಅವಳ ಎದೆಯನ್ನು ಕುಕ್ಕುತಿತ್ತು. ಕಾಗೆಯು ಕುಕ್ಕಿದ ಗಾಯದಿಂದ ಹೊರಟ ರಕ್ತವು ನಿನ್ನ ಮೇಲೆ ಬಿದ್ದು ನಿನಗೆ ಎಚ್ಚರವುಂಟಾಯಿತು. ಇದಲ್ಲದೆ ಆಗಾಗ ಬಂದು ಬಾಧಿಸುತಿದ್ದ ಆ ಕಾಗೆಯ ಹಿಂಸೆಯನ್ನು ತಡೆಯಲಾರದೆ, ಆ ಸೀತಾದೇವಿಯೂ ಸುಖಸುಪ್ತನಾದ ನಿನ್ನನ್ನು ಎಚ್ಚರಗೊಳಿಸಿದಳು. ಎಲೈ ಮಹಾಬಾಹೂ ! ನೀನು ಮೇಲಕ್ಕೆದ್ದು ಸೀತೆಯ ಮೈಯಲ್ಲಿದ್ದ ಗಾಯವನ್ನು ನೋಡಿದೊಡನೆ, ಮಹಾಸರ್ಪದಂತೆ ಕೋಪದಿಂದ ನಿಟ್ಟುಸಿರುಬಿಡುತ್ತ, ಸೀತೆಯನ್ನು ಕುರಿತು, “ಎಲೈ ಭೀರು ! ಇದೇನು ! ನಿನ್ನ ಎದೆಯನ್ನು ಹೀಗೆ ಉಗುರುಗಳಿಂದ ಗೀರಿ ಗಾಯಮಾಡಿದವರಾರು ! ಕೋಪಗೊಂಡ ಐದು ಹೆಡೆಯ ಸರ್ಪದೊಡನೆ ಆಟವಾಡುವಂತೆ ಈ ಚೇಷ್ಟೆಯನ್ನು ನಡೆಸಿದವನಾವನು ?” ಎಂದು ನೀನು ಅವಳನ್ನು ಕೇಳುತ್ತ ನಾಲ್ಕುಕಡೆಗಳಿಗೂ ತಿರುಗಿ ಕಣ್ಣಿಟ್ಟುನೋಡುವಾಗ ಆ ಕಾಗೆಯು ರಕ್ತದಿಂದ ತೊಯ್ದು ತೀಕ್ಷ್ಣವಾದ ಕಾಲುಗುರುಗಳೊಡನೆ ಸೀತೆಗಿದಿರಾಗಿಯೇ ಕುಳಿತಿದ್ದುದನ್ನು ನೋಡಿದೆ. ಆ ವಾಯಸವೇ ಇಂದ್ರನ ಮಗನಂತೆ ! ಆದರಿಂದಲೇ ಅದು ಆ ಪಕ್ಷಿಜಾತಿಯಲ್ಲಿ ಮೇಲೆನಿಸಿಕೊಂಡು, ವಿನೋದಾರ್ಥವಾಗಿ ಭೂಮಿಯ ಮೇಲೆ ತಿರುಗುತ್ತ, ವೇಗದಲ್ಲಿಯೂ ವಾಯುವಿಗೆ ಸಮಾನವಾಗಿತ್ತು. ಆ ಕಾಗೆಯನ್ನು ನೋಡಿದೊಡನೆ ನೀನು ಕೋಪದಿಂದ ಕಣ್ಣಾಲಿಗಳನ್ನು ತಿರುಗಿಸುತ್ತ, ಆಗಲೇ ಅದನ್ನು ಕೊಲ್ಲಬೇಕೆಂದೂ ಉದ್ದೇಶಿಸಿ, ನೀನು ಕುಳಿತಿದ್ದ ದರ್ಭಾಸನದಿಂದ ಒಂದು ಹುಲ್ಲನ್ನು ಕಿತ್ತುಕೊಂಡು, ಅದನ್ನು ಬ್ರಹ್ಮಾಸ್ತ್ರಮಂತ್ರದಿಂದ ಅಭಿಮಂತ್ರಿಸಿದೆ. ಇಷ್ಟರಲ್ಲಿಯೇ ಆ ದರ್ಭವು ಕಾಗೆಯ ಮುಂದೆ ಕಾಲಾಗ್ನಿಯಂತೆ ಜ್ವಲಿಸುವುದಕ್ಕಾರಂಭಿಸಿತು. ಹೀಗೆ ಜ್ವಲಿಸುತಿದ್ದ ಆ ದರ್ಭೆಯನ್ನೇ ತೆಗೆದು ನೀನು ಕಾಗೆಯಮೇಲೆ ಪ್ರಯೋಗಿಸಿದೆ ! ಅದು ತನ್ನ ಮಹಾಜ್ವಾಲೆಯೊಡನೆ ಕಾಗೆಯನ್ನು ಬೆನ್ನಟ್ಟಿತು. ಈ ವಿಪತ್ತನ್ನು ತಪ್ಪಿಸಿ ಆ ಕಾಗೆಯನ್ನು ಕಾಪಾಡುವುದಕ್ಕೆ ಯಾರಿಂದಲೂ ಸಾಧ್ಯವಾಗಲಿಲ್ಲ ! ತಂದೆಯಾದ ಇಂದ್ರನೂ ಕೈಬಿಟ್ಟನು ! ದೇವತೆಗಳೂ ಕೈಬಿಟ್ಟರು. ಮಹರ್ಷಿಗಳೂ ಕೈಬಿಟ್ಟರು. ಮೂರುಲೋಕಗಳನ್ನೂ ಅನೇಕಾವರ್ತಿ ಸುತ್ತಿಸುತ್ತಿ ಬಂದರೂ, ಕೊನೆಗೂ, ಆ ಕಾಗೆಗೆ ತನ್ನನ್ನು ಕಾಪಾಡುವವರೊಬ್ಬರೂ ಸಿಕ್ಕಲಿಲ್ಲ. ಎಲೈ ಪರಂತಪನೆ ! ಕೊನೆಗೆ ಆ ಕಾಗೆಯೂ ಪ್ರಾಣಭಯದಿಂದ ನಡುಗುತ್ತ, ಹಿಂತಿರುಗಿ ನಿನ್ನಲ್ಲಿಗೇ ಬಂದು ನಿನ್ನ ಕಾಲಮೇಲೆ ಬಿದ್ದಿತು. ಎಲೆ ಕಾಕುತ್ಸ್ಥನೆ ! ಕಕುತ್ಸ್ಥಕುಲದಲ್ಲಿ ಹುಟ್ಟಿದ ನೀನು ಎಂತವರಿಗೂ ಶರಣ್ಯನೆಂದು ಹೆಸರುಗೊಂಡವನಾದುದರಿಂದ, ನಿನ್ನಲ್ಲಿ ಶರಣಾಗತನಾಗಿ ಬಂದು ನೆಲದಮೇಲೆ ಬಿದ್ದಿದ್ದ ಆ ಕಾಗೆಯನ್ನು ನೋಡಿ ಮರುಕಗೊಂಡು, ಕೊಲ್ಲಬೇಕಾಗಿದ್ದ

ಆ ಕೆಟ್ಟಕಾಗೆಯನ್ನೂ ನೀನು ಕೃಪೆಯಿಂದ ಕಾಪಾಡಿದೆಯಂತೆ! ಆದರೆ ನೀನು ಅಷ್ಟು ಕೃಪಾಪರವಶನಾಗಿದ್ದರೂ, ಮಂತ್ರಿಸಿದ ಬ್ರಹ್ಮಾಸ್ತ್ರವನ್ನು ವ್ಯರ್ಥಮಾಡುವುದು ಸಾಧ್ಯವಲ್ಲವೆಂಬುದಕ್ಕಾಗಿ, ಆ ಅಸ್ತ್ರದಿಂದ ಕಾಗೆಯ ಬಲಗಣ್ಣನ್ನು ಕೆಡಿಸಿದೆಯಂತೆ! ಹೀಗೆ ಆ ವಾಯಸವು ನಿನ್ನಿಂದ ರಕ್ಷಿತವಾಗಿ, ನಿನಗೂ ನಿನ್ನ ತಂದೆಯಾದ ದಶರಥರಾಜನಿಗೂ ನಮಸ್ಕರಿಸಿ ತನ್ನ ನಿವಾಸಕ್ಕೆ ಹೋಯಿತಂತೆ! ಈ ವೃತ್ತಾಂತವನ್ನೇ ಸೀತೆಯು ಗುರುತಾಗಿ ನಿನಗೆ ಹೇಳಿಕಳುಹಿಸಿರುವಳು. ಮತ್ತು ಅವಳು ನಿನ್ನನ್ನು ಕುರಿತು, "ನನ್ನ ಪ್ರಿಯನಾದ ರಾಮನು ನಡೆಸಿರುವ ಈ ಕಾರ್ಯಗಳೇ ಅವನು ಅಸ್ತ್ರಜ್ಞರಲ್ಲಿ ಮೇಲೆಂಬುದನ್ನು ಸೂಚಿಸುವುವು. ಮತ್ತು ಅವನು ಮಹಾ ಬಲಾಢ್ಯನು! ಶೀಲವಂತನು! ಹೀಗಿದ್ದರೂ ಆ ರಘುವಂಶೋತ್ತಮನು, ನನ್ನನ್ನು ಹೀಗೆ ಗೋಳಾಡಿಸುತ್ತಿರುವ ಇಲ್ಲಿನ ರಾಕ್ಷಸರಲ್ಲಿ ತನ್ನ ದಿವ್ಯಾಸ್ತ್ರಬಲವನ್ನು ತೋರಿಸದಿರುವನಲ್ಲಾ! ಇದಕ್ಕೆ ಕಾರಣವೇನು? ನಾಗರಾಗಲಿ, ಗಂಧರ್ವರಾಗಲಿ, ದೇವದಾನವರಲ್ಲಿ ಯಾರೇ ಆಗಲಿ ಯುದ್ಧದಲ್ಲಿ ಆತನನ್ನಿದಿರಿಸಿ ನಿಲ್ಲಲಾರರು. ಇಷ್ಟು ಮಹಾವೀರ್ಯವುಳ್ಳ ಆ ರಾಮನಿಗೆ ನನ್ನ ಈ ದುರವಸ್ಥೆಯನ್ನು ಕುರಿತು ಸ್ವಲ್ಪವಾದರೂ ಆತುರವಿದ್ದ ಪಕ್ಷದಲ್ಲಿ, ಈಗಲೂ ತಡಮಾಡದೆ ತನ್ನ ತೀಕ್ಷ್ಣಬಾಣಗಳಿಂದ ಈ ರಾವಣನನ್ನು ಯುದ್ಧದಲ್ಲಿ ಕೊಲ್ಲಲಿ! ಅವನ ತಮ್ಮನಾದರೂ ಸಾಮಾನ್ಯನಲ್ಲ! ಯಾವ ಶತ್ರುಗಳನ್ನಾದರೂ ಧ್ವಂಸಮಾಡಬಲ್ಲನು. ಮತ್ತು ಪುರುಷೋತ್ತಮನು. ರಘುವಂಶಕ್ಕೆ ದೀಪಪ್ರಾಯನಾಗಿರುವನು. ಅವನಾದರೂ ತನ್ನಣ್ಣನ ಅನುಮತಿಯನ್ನು ಪಡೆದು, ಇಲ್ಲಿಗೆ ಬಂದು ನನ್ನನ್ನು ರಕ್ಷಿಸದಿರುವುದೇಕೆ? ಆ ಪುರುಷಸಿಂಹರಿಬ್ಬರೂ ಬಹಳ ಸಮರ್ಥರು. ವಾಯ್ವಗ್ನಿಗಳಿಗೆ ಸಮಾನವಾದ ವೀರ್ಯವುಳ್ಳವರು. ಅವರನ್ನು ದೇವತೆಗಳಾದರೂ ಇದಿರಿಸಲಾರರು. ಹೀಗಿದ್ದರೂ ಅವರು ನನ್ನನ್ನು ರಕ್ಷಿಸದೆ ಹೀಗೆ ಉಪೇಕ್ಷಿಸುವುದೇಕೆ? ಅವರಿಬ್ಬರೂ ಯಾವ ಕಾರ್ಯದಲ್ಲಿಯೂ ಸಮರ್ಥರು! ಇಬ್ಬರೂ ಶತ್ರುಗಳನ್ನಡಗಿಸತಕ್ಕ ಮಹಾಶೂರರು. ಇದರಮೇಲೆ ಅವರಿಬ್ಬರೂ ಒಬ್ಬರಿಗೊಬ್ಬರು ಬೆಂಬಲವಾಗಿಯೂ ಸೇರಿರುವರು. ಈ ಸ್ಥಿತಿಯಲ್ಲಿಯೂ ಅವರು ನನ್ನನ್ನು ಹೀಗೆ ಉಪೇಕ್ಷಿಸಬೇಕಾದರೆ, ಇದು ತನ್ನ ದೌರ್ಭಾಗ್ಯವೇ ಹೊರತು ಬೇರೆಯಲ್ಲ. ನಾನು ಹಿಂದೆ ಯಾವುದೋ ಮಹಾಪಾತಕವನ್ನು ನಡೆಸಿರಬೇಕು! ಇದರಲ್ಲಿ ಸಂದೇಹವಿಲ್ಲ" ಎಂದಳು. ಸೀತೆಯು ಹೀಗೆ ದುಃಖದಿಂದ ಕಣ್ಣೀರು ತುಂಬಿಕೊಂಡು ಹೇಳಿದ ಮಾತನ್ನು ಕೇಳಿ, ನಾನು ತಿರುಗಿ ಅವಳನ್ನು ಕುರಿತು, "ಅಮ್ಮಾ! ರಾಮನು ನಿನ್ನ ವಿಷಯವಾಗಿ ದುಃಖಿಸುತ್ತ ಬೇರೆ ವ್ಯಾಪಾರವನ್ನೇ ಮರೆತಿರುವನು. ಸತ್ಯದಾಣೆಗೂ ಹೇಳುವೆನು. ರಾಮನ

ದುಃಖವನ್ನು ನೋಡಿದಾಗ ಲಕ್ಷ್ಮಣನೂ ದುಃಖಿಸುವನು. ಎಲೆ ದೇವಿ! ನಾನು ಎಷ್ಟೋ ಪ್ರಯತ್ನದಿಂದ ನಿನ್ನನ್ನು ಕಂಡೆನು. ಇದಕ್ಕಾಗಿ ನೀನು ಸಂತೋಷಿಸಬೇಕೇ ಹೊರತು ಇನ್ನೂ ದುಃಖಿಸುತ್ತಿರಬಹುದೆ? ಈ ಮುಹೂರ್ತದೊಳಗಾಗಾಗಿಯೇ ನಿನ್ನ ದುಃಖವು ಕೊನೆಮುಟ್ಟುವುದು! ಇನ್ನು ಸ್ವಲ್ಪಕಾಲದಲ್ಲಿಯೇ ಪುರುಷಶ್ರೇಷ್ಠರಾಗಿಯೂ, ನಿರ್ದುಷ್ಟವಾದ ನಡತೆಯುಳ್ಳವರಾಗಿಯೂ ಇರುವ ಅವರಿಬ್ಬರೂ ಬಂದು ಈ ಲಂಕೆಯನ್ನು ಸುಟ್ಟು ಬೂದಿಮಾಡುವರು. ಕ್ರೂರನಾದ ರಾವಣನನ್ನೂ ಅವನ ಪರಿವಾರಗಳೊಡನೆ ಯುದ್ಧದಲ್ಲಿ ಕೊಂದು, ನಿನ್ನನ್ನು ತಮ್ಮ ಪಟ್ಟಣಕ್ಕೆ ಕರೆದುಕೊಂಡು ಹೋಗುವರು. ಇದು ನಿಶ್ಚಯವು. ಅದರೆ ನಾನು ನಿನ್ನನ್ನು ಇಲ್ಲಿ ನೋಡಿಬಂದ ವಿಷಯದಲ್ಲಿ, ರಾಮನಿಗೆ ನಂಬಿಕೆಯೂ, ಅವನ ಮನಸ್ಸಿಗೆ ಸಂತೋಷವೂ ಹುಟ್ಟುವಂತೆ ಯಾವುದಾದರೂ ಒಂದು ಗುರುತನ್ನು ನಿನ್ನದಾಗಿ ಕೊಡು" ಎಂದು ನಾನು ಅವಳನ್ನು ಪ್ರಾರ್ಥಿಸಿದೆನು. ಆಗ ಅವಳು ನಾಲ್ಕುದಿಕ್ಕುಗಳನ್ನೂ ತಿರುಗಿ ನೋಡಿ, ರಾಕ್ಷಸಿಯರೊಬ್ಬರೂ ಕಾಣದಂತೆ, ತನ್ನ ಸೆರಗಿನಲ್ಲಿ ಕಟ್ಟಿದ್ದ ಸರ್ವೋತ್ತಮವಾದ ತನ್ನ ಚೂಡಾಮಣಿಯನ್ನು ಬಿಚ್ಚಿ ನನ್ನ ಕೈಗೆ ಕೊಟ್ಟಳು. ಎಲೈ ರಘೂತ್ತಮನೆ! ನಾನು ನಿನಗಾಗಿ ಆ ದಿವ್ಯರತ್ನವನ್ನು ತೆಗೆದುಕೊಂಡು, ಆಕೆಗೆ ತಲೆಬಗ್ಗಿ ನಮಸ್ಕರಿಸಿ, ಇತ್ತಲಾಗಿ ಹಿಂತಿರುಗಿ ಬರಬೇಕೆಂಬ ಆತುರದಿಂದಿದ್ದೆನು. ಹೀಗೆ ಪ್ರಯಾಣಸನ್ನದ್ಧನಾಗಿ, ಸಮುದ್ರವನ್ನು ಹಾರುವುದಕ್ಕೆ ತಕ್ಕಂತೆ ನಾನು ನನ್ನ ದೇಹವನ್ನು ಬಳೆಸುತ್ತಿರಲು, ಅದನ್ನು ನೋಡಿ ಸೀತೆಯು, ನಾನು ಬಿಟ್ಟುಬರುವೆನೆಂಬ ದುಃಖದಿಂದ ದೀನಳಾಗಿ ಕಣ್ಣೀರುಬಿಡುತ್ತ, ತಿರುಗಿ ನನ್ನನ್ನು ಕುರಿತು, ಗದ್ಗದಸ್ವರದೊಡನೆ "ಎಲೆ ಮಹಾತ್ಮನೆ! ಮಹಾಬಾಹುವಾಗಿಯೂ, ಕಮಲನೇತ್ರನಾಗಿಯೂ ಇರುವ ನನ್ನ ಪ್ರಿಯನಾದ ರಾಮನನ್ನೂ, ನನಗೆ ಮೈದುನನಾದ ಯಶಸ್ವಿಯಾದ ಲಕ್ಷ್ಮಣನನ್ನೂ ಕಣ್ಣಾರೆ ನೋಡುವ ನೀನೇ ಮಹಾಭಾಗ್ಯಶಾಲಿಯು! ನನಗೆ ಆ ಭಾಗ್ಯವೆಲ್ಲಿ!" ಎಂದಳು. ಈ ಮಾತನ್ನು ಕೇಳಿ ನಾನು ತಿರುಗಿ ಸೀತೆಯನ್ನು ಕುರಿತು, "ಎಲೆ ದೇವಿ! ಹಾಗೆ ನಿನಗೆ ಕುತೂಹಲವಿದ್ದರೆ ನನ್ನ ಬೆನ್ನನ್ನೇರಿ ಕುಳ್ಳಿರು! ನಿನಗೂ ನಾನು ಈಗಲೇ ಲಕ್ಷ್ಮಣಸುಗ್ರೀವರೊಡಗೂಡಿದ ನಿನ್ನ ಪ್ರಿಯನಾದ ರಾಮನನ್ನು ತೋರಿಸಿಕೊಡುವೆನು!" ಎಂದೆನು. ಅದಕ್ಕಾ ಸೀತೆಯು "ಎಲೆ ವಾನರೋತ್ತಮನೆ! ಪರಸ್ತ್ರೀಯಾ[illegible] ನಾನು ನಿನ್ನ ಬೆನ್ನನ್ನೇರುವುದು ಧರ್ಮವಲ್ಲ! ಎಂದಿಗೂ ಪರಪುರುಷರನ್ನು ನಾನು ಸ್ಪರ್ಶಿಸುವವಳಲ್ಲ! ಮೊದಲು ಆ ರಾಕ್ಷಸನು ನನ್ನನ್ನು ಕದ್ದು ತರು[illegible] ಬಲಾತ್ಕಾರದಿಂದ ನನ್ನ ದೇಹವನ್ನು ಸ್ಪರ್ಶಿಸಿದುದೂ ನನ್ನ ತಪ್ಪಲ್ಲ. ಕಾಲಗತಿಯಿ[illegible]

ಹಾಗಾದುದಕ್ಕಾಗಿ ನಾನೇನು ಮಾಡಬಲ್ಲೆನು ? ಎಲೈ ವಾನರಸಿಂಹನೆ ! ಬೇಡ! ಈಗ ನೀನೊಬ್ಬನು ಮಾತ್ರವೇ ಆ ರಾಜಕುಮಾರನ ಬಳಿಗೆ ಹೋಗಿಬಾ !" ಎಂದಳು. ಹೀಗೆಂದು ಹೇಳಿ ಪುನಃ ಆಕೆಯು ನನ್ನನ್ನು ಕುರಿತು "ಎಲೈ ಹನುಮಂತನೆ! ಸಿಂಹಪರಾಕ್ರಮವುಳ್ಳ ಆ ರಾಮಲಕ್ಷ್ಮಣರಿಬ್ಬರಿಗೂ, ಅಮಾತ್ಯರೊಡಗೂಡಿದ ಆ ಸುಗ್ರೀವನಿಗೂ ನಾನು ಅವರ ಕ್ಷೇಮವನ್ನು ವಿಚಾರಿಸಿದುದಾಗಿ ತಿಳಿಸು ! ಮುಖ್ಯವಾಗಿ ಮಹಾಬಾಹುವಾದ ಆ ರಾಮನು ನನ್ನನ್ನು ಅಪಾರವಾದ ಈ ದುಃಖಸಮುದ್ರದಿಂದ ದಾಟಿಸುವ ಹಾಗೆ ಮಾಡುವ ಭಾರವು ನಿನಗೆ ಸೇರಿದ್ದು. ಈ ನನ್ನ ತೀವ್ರವಾದ ವ್ಯಸನವನ್ನೂ, ಈ ರಾಕ್ಷಸರು ಆಗಾಗ ನನ್ನನ್ನು ಹೆದರಿಸುವುದನ್ನೂ ನೀನು ಆ ರಾಮನಿಗೆ ಚೆನ್ನಾಗಿ ತಿಳಿಸಬೇಕು. ಇನ್ನು ಹೋಗಿ ಬಾ ! ದಾರಿಯಲ್ಲಿ ನಿನಗೆ ಮಂಗಳವಾಗಲಿ !" ಎಂದಳು. ಎಲೈ ರಾಜಸಿಂಹನೆ ! ನಿನ್ನ ಪ್ರಿಯಭಾರ್ಯೆಯಾದ ಆ ಸೀತೆಯು ಮಹಾ ವ್ಯಸನದೊಡನೆ ಇಷ್ಟು ಮಾತುಗಳನ್ನು ಹೇಳಿ ಕಳುಹಿಸಿರುವಳು. ನಾನು ಇದುವರೆಗೆ ಹೇಳಿದ ಗುರುತುಗಳನ್ನೂ ಚೆನ್ನಾಗಿ ನೆನಪಿಗೆ ತಂದುಕೊಂಡು, ನಾನು ಹೇಳಿದಂತೆ ಸೀತೆಯು ಸರ್ವಪ್ರಕಾರದಿಂದಲೂ ಕ್ಷೇಮದಿಂದಿರುವಳೆಂದು ದೃಢವಾಗಿ ನಂಬು !" ಎಂದನು

ಇಲ್ಲಿಗೆ ಅರುವತ್ತೇಳನೆಯ ಸರ್ಗವು.

---



ಹನುಮಂತನು ತಾನು ಸೀತೆಗೆ ಹೇಳಿದ ಇನ್ನೂ ಕೆಲವು ಸಮಾಧಾನಗಳನ್ನೂ, ರಾಮನಿಗೆ ತಿಳಿಸಿ, ಸೀತೆಯ ಕ್ಷೇಮವನ್ನೂ ತಿಳಿಸಿದುದು.



"ಎಲೈ ಪುರುಷೋತ್ತಮನೆ ! ನಾನು ಈ ಕಡೆಗೆ ಪ್ರಯಾಣಕ್ಕಾಗಿ ಆತುರಪಡುತ್ತಿರುವುದನ್ನು ನೋಡಿ, ಸೀತೆಯು ನಿನಗೆ ನನ್ನಲ್ಲಿರುವ ಸ್ನೇಹದಿಂದಲೂ, ನಾನು ಮನಃಪೂರ್ವಕವಾಗಿ ಸಹಾಯಮಾಡತಕ್ಕ ಆಪ್ತನೆಂಬ ನಂಬಿಕೆಯಿಂದಲೂ, ನನ್ನನ್ನು ಬಹಳವಾಗಿ ಆದರಿಸಿ, ತಿರುಗಿ ನನ್ನೊಡನೆ ಮುಂದಿನಕಾರ್ಯವನ್ನು ಕುರಿತು, ವಿಚಾರಿಸುತ್ತ, ನನ್ನನ್ನು ಕುರಿತು, 'ಎಲೈ ಕಪಿವೀರನೆ ! ಹೀಗೆ ನೀನು ದಶರಥಪುತ್ರನಾದ ರಾಮನನ್ನು ಕುರಿತು ಶೀಘ್ರದಲ್ಲಿಯೇ ಯುದ್ಧದಲ್ಲಿ ರಾವಣನನ್ನು ಕೊಂದು ನನ್ನನ್ನು ಕರೆದುಕೊಂಡು ಹೋಗುವಂತೆ ಬಾರಿಬಾರಿಗೂ ಹೇಳಿ ಪ್ರೋತ್ಸಾಹಿಸಬೇಕು. ಎಲೈ ಭದ್ರನೆ ! ನಿನಗೆ ಸಮ್ಮತವಾಗಿದ್ದ ಪಕ್ಷದಲ್ಲಿ ಇಲ್ಲಿಯೇ ಒಂದು ದಿನವಿದ್ದು ಆ ಮೇಲೆ ಪ್ರಯಾಣಮಾಡಬಹುದು. ಎಲ್ಲಿಯಾದರೂ ಒಂದು ರಹಸ್ಯಪ್ರದೇಶದಲ್ಲಿ ವಿಶ್ರಮಿಸಿಕೊಂಡಿದ್ದು ನಾಳೆ ಹೋಗು. ಇಲ್ಲಿ ನೀನು ಒಂದು ದಿನವಾದರೂ ಇದ್ದರೆ, ನಿನ್ನನ್ನು ನೋಡುವುದರಿಂದ ಮಂದಭಾಗ್ಯೆಯಾದ

ನನ್ನ ಶೋಕವು ಅದುವರೆಗಾದರೂ ಸ್ವಲ್ಪಶಾಂತವಾಗಿರುವುದು. ನೀನು ಇಲ್ಲಿಂದ ಹೋದಮೇಲೆ ಶೀಘ್ರದಲ್ಲಿಯೇ ಹಿಂತಿರುಗಿ ಬರುವವನಾಗಿದ್ದರೂ, ನೀನು ಅತ್ತಲಾಗಿ ಹೊರಟಕೂಡಲೆ, ಇತ್ತಲಾಗಿ ನನ್ನ ಪ್ರಾಣಗಳು ಹೋದರೂ ಹೋಗಬಹುದು! ಮೊದಲೇ ರಾಮನನ್ನಗಲಿದ ದುಃಖದಿಂದ ಪೀಡಿತಳಾಗಿರುವೆನು. ಮೇಲೆಮೇಲೆ ಇನ್ನೂ ಅನೇಕ ದುಃಖಗಳೂ ಬಂದೊದಗುತ್ತಿರುವುವು. ಹೀಗೆ ವ್ಯಸನಪರಂಪರೆಯಿಂದ, ಕಂದಿಕುಂದಿ ಕೃಶಳಾಗಿ ದುರವಸ್ಥೆಯಲ್ಲಿರುವ ನನಗೆ, ನೀನು ಕಣ್ಮರೆಯಾದ ಕೂಡಲೆ ಮತ್ತಷ್ಟು ಸಂಕಟವು ಹೆಚ್ಚುವುದು. ಎಲೈ ವಾನರೇಶ್ವರನೆ! ಯಾವ ಕಾರ್ಯಕ್ಕೂ ನೀನು ಸಮರ್ಥನೆಂಬುದರಲ್ಲಿ ಸಂದೇಹವಿಲ್ಲ. ಆ ವಿಷಯದಲ್ಲಿ ನನಗೆ ಸಂಪೂರ್ಣವಾದ ನಂಬಿಕೆಯುಂಟು. ಆದರೆ ನಿನಗೆ ಸಹಾಯಕರಾದ ವಾನರ ಭಲ್ಲೂಕಸೈನ್ಯಗಳ ವಿಷಯದಲ್ಲಿ ನನಗೆ ದೊಡ್ಡ ಸಂದೇಹವುಂಟಾಗಿರುವುದು. ಆ ಸಂದೇಹವೇ ನನ್ನ ಕೋರಿಕೆಗಳಿಗೆಲ್ಲಾ ಅಡ್ಡಲಾಗಿ ನಿಂತಂತೆ ತೋರಿರುವುದು. ಆ ಸಂದೇಹವೇನೆಂಬುದನ್ನೂ ಹೇಳುವೆನು ಕೇಳು. ಯಾರಿಂದಲೂ ದಾಟಲಸಾಧ್ಯವಾದ ಈ ಮಹಾಸಮುದ್ರವನ್ನು ನಿನ್ನ ಕಡೆಯ ಕರಡಿಗಳೂ, ಕಪಿಗಳೂ ಹೇಗೆ ದಾಟಬಲ್ಲುವು? ರಾಜಕುಮಾರರಾದ ಆ ರಾಮಲಕ್ಷ್ಮಣರಾಗಲಿ ಇದನ್ನು ಹೇಗೆ ದಾಟಬರುವರು? ಗರುಡನೊಬ್ಬನು; ವಾಯುವೊಬ್ಬನು; ನೀನೊಬ್ಬನು; ಈ ಮೂವರಿಗೆ ಮಾತ್ರವೇ ಈ ಸಮುದ್ರವನ್ನು ದಾಟುವ ಶಕ್ತಿಯಿರುವುದೇ ಹೊರತು, ಇದನ್ನು ದಾಟುವುದು ಬೇರೊಬ್ಬರಿಗೆ ಸಾಧ್ಯವಲ್ಲ. ನೀನು ವೀರನಾಗಿಯೂ ಕಾರ್ಯಜ್ಞರಲ್ಲಿ ಮೇಲಾದವನಾಗಿಯೂ ಇರುವುದರಿಂದ ಈ ಮುಂದಿನಕಾರ್ಯವು ಹೀಗೆ ಅಸಾಧ್ಯವಾಗಿ ಬಂದೊದಗಿರುವಾಗ, ಅದನ್ನು ಸಾಧಿಸುವುದಕ್ಕಾಗಿ ಯಾವ ಉಪಾಯವನ್ನು ಯೋಚಿಸಿರುವೆ! ಅದನ್ನು ಮೊದಲು ನನಗೆ ಹೇಳು. ಎಲೈ ಪರಂತಪನೆ! ಇಲ್ಲಿನ ಕಾರ್ಯವನ್ನು ಸಾಧಿಸುವುದಕ್ಕೆ ನೀನೊಬ್ಬನೇ ಸಾಕೆಂಬುದೇನೋ ನಿಜವು. ಹಾಗೆ ನೀನೇ ಇದನ್ನು ಸಾಧಿಸಿ ಬಿಟ್ಟರೆ, ಆ ಕೀರ್ತಿಗೆ ನೀನೊಬ್ಬನೇ ಭಾಗಿಯಾಗುವೆಯೇ ಹೊರತು. ರಾಮನ ಹೆಸರೇ ಹೊರಕ್ಕೆ ಬಾರದು. ಆದ್ದರಿಂದ, ಆ ರಾಮನೇ ತನ್ನ ಸಮಗ್ರಸೈನ್ಯಗಳೊಡನೆ ಇಲ್ಲಿಗೆ ಬಂದು, ಯುದ್ಧದಲ್ಲಿ ರಾವಣನನ್ನು ಕೊಂದು ಜಯಶೀಲನಾಗಿ ನನ್ನನ್ನು ಪಟ್ಟಣಕ್ಕೆ ಕರೆದುಕೊಂಡು ಹೋಗುವುದಾದರೆ ಅದರಿಂದ ನನಗೂ ಅವನಿಗೂ ಕೀರ್ತಿಯುಂಟು. ಎಲೈ ಕಪಿವೀರನೆ! ರಾಕ್ಷಸನಾದ ಈ ರಾವಣನು ರಾಮಭಾರ್ಯೆಯಾದ ನನ್ನನ್ನು ಕಾಡಿನಲ್ಲಿ ಆ ರಾಮನ ಭಯಕ್ಕಾಗಿ ಮೋಸದಿಂದ ಕದ್ದು ಕಂಡಂತೆ, ರಾಮನೂ ಇಲ್ಲಿಂದ ನನ್ನನ್ನು ಯಾರಿಗೂ ತಿಳಿಯದಂತೆ ರಹಸ್ಯವಾಗಿ ಕರೆಸಿಕೊಂಡುಬಿಟ್ಟರೆ ಅದರಿಂದ ಫಲವೇನು? ಇದು ಆತನಿಗೆ

ಪ್ರಶಸ್ತ್ಯವೂ ಯುಕ್ತವಲ್ಲ. ಶತ್ರುನಾಶಕನಾದ ಆ ಶ್ರೀರಾಮನು, ತನ್ನ ಕಡೆಯ ಸೈನ್ಯಗಳಿಂದ ಈ ಲಂಕೆಯೆಲ್ಲವನ್ನೂ ದಟ್ಟವಾಗಿ ತುಂಬಿ, ಈ ಪಟ್ಟಣವನ್ನೂ ಉಲ್ಲೋಲಕಲ್ಲೋಲವನ್ನಾಗಿ ಮಾಡಿ ಆ ಮೇಲೆ ನನ್ನನ್ನು ಕರೆದುಕೊಂಡು ಹೋಗುವುದಾದರೆ, ಅದು ಕುಕುತ್ಸ್ಥಕುಲತಿಲಕನಾದ ಆತನಿಗೆ ತಕ್ಕುದಾಗಿಯೂ ಇರುವುದು. ಆದುದರಿಂದ ಮಹಾತ್ಮನಾಗಿಯೂ, ರಣಪಂಡಿತನಾಗಿಯೂ ಇರುವ ಆ ರಾಮನು, ತನಗನುರೂಪವಾದ ರೀತಿಯಲ್ಲಿ ಪರಾಕ್ರಮವನ್ನು ತೋರಿಸಿ ಹೋಗುವಂತೆ ಮಾಡಬೇಕಾದ ಕಾರ್ಯವು ನಿನ್ನದು'' ಎಂದು ಹೇಳಿರುವಳು. ಹೀಗೆ ಸೀತೆಯು ಸಾರವತ್ತಾಗಿಯೂ, ಸಹೇತುಕವಾಗಿಯೂ, ವಿನಯಯುಕ್ತವಾಗಿಯೂ ಹೇಳಿದ ಮಾತನ್ನು ಕೇಳಿ, ಅದಕ್ಕೆ ಪ್ರತ್ಯುತ್ತರವಾಗಿ ನಾನು ಅವಳನ್ನು ಕುರಿತು, ''ಎಲೆ ದೇವಿ! ಸಮಸ್ತವಾನರಸೈನ್ಯ ಭಲ್ಲೂಕಗಳಿಗೂ ಅಧೀಶ್ವರನಾಗಿಯೂ ಬಲಸಂಪನ್ನನಾಗಿಯೂ ಇರುವ ನಮ್ಮೊಡೆಯನಾದ ಸುಗ್ರೀವನೇ ಹೇಗಾದರೂ ಈ ಕಾರ್ಯವನ್ನು ಸಾಧಿಸಬೇಕೆಂದು ಸಂಕಲ್ಪಿಸಿಬಿಟ್ಟಿರುವನು. ಅಸಾಧಾರಣವೀರ್ಯವುಳ್ಳ ಎಷ್ಟೋ ಮಂದಿ ವಾನರರು ಅವನ ಕೈಕೆಳಗಿರುವರು. ಅವರಲ್ಲಿ ಒಬ್ಬೊಬ್ಬರೂ, ಎಣೆಯಿಲ್ಲದ ವೀರ್ಯವುಳ್ಳವರು. ಒಬ್ಬೊಬ್ಬರೂ ಮಹಾಬಲಾಢ್ಯರು! ಒಬ್ಬೊಬ್ಬರೂ ಮನೋವೇಗದಂತೆ ಮಹಾವೇಗವುಳ್ಳವರು. ಆ ವಾನರರೊಬ್ಬೊಬ್ಬರೂ ಆಕಾಶದಲ್ಲಿಯಾಗಲಿ, ಕೆಳಗಿನ ಪಾತಾಳದಲ್ಲಿಯಾಗಲಿ, ಇವೆರಡಕ್ಕೂ ನಡುವೆ, ಅಡ್ಡಲಾಗಿಯಾಗಲಿ ತಡೆಯಿಲ್ಲದೆ ಸಂಚರಿಸಬಲ್ಲರು. ಆ ವಾನರರು ಎಣೆಯಿಲ್ಲದ ತೇಜಸ್ಸುಳ್ಳವರಾದುದರಿಂದ ಎಷ್ಟೇ ಅಸಾಧ್ಯಕಾರ್ಯಗಳನ್ನಾದರೂ ಸಾಧಿಸದೆ ಬಿಡರು. ಮಹಾತ್ಮರಾಗಿಯೂ, ಬಲದಿಂದ ಕೊಬ್ಬಿದವರಾಗಿಯೂ ಇರುವ ಆ ವಾನರರು ಅಂತರಿಕ್ಷಗತಿಯಿಂದಲೇ ಈ ಪ್ರಪಂಚವನ್ನೆಲ್ಲಾ ಅನೇಕಾವರ್ತಿ ಪ್ರದಕ್ಷಿಣಮಾಡಿ ಬಂದಿರುವರು. ಅಲ್ಲಿ ಸುಗ್ರೀವನ ವಶದಲ್ಲಿರುವ ವಾನರರಲ್ಲಿ ಪ್ರಾಯಿಕವಾಗಿ ಎಲ್ಲರೂ ನನಗಿಂತಲೂ ಹೆಚ್ಚುಬಲವುಳ್ಳವರು. ಬಲದಲ್ಲಿ ನನಗೆ ಸಮಾನರಾದವರೂ ಕೆಲವರುಂಟು. ಇಷ್ಟೇ ಹೊರತು ಒಬ್ಬನಾದರೂ ನನಗೆ ಕಡಿಮೆಯಾದವನಿಲ್ಲ. ಸಾಧಾರಣಬಲವುಳ್ಳ ನನ್ನಂತವನೇ ಈ ಸಮುದ್ರವನ್ನು ದಾಟಿ ಇಲ್ಲಿಗೆ ಬಂದಿರುವಾಗ ಇನ್ನು ಮಹಾಬಲಾಢ್ಯರಾದ ಆ ವಾನರರು ಇಲ್ಲಿಗೆ ಬರಬಲ್ಲರೆಂಬುದನ್ನು ಹೇಳಬೇಕಾದುದೇನು ? ಲೋಕದಲ್ಲಿ ಅರಸರು ಬೇರೆಲ್ಲಿಗಾದರೂ ಕಾರ್ಯಾರ್ಥವಾಗಿ ತನ್ನ ಕಡೆಯವರನ್ನು ಕಳುಹಿಸುವಾಗ, ಮೊದಲೇ ಹೆಚ್ಚುಬಲವುಳ್ಳವರನ್ನು ಕಳುಹಿಸುವುದಿಲ್ಲ. ಮೊದಮೊದಲು ಅಲ್ಪಬಲವುಳ್ಳವರನ್ನೇ ಕಳುಹಿಸಿಕೊಡುವರು. ಆದುದರಿಂದಲೇ ಸುಗ್ರೀವನು ಮೊದಲು ನನ್ನನ್ನು ಇಲ್ಲಿಗೆ ಕಳುಹಿಸಿರುವನು. ಎಲೆ ದೇವಿ! ಇನ್ನು ನೀನು ದುಃಖಿಸಿದುದು

ಸಾಕು ! ರಾಮನಮೇಲಿರುವ ನಿನ್ನ ಕೋಪವನ್ನೂ ಬಿಡು ! ನಮ್ಮ ಕಡೆಯ ವಾನರಯೂಥಪತಿಗಳು ಒಂದೇನೆಗತಕ್ಕೆ ಈ ಲಂಕೆಗೆ ಬಂದು ಸೇರಬಲ್ಲರು. ಎಲೆಭಾಗ್ಯವತಿ, ಪುರುಷಸಿಂಹರಾದ ಆ ರಾಮಲಕ್ಷ್ಮಣರಾದರೋ ಈ ಸಮುದ್ರವನ್ನು ದಾಟುವ ಬಗೆಯೇನೆಂದು ಕೇಳಿದೆಯಲ್ಲವೆ ? ಇದೋ ! ಈ ನನ್ನ ಭುಜವನ್ನೇರಿ ಅವರಿಬ್ಬರೂ ಉದಿಸಿಬಂದ ಚಂದ್ರಸೂರ್ಯರಂತೆ ನಿನ್ನಲ್ಲಿಗೆ ಬರುವರೆಂದು ತಿಳಿ! ಪರಂತಪನಾಗಿಯೂ, ಸಿಂಹಪರಾಕ್ರಮವುಳ್ಳವನಾಗಿಯೂ ಇರುವ ಆ ರಾಮನನ್ನೂ ಧನುರ್ಧಾರಿಯಾದ ಲಕ್ಷ್ಮಣನನ್ನೂ ಶೀಘ್ರದಲ್ಲಿಯೇ ನೀನು ಈ ಲಂಕೆಯ ಬಾಗಿಲಲ್ಲಿ ನೋಡಬಹುದು ! ಮತ್ತು ನಖದಂಷ್ಟ್ರಗಳನ್ನೇ ಆಯುಧಗಳನ್ನಾಗಿ ಪಡೆದವರಾಗಿಯೂ, ವೀರರಾಗಿಯೂ, ಸಿಂಹಶಾರ್ದೂಲಗಳಂತೆ ಪರಾಕ್ರಮಶಾಲಿಗಳಾಗಿಯೂ, ಮದದಾನೆಗಳಂತೆ ಕೊಬ್ಬಿ ಬಳೆದವರಾಗಿಯೂ ಇರುವ ಅನೇಕ ವಾನರರು ಈ ಲಂಕೆಯಲ್ಲಿ ಬಂದು ಸೇರುವುದನ್ನೂ ನೀನು ಶೀಘ್ರದಲ್ಲಿಯೇ ನೋಡಬಹುದು. ಇನ್ನು ಶೀಘ್ರದಲ್ಲಿಯೇ ನೀನು ಈ ಲಂಕೆಗೆ ಸೇರಿದ ಮಲಯಪರ್ವತದ ತಪ್ಪಲುಗಳಲ್ಲಿ ಮಹಾಮೇಘಗಳಂತೆಯೂ, ಪರ್ವತಗಳಂತೆಯೂ, ದೊಡ್ಡದೊಡ್ಡ ದೇಹವುಳ್ಳ ಅನೇಕವಾನರರು ಸಿಂಹನಾದಮಾಡುವ ಧ್ವನಿಗಳನ್ನೂ ಕೇಳಬಹುದು. ಎಲೈ ದೇವಿ ! ಹೆಚ್ಚಾಗಿ ಹೇಳಿದುದರಿಂದೇನು ? ಇನ್ನು ಶೀಘ್ರದಲ್ಲಿಯೇ ರಾಮನು, ತನ್ನ, ವನವಾಸವ್ರತವನ್ನೂ ಮುಗಿಸಿಕೊಂಡು ತನ್ನ ಶತ್ರುಗಳಾದ ಸಮಸ್ತರಾಕ್ಷಸರನ್ನೂ ಯುದ್ಧದಲ್ಲಿ ಕೊಂದು, ನಿನ್ನೊಡನೆ ಅಯೋಧ್ಯೆಯಲ್ಲಿ ಪಟ್ಟಾಭಿಷಿಕ್ತನಾಗುವುದನ್ನೂ ನೀನು ನಿನ್ನ ಕಣ್ಣಾರೆ ನೋಡುವೆ! ' ಎಂದು ಸಮಾಧಾನವನ್ನು ಹೇಳಿದೆನು. ಹೀಗೆ ನಾವಿಬ್ಬರೂ ಪರಸ್ಪರಸಲ್ಲಾಪಗಳನ್ನು ಮಾಡುತ್ತಿರುವಾಗ, ಇಲ್ಲಿ ನೀನು ಆಕೆಯ ವಿರಹದಿಂದ ಅತಿಯಾಗಿ ವ್ಯಸನಪಡುವುದನ್ನೂ ತಿಳಿಸಿದೆನು. ಇದನ್ನು ಕೇಳಿ ಆಕೆಗೆ ಹೆಚ್ಚಾಗಿ ದುಃಖವುಂಟಾಗಲು, ನಾನು ಅನೇಕ ವಿಧಗಳಾದ ಪ್ರಿಯವಾಕ್ಯಗಳಿಂದ ಆಕೆಯನ್ನು ಸಮಾಧಾನಪಡಿಸಿದೆನು. ನಾನು ಹೀಗೆ ಸಮಾಧಾನಪಡಿಸಿದ ಮೇಲೆ ಜನಕಪುತ್ರಿಯಾದ ಸೀತೆಯು, ಮನಸ್ಸಿನಲ್ಲಿ ಯಾವುದೊಂದು ಕಳವಳವೂ ಇಲ್ಲದೆ ನಿಶ್ಚಿಂತಳಾಗಿ ನೆಮ್ಮದಿಯಿಂದಿರುವಳು " ಎಂದನು.

(ಇದು ಸುಂದರಕಾಂಡವು.)

ಓಂ ಶ್ರೀ ಸೀತಾ ಲಕ್ಷ್ಮಣ ಭರತ ಶತ್ರುಘ್ನ ಹನುಮತ್ಸಮೇತ
ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ.

——(೦)——